# ಹವ್ಯಕರ ಕನ್ನಡ ಸಣ್ಣಕತೆಗಳು - ಸಾಂಸ್ಕೃತಿಕ ಅಧ್ಯಯನ

ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ

ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು

**ವಿಜಯಕುಮಾರ ಎಂ.**

ಕನ್ನಡ ಉಪನ್ಯಾಸಕ

ಸಂತ ಫಿಲೋಮಿನಾ ಕಾಲೇಜು

ದರ್ಬೆ, ಪುತ್ತೂರು, ದ.ಕ. ೫೭೪೨೦೨

ಮಾರ್ಗದರ್ಶಕರು

**ಡಾ.ಶ್ರೀಧರ ಎಚ್.ಜಿ.**

ಪ್ರಾಧ್ಯಾಪಕರು, ಕನ್ನಡ ವಿಭಾಗ

ವಿವೇಕಾನಂದ ಮಹಾವಿದ್ಯಾಲಯ, ಪುತ್ತೂರು, ದ.ಕ. ೫೭೪೨೦೩

ಮೂಲಕ

**ಡಾ.ಹಾಮಾನಾ ಸಂಶೋಧನ ಕೇಂದ್ರ**

ಶ್ರೀ ಧ.ಮಂ.ಕಾಲೇಜು, ಉಜಿರೆ

ಮಾನ್ಯತೆ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩೨೭೬

೨೦೧೧

# ಹವ್ಯಕರ ಕನ್ನಡ ಸಣ್ಣಕತೆಗಳು - ಸಾಂಸ್ಕೃತಿಕ ಅಧ್ಯಯನ

## ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ
## ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ


ಸಂಶೋಧಕರು

**ವಿಜಯಕುಮಾರ ಎಂ.**
ಕನ್ನಡ ಉಪನ್ಯಾಸಕ
ಸಂತ ಫಿಲೋಮಿನಾ ಕಾಲೇಜು
ದರ್ಬೆ, ಪುತ್ತೂರು, ದ.ಕ. ೫೭೪೨೦೨

ಮಾರ್ಗದರ್ಶಕರು

**ಡಾ.ಶ್ರೀಧರ ಎಚ್.ಜಿ.**
ಪ್ರಾಧ್ಯಾಪಕರು, ಕನ್ನಡ ವಿಭಾಗ
ವಿವೇಕಾನಂದ ಮಹಾವಿದ್ಯಾಲಯ, ಪುತ್ತೂರು, ದ.ಕ. ೫೭೪೨೦೩



ಮೂಲಕ

**ಡಾ.ಹಾಮಾನಾ ಸಂಶೋಧನ ಕೇಂದ್ರ**
ಶ್ರೀ ಧ.ಮಂ.ಕಾಲೇಜು, ಉಜಿರೆ

ಮಾನ್ಯತೆ

ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬

೨೦೧೧

# ಪ್ರಮಾಣ ಪತ್ರ

**'ಹವ್ಯಕರ ಕನ್ನಡ ಸಣ್ಣಕತೆಗಳು–ಸಾಂಸ್ಕೃತಿಕ ಅಧ್ಯಯನ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಲಾಗಿದೆ. **ಡಾ. ಶ್ರೀಧರ ಎಚ್.ಜಿ.,** ಕನ್ನಡ ಪ್ರಾಧ್ಯಾಪಕರು, ವಿವೇಕಾನಂದ ಮಹಾವಿದ್ಯಾಲಯ, ಪುತ್ತೂರು–೫೭೪೨೦೩ ದ.ಕ. ಇವರು ಈ ಪ್ರಬಂಧ ರಚನೆಗೆ ಮಾರ್ಗದರ್ಶನ ಮಾಡಿದ್ದಾರೆ. ಈ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಯಾವುದೇ ಪದವಿಗಾಗಲಿ ಇಲ್ಲವೆ ಬೇರೆ ಯಾವುದೇ ಪ್ರಕಟಣೆಗಾಗಲಿ ಬಳಸಿಕೊಂಡಿರುವುದಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ: 15-07-2011
ಸ್ಥಳ : ಪುತ್ತೂರು

MK
**ವಿಜಯಕುಮಾರ ಎಂ.**
ಕನ್ನಡ ಉಪನ್ಯಾಸಕರು
ಸಂತ ಫಿಲೋಮಿನಾ ಕಾಲೇಜು
ಪುತ್ತೂರು– ೫೭೪೨೦೨, ದ.ಕ.

# ದೃಢೀಕರಣ ಪತ್ರ

**ವಿಜಯಕುಮಾರ ಎಂ.** ಇವರು **'ಹವ್ಯಕರ ಕನ್ನಡ ಸಣ್ಣಕತೆಗಳು-ಸಾಂಸ್ಕೃತಿಕ ಅಧ್ಯಯನ'** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಮಂಡಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಈ ಮಹಾಪ್ರಬಂಧವನ್ನು ಇಲ್ಲವೇ ಇದರ ಯಾವುದೇ ಭಾಗವನ್ನು ಈ ಮೊದಲು ಅಭ್ಯರ್ಥಿಯು ಯಾವುದೇ ಪದವಿಗಾಗಲಿ, ಇಲ್ಲವೇ ಬೇರೆ ಯಾವುದೇ ಪ್ರಕಟಣೆಗಾಗಲಿ ಬಳಸಿಕೊಂಡಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಶ್ರೀಧರ ಎಚ್.ಜಿ.

ದಿನಾಂಕ: 15.07.2011
ಸ್ಥಳ : ಪುತ್ತೂರು

**ಡಾ. ಶ್ರೀಧರ ಎಚ್.ಜಿ**
ಕನ್ನಡ ಪ್ರಾಧ್ಯಾಪಕರು
ವಿವೇಕಾನಂದ ಮಹಾವಿದ್ಯಾಲಯ
ಪುತ್ತೂರು- ೫೭೪೨೦೩, ದ.ಕ.

# ಪರಿವಿಡಿ

# ಅಧ್ಯಾಯ – ೧

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

### ೧.೧. ಪ್ರಸ್ತಾವನೆ

'ವಿವಿಧತೆಯಲ್ಲಿ ಏಕತೆ' ಎಂಬುದು ಭಾರತೀಯ ಸಂಸ್ಕೃತಿಯಲ್ಲಿ ಕಾಣುವ ವಿಶೇಷ ಅಂಶಗಳಲ್ಲಿ ಒಂದು. ಭಾರತೀಯ ಭೌಗೋಳಿಕ ಚೌಕಟ್ಟಿನಲ್ಲಿ ಹಲವು ಜನಾಂಗ, ಸಮುದಾಯಗಳು ಒಟ್ಟಿಗೆ ಸಾಮರಸ್ಯದಿಂದ ಬದುಕುತ್ತಿವೆ. ಅದರೊಂದಿಗೆ ಪ್ರತಿಯೊಂದು ಸಮುದಾಯವೂ ತನ್ನದೇ ಆದ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಂಡು ಬಂದಿದೆ. ಬದಲಾಗುತ್ತಿರುವ ವರ್ತಮಾನದ ಹತ್ತು ಹಲವು ಒತ್ತಡಗಳ ನಡುವೆಯೂ ತನ್ನದೇ ಆದ ಅನನ್ಯತೆಯ ನೆಲೆಗಳನ್ನು ಕಾಪಾಡಿಕೊಂಡು ಬಂದ ಜನಾಂಗಗಳಲ್ಲಿ ಈ ನಾಡಿನ ಬ್ರಾಹ್ಮಣ ಸಮುದಾಯವೂ ಒಂದು.

ಸಾಮಾನ್ಯವಾಗಿ, ಪ್ರತಿಯೊಂದು ಸಮುದಾಯವೂ ಅನೇಕ ಒಳಪಂಗಡಗಳನ್ನು ಹೊಂದಿರುತ್ತದೆ. ಅದೇ ರೀತಿ ಬ್ರಾಹ್ಮಣ ಸಮುದಾಯದಲ್ಲಿ ಕರ್ನಾಟಕ, ಮುಲಕನಾಡು, ಬಬ್ಬೂರು ಕಮ್ಮೆ, ಶಿವಳ್ಳಿ, ಕೋಟ, ಕರ್ಹಾಡ ಮೊದಲಾದ ಪಂಗಡಗಳಿವೆ. ಇಂತಹ ಪಂಗಡಗಳಲ್ಲಿ ಹವ್ಯಕ ಸಮುದಾಯವೂ ಒಂದು.

ಹವ್ಯಕ ಸಮುದಾಯದವರು ಹೆಚ್ಚಾಗಿ ಉತ್ತರ ಕನ್ನಡ, ಶಿವಮೊಗ್ಗ ಜಿಲ್ಲೆಯ ಕೆಲವು ಭಾಗ, ದಕ್ಷಿಣ ಕನ್ನಡ ಮತ್ತು ಕಾಸರಗೋಡು ಪ್ರಾಂತ್ಯಗಳಲ್ಲಿ ಸಾಂದ್ರವಾಗಿ, ಕೊಡಗು ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ವಿರಳವಾಗಿ ನೆಲೆಸಿರುವರು. ಮುಂಬೈ, ಚೆನ್ನೈ ಮುಂತಾದ ಹೊರರಾಜ್ಯಗಳಲ್ಲಿಯೂ ಇವರ ಸಂಖ್ಯೆ ಗಣನೀಯವಾಗಿದೆ. ಇವರು ಮಾತನಾಡುವ ಭಾಷೆ ಗ್ರಾಂಥಿಕ ಕನ್ನಡಕ್ಕಿಂತ ಭಿನ್ನವಾದುದು. ಇದನ್ನು ಭಾಷಾ ವಿಜ್ಞಾನದಲ್ಲಿ 'ಹವ್ಯಕ ಕನ್ನಡ' ಎಂದೇ ಗುರುತಿಸುವರು. ಆದರೆ ಮೇಲೆ ಹೇಳಿದ ಎಲ್ಲ ಪ್ರಾಂತ್ಯಗಳ ಹವ್ಯಕರೂ ಒಂದೇ ಕನ್ನಡವನ್ನು ಬಳಸುವುದಿಲ್ಲ. ಅದರಲ್ಲಿಯೂ ಸಾಕಷ್ಟು ಭಿನ್ನತೆಯಿದೆ. ಪ್ರಾಂತ್ಯ, ಪ್ರದೇಶಕ್ಕೆ ಅನುಗುಣವಾಗಿ ಇದರಲ್ಲಿ ವ್ಯತ್ಯಾಸವಿದೆ. ಕನ್ನಡದ ಒಂದು ಉಪಭಾಷೆ ಎಂದು ಕರೆಯುವಷ್ಟರ ಮಟ್ಟಿಗೆ ಹವ್ಯಕ ಕನ್ನಡ ವೈಶಿಷ್ಟ್ಯವನ್ನು

ಉಳಿಸಿಕೊಂಡಿದೆ. ಹಳೆಗನ್ನಡಕ್ಕೆ ಸಮೀಪವಾದ ಅನೇಕ ಶಬ್ದಗಳು ಈ ಭಾಷೆಯಲ್ಲಿ ದೊರೆಯುವುದು ಗಮನೀಯ ಅಂಶ.

ಪ್ರಾಚೀನ ಕಾಲದಿಂದಲೂ ಹವ್ಯಕ ಸಮುದಾಯದವರು ವೈದಿಕ ವೃತ್ತಿಯನ್ನು ನಡೆಸಿದ್ದು ಜೀವನ ನಿರ್ವಹಣೆಗೆ ಕೃಷಿಯನ್ನು ಅವಲಂಬಿಸಿದ್ದರು. ವಿದ್ಯೆಯನ್ನು ಪಡೆದಿದ್ದ ಈ ಸಮುದಾಯದವರು ವೈದಿಕ ಮಂತ್ರಗಳನ್ನು ಉಳಿಸಿಕೊಂಡು ಬರುವಲ್ಲಿ ಗಣನೀಯ ಕೊಡುಗೆಯನ್ನು ನೀಡಿದ್ದಾರೆ. ಅಲ್ಲದೆ ಭಾಷೆ, ಸಾಹಿತ್ಯ, ಕಲೆ ಮುಂತಾದ ವಿವಿಧ ಪ್ರಕಾರಗಳಲ್ಲಿ ಇವರು ಮಾಡಿದ ಕೆಲಸ ಅಸಾಧಾರಣವಾದುದು.

ವಸಾಹತುಶಾಹಿ ಆಡಳಿತದ ಪರಿಣಾಮವಾಗಿ ಇಂಗ್ಲಿಷ್ ಶಿಕ್ಷಣ ನಮ್ಮ ನಾಡಿನಲ್ಲಿ ಆರಂಭವಾಯಿತು. ಸಾಂಪ್ರದಾಯಿಕ ಜೀವನ ವಿಧಾನವನ್ನು ರೂಢಿಸಿಕೊಂಡಿದ್ದ ಹವ್ಯಕರು ಆಧುನಿಕ ವಿದ್ಯಾಭ್ಯಾಸಕ್ಕೆ ತಮ್ಮನ್ನು ತೆರೆದುಕೊಂಡದ್ದು ಒಂದು ಮಹತ್ತ್ವದ ಘಟ್ಟ. ಇದರ ಪರಿಣಾಮವಾಗಿ ಹವ್ಯಕರ ಆಲೋಚನಾ ವಿಧಾನ ಹಾಗೂ ಸಾಮಾಜಿಕ ಬದುಕಿನಲ್ಲಿ ಸಾಕಷ್ಟು ಬದಲಾವಣೆಗಳಾದವು. ಆಧುನಿಕ ಶಿಕ್ಷಣವನ್ನು ಪಡೆದ ಇವರು ಸರ್ಕಾರಿ ನೌಕರಿಗಳನ್ನು ಪಡೆದರು. ಆದರೆ ವಿದ್ಯಾವಂತ ಹವ್ಯಕರು ಇಷ್ಟಕ್ಕೆ ತೃಪ್ತರಾಗಲಿಲ್ಲ. ಜಡ್ಡುಗಟ್ಟಿದ ತಮ್ಮ ಸಮಾಜದ ಸಮಕಾಲೀನ ಸಮಸ್ಯೆಗಳಿಗೆ 'ಹವ್ಯಕ ಮನಸ್ಸು' ಸ್ಪಂದಿಸಿದ ರೀತಿ ಅಚ್ಚರಿ ಮೂಡಿಸುತ್ತದೆ. ಈ ಸಮುದಾಯದಿಂದ ಬಂದ ಬರಹಗಾರರು ಆಧುನಿಕ ಕನ್ನಡ ಸಾಹಿತ್ಯ ನಿರ್ಮಾಣದ ಪ್ರಕ್ರಿಯೆಯಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡ ರೀತಿ ಬೆರಗನ್ನುಂಟುಮಾಡುತ್ತದೆ. ಹೀಗಾಗಿ ಕನ್ನಡ ಸಾಹಿತ್ಯ ನಿರ್ಮಾಣದ ಪ್ರಕ್ರಿಯೆಯಲ್ಲಿ ಇವರ ಸಹಭಾಗಿತ್ವವನ್ನು ಗುರುತಿಸುವ ಪ್ರಯತ್ನ ಇಲ್ಲಿದೆ.

## ೧.೨ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ :

ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಿಂದ ತೊಡಗಿ ಆಧುನಿಕ ಕಾಲಘಟ್ಟದಲ್ಲಿ ಹವ್ಯಕ ಬರಹಗಾರರು ಕೆಲಸ ಮಾಡಿದ ಕ್ಷೇತ್ರಗಳು ಹಲವು. ಸಾಮಾಜಿಕ, ರಾಜಕೀಯ, ಸಂಸ್ಕೃತಿ, ಸಾಹಿತ್ಯ, ಶಿಕ್ಷಣ ಇತ್ಯಾದಿ ರಂಗಗಳಲ್ಲಿ ಇವರ ಕೊಡುಗೆ ಗಮನಾರ್ಹ. ನಾಟಕ, ಕಥೆ, ಕಾದಂಬರಿ, ಕಾವ್ಯ, ವಿಮರ್ಶೆ, ಪ್ರಬಂಧ, ಮಹಾಕಾವ್ಯ – ಹೀಗೆ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿ ಇವರು ಸಾಹಿತ್ಯ ಸೃಷ್ಟಿ ಮಾಡಿದ್ದು ಗಮನಕ್ಕೆ

ಬರುತ್ತದೆ. ಸಾಂಪ್ರದಾಯಿಕ ಮೌಲ್ಯಗಳ ಪ್ರತಿಪಾದನೆ, ಪ್ರಗತಿಪರ ಚಿಂತನೆ, ಜೀವಪರ ನಿಲುವುಗಳನ್ನು ವ್ಯಕ್ತಪಡಿಸುವ ಇವರ ಸಾಹಿತ್ಯದ ಧೋರಣೆ ಏಕಮುಖಿಯಲ್ಲ; ಬಹುಮುಖಿಯಾದುದು. ಸಾಮರಸ್ಯ. ಸಂಘರ್ಷ, ವೈರುಧ್ಯಗಳ ಸಂಗಮ. ಹೀಗಾಗಿ ಈ ಸಮುದಾಯದ ಬರಹಗಾರರು ರಚಿಸಿದ ಕನ್ನಡ ಸಣ್ಣಕಥೆಗಳನ್ನು ಇಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಪ್ರಕಾರದಲ್ಲಿ ಹವ್ಯಕ ಬರಹಗಾರರು ಸಮಾಜಮುಖಿಯಾಗಿ ತಮ್ಮನ್ನು ತೆರೆದುಕೊಂಡ ವಿಧಾನವನ್ನು ದಾಖಲಿಸುವುದು ಈ ಪ್ರಬಂಧದ ಆಶಯ.

ಕನ್ನಡದಲ್ಲಿ ಪ್ರಕಟವಾದ ಮೊದಲ ಸ್ವತಂತ್ರ ಸಾಮಾಜಿಕ ನಾಟಕವಾದ 'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ' ಕೃತಿಗೆ ಚಾರಿತ್ರಿಕ ಮಹತ್ತ್ವವಿದೆ. ಉತ್ತರ ಕನ್ನಡದ ಹವ್ಯಕ ಸಮುದಾಯದಿಂದ ಬಂದ ಕರ್ಕಿ ವೆಂಕಟರಮಣ ಶಾಸ್ತ್ರಿ ಸೂರಿ ಮುಂಬೈಯಲ್ಲಿ ಭಾರತೀ ಛಾಪಖಾನೆಯನ್ನು ಸ್ಥಾಪಿಸಿ ಹಲವು ಕೃತಿಗಳನ್ನು ಪ್ರಟಿಸಿದ್ದರೆಂಬುದು ಉಲ್ಲೇಖನೀಯ. ಡಾ। ಶಾಲಿನಿ ರಘನಾಥ ಅವರು ಇಗ್ಗಪ್ಪ ಹೆಗಡೆ ನಾಟಕದ ಬಗ್ಗೆ ವ್ಯಾಪಕ ಅಧ್ಯಯನವನ್ನು ನಡೆಸಿದ್ದಾರೆ. ಆದರೆ ಇದೇ ರೀತಿ ಸಣ್ಣಕಥೆಗಳ ಕ್ಷೇತ್ರಕ್ಕೆ ಹವ್ಯಕರ ಕೊಡುಗೆ ಕುರಿತು ಸಮಗ್ರವಾದ ಅಧ್ಯಯನ ಇದುವರೆಗೂ ನಡೆದಿಲ್ಲ.

ನವೋದಯ, ಪ್ರಗತಿಶೀಲ, ನವ್ಯ ಮತ್ತು ದಲಿತ ಬಂಡಾಯ ಚಳುವಳಿಗಳ ಸಂದರ್ಭದಲ್ಲಿ ರಚಿತವಾದ ಕಥಾಸಾಹಿತ್ಯವನ್ನು ಕುರಿತಂತೆ ಪ್ರತ್ಯೇಕ ಅಧ್ಯಯನಗಳು ನಡೆದಿವೆ. ಆದರೆ ಹವ್ಯಕರು ಬರೆದ ಸಣ್ಣಕತೆಗಳು ಕನ್ನಡದಲ್ಲಿ ಪ್ರಕಟವಾಗಿದ್ದರೂ ಅವುಗಳ ಕಾಲಾನುಸಾರವಾದ ಸಮಗ್ರ ಅಧ್ಯಯನ ನಡೆದಿಲ್ಲವೆಂದೇ ಹೇಳಬೇಕು. ಕೆಲವು ಸಾಹಿತಿಗಳ ಕತೆಗಳನ್ನು ಬಿಡಿಬಿಡಿಯಾಗಿ ಸಣ್ಣಕತೆಯ ವಸ್ತು, ತಂತ್ರ, ಶೈಲಿ ಮುಂತಾದ ಸಾಹಿತ್ಯ ದೃಷ್ಟಿಯಿಂದ ಅಧ್ಯಯನ ಮಾಡಿದ್ದು ಕಾಣುತ್ತದೆ. ಆದರೆ ಅವುಗಳಲ್ಲೂ ಹೆಚ್ಚಿನವು ಕೆಲವೇ ಕೆಲವು ಹವ್ಯಕ ಸಣ್ಣಕತೆಗಾರರ ಒಂದೆರಡು ಸಂಕಲನಗಳ ಅಧ್ಯಯನಗಳಾಗಿವೆ. ಅಲ್ಲದೆ ಅವು ಲೇಖನಗಳ ರೂಪದಲ್ಲಿ ವಿಭಿನ್ನವಾದ ಪತ್ರಿಕೆಗಳಲ್ಲೋ ಗಂಥಗಳಲ್ಲೋ ಸ್ಥಾನ ಪಡೆದಿವೆಯಷ್ಟೆ. ಈ ರೀತಿಯ ಪ್ರಕಟಿತ ಲೇಖನ, ಗ್ರಂಥಗಳಲ್ಲಿ 'ವಾಙಯ ತಪಸ್ವಿ' (ಕಡೆಂಗೋಡ್ಲು ಶಂಕರ ಭಟ್ಟರ ಅಭಿನಂದನ ಗ್ರಂಥ), ಸೇಡಿಯಾಪು ಬದುಕು ಬರಹ, ಯರ್ಮುಂಜ ರಾಮಚಂದ್ರ ಬದುಕು ಬರಹ, ಬ್ರಹ್ಮಗಿರಿ (ಭಾರತೀಸುತರ ಅಭಿನಂದನ

ಗ್ರಂಥ), ಮುಕ್ತಹಂಸ (ಸುಬ್ರಾಯ ಚೊಕ್ಕಾಡಿ ಅಭಿನಂದನ ಗ್ರಂಥ ಮುಂತಾದ ಕೃತಿಗಳಲ್ಲಿ ಹವ್ಯಕ ಕತೆಗಾರರ ಕತೆಗಳನ್ನು ಸ್ವಲ್ಪ ಮಟ್ಟಿಗೆ ವಿಶ್ಲೇಷಿಸಲಾಗಿದೆ. ೧೯೩೦ರ ಬಳಿಕ 'ಕರ್ನಾಟಕದ ಕನ್ನಡ ಸಾಹಿತ್ಯ' ಎಂಬ ಹೆಸರಿನ ವಿವೇಚನೆಯಲ್ಲಿ ಸೇಡಿಯಾಪು ಕೃಷ್ಣ ಭಟ್ಟ, ಕಡೆಂಗೋಡ್ಲು ಶಂಕರಭಟ್ಟ, ಕೊಡಗಿನ ಗೌರಮ್ಮ, ಭಾರತೀಸುತ ಮುಂತಾದ ಕೆಲವೇ ಕತೆಗಾರರ ಹೆಸರುಗಳು ಮಾತ್ರ ಪ್ರಧಾನ ಧಾರೆಯಲ್ಲಿ ಪಾಲ್ಗೊಂಡವು. ಅದೇ ಕಾಲಘಟ್ಟದಲ್ಲಿದ್ದ ದೇವಾಂಗನಾ ಶಾಸ್ತ್ರಿ, ಎಮ್. ಸುಬ್ರಾಯನ್, ಬಿ. ಶಂಕರ ಭಟ್ಟ, ವಿ.ತಿ.ಶೀಗೇಹಳ್ಳಿ, ಪ.ಸು.ಭಟ್ಟ ಮೊದಲಾದ ಹಿರಿಯರ ಕತೆಗಳು ಸಾಹಿತ್ಯದ ಚರ್ಚೆಯಿಂದ ಹೊರಗೇ ಉಳಿದವು. ಹಾಗೆಯೇ ಸಂಸ್ಕೃತಿಯ ಮರುನಿರೂಪಣೆಯ ಸಂದರ್ಭದಲ್ಲಿ ಯಾವುದೇ ಚರ್ಚೆಗೆ ಗ್ರಾಸವಾಗದೆ ಹೋದವು. ಜಯಪ್ರಕಾಶ ಮಾವಿನಕುಳಿ, ಸುಬ್ರಾಯ ಚೊಕ್ಕಾಡಿ, ಕೆ.ವಿ.ತಿರುಮಲೇಶ, ರಾಮಚಂದ್ರ ದೇವ, ಚಿಂತಾಮಣಿ ಕೊಡ್ಲೆಕೆರೆ, ಮಹಾಬಲಮೂರ್ತಿ ಕೊಡ್ಲೆಕೆರೆ, ಎ.ಪಿ.ಮಾಲತಿ, ಗಂಗಾಪಾದೇಕಲ್, ಜಯಾ ಯಾಜಿ ಶಿರಾಲಿ ಮೊದಲಾದ ಪ್ರತಿಭಾವಂತ ಎರಡನೆಯ–ಮೂರನೆಯ ತಲೆಮಾರಿನ ಬರಹಗಾರರೂ ಅಖಿಲ ಕರ್ನಾಟಕದ ಸಂದರ್ಭದಲ್ಲಿ ವಿಮರ್ಶೆಯ ಪರಿಧಿಯ ಆಚೆಗೆ ಉಳಿದುಬಿಟ್ಟರು. ಹೀಗಾಗಿ ಈ ಸಮುದಾಯದ ಎಲ್ಲಾ ಲೇಖಕರು ಬರೆದ ಸಣ್ಣಕತೆಗಳಲ್ಲಿ ಕಂಡುಬರುವ ಸಾಂಸ್ಕೃತಿಕ ಅಂಶಗಳನ್ನು ಕುರಿತು ಒಂದು ಸಮಗ್ರವಾದ ಅಧ್ಯಯನ ಈವರೆಗೆ ನಡೆಯದಿರುವುದು ಒಂದು ಕೊರತೆಯಾಗಿ ಕಾಣುತ್ತದೆ. ಕನ್ನಡದ ಸಂಸ್ಕೃತಿಯನ್ನು ಬಹುಮುಖಿಯಾಗಿ ಗ್ರಹಿಸುವ ಅಗತ್ಯವಿರುವ ವರ್ತಮಾನದ ಸಂದರ್ಭದಲ್ಲಿ ಹವ್ಯಕರ ಸಾಹಿತ್ಯ ಸೃಷ್ಟಿಯ ನೆಲೆಗಳನ್ನು ಗುರುತಿಸಿ ಅಧ್ಯಯನ ಮಾಡುವ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ 'ಹವ್ಯಕರ ಕನ್ನಡ ಸಣ್ಣಕಥೆ'ಗಳ ಸಾಹಿತ್ಯದ ಅಧ್ಯಯನ ಸಕಾಲಿಕವೇ ಆಗುತ್ತದೆ. ಈ ದೃಷ್ಟಿಯಿಂದ ಈ ಸಂಪ್ರಬಂಧದ ರಚನೆಯ ಪ್ರಯತ್ನ ನಡೆದಿದೆ.

**೧.೩. ಅಧ್ಯಯನದ ವಿಧಾನ :**

೧೯೦೧ರಿಂದ ೨೦೦೦ದ ಅವಧಿಯಲ್ಲಿ ಪ್ರಕಟವಾದ ಕಥಾ ಸಂಕಲನಗಳನ್ನು ಇಲ್ಲಿ ಅಧ್ಯಯನಕ್ಕೆ ಅಳವಡಿಸಲಾಗಿದೆ. ಈ ಅವಧಿಯಲ್ಲಿ ಸುಮಾರು ನೂರು ಕಥಾ ಸಂಕಲನಗಳು ಪ್ರಕಟವಾಗಿದ್ದರೂ ಅವುಗಳಲ್ಲಿ ಎಪ್ಪತ್ತು ಕಥಾಸಂಕಲನಗಳು ಅಧ್ಯಯನಕ್ಕೆ

ಲಭ್ಯವಾಗಿವೆ. ಇವುಗಳಲ್ಲಿಯೇ ಸುಮಾರು ಒಂದು ಸಾವಿರಕ್ಕೂ ಮಿಕ್ಕಿ ಕತೆಗಳು ದೊರೆತಿವೆ. ಹವ್ಯಕರು ತಮ್ಮ ಕತೆಗಳ ಮೂಲಕ ವಿವಿಧ ಕಾಲಘಟ್ಟದ ಸಾಮಾಜಿಕ ಸಂದರ್ಭಗಳಿಗೆ ಸ್ಪಂದಿಸಿದ ರೀತಿಯನ್ನು ಈ ಪ್ರಬಂಧದಲ್ಲಿ ಚರ್ಚಿಸಲಾಗಿದೆ. ಪುರುಷರಂತೆಯೇ ಹವ್ಯಕ ಮಹಿಳೆಯರೂ ಬರೆದ ಕತೆಗಳನ್ನೂ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಈ ನಾಡಿನ ಸಾಂಸ್ಕೃತಿಕ ಬದುಕನ್ನು ಕಟ್ಟುವಲ್ಲಿ, ಸಾಹಿತ್ಯಕ ಧೋರಣೆಯನ್ನು ರೂಪಿಸುವಲ್ಲಿ ಈ ಬರಹಗಾರರ ಸಾಧನೆಯನ್ನು ಇಲ್ಲಿ ಗಮನಿಸುವ ಪ್ರಯತ್ನವಿದೆ.

ಹವ್ಯಕರು ಬರೆದ ಸಣ್ಣಕತೆಗಳ ಕುರಿತು ಅಧ್ಯಯನ ನಡೆಸುವಾಗ ೧೯೦೧ರಿಂದ ೨೦೦೦ದವರೆಗೆ ಎಂಬ ಕಾಲಘಟ್ಟವನ್ನು ಹಾಕಿಕೊಳ್ಳಲಾಗಿದೆ. ಅಧ್ಯಯನದ ಸೌಲಭ್ಯಕ್ಕಾಗಿ ಈ ಚೌಕಟ್ಟನ್ನು ರೂಪಿಸಿಕೊಂಡಿದೆ. ಈ ಕಾಲಾವಧಿಯಲ್ಲಿ ಹವ್ಯಕರು ರಚಿಸಿದ ಕತೆಗಳನ್ನು ಅಧ್ಯಯನ ನಡೆಸುವಾಗ ಕತೆಗಾರ ಮತ್ತು ಕತೆಗಾರ್ತಿಯರನ್ನು ಪ್ರತ್ಯೇಕವಾಗಿ ಪರಿಗಣಿಸಿ ಚರ್ಚಿಸಲಾಗಿದೆ. ಆ ಕಾಲದ ಕತೆಗಾರರೆಲ್ಲ ಪ್ರತ್ಯೇಕವಾಗಿ ತಮ್ಮದೇ ಆದ ಕಥಾಲೋಕ, ಕಥಾ ಪರಂಪರೆಗಳನ್ನು ಸೃಷ್ಟಿಸಿದವರಲ್ಲ. ಆದ್ದರಿಂದಲೇ ಸಮಾಜದಲ್ಲಿ ನಡೆದ ಸ್ಥಿತ್ಯಂತರಗಳು, ಸಾಮಾಜಿಕ ಬದಲಾವಣೆಗಳಿಗೆ ಈ ಲೇಖಕರು ಪ್ರತಿಕ್ರಿಯಿಸಿದ ಬಗೆ ಮತ್ತು ಪ್ರತಿಕ್ರಿಯೆ ರೂಪದ ಕತೆಗಳ ಮೂಲಕ ಅವರು ಸಮಾಜವನ್ನು ಮರು ಪ್ರಭಾವಿಸುತ್ತಿದ್ದ ರೀತಿ, ಇವನ್ನು ಪರಿಶೀಲಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಯಾವುದೇ ನಿರ್ದಿಷ್ಟ, ಕಾಲ, ಸ್ಥಳ ಮತ್ತು ಸಂದರ್ಭದ ಸಮಾಜವೊಂದು ತನ್ನದೇ ಆದ ತಾತ್ತ್ವಿಕತೆಯನ್ನು ಅಥವಾ ಬದುಕಿನ ದೃಷ್ಟಿಕೋನವನ್ನು ಹೊಂದಲು ಆಯಾ ಕಾಲದ ಸಾಮಾಜಿಕ ಸನ್ನಿವೇಶಗಳು ಮತ್ತು ಒತ್ತಡಗಳು ಕಾರಣ. ಇಂಥ ಸಾಮಾಜಿಕ ಶಕ್ತಿಗಳನ್ನು ಒಂದು ಸಮಾಜ ಪರಿಭಾವಿಸುವ, ಸ್ವೀಕರಿಸುವ ಅಥವಾ ನಿರಾಕರಿಸುವ ಬಗೆಗಳು, ಆ ಕಾಲದ ಸಾಹಿತ್ಯ ಚಟುವಟಿಕೆಗಳಲ್ಲಿ ಪ್ರತಿರೂಪವನ್ನು ಪಡೆಯುತ್ತವೆ. ಯಾವುದೇ ಒಂದು ನೆಲೆಯಲ್ಲಿ ಆಗುವ ಬದಲಾವಣೆ ಉಳಿದ ನೆಲೆಗಳ ಮೇಲೂ ಪ್ರಭಾವವನ್ನು ಬೀರಿ, ಸಾಮಾಜಿಕ ಪರಿವರ್ತನೆಗೆ ಸಮಾಜ ಕಾರಣವಾಗುತ್ತದೆ. ಇಂಥ ಚಲನಶೀಲತೆಯನ್ನು ಅರ್ಥಮಾಡಿಕೊಳ್ಳಲು ಆಯಾ ಕಾಲದಲ್ಲಿ ಸೃಷ್ಟಿಯಾದ ಸಾಹಿತ್ಯ ಕೃತಿಗಳು ಕೇವಲ ಆಕರ ಸಾಮಗ್ರಿಗಳಾಗಿ ಮಾತ್ರ ವರ್ತಿಸದೆ, ಆಕೃತಿಗಳಾಗಿಯೂ

ಮುಖ್ಯವಾಗುತ್ತವೆ. ಅಧ್ಯಯನಕ್ಕೆ ಆರಂಭದ ಘಟ್ಟದಲ್ಲಿ ಪಾಶ್ಚಾತ್ಯರು ಮತ್ತು ಅವರ ಪ್ರಭಾವ ಹಾಗೂ ನೂರು ವರ್ಷಗಳ ಕಾಲ ಕನ್ನಡ ಕಥಾ ಸಾಹಿತ್ಯದ ಬೆಳವಣಿಗೆ ಮತ್ತು ಭಿನ್ನ ಒತ್ತಡ, ಪ್ರೇರಣೆ, ಪ್ರಭಾವಗಳಿಗೆ ಹವ್ಯಕ ಸಮಾಜವು ತೆರೆದುಕೊಂಡ, ಘರ್ಷಿಸಿದ ಎಳೆಗಳನ್ನು ಶೋಧಿಸುವುದು ಅಧ್ಯಯನ ವಿಧಾನವಾಗಿದೆ. ಈ ಅಧ್ಯಯನದಲ್ಲಿ ನಿರ್ದಿಷ್ಟ ತಾತ್ತ್ವಿಕತೆ ಮತ್ತು ನಿರ್ದಿಷ್ಟ ಪರಿಕಲ್ಪನೆಗಳನ್ನು ಗುರುತಿಸಿಕೊಂಡು ಅವು ಹೇಗೆ ಇಲ್ಲಿನ ಕತೆಗಳ ರೂಪದಲ್ಲಿ ಅಭಿವ್ಯಕ್ತಿ ಪಡೆದಿವೆ ಎನ್ನುವುದನ್ನು ವಿವೇಚಿಸಲಾಗಿದೆ. ಮಹಿಳೆಯರ ಕತೆಗಳು ತಮ್ಮದೇ ಆದ ವಿಶಿಷ್ಟ ಸ್ತ್ರೀ ಸಂವೇದನೆಯಿಂದ ರೂಪುಗೊಂಡಿವೆಯೇ ಎಂಬುದನ್ನು ಶೋಧಿಸುವ ಪ್ರಯತ್ನವನ್ನು ಮಾಡಲಾಗಿದೆ

## ೧.೪ ಹವ್ಯಕ ಸಮುದಾಯದ ಈವರೆಗಿನ ಅಧ್ಯಯನ – ಹಿನ್ನೋಟ

ಹವ್ಯಕ ನಡೆ–ನುಡಿ–ಸಂಸ್ಕೃತಿಗಳ ಬಗ್ಗೆ ಡಾ। ಎಲ್.ಆರ್. ಹೆಗಡೆ, ಪ್ರೊ.ಎಂ. ಮರಿಯಪ್ಪ ಭಟ್ಟ, ಡಾ।ಡಿ.ಎನ್. ಶಂಕರಭಟ್ಟ ಮುಂತಾದ ಅನೇಕ ವಿದ್ವಾಂಸರು ಅಧ್ಯಯನಗಳನ್ನು ನಡೆಸಿದ್ದಾರೆ.

ಶ್ರೀರಾಮಚಂದ್ರಾಪುರ ಮಠದಿಂದ ೧೮೮೭ರಲ್ಲಿ ಪ್ರಕಟಗೊಂಡ 'ಹವ್ಯಕ ಉತ್ಪತ್ತಿಯ ಇತಿಹಾಸ', ಶ್ರೀ ವಿಶ್ವಾಮಿತ್ರರು ೧೯೫೨ರಲ್ಲಿ ರಚಿಸಿದ 'ಹವ್ಯಕ ಸಮಾಜ' ಎಂಬ ಕೃತಿಗಳು ಹವ್ಯಕರ ಇತಿಹಾಸವನ್ನು ಕುರಿತು ಬರೆದ ಮೊದಲ ಪ್ರಯತ್ನ. ೧೯೫೩ರಲ್ಲಿ ವೈದ್ಯ ಗ.ಸು. ಪಾಟೀಲ ಹಾಗೂ ಪಂಡಿತ ಗಣಪತಿ ಶಾಸ್ತ್ರಿ ಹೆಬ್ಬಾರರು ರಚಿಸಿದ 'ಹವ್ಯಕ ಸಮಾಜ ಮತ್ತು ಶ್ರೀ ಗುರು ಮಠದ ಸಂಕ್ಷಿಪ್ತ ಇತಿಹಾಸ'ವು ಒಂದು ಮಹತ್ತ್ವಪೂರ್ಣವಾದ ಕೃತಿ. ಟಿ.ಕೇಶವ ಭಟ್ಟರ 'ಹವ್ಯಕ ಶೋಭಾನೆಗಳು' (೧೯೮೯) ಎಂಬುದು ಹವ್ಯಕ ಸಂಸ್ಕೃತಿಯ ಅಧ್ಯಯನದಲ್ಲಿ ಒಂದು ವಿಶಿಷ್ಟ ಕೃತಿ. ವಿದ್ವಾನ್ ಹೆಚ್. ಎ. ತಿಮ್ಮಪ್ಪ ಕಲಸಿಯವರು ೧೯೯೦ರಲ್ಲಿ 'ಹವ್ಯಕರ ಇತಿಹಾಸ' ಎಂಬ ಕೃತಿಯನ್ನು ರಚಿಸಿದ್ದಾರೆ.

ಹವ್ಯಕರ ಜನಪದ ಹಾಡುಗಳ ಬಗ್ಗೆ ಡಾ। ಎಲ್.ಜಿ. ಭಟ್ಟರ 'ಜನಪದ ಜೀವನ ಚಕ್ರ' (೧೯೭೬), ಡಾ। ಶಾಲಿನಿ ರಘುನಾಥ ಭಟ್ಟರ 'ಉ.ಕ. ಜಿಲ್ಲೆಯ ಹವ್ಯಕರ ಹಾಡುಗಳು' (೧೯೭೯), ಡಾ। ಎಲ್. ಆರ್. ಹೆಗಡೆಯವರು ಸಂಪಾದಿಸಿದ 'ಮಂಗಲ

ಗೀತೆಗಳು' ಮತ್ತು 'ಮದುವೆಯ ಹಾಡುಗಳು' ಹಾಗೆಯೇ ೧೯೬೯ರಲ್ಲಿ ಎನ್.ಕೆ. ಹೆಗಡೆಯವರು ಸಂಪಾದಿಸಿದ 'ಉ.ಕ. ಜಿಲ್ಲೆಯ ಗ್ರಂಥಕಾರರು' ಮತ್ತು ನೀರ್ಪಾಜೆ ಭೀಮಭಟ್ಟರು ಸಂಪಾದಿಸಿದ 'ದ.ಕ. ಜಿಲ್ಲೆಯ ಸಾಹಿತ್ಯೋಪಾಸಕರು' (೧೯೭೭), ಡಾ। ಶ್ರೀಕೃಷ್ಣ ಭಟ್ ಅರ್ತಿಕಜೆಯವರ 'ಜಾನಪದ ಜೀವನ' (೧೯೮೧), 'ಹವ್ಯಕರ ಗಾದೆಗಳು' (೧೯೮೫) ಮೊದಲಾದ ಕೃತಿಗಳು ಹವ್ಯಕರ ಕುರಿತು ಅನೇಕ ಮಾಹಿತಿಗಳಿಂದ ಕೂಡಿವೆ.

ಹವ್ಯಕ ಭಾಷೆಯನ್ನು ಕುರಿತಂತೆ ಸ್ವಲ್ಪಮಟ್ಟಿಗೆ ಅಧ್ಯಯನ ನಡೆದಿದೆ. ಎರಡು ಪ್ರಕಟಿತ ಹಾಗೂ ಎರಡು ಅಪ್ರಕಟಿತ ಸಂಶೋಧನಾ ಪ್ರಬಂಧಗಳು ರಚಿತವಾಗಿವೆ. ಪ್ರಕಟಿತ ಗ್ರಂಥಗಳಲ್ಲಿ ಡಾ। ಕೆ.ಜಿ. ಶಾಸ್ತ್ರಿಯವರ 'The Havyaka Dialect of North Kanara' ಎಂಬುದು ಪ್ರಮುಖವಾದುದು (೧೯೭೧). ಇದರಲ್ಲಿ ಉತ್ತರ ಕನ್ನಡ ಜಿಲ್ಲೆಯ ಹವ್ಯಕ ಭಾಷೆಯ ಪ್ರಾದೇಶಿಕ ವರ್ಣನಾತ್ಮಕ ಅಧ್ಯಯನ ಹಾಗೂ ಅಲ್ಲಿನ ಹವ್ಯಕ ಭಾಷೆಯ ಪ್ರಾದೇಶಿಕ ವ್ಯತ್ಯಾಸಗಳ ತುಲನಾತ್ಮಕ ಅಧ್ಯಯನವೂ ಇದೆ. ಈ ಕೃತಿಯಲ್ಲಿ ಹವ್ಯಕ ಭಾಷೆಯ ಧ್ವನಿಮಾವ್ಯವಸ್ಥೆ, ಆಕೃತಿಮಾ ವ್ಯವಸ್ಥೆ, ವಾಕ್ಯ ಮತ್ತು ಶೈಲಿ ವಿಧಾನಗಳನ್ನು ವಿವರಿಸಲಾಗಿದೆ. ಅಂತೆಯೇ ಹವ್ಯಕ ಭಾಷೆಯ ವೈಲಕ್ಷಣಗಳನ್ನೂ ಹಳಗನ್ನಡ, ನಡುಗನ್ನಡ ಭಾಷಾ ಸಾಮ್ಯಗಳನ್ನೂ ಗುರುತಿಸುವುದರೊಂದಿಗೆ ಇಂದಿನ ಶಿಷ್ಟ ಕನ್ನಡದೊಂದಿಗೆ ಇರುವ ಪ್ರಮುಖ ವ್ಯತ್ಯಾಸಗಳನ್ನು ತಿಳಿಸಲಾಗಿದೆ. ಡಾ। ಡಿ.ಎನ್. ಶಂಕರ ಭಟ್ಟರು ಹವ್ಯಕ ಭಾಷೆಗೆ ಸಂಬಂಧಿಸಿದ 'An outline grammer of Havyaka' (೧೯೭೧). ಎಂಬ ಸಂಶೋಧನಾತ್ಮಕ ಕೃತಿಯನ್ನು ರಚಿಸಿದ್ದಾರೆ. ಇದರಲ್ಲಿ ಅವರು ದಕ್ಷಿಣ ಕನ್ನಡ ಹವ್ಯಕ ಭಾಷೆಯನ್ನು ವಿಶ್ಲೇಷಿಸಿ ಶಿಷ್ಟ ಕನ್ನಡಕ್ಕಿಂತ ಭಿನ್ನವಾದ ಹವ್ಯಕ ಭಾಷೆಯ ವಿಶಿಷ್ಟ ಅಂಶಗಳನ್ನು ಗುರುತಿಸಿದ್ದಾರೆ. ಅಪ್ರಕಟಿತ ಗ್ರಂಥಗಳಲ್ಲಿ ಒಂದಾದ 'Descriptive Analysis of Havyaka Dialect' ಎಂಬುದು ಡಾ। ಬಿ. ಚಂದ್ರಶೇಖರ ಭಟ್ಟರ ಪಿಎಚ್.ಡಿ. ಮಹಾಪ್ರಬಂಧ. ಇದರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ಹಾಗೂ ಸುಳ್ಯದ ಸುತ್ತಮುತ್ತಲೂ ಪ್ರಚಲಿತವಾಗಿರುವ ಹವ್ಯಕ ಭಾಷೆಯ ವಿಶ್ಲೇಷಣೆಯಿದೆ. ಡಾ। ಶಾಲಿನಿ ರಘುನಾಥ ಅವರ 'A Sociolingistic Analysis of Havyaka Dialect of North Kanara' ಎಂಬ ಸಂಶೋಧನ ಮಹಾಪ್ರಬಂಧವು ಹವ್ಯಕ ಭಾಷೆಯನ್ನು ಕುರಿತ ಅಪ್ರಕಟಿತ ಗ್ರಂಥಗಳಲ್ಲಿ ಎರಡನೆಯದು. ಇದರಲ್ಲಿ ಉತ್ತರ

ಕನ್ನಡ ಜಿಲ್ಲೆಯ ಹವ್ಯಕ ಭಾಷೆಯ ಸಾಮಾಜಿಕ ಅಧ್ಯಯನವನ್ನು ಮಾಡಲಾಗಿದೆ. ಹವ್ಯಕ ಸಮಾಜ ಹಾಗೂ ಸಂಸ್ಕೃತಿಯ ಹಿನ್ನೆಲೆಯಲ್ಲಿ ಹವ್ಯಕ ಭಾಷೆಯನ್ನು ವಿಶ್ಲೇಷಿಸಿ ಜಾತಿ, ಲಿಂಗ, ವಯಸ್ಸು, ವಿದ್ಯೆ, ನಗರೀಕರಣ ಮುಂತಾದ ಸಾಮಾಜಿಕ ಅಂಶಗಳಿಗೂ ಭಾಷಿಕ ಅಂಶಗಳಿಗೂ ಇರುವ ಸಂಬಂಧವನ್ನು ಇಲ್ಲಿ ವಿವರಿಸಲಾಗಿದೆ. ಹೆಲೆನ್ ಉಲ್‌ರಿಚ್ ಎಂಬವರು ಶಿವಮೊಗ್ಗ ಜಿಲ್ಲೆಯ ಹವ್ಯಕ ಭಾಷೆ ಮತ್ತು ಸಂಸ್ಕೃತಿಯನ್ನು ಕುರಿತು ಅಧ್ಯಯನ ಮಾಡಿ 'Clause Structure of Northern Havyaka Kannada A Tagmatic Analysis' ಎಂಬ ಗ್ರಂಥವನ್ನು ರಚಿಸಿದ್ದಾರೆ (೧೯೮೦).

ಹವ್ಯಕ ಭಾಷೆಯ ಕುರಿತು ಅನೇಕ ಮಹತ್ತ್ವಪೂರ್ಣ ಲೇಖನಗಳು ಪ್ರಕಟವಾಗಿವೆ. ಪ್ರೊ. ಮರಿಯಪ್ಪ ಭಟ್ಟರ 'Havyaka Dialect', 'ದಕ್ಷಿಣ ಕನ್ನಡದ ಹವ್ಯಕ ಭಾಷೆ', 'ಹವ್ಯಕ ಭಾಷೆಯಲ್ಲಿ ಮಕ್ಕಳೊಡನೆ ಬಳಸುವ ವಿಶಿಷ್ಟ ಪದಗಳು' ಎಂಬ ಲೇಖನಗಳು ಗಮನಾರ್ಹವಾದುವು. ಡಾ। ಡಿ.ಎನ್. ಶಂಕರ ಭಟ್ಟರು ರಚಿಸಿದ 'Verbal Inflection in Southern Havyaka', 'Some Sound Change in Havyaka and Kannada', 'Lexical Suppletion Baby Talk' ಮತ್ತು 'Gender Distinction in Havyaka' ಎಂಬ ಲೇಖನಗಳು ಪ್ರಮುಖವಾದುವು. ಡಾ। ಕೆ.ಪಿ. ಭಟ್ಟರ 'ಹವ್ಯಕ ಕನ್ನಡದಲ್ಲಿ ಅನುನಾಸಿಕೀಕರಣ' ಮತ್ತು 'ಹವ್ಯಕ ಭಾಷೆ' ಎಂಬ ಲೇಖನಗಳು ಹವ್ಯಕ ಭಾಷಾ ವೈಶಿಷ್ಟ್ಯದ ಮಹತ್ತ್ವದ ಅಂಶಗಳನ್ನು ತಿಳಿಸುತ್ತವೆ.

ಹವ್ಯಕ ನಿಘಂಟು ರಚನಾ ಕಾರ್ಯವೂ ನಡೆದಿದೆ. ಪ್ರೊ.ಟಿ. ಕೇಶವ ಭಟ್ಟರ 'ಹವ್ಯಕ ಪದ ಸಂಚಯ'ವು ೧೯೭೨ರಲ್ಲಿ ಪ್ರಕಟವಾಗಿದೆ. ಈ ನಿಘಂಟು ಕಂದ ಪದ್ಯದಲ್ಲಿ ರಚಿತವಾಗಿದ್ದು ಪದ್ಯಗಳು ಅಕಾರಾದಿಯಾಗಿವೆ. ಶಿಷ್ಟ ಕನ್ನಡದಲ್ಲಿ ಅವುಗಳ ವ್ಯಾಖ್ಯಾನವೂ ಇದೆ. ಪ್ರೊ. ಮರಿಯಪ್ಪ ಭಟ್ಟರು ರಚಿಸಿದ 'ಹವ್ಯಕ – ಇಂಗ್ಲಿಷ್ ನಿಘಂಟು' ಕೃತಿಯನ್ನು ಅವರ ನಿಧನದ ಬಳಿಕ ಅವರ ಮಗಳು ಶ್ರೀಮತಿ ಶಾರದಾ ಜಯಗೋವಿಂದ ಇತರರ ಸಹಕಾರದೊಂದಿಗೆ ಸಂಪಾದಿಸಿ ೧೯೮೨ರಲ್ಲಿ ಪ್ರಕಟಿಸಿದ್ದಾರೆ. ಒಂದು ಶಬ್ದಕ್ಕೆ ಅನೇಕ ಅರ್ಥಗಳಿರುವುದನ್ನು ಈ ನಿಘಂಟಿನಲ್ಲಿ ಗುರುತಿಸಲಾಗಿದೆ. ಕೆಲವು ಹವ್ಯಕ ಪದಗಳಿಗೆ ಇತರ ದ್ರಾವಿಡ ಭಾಷೆಗಳಲ್ಲಿರುವ ಸಮಾನ ಶಬ್ದಗಳನ್ನು ಕೊಡಲಾಗಿದೆ.

'ಉತ್ತರಕನ್ನಡ ಜಿಲ್ಲೆಯ ಹವ್ಯಕ ಜನಪದ ಸಂಸ್ಕೃತಿಯ ಅಧ್ಯಯನ'ವೆಂಬುದಾಗಿ ಡಾ। ಗಜಾನನ ಸತ್ಯನಾರಾಯಣ ಹೆಗಡೆಯವರು ೧೯೯೭ರಲ್ಲಿ ಒಂದು ಸಂಶೋಧನಾ ಪ್ರಬಂಧವನ್ನು ರಚಿಸಿದ್ದಾರೆ. ಡಾ। ಶ್ರೀಕೃಷ್ಣ ಭಟ್ ಅರ್ತಿಕಜೆ ಹಾಗೂ ಡಾ। ಹರಿಕೃಷ್ಣ ಭರಣ್ಯ ಇವರ ಜಂಟೀ ಸಂಪಾದಕತ್ವದಲ್ಲಿ 'ನುಡಿ ಸಂಸ್ಕೃತಿ' ಎಂಬ ಹವ್ಯಕ ಪಡೆನುಡಿ ಕೋಶವು ೨೦೦೫ರಲ್ಲಿ ಪ್ರಕಟವಾಗಿದೆ. ಡಾ। ಬಿಎನ್. ಮಹಾಲಿಂಗ ಭಟ್ಟರು ೨೦೦೫ರಲ್ಲಿ 'ದಕ್ಷಿಣ ಕನ್ನಡ ಜಿಲ್ಲೆಯ ಹವ್ಯಕರ ಸಂಸ್ಕೃತಿ – ಒಂದು ಅಧ್ಯಯನ' ಎಂಬ ಸಂಶೋಧನಾ ಪ್ರಬಂಧವನ್ನು ರಚಿಸಿದ್ದಾರೆ.

ನಾರಾಯಣ ಶಾನಭಾಗರು ಸಂಪಾದಿಸಿದ 'ಕೀರ್ತಿಶೇಷ ಹವ್ಯಕ ಗ್ರಂಥಕಾರ – ಕೃತಿಸೂಚಿ' (೨೦೦೫) ಕೃತಿಯಲ್ಲಿ ಹವ್ಯಕರು ಸಾಹಿತ್ಯ ಕ್ಷೇತ್ರದಲ್ಲಿ ಮಾಡಿದ ಕೆಲಸಗಳನ್ನು ಕಾಲಘಟ್ಟದ ಹಿನ್ನೆಲೆಯಲ್ಲಿ ದಾಖಲಿಸಿರುವ ಪ್ರಯತ್ನವಿದೆ. ಡಾ। ಹರಿಕೃಷ್ಣ ಭರಣ್ಯರು 'ಈ ನೆಲದ ಕಂಪು' (೨೦೦೬) ಕೃತಿಯಲ್ಲಿ 'ಹವಿಗನ್ನಡ'ದ ಅಧ್ಯಯನ ಇದುವರೆಗೆ ನಡೆದುಬಂದ ದಾರಿಯನ್ನು ಸ್ಥೂಲವಾಗಿ ಗುರುತಿಸಿ, ಅನಂತರ ಆಧುನಿಕ ಸಂದರ್ಭದಲ್ಲಿ ಸೃಷ್ಟಿಯಾಗಿರುವ ಹವಿಗನ್ನಡ ಸಾಹಿತ್ಯವನ್ನು ವಿಸ್ತಾರವಾಗಿ ಚರ್ಚಿಸಿದ್ದಾರೆ. ಭರಣ್ಯರು ರಚಿಸಿದ 'ಹವ್ಯಕಾಧ್ಯಯನ' (೨೦೦೬)ವೆಂಬ ಲೇಖನ ಸಂಕಲನದಲ್ಲಿ ಒಟ್ಟು ಆರು ಲೇಖನಗಳಿವೆ. ಈ ಕೃತಿಯಲ್ಲಿ ಹವಿಗನ್ನಡಕ್ಕೆ ಸಂಬಂಧಿಸಿದಂತೆ ಹವ್ಯಕ ನಡೆ, ನುಡಿ, ಬಾಲಭಾಷೆ, ಬೈಗಳು, ಸಂಬಂಧ ಸೂಚಕ ಪದಗಳು ಹಾಗೂ ಆಟಗಳ ಕುರಿತಾದ ವಿಚಾರಗಳಿವೆ.

'ಕಡೆಂಗೋಡ್ಲು ಶಂಕರ ಭಟ್ಟರ ಸೃಜನಶೀಲ ಕೃತಿಗಳು', 'ಜಿ.ಆರ್. ಪಾಂಡೇಶ್ವರ – ಬದುಕು ಬರಹ', 'ಮುಳಿಯ ತಿಮ್ಮಪ್ಪಯ್ಯ – ಬದುಕು ಬರಹ', 'ಎಂ. ಮರಿಯಪ್ಪ ಭಟ್ಟ – ಬದುಕು ಬರಹ', 'ಸೇಡಿಯಾಪು ಕೃಷ್ಣ ಭಟ್ಟರ ಸಾಹಿತ್ಯ', 'ದೇರಾಜೆ ಸೀತಾರಾಮಯ್ಯ – ಬದುಕು ಬರಹ' ಮುಂತಾದ ಅಧ್ಯಯನಗಳಲ್ಲಿ ಹಿರಿಯ ಹವ್ಯಕ ಸಾಹಿತಿಗಳ ಕೃತಿಗಳನ್ನು ಸಾಹಿತ್ಯ ದೃಷ್ಟಿಯಿಂದ ಅವಲೋಕಿಸಲಾಗಿದೆಯೇ ಹೊರತು 'ಹವ್ಯಕ ಸಂಸ್ಕೃತಿ'ಯನ್ನು ಪ್ರತಿಬಿಂಬಿಸುವ ದೃಷ್ಟಿಕೋನದಿಂದ ಅಧ್ಯಯನ ನಡೆಸಿಲ್ಲ.

ಹವ್ಯಕರ ಬಗೆಗೆ ಈವರೆಗೆ ನಡೆದಿರುವ ಅಧ್ಯಯನದ ಸಮೀಕ್ಷೆಯನ್ನು ಮಾಡಲಾಗಿ ಅವರ ಸಂಸ್ಕೃತಿಯ ಒಂದೊಂದು ಅಂಶಗಳನ್ನು ಎತ್ತಿಕೊಂಡು

ಬಿಡಿಬಿಡಿಯಾಗಿ ಪರಿಚಯಾತ್ಮಕ ರೂಪದಲ್ಲಿ ಸಂಗ್ರಹ ಕಾರ್ಯ ನಡೆದಿರುವುದು ಕಂಡುಬರುತ್ತದೆ. ಈ ಜನಾಂಗದವರನ್ನು ಕುರಿತು ಬೇರೆ ಬೇರೆ ವಿಷಯಗಳ ಮೇಲೆ ಪಿಎಚ್.ಡಿ. ಅಧ್ಯಯನಗಳು ನಡೆದಿವೆ. ಆದರೆ ಈ ಜನರ ಸಾಹಿತ್ಯ ಕೃತಿಗಳ ದೃಷ್ಟಿಯಿಂದ ಸಾಂಸ್ಕೃತಿಕ ಅಧ್ಯಯನವು ನಡೆದಿರುವುದಿಲ್ಲ. ಈ ಒಂದು ಕೊರತೆಯು ಇಲ್ಲಿ ಕಂಡುಬಂದುದರಿಂದ, ಅವರ ಸಂಸ್ಕೃತಿಯನ್ನು ತಿಳಿಯುವ ಉದ್ದೇಶದಿಂದ 'ಹವ್ಯಕರ ಕನ್ನಡ ಸಣ್ಣಕತೆಗಳು–ಸಾಂಸ್ಕೃತಿಕ ಅಧ್ಯಯನ'ವನ್ನು ತಲಸ್ಪರ್ಶಿಯಾಗಿ ಮಾಡಬೇಕಾಯಿತು. ಅದರ ಫಲಶ್ರುತಿಯೇ ಈ ಮಹಾಪ್ರಬಂಧ.

# ಅಧ್ಯಾಯ - ೨

## ಹವ್ಯಕ ಸಮುದಾಯದ ಹಿನ್ನಲೆ

ಮಾನವನು ವಾಸಿಸುವ ಈ ಭೂಮಿಯು ಹೇಗಾಯಿತು? ಯಾಕಾಯಿತು? ಎಂಬ ಪ್ರಶ್ನೆಗಳ ಜೊತೆಗೆ, ಆತ ಕ್ರಮಿಸಿ ಬಂದ ದಾರಿಯ ಗುರುತು ಭವಿಷ್ಯದ ಪೀಳಿಗೆಗೆ ಅತಿ ಅಗತ್ಯ. ಇತಿಹಾಸಕಾರರು ಮತ್ತು ಮಾನವ ಶಾಸ್ತ್ರಜ್ಞರು ಬೇರೆ ಬೇರೆ ಕಾಲಗತಿಯಲ್ಲಿ ಭಿನ್ನಭಿನ್ನ ಪ್ರದೇಶಗಳ ಮಾನವರು ಕ್ರಮಿಸಿದ ದಾರಿಯನ್ನು ನಮಗೆ ಪರಿಚಯಿಸಿದ್ದಾರೆ. ಉತ್ಖನನದ ಮೂಲಕ ಹರಪ್ಪ ಮೊಹೆಂಜೋದಾರೊ ಪ್ರದೇಶಗಳ ನಾಗರಿಕತೆಯ ವೈಭವದ ಕುರುಹುಗಳನ್ನು ನಮ್ಮ ಮುಂದೆ ತೆರೆದಿಟ್ಟಿದ್ದಾರೆ. ಒಂದು ನಾಡಿನ ಸಂಸ್ಕೃತಿ ಎಂದರೆ ಆ ನೆಲದಲ್ಲಿ ಬೀಡು ಬಿಟ್ಟ ಜನರ ಬದುಕೇ ಆಗಿದೆ. ಕಾಲಕ್ರಮೇಣ ಆ ಬದುಕಿನ ಬಹುಮುಖವಾದ ನಿರಂತರತೆಯೇ ಆ ನಾಡಿನ, ಆ ಜನಾಂಗದ ಸಂಸ್ಕೃತಿಯಾಗಿ ರೂಪುಗೊಳ್ಳುವುದು.

ಕರ್ನಾಟಕದಲ್ಲಿ ಆಗಿರುವ ಜನಾಂಗಿಕ ಅಧ್ಯಯನದ ಕೃತಿಗಳ ರೂಪು-ರೇಷೆಗಳು ವಿಶ್ಲೇಷಣಾ ವಿಧಾನದ್ದಾಗಿದೆ. ಒಂದು ಜನಾಂಗದ ಸಂಸ್ಕೃತಿ, ವಿಶಿಷ್ಟ ಆಚರಣೆ ಅದರ ಅಗತ್ಯದ ಹಿನ್ನೆಲೆಯನ್ನು ತಿಳಿಯುವ ಅಗತ್ಯವಿದೆ ಎನಿಸುತ್ತದೆ. ಭೌಗೋಳಿಕ ಪರಿಸರ ಹಾಗೂ ಪ್ರಾದೇಶಿಕ ಅಗತ್ಯಗಳಿಗೆ ತಕ್ಕಂತೆ ಸಾಂಸ್ಕೃತಿಕ ನಡಾವಳಿಗಳನ್ನು ರೂಪಿಸಿಕೊಂಡು ಬಂದ ಕಾರಣಗಳನ್ನು ತಿಳಿಯಬೇಕಾಗುತ್ತದೆ.

ಬದುಕು ಸಾಗಿಸುತ್ತಿರುವ ಒಂದು ಸಮುದಾಯ ತನ್ನದೇ ಆದ ಆಚಾರ, ವಿಚಾರ, ನಡವಳಿಕೆ, ಸಂಪ್ರದಾಯ, ದೈವ, ದೇವರು ಇತ್ಯಾದಿ ಅಂಶಗಳನ್ನು ರೂಢಿಸಿಕೊಂಡಿರುತ್ತದೆ. ಇದು ಸಮುದಾಯಯಿಂದ ಸಮುದಾಯಕ್ಕೆ ಭಿನ್ನವಾಗಿರುತ್ತದೆ. ಯಾವುದೇ ಒಂದು ಜನಾಂಗದ ಸಂಸ್ಕೃತಿಯು ನಿಂತ ನೀರಲ್ಲ; ನಿತ್ಯ ಪರಿವರ್ತನಶೀಲವಾದುದು. ಅನ್ಯ ಸಂಸ್ಕೃತಿಯ ಪ್ರಭಾವಕ್ಕೊಳಗಾಗದೆ ಪ್ರತ್ಯೇಕತೆಯನ್ನು ಕಾಯ್ದುಕೊಂಡಿರುವ ಕೆಲವು ಬುಡಕಟ್ಟುಗಳ ಸಂಸ್ಕೃತಿಯಲ್ಲಿಯೂ ಕಾಲಾಂತರದಲ್ಲಿ ಎಷ್ಟೋ ಬದಲಾವಣೆಗಳಾಗಿರುವುದನ್ನು ಮನಗಾಣುತ್ತೇವೆ. ಅದೇ ರೀತಿ ಭಾರತದಲ್ಲಿ ಪ್ರಚಲಿತದಲ್ಲಿರುವ ಜಾತೀಯ ವ್ಯವಸ್ಥೆಯಲ್ಲಿಯೂ ಕಾಲದಿಂದ ಕಾಲಕ್ಕೆ ನಿರಂತರವಾಗಿ

ಬದಲಾವಣೆಗಳಾಗಿವೆ. ಇದು ಅನಿವಾರ್ಯವಾದುದು. ಸಂಸ್ಕೃತಿಯ ಅಧ್ಯಯನದಲ್ಲಿ ಸಾಂಸ್ಕೃತಿಕ ಪರಿವರ್ತನೆ ಎಂಬುದು ಬಹುಮುಖ್ಯವಾದ ಅಂಶವಾಗಿವೆ.

ಯಾವುದೇ ಒಂದು ಜನಾಂಗದ ಅಧ್ಯಯನವೆಂದರೆ ಅವರು ರೂಢಿಸಿಕೊಂಡು ಬಂದ ಜೀವನದ ಮೌಲ್ಯಗಳೇ ಆಗಿವೆ. ಈ ದೃಷ್ಟಿಯಿಂದ ಹವ್ಯಕರ ಜೀವನ ಮೌಲ್ಯಗಳೇ ಆ ಜನಾಂಗದ ಸಾಂಸ್ಕೃತಿಕ ಅಧ್ಯಯನದ ಮೂಲ ಆಶಯವೆನಿಸಿದೆ. ಅವರ ಜೀವನಕ್ರಮದಲ್ಲಿ ಸಾಂಸ್ಕೃತಿಕ ಅಂಶಗಳು ಹಾಸು ಹೊಕ್ಕಾಗಿದೆ. ಈ ದೃಷ್ಟಿಯಿಂದ ಸಂಸ್ಕೃತಿ ಎಂದರೆ ಒಂದು ಸಮುದಾಯ ತಲೆತಲಾಂತರಗಳಿಂದ ರೂಪಿಸಿಕೊಂಡು ಬಂದ ಮೌಲ್ಯಗಳೇ ಆಗಿರುತ್ತವೆ.

ಜನಾಂಗಗಳ ಅಧ್ಯಯನ ಇಂದು ಸಮಾಜ ವಿಜ್ಞಾನದ ಪ್ರಮುಖ ಅಂಗಗಳಲ್ಲಿ ಒಂದಾಗಿದೆ. ಪುರಾಣ ಮತ್ತು ಇತಿಹಾಸಗಳಲ್ಲಿ ನಾನಾ ಕಾರಣಗಳಿಂದ ಪ್ರಸಿದ್ಧರಾಗಿದ್ದು, ಅಕ್ಷರ ಕೃಪೆಗೆ ಒಳಗಾಗಿ ತಮ್ಮ ಸಮುದಾಯದ ಅಗಾಧ ಐಕಮತ್ಯ ಮತ್ತು ಅಧಿಕಾರಾನ್ವೇಷಣೆಯ ವಿದ್ಯೆಯಲ್ಲಿ ಭ್ರಮಿಸುವಂತೆ ಮಾಡಿ ಜೀವನದ ಎಲ್ಲ ಸವಲತ್ತುಗಳನ್ನು ತಮ್ಮ ಕಡೆಗೆ ನಿರಾಯಾಸವಾಗಿ ಬಾಗಿಸಿಕೊಂಡು ಜನಸಮುದಾಯಗಳ ಆದ್ಯಂತ ಇತಿಹಾಸಗಳನ್ನು ವರ್ಣ ರಂಜಿತವಾಗಿ ವಿವರಿಸುವ ಸಾವಿರಾರು ಗ್ರಂಥಗಳು ಭಾರತದ ಉದ್ದಕ್ಕೂ ರಚಿತವಾಗಿವೆ ಮತ್ತು ರಚಿತವಾಗುತ್ತಿವೆ. ಕರ್ನಾಟಕದಲ್ಲಿ ಜನಾಂಗೀಯ ಅಧ್ಯಯನದ ವ್ಯಾಪ್ತಿ ವಿಸ್ತೃತಗೊಂಡಂತೆಲ್ಲ ಹೊಸಹೊಸ ಸಂಶೋಧನೆಗಳು ಬೆಳಕಿಗೆ ಬರುತ್ತಿವೆ. ಜನಾಂಗೀಯ ಅಧ್ಯಯನದಲ್ಲಿ ಕರ್ನಾಟಕದ ಬೇರೆ ಬೇರೆ ವಿಶ್ವವಿದ್ಯಾನಿಲಯಗಳ ಪಾತ್ರ ಮುಖ್ಯವಾದುದು. ಈ ಅಧ್ಯಯನಗಳೆಲ್ಲ ಬಹುಮಟ್ಟಿಗೆ ಪಿಎಚ್.ಡಿ. ಮಹಾ ಪ್ರಬಂಧಗಳ ರೂಪದಲ್ಲಿ ಹೊರಬರುತ್ತಿವೆ.

'ಕಾಡುಗೊಲ್ಲರು', 'ಕಾಡುಗೊಲ್ಲರ ಸಂಪ್ರದಾಯಗಳು ಹಾಗೂ ನಂಬಿಕೆಗಳು', 'ಕರ್ನಾಟಕದ ಗೊಂದಲಿಗರು ಹಾಗೂ ಅವರ ಸಾಹಿತ್ಯ', 'ಕರ್ನಾಟಕದ ಲಂಬಾಣಿಗಳು : ಒಂದು ಅಧ್ಯಯನ', 'ಸುಳ್ಯ ಪರಿಸರದ ಗೌಡ ಜನಾಂಗ : ಒಂದು ಅಧ್ಯಯನ','ಗೊಂಡರು : ಒಂದು ಅಧ್ಯಯನ', 'ದಕ್ಷಿಣ ಕನ್ನಡ ಜಿಲ್ಲೆಯ ಭೈರರು :ಒಂದು ಅಧ್ಯಯನ','ಹೊಲೆಯರು : ಒಂದು ಅಧ್ಯಯನ', 'ಸೋಲಿಗರು : ಒಂದು ಅಧ್ಯಯನ','ದಕ್ಷಿಣ ಕರ್ನಾಟಕದ ಕೊರಮರು: ಒಂದು ಆಧ್ಯಯನ', 'ಕರ್ನಾಟಕದ

ಒಕ್ಕಲಿಗರಲ್ಲಿ ಕುಂಚಟಿಗರು : ಒಂದು ಅಧ್ಯಯನ', 'ಲಂಬಾಣಿಗಳು : ಒಂದು ಅಧ್ಯಯನ', 'ನಲಿಕೆ ಜನಾಂಗದ ಕುಣಿತಗಳು : ಒಂದು ಅಧ್ಯಯನ' ಹೀಗೆ ಕನ್ನಡ ಸಾಹಿತ್ಯದಲ್ಲಿ ಹಲವು ಜನಾಂಗೀಯ ಅಧ್ಯಯನಗಳು ನಡೆದಿವೆ. ಇಲ್ಲಿ ಆಯಾ ಜನಾಂಗದ ಆಚಾರ, ವಿಚಾರ, ಸಂಸ್ಕೃತಿಗಳನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ. ಯಾವುದೇ ಒಂದು ಜನಾಂಗ ತನ್ನದೇ ಆದ ಆಚಾರ – ವಿಚಾರ, ನಂಬಿಕೆ ನಡವಳಿಕೆಗಳನ್ನು ರೂಪಿಸಿಕೊಂಡಿರುತ್ತದೆ. ಈ ದೃಷ್ಟಿಯಿಂದ ಹವ್ಯಕರು ಬರೆದ ಸಣ್ಣ ಕತೆಗಳ ಮೂಲಕ ಹವ್ಯಕರ ಬದುಕಿನ ಹಲವು ಮಜಲುಗಳ ಅಧ್ಯಯನ ನಡೆಸುವ ಆಶಯ ಇಲ್ಲಿದೆ. ಕನ್ನಡ ನಾಡು ನುಡಿ ಸಂಸ್ಕೃತಿಗೆ ಗುರುತಿಸುವ ಪ್ರಯತ್ನವನ್ನು ಇವರ ಕೊಡುಗೆಯನ್ನು ಇಲ್ಲಿ ಮಾಡಲಾಗಿದೆ.

## ೨.೧ ಹವ್ಯಕ ಸಮುದಾಯದ ಪ್ರಾಚೀನತೆ ಮತ್ತು ವಲಸೆ :

ಉತ್ತರ ಕನ್ನಡ ಜಿಲ್ಲೆಯ ಕುಮಟಾ, ಹೊನ್ನಾವರ, ಸಿರ್ಸಿ, ಸಿದ್ಧಾಪುರ, ಯಲ್ಲಾಪುರ ತಾಲೂಕುಗಳು ಮತ್ತು ಶಿವಮೊಗ್ಗ ಜಿಲ್ಲೆಯ ಸಾಗರ, ಸೊರಬ, ಹೊಸನಗರ, ತೀರ್ಥಹಳ್ಳಿ ತಾಲೂಕುಗಳಲ್ಲಿ ಹವ್ಯಕರ ಸಂಖ್ಯೆ ಗಣನೀಯವಾಗಿದೆ. ಹೊನ್ನಾವರದಿಂದ ಉಡುಪಿಯವರೆಗೆ ವಿರಳವಾಗಿದ್ದು ಅಲ್ಲಿಂದಾಚೆಗೆ (ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ) ಬಂಟ್ವಾಳ, ಬೆಳ್ತಂಗಡಿ, ಪುತ್ತೂರು, ಮಂಗಳೂರು, ಸುಳ್ಯ, ಕಾಸರಗೋಡು ತಾಲ್ಲೂಕುಗಳಲ್ಲಿ ಹವ್ಯಕರ ಸಂಖ್ಯೆ ಗಣನೀಯವಾಗಿ ಕಂಡುಬರುತ್ತದೆ. ಲೌಕಿಕ ಜೀವನದ ವೃತ್ತಿ, ಪ್ರವೃತ್ತಿಗಳಲ್ಲಿ ನಿರತರಾದ ಹವ್ಯಕರು ಕರ್ನಾಟಕದ ರಾಜಧಾನಿ ಬೆಂಗಳೂರಿನಲ್ಲಿ ಅಪಾರ ಸಂಖ್ಯೆಯಲ್ಲಿ ನೆಲೆಸಿದ್ದಾರೆ. "ಒಂದು ಅಂದಾಜಿನಂತೆ ವರ್ತಮಾನ ಹವ್ಯಕರ ಒಟ್ಟು ಜನಸಂಖ್ಯೆಯು ನಾಲ್ಕು ಲಕ್ಷಕ್ಕೆ ಹತ್ತಿರವಾಗಿದೆ ಹಾಗೂ ಕುಟುಂಬಗಳು ಸುಮಾರು ಎಂಬತ್ತು ಸಾವಿರ ಎಂದು ಲೆಕ್ಕ ಹಾಕಲಾಗಿದೆ". (ಡಾ। ಹರಿಕೃಷ್ಣ ಭರಣ್ಯ; ಈ ನೆಲದ ಕಂಪು; ೨೦೦೬; ಪುಟ ೧) ಎಂಬುದು ಡಾ। ಹರಿಕೃಷ್ಣ ಭರಣ್ಯರ ಅಭಿಮತ.

ಪ್ರಾಚೀನ ಕಾಲದಲ್ಲಿ ಶಾಸ್ತ್ರಾಧ್ಯಯನ, ಅಧ್ಯಾಪನ, ಯಜ್ಞ–ಯಾಗಾದಿಗಳನ್ನು ಮಾಡುವುದೇ ಇವರ ಜೀವನದ ವೃತ್ತಿಯಾಗಿತ್ತು. ೧೯ನೆಯ ಶತಮಾನದ ಕೊನೆಯವರೆಗೆ ಇವರು ಅಧ್ಯಯನ, ಅಧ್ಯಾಪನ, ಯಜನ ಮುಂತಾದುವುಗಳನ್ನು ತಮ್ಮ

ಜೀವನದ ಮುಖ್ಯ ವೃತ್ತಿಯನ್ನಾಗಿ ಮಾಡುಕೊಂಡಿದ್ದರು. ವೈದಿಕ ವೃತ್ತಿಯೊಂದಿಗೆ ಕೃಷಿ ಜೀವನವನ್ನು ನಡೆಸಿಕೊಂಡು ಬಂದರು. ಅಡಿಕೆ, ತೆಂಗು, ಬಾಳೆ, ಮುಂತಾದುವುಗಳ ಬೇಸಾಯವೇ ಇವರ ಮುಖ್ಯ ಕೃಷಿ ವಿಧಾನ. ಇಂಗ್ಲಿಷ್ ವಿದ್ಯಾಭ್ಯಾಸ ಪದ್ಧತಿ ಮತ್ತು ಸಾಮಾಜಿಕ ಕ್ಷೇತ್ರದಲ್ಲಿ ಆದ ಬದಲಾವಣೆಗಳಿಂದಾಗಿ ಬಳಿಕ ಅಭಿವ್ಯಕ್ತಿ ಮಾಧ್ಯಮದ ವಿವಿಧ ಪ್ರಕಾರಗಳಾದ ಸಾಹಿತ್ಯ, ಕಲೆ, ಸಂಗೀತ, ನೃತ್ಯ, ಯಕ್ಷಗಾನ ಇತ್ಯಾದಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಅಧಿಕ ಸಂಖ್ಯೆಯಲ್ಲಿ ನಗರದಲ್ಲಿ ವಾಸಿಸುವ ಹವ್ಯಕರು ವೈದ್ಯಕೀಯ, ಇಂಜಿನಿಯರಿಂಗ್, ವಕೀಲವೃತ್ತಿ ಮುಂತಾದ ರೀತಿಯಿಂದ ವೃತ್ತಿಜೀವನವನ್ನು ನಡೆಸುತ್ತಿದ್ದರೆ, ಗ್ರಾಮಾಂತರ ಪ್ರದೇಶದಲ್ಲಿ ವಾಸಿಸುವ ಹವ್ಯಕರು ಪರಂಪರಾಗತವಾಗಿ ಬಂದಿರುವ ಧಾರ್ಮಿಕ ಚಟುವಟಿಕೆ, ಜ್ಯೋತಿಷ್ಯ ಮೊದಲಾದುವುಗಳನ್ನು ತಮ್ಮ ತೋಟದ ಬೇಸಾಯದೊಂದಿಗೇ ನಡೆಸಿಕೊಂಡು ಬಂದಿದ್ದಾರೆ.

**ಹವ್ಯಕರು ಯಾರು? ಇವರಿಗೆ ಈ ಹೆಸರು ಬರಲು ಕಾರಣವೇನು ?**

"'ಹವ್ಯಕ" ಎಂಬ ಶಬ್ದದ ವ್ಯುತ್ಪತ್ತಿಯನ್ನು ಹಾಗೂ ಹವ್ಯಕರ ಮೂಲವನ್ನು ಕುರಿತು ಬೇರೆ ಬೇರೆ ವಿದ್ವಾಂಸರು ಸಾಕಷ್ಟು ಚರ್ಚಿಸಿದ್ದಾರೆ :

'ಹವ್ಯಕ' ಎಂಬ ಪದವನ್ನು ಸೂಕ್ಷ್ಮವಾಗಿ ಗಮನಿಸಿದಾಗ ಹವ್ಯ-ಕವ್ಯ ಎಂಬುದನ್ನು ಕಾಣಬಹುದು. ಇದರಿಂದ ಹವ್ಯ, ಕವ್ಯಾದಿಗಳನ್ನು ಮಾಡುವವರೇ ಹವ್ಯಕರು ಎನ್ನುವುದು ಸ್ಪಷ್ಟವಾಗುತ್ತದೆ. ಹವ್ಯ-ಯಜ್ಞ ಯಾಗಾದಿಗಳಿಂದ ದೇವತೆಗಳನ್ನು ತುಷ್ಟಿಗೊಳಿಸುವುದು, ಕವ್ಯ-ಶ್ರದ್ಧಾದಿಗಳಿಂದ ಪಿತೃಗಳನ್ನು ತೃಪ್ತಿಗೊಳಿಸುವುದು, ಅಂದರೆ ಹವ್ಯಕವ್ಯಾದಿಗಳಲ್ಲಿ ನಿರತರಾದವರೇ ಹವ್ಯಕರು"(ಎಚ್. ಎಂ. ತಿಮ್ಮಪ್ಪ ಕಲಸಿ; ಹವ್ಯಕರ ಇತಿಹಾಸ; ೧೯೯೦; ಪುಟ ೪) ಎಂಬುದಾಗಿ ತಿಮ್ಮಪ್ಪ ಕಲಸಿಯವರು ಅಭಿಪ್ರಾಯಪಟ್ಟಿದ್ದಾರೆ.

"ಹವ್ಯಾನಿಯತ್ರ ದೀಯಂತೇ ದೇವತಾಭ್ಯೋ ವಿಶೇಷತಃ ।

ತತೋಹವ್ಯ ಇತಿಖ್ಯಾತಃ ದೇಶೋಗೋರಷ್ಟ್ರ ನಾಮಕಃ ॥

ಯಾವ ದೇಶದಲ್ಲಿ ದೇವತೆಗಳಿಗೋಸ್ಕರ ವಿಶೇಷವಾಗಿ ಹವಿಸ್ಸು ಕೊಡಲ್ಪಡುತ್ತದೋ ಅದರ ದೆಸೆಯಿಂದ ಹವ್ಯವೆಂತೆಂದು ಪ್ರಸಿದ್ಧರಾಗಿ ಆ ದೇಶವು ಗೋರಾಷ್ಟ್ರವೆಂಬ ನಾಮ

ಉಳ್ಳಂಥದ್ದಾಯಿತು. ಹವ್ಯಾ ಏವ ಹವ್ಯಕಾಃ ಸ್ವಾರ್ಥೇಕ ಪ್ರತ್ಯಯಃ ಹವ್ಯ ಎಂದರೂ ಹವ್ಯಕವೇ ಸರಿ ಈ ಕಾರಣದಿಂದ ಹವ್ಯಕರೆಂಬ ನಾಮ ಪ್ರಾಪ್ತವಾಯಿತು" (ಉತ್ತರ ಸಹ್ಯಾದ್ರಿಖಂಡ; ೧೮೩೪; ಅಧ್ಯಾಯ ೩೪, ಪುಟ ೯೯) ಎಂಬುದಾಗಿ ಉತ್ತರ ಸಹ್ಯಾದ್ರಿ ಖಂಡದಲ್ಲಿ ಹವ್ಯಕರ ಬಗ್ಗೆ ಉಲ್ಲೇಖವಿದೆ.

"ಹವ್ಯಕಾಶ್ಚೇತಿ ವಿಪ್ರಾಣಾಂ ನಾಮಧೇಯಂಚಕಾರಸ:- ಈ ಬ್ರಾಹ್ಮಣರಿಗೆ ಹವ್ಯಕವೆಂತ ನಾಮಧೇಯವನ್ನು ಮಾಡಿದನು" (ಅದೇ; ಅಧ್ಯಾಯ ೩೪; ಪುಟ ೧೦೧)ಹೀಗೆ ರಾಜರಿಂದಲೇ 'ಹವ್ಯಕ'ರೆಂಬ ಹೆಸರನ್ನು ಪಡೆದು, ಬ್ರಾಹ್ಮಣರು ವಿಶೇಷ ಗೌರವಕ್ಕೆ ಪಾತ್ರರಾದರು. ಹವ್ಯ-ಕವ್ಯಾದಿ ಷಟ್ಕರ್ಮಗಳನ್ನೇ ತಮ್ಮ ವೃತ್ತಿಯನ್ನಾಗಿರಿಸಿಕೊಂಡಿದ್ದರಿಂದಲೂ ಇವರಿಗೆ 'ಹವ್ಯಕ' ಎಂಬ ಅನ್ವರ್ಥನಾಮವೇ ಅಂದಿನಿಂದ ಇಂದಿನವರೆಗೂ ಸ್ಥಿರವಾಗಿ ಉಳಿದುಕೊಂಡು ಬಂದಿತು.

"ಹವ್ಯಕರನ್ನು ಹವಿಕ, ಹವೀಕ, ಹವಿಗ, ಹೈಗ ಮುಂತಾದ ಪ್ರಭೇದಗಳಿಂದ ಕರೆಯುವ ರೂಢಿಯುಂಟು. ಇದೆಲ್ಲವೂ 'ಹವ್ಯಕ' ಎಂಬುದರ ರೂಪಾಂತರ (ಅಪಭ್ರಂಶ)ವೇ ಹೊರತು ಬೇರೆಯಲ್ಲ" (ಎಚ್. ಎಂ. ತಿಮ್ಮಪ್ಪ ಕಲಸಿ, ಹವ್ಯಕರ ಇತಿಹಾಸ; ೧೯೯೦; ಪುಟ ೮)".ಇಲ್ಲಿ ದೇಶಭೇದದಿಂದ ಹವ್ಯಕರೆಂಬ ಹೆಸರು ಬಂದಿತೆಂದು ಹೇಳುವುದಕ್ಕಿಂತಲೂ, ವೃತ್ತಿಭೇದದಿಂದ ಹವ್ಯಕರೆಂಬ ಹೆಸರು ಬಂತಲ್ಲದೆ ಹವ್ಯಕರು ನೆಲೆಸಿದ್ದರಿಂದಲೇ ಈ ದೇಶಕ್ಕೆ ಹವ್ಯ ಯಾ ಹೈಗ ದೇಶವೆಂಬ ಹೆಸರು ಬರಲು ಕಾರಣವಾಯಿತೆಂಬುದರಲ್ಲಿ ಯಾವ ಸಂದೇಹವಿಲ್ಲ"(

ಎಚ್.ಎಂ.ತಿಮ್ಮಪ್ಪ ಕಲಸಿ, ಹವ್ಯಕರ ಇತಿಹಾಸ; ೧೯೯೦; ಪುಟ ೮) ಎಂಬುದು 'ಹವ್ಯಕ'ರ ಮೂಲದ ಕುರಿತು ತಿಮ್ಮಪ್ಪ ಕಲಸಿ ಅವರ ಅಭಿಪ್ರಾಯವಾಗಿದೆ.

"ಹವ್ಯಕರು ಪ್ರಾಚೀನ ಕಾಲದಿಂದಲೇ ನೆಲೆನಿಂತ ಕರ್ನಾಟಕದ ಭೂಪ್ರದೇಶಕ್ಕೆ ಪರಶುರಾಮ ಕ್ಷೇತ್ರ, ಗೋರಾಷ್ಟ್ರದೇಶ, ಗೋಕರ್ಣಮಂಡಲ-ಎಂಬ ಹೆಸರುಗಳಿದ್ದವು. ಆದುದರಿಂದಲೇ ಇವರು ತಮ್ಮ ವೈದಿಕ ಕ್ರಿಯೆಗಳ ಸಂಕಲ್ಪದಲ್ಲಿ 'ಗೋರಾಷ್ಟ್ರದೇಶೇ ಗೋಕರ್ಣಮಂಡಲೇ ಪರಶುರಾಮಕ್ಷೇತ್ರೇ' ಎಂದು ಹೇಳಿಕೊಳ್ಳುತ್ತಾರೆ". (ಕೋಟೆ ವಸಂತಕುಮಾರ್ (ಸಂ.); ಹವ್ಯಕ ಭಾರತಿ; ೧೯೮೮; ಪುಟ ೧) ಎಂಬುದಾಗಿ ವಿದ್ವಾಂಸರಾದ ಟಿ. ಕೇಶವ ಭಟ್ಟರು ಅಭಿಪ್ರಾಯಪಟ್ಟಿದ್ದಾರೆ. ಗೋಕರ್ಣದಿಂದ ತೊಡಗಿ

ಸುಮಾರು ಚಂದ್ರಗಿರಿಯವರೆಗಿನ ಪ್ರದೇಶವನ್ನು ಪರಶುರಾಮ ಕ್ಷೇತ್ರವೆಂದು ಕರೆಯುವುದು ವಾಡಿಕೆ.

"ಅಹಿಕ್ಷೇತ್ರ ಅಥವಾ ಅಹಿಚ್ಛತ್ರ ಎಂಬ ಸಂಯುಕ್ತ ಶಬ್ದದಲ್ಲಿ ಮೂಲ ಶಬ್ದ 'ಅಹಿ'. ಅದರ ಮುಂದಿನದು ರೂಢಾರ್ಥಕವಾದುದು. 'ಅಹಿ' ಎಂಬುದಕ್ಕೆ ಕ ಪ್ರತ್ಯಯ ಸೇರಿದಾಗ 'ಅಹಿಕ' ಎಂದಾಗುವುದು. ಮುಂದೆ ಇದು ಭಾಷಾಶಾಸ್ತ್ರದ ನಿಯಮದಂತೆ ಅಕ್ಷರ ಸ್ಥಾನಪಲ್ಲಟಗೊಂಡು ಅಹಿಕ–ಹಇಕ–ಹಯಿಕ (ಹೈಕ), ಹವಿಕ ಆದುದಾಗಿ ಕಂಡುಬರುತ್ತದೆ. ಅಹುದು–ಹೌದು, ಅರಲು–ಅಲರು, ಅಸಗ–ಅಗಸ– ಇವು ಸ್ಥಾನಪಲ್ಲಟಕ್ಕೆ ಉದಾಹರಣೆಗಳು. 'ಹೈಕ' ಎಂಬಲ್ಲಿ ಮೂಲವಾಗಿ 'ಹೈ' ಎಂಬುದಿದ್ದುಕೊಂಡು ಹೈವ, ಹೈಗ (ಹೈಹಯ) ಮುಂತಾದ ರೂಪಗಳಾದುದನ್ನು ಕಾಣುತ್ತೇವೆ. ಈ 'ಹವಿಕ' ಎಂಬುದು ಮತ್ತೆ ಸಂಸ್ಕೃತೀಕರಣಗೊಂಡು 'ಹವ್ಯಕ' ಎಂಬ ರೂಪ ತಾಳಿದುದು ಕಂಡುಬರುತ್ತದೆ". (ಪ್ರೊ. ಟಿ. ಕೇಶವ ಭಟ್ಟ; ಹವ್ಯಕರ ಶೋಭಾನೆಗಳು; ೧೯೮೬; ಪುಟ ೪೮೧, ೪೮೨) ಎಂಬುದು ಟಿ. ಕೇಶವ ಭಟ್ಟರ ಅಭಿಪ್ರಾಯ.

"ಗಚ್ಛತಾತ ಮಹಾಪ್ರಾಜ್ಞ ಮೇರೋರ್ದಕ್ಷಿಣತಃ ಶುಭ ।
ಅಹಿಕ್ಷೇತ್ರ ಇತಿಖ್ಯಾತಂ ವಿಪ್ರಣಾಮಾದಿ ಮಂಡಲಂ ॥
ಸತ್ವರಂ ಗಚ್ಛಭೂಪಾಲ ಜಾಡ್ಯಂ ಮಾಕುರು ಮಾಕುರು ।
ತತ್ರ ಷಟ್ಕರ್ಮ ನಿರತಾಃ ಸರ್ವಶಾಸ್ತ್ರ ವಿಶಾರದಾಃ ॥

ಮಹಾರಾಜ ಮೇರುಪರ್ವತದ ದಕ್ಷಿಣದಲ್ಲಿರುವ ಅಹಿಕ್ಷೇತ್ರಕ್ಕೆ ಹೋಗು, ಅದು ಬ್ರಾಹ್ಮಣರ ನೆಲೆವೀಡು, ಅಲ್ಲಿರುವ ಬ್ರಾಹ್ಮಣರು ವೇದ ವೇದಾಂಗ ಪಾರಂಗತರು, ಅವರನ್ನು ಕರೆತಂದು ಯಜ್ಞ ಯಾಗಾದಿಗಳನ್ನು ಮಾಡು"(ಉತ್ತರ ಸಹ್ಯಾದ್ರಿಖಂಡ; ೧೮೩೪; ಅಧ್ಯಾಯ ೪, ಶ್ಲೋಕ ೧೯–೨೦; ಪುಟ ೧೪) ಎಂದು ಕಾಶ್ಯಪ ಮುನಿಗಳು ಮಯೂರವರ್ಮನಿಗೆ ಬ್ರಾಹ್ಮಣರನ್ನು ಕರೆತರಲು ಆದೇಶ ನೀಡುತ್ತಾರೆ. ಆದುದರಿಂದ 'ವಿಪ್ರಾಣಾಮಾದಿ ಮಹಾ ಮಂಡಲಂ' ಎಂದಿರುವುದರಿಂದ ಅಹಿಚ್ಛತ್ರವು ಪ್ರಾಚೀನ ಕಾಲದಿಂದಲೂ ಬ್ರಾಹ್ಮಣರ ನೆಲೆವೀಡಾಗಿತ್ತೆಂದು ಇದರಿಂದ ತಿಳಿದುಬರುತ್ತದೆ.

“ಷಟ್ಕರ್ಮ ನಿರತಾನ್ ದಾಂತಾನ್ ನಾನಾಗೋತ್ರ ಸಮುದ್ಭವಾನ್ ।
ಸುಪುತ್ರಾನ್ ಸಹಭಾರ್ಯಾಂಶ್ಚ ಶಿಷ್ಯವರ್ಗ ಸಮನ್ವಿತಾನ್।
ಋಗ್ವಜು: ಸಾಮ ಸಂಪಾನ್ನಾನ್ಮಂತ್ರ ಶಾಸ್ತ್ರ ಸಮನ್ವಿತಾನ್।
ದ್ಚತ್ವಾ ವಿಪ್ರಾನ್ ನೃಪಯಾಸೌ ಬಹುಮಾನಪುರಸ್ಸರಂ ।

ಗಚ್ಛತಾತ ನಿಜಂ ರಾಜ್ಯಂ ವಿಪ್ರನಾದಾಯ ಸತ್ವರಂ ।

ಷಟ್ಕರ್ಮ ನಿರತರಾಗಿಯೂ ಶಾಂತರಾಗಿಯೂ ನಾನಾ ಗೋತ್ರೋದ್ಭವರಾಗಿಯೂ ಋಗ್, ಯಜು:, ಸಾಮವೇದ ಸಂಪನ್ನರಾಗಿಯೂ ಮಂತ್ರಶಾಸ್ತ್ರ ಪ್ರವೀಣರಾಗಿಯೂ ಪುತ್ರರಿಂದಲೂ ಪತ್ನಿಯರಿಂದಲೂ ಶಿಷ್ಯರಿಂದಲೂ ಸಹಿತವಾಗಿರುವ ಶಿಷ್ಯವರ್ಗವನ್ನು ಬಹುಮಾನದಿಂದ ಮಯೂರವರ್ಮನಿಗೆ ಕೊಟ್ಟು, ಎಲೈ ರಾಜನೆ ಈ ಬ್ರಾಹ್ಮಣರನ್ನು ಕರೆದುಕೊಂಡು ಜಾಗ್ರತೆಯಾಗಿ ನಿನ್ನ ರಾಜ್ಯಕ್ಕೆ ಹೋಗು”. (ಉತ್ತರ ಸಹ್ಯಾದ್ರಿಖಂಡ; ೧೮೩೪; ಅಧ್ಯಾಯ ೪, ಶ್ಲೋಕ ೩೫, ೩೬, ೩೭; ಪುಟ ೧೫, ೧೬). ಈ ರೀತಿಯಾಗಿ ಸುಮೇಧನು ತನ್ನ ಶಿಷ್ಯರನ್ನು ಸಕುಟುಂಬ ಸಮೇತವಾಗಿ ಮಯೂರವರ್ಮನೊಡನೆ ಕಳುಹಿಸಿಕೊಟ್ಟನು. ನಾನಾ ಗೋತ್ರಗಳಿಂದ ಕೂಡಿದ, ಮೂವತ್ತೆರಡು ಬ್ರಾಹ್ಮಣ ಕುಟುಂಬಗಳನ್ನು ಕರೆದುಕೊಂಡು ಮಯೂರವರ್ಮನು ತನ್ನ ರಾಜ್ಯಕ್ಕೆ ಹಿಂದುರುಗಿ, ಅವರನ್ನು ತನ್ನ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ನೆಲೆಗೊಳಿಸಿದನು.

ಹವ್ಯಕರನ್ನು ನೆಲೆಗೊಳಿಸಿದ ೩೨ ಗ್ರಾಮಗಳ ವಿವರ ಉತ್ತರ ಸಹ್ಯಾದ್ರಿ ಖಂಡದಲ್ಲಿ ಈ ಕೆಳಗಿನಂತಿವೆ :

“ಕದಂಬವನದಲ್ಲಿ ಮೂರು, ಗೋಕರ್ಣದಲ್ಲಿ ನಾಲ್ಕು, ಶುಕ್ರಿಮತೀ ನದಿಯ ದಡದಲ್ಲಿ ಎರಡು, ಅಜಪುರಿಯಲ್ಲಿ ನಾಲ್ಕು ಗ್ರಾಮಗಳನ್ನೂ, ಅನಂತೇಶ (ಅನಂತಶಯನ) ಸಮೀಪದಲ್ಲಿ ಹತ್ತು ಗ್ರಾಮಗಳನ್ನೂ ವಿಧೀ ಪೂರ್ವಕವಾಗಿ ಸ್ಥಾಪಿಸಿದನು. ಅನಂತರದಲ್ಲಿ ಉಳಿದ ಬ್ರಾಹ್ಮಣರನ್ನು ಕರೆತಂದು ನೇತ್ರಾವತಿ ನದಿಯ ಎತ್ತರದಲ್ಲಿ ಒಂದು ಗ್ರಾಮಸಮೂಹವನ್ನು ಮಾಡಿ ಅಲ್ಲಿ ಸ್ಥಾಪಿಸಿದನು” (ಉತ್ತರ ಸಹ್ಯಾದಿಖಂಡ;೧೮೩೪; ಅಧ್ಯಾಯ ೫, ಪುಟ ೧೭).

ಕದಂಬ ಮಯೂರವರ್ಮನು ಬ್ರಾಹ್ಮಣರಿಗೆ ವಾಸಮಾಡಲು ಕೊಟ್ಟ ೧೮ ಗ್ರಾಮಗಳ ವಿವರ ಈ ಕೆಳಗಿನಂತಿವೆ :

೧) ಕಾಣಂದೂರು, ೨) ಕೇರಳೂರು, ೩) ನೇಳುಮತ್ತಿ, ೪) ತೆಳುವಳ್ಳಿ (ತಿಳುವಳ್ಳಿ), ೫) ಕೂಪಳೂರು,೬) ಸನ್ವಿ, ೭) ಸಾಲೂರು, ೮) ಬಂದರೂ ೯) ಕಾನಿಹಾಲ, ೧೦) ವರಿತ್ತೂರು ೧೧) ಜಂಬು, ೧೨) ಖಂಡಿಕಾ, ೧೩) ಸಹಸೀ, ೧೪) ಕುಂದಗೋಳ, ೧೫) ಭಲಾಸ, ೧೬) ಗೌಜ, ೧೭) ಕಣೂರು, ೧೮) ತ್ರೈಗರ್ತಾ (ತಾಗರ್ತಿ)" (ಉತ್ತರ ಸಹ್ಯಾದ್ರಿಖಂಡ; ಅಧ್ಯಾಯ ೩೩, ಪುಟ ೬೫)

"ಸಹ್ಯಾದ್ರೇ : ಪಶ್ವಿಮೇ ಭಾಗೇ ಪೂರ್ವೇ ಲವಣ ವಾರಿಧೇಃ ।
ದಕ್ಷಿಣೇ ಬಲಸೇತೋಸ್ತು ಗಂಗಾವಳ್ಯಾಸ್ತಥೋತ್ತರೇ ॥

ಸಹ್ಯ ಪರ್ವತದ ಪಶ್ಚಿಮ ಭಾಗದಲ್ಲಿ ಪಶ್ಚಿಮ ಸಮುದ್ರದ ಪೂರ್ವ ದಿಕ್ಕಿನಲ್ಲಿಯೂ ಗೋಕರ್ಣದ ಸಮೀಪ ಗಂಗಾವಳಿ ನದಿಯ ಉತ್ತರ ದಿಕ್ಕಿನಲ್ಲಿಯೂ ಈ ರೀತಿ ನಾಲ್ಕು ದಿಕ್ಕುಗಳ ಒಳಗೆ ಹದಿನಾರು ಗ್ರಾಮಗಳನ್ನು ಕಲ್ಪಿಸಿ ಅಲ್ಲಲ್ಲಿ ಸಕುಟುಂಬ ಸಹಿತವಾಗಿ ಬ್ರಾಹ್ಮಣರುಗಳನ್ನು ಸ್ಥಾಪನೆ ಮಾಡಿದನು." (ಉತ್ತರ ಸಹ್ಯಾದ್ರಿಖಂಡ; ೧೮೩೪; ಅಧ್ಯಾಯ ೩೨; ಪುಟ ೯೯). ಸುಮಾರಾಗಿ ಆ ಕಾಲದಲ್ಲಿ ಚಂದ್ರಗುತ್ತಿಯಿಂದ ಚಂದ್ರಗಿರಿಯವರೆಗೆ ಅಂದರೆ ಕಾಸರಗೋಡಿನವರೆಗೆ ಹಾಗೂ ಗೋಕರ್ಣದಿಂದ ಬ್ರಹ್ಮಾವರದವರೆಗೆ ಹವ್ಯಕರು ನೆಲೆಸಿದ್ದರು.

"ಮಹಾಭಾರತ ಕಾಲದಲ್ಲಿ ದ್ರೋಣನು ತನ್ನ ಶಿಷ್ಯರ ನೆರವಿನಿಂದ ದ್ರುಪದನನ್ನು ಸೋಲಿಸಿ ಅವನ ಪಾಂಚಾಲ ದೇಶವನ್ನು ವಶಪಡಿಸಿದ್ದನು. ಪಾಂಚಾಲವು ಗಂಗಾನದಿಯ ಉತ್ತರ ಮತ್ತು ದಕ್ಷಿಣ ಎಂಬೆರಡು ಭಾಗಗಳಿಂದ ಕೂಡಿದ್ದಿತು. ಉತ್ತರ ಪಾಂಚಾಲವನ್ನು ದ್ರೋಣನು ತನಗಿಟ್ಟುಕೊಂಡು ದಕ್ಷಿಣ ಪಾಂಚಾಲವನ್ನು ದ್ರುಪದನಿಗೆ ಉದಾರತೆಯಿಂದ ಬಿಟ್ಟುಕೊಟ್ಟಿದ್ದನು. ಉತ್ತರ ಪಾಂಚಾಲವೆಂದರೆ ಈಗಿನ ರೋಹಿಲಖಂಡ. ಅಹಿಚ್ಛತ್ರ ಅದರ ರಾಜಧಾನಿ." (ಪ್ರೊ. ಟಿ. ಕೇಶವ ಭಟ್ಟ; ಹವ್ಯಕರ ಶೋಭಾನೆಗಳು; ೧೯೮೬; ಪುಟ ೪೮೦) ಎಂಬುದು ವಿದ್ವಾಂಸರಾದ ಕೇಶವ ಭಟ್ಟರ ಅಭಿಪ್ರಾಯ.

"ಉತ್ತರ ಕನ್ನಡ ಜಿಲ್ಲೆಯ ಕರಾವಳಿಯಿಂದ ಪೂರ್ವೋತ್ತರ ಭಾರತದಲ್ಲಿರುವ ಈ ಶಾಸನಗಳ ಕಾಲಕ್ಕೆ ಹಿಂದಿನಿಂದಲೆ ಇವು ಇದ್ದಿರುವ ಆಯಾ ಸೀಮೆಗಳಲ್ಲಿದ್ದ ಬ್ರಾಹ್ಮಣರು ತಾವು ಮೂಲತಃ ಆ ಸೀಮೆಯವರಲ್ಲ, ಅಹಿ–ಯುಕ್ತವಾದ ಯಾವುದೊ ಒಂದು ಪರದೇಶದಿಂದ ಅಲ್ಲಿಗೆ ಬಂದವರೆಂದು (ಅವರಲ್ಲಿ ಬಹುಶಃ ಪರಂಪರಗತವಾಗಿದ್ದ ಐತಿಹ್ಯ ಮೂಲಕವಾಗಿ) ಕೇಳಿ ಬಲ್ಲವರಾಗಿರಬೇಕು. ಆದರೆ ಅಹಿಯಿಂದ ಕೂಡಿರುವ ಆ ಮೂಲ ದೇಶದ ಹೆಸರು ಮಾತ್ರ ಇಂತಹುದೇ ಎಂದು ಅವರಿಗೆ ಗೊತ್ತಿಲ್ಲದೆ, ಅದನ್ನವರು ಅಹಿ–ಪೂರ್ವಕತ್ವೇನ ಸುಜ್ಞಾತವಾದ ಹಾಗೂ ಆಕಾರ ಸತ್ಯರೂಪವೆಂದು ಸುಲಭವಾಗಿ ಗೋಚರಿಸುವ ಅಹಿಚ್ಛತ್ರವೆಂದು ಭಾವಿಸಿರಬೇಕು. ಈ ಅಹಿಚ್ಛತ್ರವು (ಹೆಚ್ಚಾಗಿ ಈಚೀಚೆಯ ಐತಿಹ್ಯದಲ್ಲಿ) ಗೋದಾವರಿ ನದಿಯ ಕೂಲವತಿಯಾದ ದಕ್ಷಿಣ ಅಹಿಚ್ಛತ್ರವೆಂದು ಭಾವಿಸಲ್ಪಡುತ್ತದಾದರೂ, ಕರ್ಗುದರಿಯ ಶಾಸನದಲ್ಲಿ ಕುಂತಳ ದೇಶದಲ್ಲಿ ಬ್ರಾಹ್ಮಣರನ್ನು ತಂದಿರಿಸಿದ ಮಯೂರವರ್ಮನು ಹಿಮಾಚಲದತ್ತಣಿಂದ ಬಂದನೆಂದೂ, ಶಿಕಾರಿಪುರ ೧೮೬ನೆಯ ಶಾಸನದಲ್ಲಿ ಮುಕ್ಕಣ್ಣ ಕದಂಬನು ಕುಂತಳದೇಶದಲ್ಲಿ ಬ್ರಾಹ್ಮಣರನ್ನು ತಂದಿರಿಸುವಂದು ದಕ್ಷಿಣಾಪಥದಲ್ಲಿ ಬ್ರಾಹ್ಮಣರು ಇದ್ದಿಲ್ಲವೆಂದೂ, ಅವೆರಡರಲ್ಲೂ ಆ ಬ್ರಾಹ್ಮಣರು ಅಹಿಚ್ಛತ್ರದಿಂದ ತರಲ್ಪಟ್ಟರೆಂದೂ ಹೇಳಿರುವಲ್ಲಿ, ಈ ಶಾಸನಗಳ ಹೇಳಿಕೆ ವಿತರ್ಕ ಮಾತ್ರವಾಗಿ ನೇರೆಂದು ಒಪ್ಪಿಕೊಂಡರೂ, ಅವುಗಳಲ್ಲಿ ಅಭಿಪ್ರೇತವಾದ ಅಹಿಚ್ಛತ್ರವಾದರೊ ಉತ್ತರಪಥದಲ್ಲಿಯ ಈಗಣ ರೋಹಿಲಖಂಡ ಎಂಬ ಪಾಂಚಾಲದೇಶದ ಅಹಿಚ್ಛತ್ರವೇ ಹೊರತು ಗೋದಾವರಿಯ ತೀರದಲ್ಲಿಯದೆಂಬ ದಕ್ಷಿಣ ಅಹಿಚ್ಛತ್ರವಲ್ಲ" (ಹೆರಂಜೆ ಕೃಷ್ಣ ಭಟ್ಟ; (ಸಂ.); ಗೋವಿಂದ ಪೈ ಸಂಶೋಧನ ಸಂಪುಟ; ೧೯೯೫; ಪುಟ ೧೦೨೩). ಹವ್ಯಕರ ಮೂಲವೆಂದು ಹೇಳುವ ಈ ಅಹಿಕ್ಷೇತ್ರ ಗೋದಾವರಿ ತೀರದ ಅಹಿಚ್ಛತ್ರವಲ್ಲವೆಂದು ಮಂಜೇಶ್ವರ ಗೋವಿಂದ ಪೈಗಳು ಅಭಿಪ್ರಾಯಪಟ್ಟಿದ್ದಾರೆ.

ಹೀಗೆ 'ಅಹಿಚ್ಛತ್ರ' ಕ್ಷೇತ್ರದ ಕುರಿತು ವಿದ್ವಾಂಸರು ಭಿನ್ನ ಭಿನ್ನ ಅಭಿಪ್ರಾಯಗಳನ್ನು ಹೊಂದಿದ್ದಾರೆ. ವಿದ್ವಾಂಸರ ಅಭಿಪ್ರಾಯಗಳನ್ನು ಗಮನಿಸಿದಾಗ ಮಯೂರವರ್ಮನು ಬ್ರಾಹ್ಮಣರನ್ನು ಉತ್ತರದ ಅಹಿಚ್ಛತ್ರದಿಂದ ಕರೆತಂದನೆಂಬುದು ಸ್ಪಷ್ಟವಾಗುತ್ತದೆ. ಅಹಿಚ್ಛತ್ರ ಅಥವಾ ಅಹಿಕ್ಷೇತ್ರ ಎಂಬುದೇ ಹವ್ಯಕರ ಮೂಲಸ್ಥಾನ ಎಂಬುದು ಹೆಚ್ಚಿನ ವಿದ್ವಾಂಸರ

ಅಭಿಪ್ರಾಯ. ಹಾಗೆ ಬಂದ ಬ್ರಾಹ್ಮಣರು ಅವರವರು ನೆಲೆನಿಂತ ಪ್ರದೇಶದ ಹಿನ್ನೆಲೆಯಲ್ಲಿ ತಮಗೆ ಹೆಸರುಗಳನ್ನು ಪಡೆದುಕೊಂಡರು.

## ೨.೨ ಹವ್ಯಕ ಆಡುನುಡಿ – ಹವಿಗನ್ನಡ

ಇದು ಕನ್ನಡದ ಉಪಭಾಷೆಯಾಗಿದ್ದು, ದ್ರಾವಿಡ ಭಾಷಾ ವರ್ಗಕ್ಕೆ ಸೇರಿದೆ. ಹವ್ಯಕರ ತಾಯ್ನುಡಿ 'ಹವಿಗನ್ನಡ'. ಇದನ್ನು ಹವ್ಯಕಕನ್ನಡ, ಹೈಕನ್ನಡ, ಹೈವಕನ್ನಡ, ಹೈಗಭಾಷೆ ಎಂದು ಕರೆಯುತ್ತಾರೆ. ಹವ್ಯಕರ ಆಡುನುಡಿಗೆ ಹವಿಗನ್ನಡ ಎಂಬ ಹೆಸರನ್ನಿಟ್ಟವರು ವೆಂಕಟೇಶ ದೊಡ್ಮನೆ–ತಲಕಾಲಕೊಪ್ಪ ಇವರು. ೧೯೬೨ನೇ ಇಸವಿ ಜನವರಿ 'ಹವ್ಯಕ' ಪತ್ರಿಕೆಯಲ್ಲಿ ಇವರ 'ಹವಿಗನ್ನಡ' ಎಂಬ ಕವನ ಪ್ರಕಟಗೊಂಡಿತು. ಅನಂತರ ಹವ್ಯಕ ಕನ್ನಡವನ್ನು 'ಹವಿಗನ್ನಡ' ಎಂಬುದಾಗಿ ವಿದ್ವಾಂಸರು ಬಳಸುತ್ತಿದ್ದಾರೆ.

ಹವಿಗನ್ನಡದಲ್ಲಿ ೬ ಮುಖ್ಯ ಪ್ರಾದೇಶಿಕ ಭೇದ ಗುರುತಿಸಲು ಸಾಧ್ಯವಿದೆ ಎಂಬುದು ವಿದ್ವಾಂಸರ ಅಭಿಪ್ರಾಯ :

೧. ಉತ್ತರಕನ್ನಡ ಜಿಲ್ಲೆಯ ಕರಾವಳಿ ಪ್ರದೇಶ – ಕುಮಟಾ, ಹೊನ್ನಾವರ ತಾಲೂಕುಗಳ ಹವಿಗನ್ನಡ.
೨. ಉತ್ತರಕನ್ನಡ ಜಿಲ್ಲೆಯ ಘಟ್ಟದ ಮೇಲಿನ ಪ್ರದೇಶ – ಸಿರ್ಸಿ, ಸಿದ್ಧಾಪುರ, ಯಲ್ಲಾಪುರ ತಾಲೂಕುಗಳ ಹವಿಗನ್ನಡ.
೩. ಮಲೆನಾಡಿನ ಸಾಗರ ಸೀಮೆಯ – ಸಾಗರ, ಸೊರಬ, ಹೊಸನಗರ, ತೀರ್ಥಹಳ್ಳಿ ತಾಲೂಕುಗಳ ಹವಿಗನ್ನಡ.
೪. ದಕ್ಷಿಣ ಕನ್ನಡ ಜಿಲ್ಲೆಯ ಪಂಜ ಸೀಮೆಯ ಹವಿಗನ್ನಡ.
೫. ದಕ್ಷಿಣ ಕನ್ನಡ ಜಿಲ್ಲೆಯ ಉಳಿದ ಪ್ರದೇಶದ (ಕಾಸರಗೋಡು ಸೇರಿದೆ) ಹವಿಗನ್ನಡ (ಕುಂಬಳೆ ಸೀಮೆಯ ಹವಿಗನ್ನಡ).

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅರೆ(ಗೌಡ)ಗನ್ನಡ, ಕೋಟಕನ್ನಡ, ಬೈರಕನ್ನಡ ಇತ್ಯಾದಿ ಭಾಷೆಗಳಿದ್ದರೂ ಇವುಗಳಲ್ಲೆಲ್ಲಾ ಹವ್ಯಕದಲ್ಲಾಗುತ್ತಿರುವಷ್ಟು ಸಾಹಿತ್ಯಕ ಚಟುವಟಿಕೆಗಳು ಕಂಡುಬಂದಿಲ್ಲ. ಹೀಗೆ 'ಹವಿಗನ್ನಡ' ಲಕ್ಷಾಂತರ ಮಂದಿ ದಿನನಿತ್ಯ ತಮ್ಮ ವಿಚಾರ ಅನಿಸಿಕೆಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವಂಥ ಒಂದು ಸಮಗ್ರ, ಪ್ರಬಲ

ಹಾಗೂ ಜನಪ್ರಿಯವಾದ ಭಾಷೆಯೆಂಬುದು ಸ್ಪಷ್ಟ. ತಂತ್ರಜ್ಞಾನ ಕ್ಷೇತ್ರದಲ್ಲಿ ಸಾಕಷ್ಟು ಮಂದಿ ಹವ್ಯಕರು ಕೆಲಸ ಮಾಡುತ್ತಿದ್ದು ಇವರಲ್ಲಿ ಕೆಲವರು ಹವ್ಯಕ ಭಾಷೆಯಲ್ಲಿ ಬ್ಲಾಗುಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಒಪ್ಪಣ್ಣ.ಕಾಮ್ ಅತ್ಯಂತ ಪ್ರಸಿದ್ಧವಾಗಿದೆ. ನೂರಾರು ಮಂದಿ ಹವ್ಯಕ್ರು 'ಹವಿಗನ್ನಡ'ದಲ್ಲಿ ಬರೆದ ಬರಹಗಳು ಒಪ್ಪಣ್ಣ. ಕಾಮ್‌ನಲ್ಲಿ ಪ್ರಕಟವಾಗುತ್ತಿರುವುದು ಗಮನೀಯ ಅಂಶ. ಒಂದು ಸಮುದಾಯದ ಭಾಷೆಯನ್ನು ಉಳಿಸುವ ದೃಷ್ಟಿಯಿಂದ ಶ್ಲಾಘನೀಯ ಪ್ರಯತ್ನವಿದು.

# ಅಧ್ಯಾಯ – ೩

## ಹವ್ಯಕ ಬರಹಗಾರರ ಸೃಜನಶೀಲ ಸಾಹಿತ್ಯದಲ್ಲಿ ವೈವಿಧ್ಯ

ಹವ್ಯಕರು ತಮ್ಮ ವೈದಿಕ ವೃತ್ತಿಯೊಂದಿಗೆ ಕೃಷಿ ಜೀವನವನ್ನೂ ನಡೆಸಿಕೊಂಡು ಬಂದವರು. ಆಧುನಿಕ ಶಿಕ್ಷಣ ಪದ್ಧತಿಯ ಮತ್ತು ಸಾಮಾಜಿಕ ಕ್ಷೇತ್ರದಲ್ಲಿ ಆದ ಪ್ರಭಾವದಿಂದಾಗಿ ಹವ್ಯಕರು ಸಾಹಿತ್ಯ, ಕಲೆ, ಸಂಗೀತ, ನೃತ್ಯ, ನಾಟಕ, ಯಕ್ಷಗಾನ ಇತ್ಯಾದಿ ಕ್ಷೇತ್ರಗಳಲ್ಲಿ ಸಲ್ಲಿಸಿದ ಕೊಡುಗೆ ಗಣನೀಯವಾದುದು. ಹವ್ಯಕರು ಸಾಹಿತ್ಯ ಕ್ಷೇತ್ರದಲ್ಲಿ ಕೃಷಿಮಾಡಲು ಪ್ರಾರಂಭಿಸಿದ ಕಾಲಮಾನ ಖಚಿತವಾಗಿಲ್ಲ. ಒಂಬತ್ತನೆಯ ಶತಮಾನದ ಕಾಲಘಟ್ಟದಲ್ಲಿ ಸಂಸ್ಕೃತ ಭಾಷೆ ಪಂಡಿತವರ್ಗದ ಸ್ವೀಕೃತ ಸಂವಹನ ಮಾಧ್ಯಮವಾಗಿತ್ತು. ಆದುದರಿಂದ ಅದರಲ್ಲಿಯೇ ಹವ್ಯಕರು ಸಾಹಿತ್ಯ ನಿರ್ಮಾಣವನ್ನು ಆರಂಭಿಸಿ ಕ್ರಮೇಣ ಪ್ರಾದೇಶಿಕ ಭಾಷೆಯಾದ ಕನ್ನಡದಲ್ಲಿ ಸಾಹಿತ್ಯ ರಚನೆಯಾದುದು ಸಹಜವಾಗಿದೆ. ವಿಸ್ಮೃತಿಗೆ ಸಂದ(ಭೂತಕಾಲದಲ್ಲಿ ಹುದುಗಿಹೋದ) ಹವ್ಯಕರ ಅಸ್ಮಿತೆಯನ್ನು ಗುರುತಿಸುವ ಪ್ರಯತ್ನ ಇಲ್ಲಿನದು. ಕಾಲಗರ್ಭದಲ್ಲಿ ಕರಗಿ ಹೋಗುತ್ತಿರುವ ಈ ಸಮುದಾಯದ ಸಾಹಿತ್ಯ ಕೃಷಿ, ಅಕ್ಷರ ಲೋಕದ ಪಯಣವನ್ನು ಇಲ್ಲಿ ದಾಖಲಿಸಲು ಯತ್ನಿಸಿದೆ.

"ಕ್ರಿ. ಶ. ೮೦೦ಕ್ಕಿಂತಲೂ ಮೊದಲು ಹವ್ಯಕರು ಸಾಹಿತ್ಯ ರಚಿಸಿರಬಹುದುದಾದರೂ ಅದರ ಸುಳಿವು ಇನ್ನೂ ಸಿಕ್ಕಿಲ್ಲ. ಕ್ರಿ. ಶ. ೮೦೦ ರಿಂದ ೧೫೦೦ತನಕ ಸಂಸ್ಕೃತದಲ್ಲಿ ರಚನೆಯಾದ ಕೆಲವು ಕೃತಿಗಳನ್ನು ಗುರುತಿಸಲಾಗಿದೆ. ಕ್ರಿ. ಶ. ೧೫೦೦ರಿಂದ ೧೯೦೦ರ ಅವಧಿಯಲ್ಲಿ ಸಂಸ್ಕೃತ ಮತ್ತು ಕನ್ನಡ ಎರಡೂ ಭಾಷೆಗಳಲ್ಲಿ ಗ್ರಂಥರಚನೆಯಾಗಿದ್ದುದು ಕಂಡುಬಂದಿದೆ. ಕ್ರಿ. ಶ. ೧೯೦೦ರ ನಂತರದಲ್ಲಿ ಸಾಹಿತ್ಯ ರಚನೆ ವ್ಯಾಪಕವೂ, ವೈವಿಧ್ಯಪೂರ್ಣವೂ, ಆಗುತ್ತಾ ನಡೆದಿರುವುದು ತುಂಬಾ ಆಶಾದಾಯಕ ಬೆಳವಣಿಗೆಯಾಗಿದೆ." (ನಾರಾಯಣ ಶಾನಭಾಗ; ಕೀರ್ತಿಶೇಷ ಹವ್ಯಕ ಗ್ರಂಥಕಾರ – ಕೃತಿಸೂಚಿ (ಸಂಶೋಧನ ಕೃತಿ); ೨೦೦೫; ಪುಟ ೧,೨) ಎಂಬುದಾಗಿ ಹವ್ಯಕರ ಸಾಹಿತ್ಯ ರಚನೆಯ ಪ್ರಾಚೀನತೆಯ ಕುರಿತು ನಾರಾಯಣ

ಶಾನಭಾಗ ಅಭಿಪ್ರಾಯಪಟ್ಟಿದ್ದಾರೆ. ನಾರಾಯಣ ಶಾನಭಾಗರು ಹವ್ಯಕರು ರಚಿಸಿದ ಸಾಹಿತ್ಯವನ್ನು ಮೂರು ಕಾಲಘಟ್ಟಗಳಲ್ಲಿ ಗುರುತಿಸಿದ್ದಾರೆ.

೧. ಪ್ರಾಚೀನಕಾಲ – ಪ್ರಾರಂಭದಿಂದ ಕ್ರಿ. ಶ. ೧೫೦೦ರ ತನಕ

೨. ಮಧ್ಯಂತರ ಕಾಲ – ಕ್ರಿ. ಶ. ೧೫೦೦ರಿಂದ ಕ್ರಿ. ಶ. ೧೯೦೦ರ ತನಕ

೩. ಆಧುನಿಕ ಕಾಲ – ಕ್ರಿ. ಶ. ೧೯೦೦ ರಿಂದ ಈಚಿನ ಕಾಲ.

## ೩.೧ ಪ್ರಾಚೀನ ಕಾಲದ ಸಾಹಿತ್ಯ

ಪ್ರಾರಂಭದಿಂದ ಕ್ರಿ. ಶ. ೧೫೦೦ರ ತನಕದ ಕಾಲವನ್ನು ಪ್ರಾಚೀನ ಕಾಲದ ಸಾಹಿತ್ಯವೆನ್ನಬಹುದು. ಈ ಕಾಲಘಟ್ಟದಲ್ಲಿ ೧೧ ಜನ ಗ್ರಂಥಕಾರರಿಂದ ೪೦ ಗ್ರಂಥಗಳು ರಚಿತವಾಗಿದ್ದು ಅವೆಲ್ಲವೂ ಸಂಸ್ಕೃತದಲ್ಲಿವೆ. ಕನ್ನಡದಲ್ಲಿ ಗ್ರಂಥರಚನೆಯಾಗಿದ್ದಿರ ಬಹುದಾದರೂ ಉಪಲಬ್ಧವಿಲ್ಲ. ಕ್ರಿ. ಶ. ೭೮೦ ರಿಂದ ೮೬೦ರೊಳಗಿದ್ದಿರಬಹುದೆಂದು ತರ್ಕಿಸಬಹುದಾದ ಹಸ್ತಮಲಕಾಚಾರ್ಯರು 'ಹಸ್ತಮಲಕ ಸ್ತೋತ್ರ' ರಚಿಸಿದರೆಂದು ಹೇಳಲಾಗುತ್ತಿದೆ. ಶ್ರೀ ಶಂಕರಾಚಾರ್ಯರ ಶಿಷ್ಯರಾದ ಚಿತ್ಸುಖಾಚಾರ್ಯರು 'ಬೃಹತ್ ಶಂಕರ ವಿಜಯ' ಎಂಬ ಗ್ರಂಥ ರಚಿಸಿದರು. ವಿದ್ಯಾತೀರ್ಥರು 'ಪುಣ್ಯಶ್ಲೋಕ ಮಂಜರಿ' ಎಂಬ ಕೃತಿಯನ್ನು ರಚಿಸಿದ್ದಾರೆ. ವಿದ್ಯಾರಣ್ಯರು 'ಪರಾಶರ ಮಾಧವೀಯ', 'ಕಾಲಮಾಧವೀಯ', 'ವೇದಾಂತ ಪಂಚದಶೀ' ಮುಂತಾದ ೧೪ ಕೃತಿಗಳನ್ನು ಬರೆದಿದ್ದಾರೆ. ಸಾಯಣಾಚಾರ್ಯ ಇವರು 'ಅಲಂಕಾರ ಸುಧಾನಿಧಿ', 'ಆಯುರ್ವೇದ ಸುಧಾನಿಧಿ', 'ಸುಭಾಷಿತ ಸುಧಾನಿಧಿ', 'ಮಾಧವೀಯ ಧಾತುವೃತ್ತಿ', 'ವೇದಾರ್ಥ ಪ್ರಕಾಶ' ಮೊದಲಾದ ಕೃತಿಗಳನ್ನು ಬರೆದಿದ್ದಾರೆ. ವಿದ್ಯಾರಣ್ಯರ ಕಿರಿಯ ಸಹೋದರರಾದ ಭೋಗನಾಥರು 'ಉದಾಹರಣ ಮಾಲಾ', 'ಗೌರೀನಾಥಾಷ್ಟಕ', 'ತ್ರಿಪುರ ವಿಜಯ', 'ಮಹಾಗಣಪತಿಸ್ತವ', 'ರಾಮೋಲ್ಲಾಸ' ಮತ್ತು 'ಶೃಂಗಾರ ಮಂಜರಿ' ಕೃತಿಗಳನ್ನು ಬರೆದಿದ್ದಾರೆ. ಮಾಧವ ಭಟ್ಟ 'ಏಕಾಕ್ಷರಮಾಲ', 'ಸ್ಮೃತಿರತ್ನ' ಮತ್ತು 'ಸರ್ವದರ್ಶನ ಸಂಗ್ರಹ' ಎಂಬ ಮೂರು ಕೃತಿಗಳನ್ನು ರಚಿಸಿದ್ದಾರೆ. ಚೆನ್ನಭಟ್ಟರು ತರ್ಕಶಾಸ್ತ್ರದ ವ್ಯಾಖ್ಯೆಯಾದ 'ತಾರ್ಕಿಕ ರಕ್ಷಾ ಪ್ರಕಾಶಿಕೆ' ಎಂಬ ಗ್ರಂಥ ರಚಿಸಿದ್ದಾರೆ. ವಿದ್ಯಾಮಾಧವ ಪಂಡಿತ 'ವಿದ್ಯಾ ಮಾಧವೀಯ' ಎಂಬ ಜ್ಯೋತಿಷ್ಯ ಗ್ರಂಥನ್ನು ಬರೆದಿದ್ದಾರೆ. ಕೇಶವ ಪಂಡಿತ 'ಮುಹೂರ್ತ ಶತಕ' ರಚಿಸಿದ್ದಾರೆ. ವಿಷ್ಣು ಶರ್ಮಾ ಪಂಡಿತ ತನ್ನ ತಂದೆಯಾದ

ವಿದ್ಯಾಮಾಧವ ಪಂಡಿತರ 'ಮುಹೂರ್ತ ಮಾಧವೀಯ' ಗ್ರಂಥಕ್ಕೆ ವ್ಯಾಖ್ಯಾನ ರಚಿಸಿದ್ದಾರೆ.

## ೩.೨ ಮಧ್ಯಕಾಲೀನ ಸಾಹಿತ್ಯ

ಕ್ರಿ.ಶ. ೧೫೦೦ ರಿಂದ ಕ್ರಿ.ಶ. ೧೯೦೦ ರತನಕದ ಘಟ್ಟವನ್ನು ಮಧ್ಯಕಾಲೀನ ಸಾಹಿತ್ಯಕಾಲವೆನ್ನಬಹುದು. ಈ ಕಾಲಘಟ್ಟದಲ್ಲಿ ೧೨ ಜನ ಗ್ರಂಥಕಾರರು ೬೭ ಗ್ರಂಥಗಳನ್ನು ರಚಿಸಿದ್ದಾಗಿ ಕಂಡುಬಂದಿದೆ ಸಂಸ್ಕೃತ ಮತ್ತು ಕನ್ನಡ ಎರಡೂ ಭಾಷೆಗಳಲ್ಲಿ ಕೃತಿ ರಚನೆ ಮಾಡಿರುವುದು ಆ ಕಾಲದ ವಿಶೇಷತೆಯಾಗಿದೆ. ಹೆಚ್ಚಿನವು ಕನ್ನಡದಲ್ಲಿ ಇವೆ. ವರದ ವಿಠಲ ವಾಲಗಳ್ಳಿಯವರು ೧೭೫೧ರಲ್ಲಿ 'ವರದ ವಿಠಲ ರಾಮಾಯಣ'ವನ್ನು ಭಾಮಿನಿ ಷಟ್ಪದಿಯಲ್ಲಿ ರಚಿಸಿದ್ದಾರೆ. ಕವಿ ಪರಮದೇವನು ವಾರ್ಧಕ ಷಟ್ಪದಿಯಲ್ಲಿ 'ತುರಂಗಭಾರತ'ವನ್ನು ೧೭೭೭ ರಲ್ಲಿ ಬರೆದಿದ್ದಾನೆ. ಇದರಲ್ಲಿ ೯೬ ಸಂಧಿಗಳೂ ೪೮೨೪ ಪದ್ಯಗಳೂ ಇವೆ. ಇವನು ಸಮಗ್ರ ಮಹಾಭಾರತದ ೧೮ ಪರ್ವಗಳನ್ನು ಕನ್ನಡಿಸಿದ ಏಕೈಕ ಮಹಾಕವಿ ಎಂಬ ಖ್ಯಾತಿಗೆ ಪಾತ್ರನಾಗಿದ್ದಾನೆ. " ಈ ಪದ್ಯಗಳ ಗತಿ ಕುದುರೆಯ ಓಟವನ್ನು ಹೋಲುವುದರಿಂದ ಇದಕ್ಕೆ ತುರಂಗ ಭಾರತ ಎಂಬ ಹೆಸರು ಬಂದಿದೆಯೆನ್ನುತ್ತಾರೆ"(ಜಯಪ್ರಕಾಶಮಾವಿನಕುಳಿ (ಸಂ.) ಚೂಡಾಮಣಿ, ೧೯೮೮, ಪುಟ ೫೭) ಎಂಬುದಾಗಿ ಪ್ರೊ. ಎಂ. ರಾಜಗೋಪಾಲಾಚಾರ್ಯ ಅಭಿಪ್ರಾಯ ಪಟ್ಟಿದ್ದಾರೆ.

ತುರಂಗಭಾರತದ ಸಂಪುಟಗಳು ಪುನರ್ ಮುದ್ರಣಗೊಂಡಿವೆ. ವೆಂಕಟೇಶ ಭಟ್ಟರು 'ವೆಂಕಟೇಶೀಯ ಪ್ರಯೋಗ' ಎಂಬ ಕೃತಿಯನ್ನೂ, ಸೀತಾರಾಮ ಸೂರಿ 'ಸಹಸ್ರಾಯುಧ ಕಥೆ' ಎಂಬ ಗ್ರಂಥವನ್ನೂ ರಚಿಸಿದ್ದಾರೆ.

ವಿಷ್ಣು ಸಭಾಹಿತ ಅಗ್ರಹಾರರು 'ಕರ್ಣಪರ್ವ', 'ಕೃಷ್ಣ ಸಂಧಾನ', 'ಚಂದ್ರಹಾಸ' ಮುಂತಾದ ೧೧ ಯಕ್ಷಗಾನದ ಕೃತಿಗಳನ್ನು ಬರೆದಿದ್ದಾರೆ. ಸಂಕಯ್ಯ ಭಾಗವತರು 'ಕೃಷ್ಣಾರ್ಜುನ ಕಾಳಗ', 'ಪಂಚವಟಿ ರಾಮಯಣ' ಮಾತ್ರವಲ್ಲದೆ 'ವಾಲಿಸುಗ್ರೀವೆರ ಕಾಳಗೊ' ಎಂಬ ತುಳು ಯಕ್ಷಗಾನ ಕೃತಿಯನ್ನು ರಚಿಸಿದ್ದಾರೆ. ಹಟ್ಟಿಯಂಗಡಿ ರಾಮಭಟ್ಟರು 'ಅತಿಕಾಯಕಾಳಗ', 'ದ್ರೌಪದಿ ಸ್ವಯಂವರ', 'ಧ್ರುವ ಚಂತ್ರೆ', 'ಲವ–

ಕುಶರಕಾಳಗ' ಮುಂತಾದ ಯಕ್ಷಗಾನ ಪ್ರಸಂಗಗಳನ್ನು ರಚಿಸಿದ್ದಾರೆ. 'ಅನುಸಾಲ್ವಗರ್ವಭಂಗ', 'ನೀಲಧ್ವಜನ ಕಾಳಗ' ಎಂಬ ಯಕ್ಷಗಾನ ಕೃತಿಗಳನ್ನು ಅಜ್ಜನಗದ್ದೆ ಶಂಕರನಾರಾಯಣ್ಯನವರು ರಚಿಸಿದ್ದಾರೆ. ೧೮೭೦ ರಲ್ಲಿ ಲಕ್ಷ್ಮಿ ಹಿರೀಗಂಗೆ ಎಂಬವರು 'ಬಾಗಿಲು ತಡೆಯುವ ಪದ'ವನ್ನು ರಚಿಸಿದ್ದಾರೆ. ಕಿಬ್ಬಚ್ಚಲು ಮಂಜಮ್ಮಳ 'ವೇದಾಂತ ತತ್ತ್ವಸಾರ ೧೮೮೬ರಲ್ಲಿ ಪ್ರಕಟವಾಗಿದೆ. ಸೂರಿ ವೆಂಕಟರಮಣ ಶಾಸ್ತ್ರಿಗಳು ಬರೆದ 'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ' ೧೮೮೭ರಲ್ಲಿ ಪ್ರಕಟವಾಯಿತು. ಈ ಕೃತಿಯನ್ನು ಕನ್ನಡ ಸಾಹಿತ್ಯದ ಪ್ರಥಮ ಸಾಮಾಜಿಕ ನಾಟಕವೆಂದೂ, ಹವಿಗನ್ನಡದ ಪ್ರಥಮ ಕೃತಿಯೆಂದೂ ಗುರುತಿಸಲಾಗಿದೆ. ಶಾಸ್ತ್ರಿಗಳು 'ಕನ್ನಡ ಬೃಹತ್ ಸ್ತೋತ್ರ ರತ್ನಾಕರ', 'ಕಲ್ಪೋಕ್ತ ದೇವತಾ ಪೂಜಾ', 'ದುರ್ಗಾ ಸಹಸ್ರನಾಮ' ಮುಂತಾದ ಧಾರ್ಮಿಕ ಗ್ರಂಥಗಳನ್ನು ಸಂಪಾದಿಸಿದ್ದಾರೆ.

### ೩.೩ ಆಧುನಿಕ ಕಾಲದ ಸಾಹಿತ್ಯ

ಕ್ರಿ.ಶ. ೧೯೦೦ ರಿಂದ ಈಚಿನ ಕಾಲವನ್ನು ಆಧುನಿಕ ಸಾಹಿತ್ಯದ ಕಾಲವೆಂದು ಗುರುತಿಸಿಕೊಳ್ಳಲಾಗಿದೆ. ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕದಿಂದ ಕಾವ್ಯ, ಕಾದಂಬರಿ, ನಾಟಕ ಕ್ಷೇತ್ರಗಳಲ್ಲಿ ಮಾತ್ರವಲ್ಲದೆ ವಿಮರ್ಶೆ, ಸಂಶೋಧನೆ, ಗ್ರಂಥಸಂಪಾದನೆ ಮುಂತಾದ ಕ್ಷೇತ್ರಗಳಲ್ಲಿ ಹವ್ಯಕ ಬರಹಗಾರರು ವೈವಿಧ್ಯಮಯ ಸಾಹಿತ್ಯ ಕೃತಿಗಳನ್ನು ಸೃಷ್ಟಿಸುತ್ತಾ ಬಂದಿದ್ದಾರೆ. ಮಾತ್ರವಲ್ಲದೆ ಮೌಲಿಕವಾದದ್ದನ್ನು ರಚಿಸಿ ಸಾಹಿತ್ಯದ ಕಣಜವನ್ನು ತುಂಬಿಸಿದ್ದಾರೆ.

### ೩.೩.೧ ಕಾವ್ಯ

ಕಾವ್ಯ ಕ್ಷೇತ್ರದಲ್ಲಿ ಹವ್ಯಕರು ಗಮನಾರ್ಹ ಮತ್ತು ವೈಶಿಷ್ಟ್ಯ ಪೂರ್ಣ ಸೇವೆಯನ್ನು ಸಲ್ಲಿಸಿದ್ದಾರೆ. ನವೋದಯ ಕಾಲದಿಂದ ತೊಡಗಿ ಇಂದಿನವರೆಗೆ ಹವ್ಯಕರು ಪ್ರೌಢವಾದ ಭಾಷೆ-ಶೈಲಿಯಲ್ಲಿ ಕಾವ್ಯಗಳನ್ನು ರಚಿಸಿದ್ದಾರೆ. ಹಳೆಗನ್ನಡ, ನಡುಗನ್ನಡ, ನವೋದಯ, ನವ್ಯ ಮೊದಲಾದ ಪ್ರಕಾರಗಳಲ್ಲಿ ಕಾವ್ಯವನ್ನು ಬರೆದಿದ್ದಾರೆ. ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಹವ್ಯಕರ ಬರವಣಿಗೆಯನ್ನು ಗಮನಿಸಿದರೆ ಕಾವ್ಯ ಕ್ಷೇತ್ರದಲ್ಲಿ ಅವರ

ಕೊಡುಗೆ ವಿಶಿಷ್ಟವಾದುದು. ಸಾಹಿತ್ಯ ಚರಿತ್ರೆಕಾರರು ಉಲ್ಲೇಖಿಸಿದ ಕವಿಗಳಲ್ಲಿ ಹವ್ಯಕರ ಸಂಖ್ಯೆ ಗಣನೀಯವಾದುದು.

ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ನಮ್ಮ ನಾಡಿನ ಹಿರಿಯ ವಿದ್ವಾಂಸರಾಗಿ, ಪ್ರಾಧ್ಯಾಪಕರಾಗಿ, ಕವಿಯಾಗಿ, ಸಂಶೋಧಕರಾಗಿ, ಉತ್ತಮ ವಿಮರ್ಶಕರಾಗಿ ಹೆಸರು ಪಡೆದವರು ಮುಳಿಯ ತಿಮ್ಮಪ್ಪಯ್ಯನವರು. 'ನವನೀತ ರಾಮಾಯಣ'ವು ಮುಳಿಯ ತಿಮ್ಮಪ್ಪಯ್ಯನವರು ಬರೆದ ಮಹಾಕಾವ್ಯದ ಒಂದು ಭಾಗ. ಪ್ರಥಮ ಖಾಂಡದ ಹನ್ನೆರಡು ಖಂಡಗಳಲ್ಲಿ ಶ್ರೀರಾಮನು ವನವಾಸಕ್ಕಾಗಿ ಚಿತ್ರಕೂಟವನ್ನು ಸೇರುವವರೆಗಿನ ರಾಮಾಯಣದ ಕಥೆಯಿದೆ. ವಾಲ್ಮೀಕಿ ರಾಮಾಯಣಾದಿಗಳಲ್ಲಿ ಕಂಡು ಬರುವ ವಿವರಗಳು ಇಲ್ಲಿಲ್ಲ. ಕೆಲವು ಹೊಸ ಕಲ್ಪನೆಗಳು ಸೇರಿ ನವನೀತವಾದ ಈ ಕಥೆ ಆಧುನಿಕ ಕಾದಂಬರಿಗಳಂತೆ ಕುತೂಹಲದಾಯಕವಾಗಿ ಸಾಗುವುದನ್ನು ಈ ಕಥಾಸಾರದಿಂದಲೇ ಗ್ರಹಿಸಬಹುದು. ತಿಮ್ಮಪ್ಪಯ್ಯನವರ ಇನ್ನೊಂದು ಕಾವ್ಯ 'ಸೊಬಗಿನ ಬಳ್ಳಿ'. ಇದು ಶುದ್ಧ ಹಳೆಗನ್ನಡ ಕಾವ್ಯ. ಕವಿ ಆಂಡಯ್ಯನ ಶೈಲಿಯಲ್ಲಿ ಅಚ್ಚಗನ್ನಡದ ಪದಗಳಿಂದಲೇ ಹೆಣೆದ ಕಾವ್ಯ. 'ಸೊಬಗಿನ ಬಳ್ಳಿ'ಯಲ್ಲಿ ರತಿ-ಮನ್ಮಥರ ಪುರ್ನಜನ್ಮದ ಕಥೆ ಬರುತ್ತದೆ. 'ಚಂದ್ರಾವಲಿ ವಿಲಾಸ'ವು ತಿಮ್ಮಪ್ಪಯ್ಯನವರು ಹಳೆಗನ್ನಡದಲ್ಲಿ ಬರೆದ ಒಂದು ಗದ್ಯ ಕಾವ್ಯ. ಚಂದ್ರಾವಲಿ ವಿಲಾಸ'ದ ಪ್ರಧಾನ ಕಥೆಯೊಂದಿಗೆ ಮೂರು ಉಪಕಥೆಗಳು ಸೇರಿಕೊಂಡಿವೆ. ಒಂದು ಮೋಹಿನೀ ವೃತ್ತಾಂತ ಅಥವಾ ಹೊಗೆಸೊಪ್ಪಿನ ಕಥೆ, ಎರಡನೆಯದು ವೇಣಿ ವೃತ್ತಾಂತ ಅಥವಾ ಕೊಳಲಿನ ಕತೆ ಮೂರನೆಯದು ಕಾಶೀಲಿಂಗಾಪಹಾರದ ಕಥೆ. ಈ ಕಥೆ ಐದು ಆಶ್ವಾಸಗಳಲ್ಲಿ ವಿಸ್ತರಿಸಿದೆ. 'ಬಡಹುಡುಗಿ' ತಿಮ್ಮಪ್ಪಯ್ಯನವರು ಬರೆದ ಖಂಡಕಾವ್ಯ ವಿಷಯ ದಾಂಪತ್ಯ, ಬಡತನ, ಜಾತೀಯತೆ ಮುಂತಾದ ವಸ್ತುಗಳನ್ನೊಳಗೊಂಡ ಕೃತಿ.

ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕಡೆಂಗೋಡ್ಲು ಬರೆದರೂ ಅವರ ಹೆಸರು ಕವಿಯೆಂದೇ ದಾಖಲಾಗಿದೆ. ಅದರಲ್ಲೂ ಕನ್ನಡದ ಅತ್ಯಂತ ಮಹತ್ತ್ವದ ಕಥನ ಕವಿತೆ ಕಟ್ಟಿದವರೆಂದು ಅವರು ಖ್ಯಾತರಾಗಿದ್ದಾರೆ. ೧೯೨೦ರ ದಶಕದಲ್ಲಿ ಸ್ವಾತಂತ್ರ್ಯ ಪರವಾದ ಅವರ ಪ್ರಾರಂಭಿಕ ನೀಳ್ಗವನಗಳು ಪ್ರಕಟವಾದವು. 'ಘೋಷಯಾತ್ರೆ', 'ವಸ್ತ್ರಾಪಹರಣ', 'ಗಾಂಧಿ ಸಂದೇಶ ಮತ್ತು ಮಹಾತ್ಮ ಗಾಂಧಿ ವಿಜಯ' ಇವೇ ಆ ಕೃತಿಗಳು. ಶಂಕರಭಟ್ಟರ

ಪ್ರಾರಂಭದ ರಚನೆಗಳಲ್ಲಿ ಸ್ವಾತಂತ್ರ್ಯ ಪ್ರೇಮ, ದೇಶಭಕ್ತಿ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಕಾಣಿಸಿಕೊಳ್ಳುತ್ತಿತ್ತು. ನವೋದಯ ಸಂಪ್ರದಾಯದಲ್ಲಿ ಕಡೆಂಗೋಡ್ಲು ಶಂಕರ ಭಟ್ಟರು ಬರೆದ ಕವನ ಸಂಕಲನಗಳು ಮೂರು: ಕಾಣಿಕೆ (೧೯೨೭), ಹಣ್ಣುಕಾಯಿ(೧೯೩೩), ಪತ್ರಪುಷ್ಪ(೧೯೬೫) 'ಕಾಣಿಕೆ'ಯಲ್ಲಿ ಒಟ್ಟು ಹದಿನೆಂಟು ಕವನಗಳಿವೆ. ಹೆಚ್ಚಿನವು ಭಾವಗೀತದ ಸ್ವರೂಪದವು. ಕೆಲವು ಕವನಗಳಲ್ಲಿ ದ್ವಿತೀಯಾಕ್ಷರ ಪ್ರಾಸವಿದ್ದರೂ ಅದನ್ನು ಮುರಿದ ಪ್ರಯತ್ನಗಳೂ ಗೋಚರಿಸುತ್ತವೆ. 'ಹಣ್ಣುಕಾಯಿ' ಸಂಕಲನದಲ್ಲಿ ನವೋದಯದ ಆರಂಭದ ಕವಿತೆಗಳಲ್ಲಿ ಸಾಮಾನ್ಯವಾಗಿ ಕಾಣಿಸುವ ಗಂಡು ಹೆಣ್ಣಿನ ಪ್ರೀತಿ, ನಾಡುನುಡಿಗಳ ಮೇಲಿನ ಅಭಿಮಾನ, ಮನುಷ್ಯ ಮತ್ತು ನಿಸರ್ಗದ ಸಂಬಂಧ ಇಲ್ಲಿನ ಬಹುತೇಕ ಕವನಗಳ ವಸ್ತು. 'ನಲ್ಮೆ' ಸಂಕಲನದ 'ಹೊನ್ನಿಯ ಮದುವೆ', 'ಮಾದ್ರಿಯಚಿತೆ', 'ಮುರಲೀನಾದ'ಗಳ ಅಭಿವ್ಯಕ್ತಿ ಕ್ರಮದಲ್ಲಿ ಅವರು ತೋರಿದ ಕೌಶಲ ಕನ್ನಡ ಕಾವ್ಯ ಪರಂಪರೆಗೆ ಅಪರೂಪವಾದುದು.

ಕನ್ನಡನಾಡಿನ ವಿದ್ವಾಂಸರ ಪಂಕ್ತಿಯಲ್ಲಿ ಸೇಡಿಯಾಪು ಕೃಷ್ಣ ಭಟ್ಟರು ಅಗ್ರಗಣ್ಯರಾಗಿದ್ದಾರೆ. ಕೃಷ್ಣಭಟ್ಟರು ಖಂಡಕಾವ್ಯಗಳಲ್ಲಿ ತಮ್ಮ ವೈಶಿಷ್ಟ್ಯವನ್ನು ಮೆರೆದಿದ್ದಾರೆ. 'ಕೆಲವು ಸಣ್ಣಕಾವ್ಯಗಳು' ಸಂಕಲನದ 'ನಾಯನಡತೆ', 'ತರುಣಧಮನಿ', 'ಕೃಷ್ಣಕುಮಾರಿ', 'ಪುಣ್ಯಲಹರಿ'ಗಳಲ್ಲಿ ಅವರ 'ನಾಯನಡತೆ' ಅಥವಾ 'ಶ್ವಮೇಧ' ಶ್ರೇಷ್ಠ ಖಂಡಕಾವ್ಯವಾಗಿದೆ. 'ಚಂದ್ರಖಂಡ ಮತ್ತು ಕೆಲವು ಸಣ್ಣ ಕಾವ್ಯ' ೧೯೬೯ರಲ್ಲಿ ಪ್ರಕಟವಾಯಿತು. ಇವರ ಕಾವ್ಯಗಳಲ್ಲಿ ಚಿಂತನಾಂಶ ಹೆಚ್ಚು. ಸೇಡಿಯಾಪು ಅವರದು ಪಾಂಡಿತ್ಯ ಪೂರ್ವ ಭಾಷೆ. 'ಶಬರಿ' ಪಿರಿಯಕ್ಕರದಲ್ಲಿ ಬರೆದ ಕಾವ್ಯ. ಇದು ಸೇಡಿಯಾಪು ಅವರಿಗೆ ವಿಶೇಷ ಅರ್ಹತೆಯನ್ನು ಒದಗಿಸಿದ ಕಾವ್ಯ. "ಮೈಸೂರಿಗೆ ಪು.ತಿ.ನ ಹೇಗೋ ಇಲ್ಲಿ ಸೇಡಿಯಾಪು ಹಾಗೆ. ಹೊಸಗನ್ನಡದಲ್ಲಿ ಪಿರಿಯಕ್ಕರದ ಚೆಲುವನ್ನು ಬಳಕೆಗೆ ತಂದಿದ್ದಾರೆ. ಅಲ್ಲದೆ ಪೂರ್ಣಕಾವ್ಯವನ್ನು ಈ ಛಂದಸ್ಸಿನಲ್ಲಿ ಬರೆದವರಲ್ಲಿ ಮೊತ್ತಮೊದಲಿಗರು ಸೇಡಿಯಾಪು"(ಪರಮೇಶ್ವರ ಭಟ್ಟ ಎಸ್.ವಿ.(ಸಂ); ದಿಬ್ಬಣ; ೧೯೭೧; ಪುಟ್ಟ ೩೭) ಎಂಬುದಾಗಿ ಗುಂಡ್ಮಿ ಚಂದ್ರಶೇಖರ ಐತಾಳರು ಅಭಿಪ್ರಾಯಪಟ್ಟಿದ್ದಾರೆ.

ಹಳೆಯ ತಲೆಮಾರಿಗೆ ಸೇರಿದ ಹಿರಿಯ ಕವಿ ಕಡವ ಶಂಭುಶರ್ಮರು ಕನ್ನಡ ಸಂಸ್ಕೃತಗಳೆರಡರಲ್ಲೂ ಪಾಂಡಿತ್ಯವನ್ನು ಮೈಗೂಡಿಸಿಕೊಂಡವರು. ಶರ್ಮರು ಮಹಾತ್ಮಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ ಅವರು ಪ್ರತಿಪಾದಿಸಿದ ಸಿದ್ಧಾಂತಗಳನ್ನು ವೈಯಕ್ತಿಕ ಬದುಕಿನಲ್ಲಿ ಅಳವಡಿಸಿಕೊಳ್ಳಲು ತೀವ್ರವಾಗಿ ಪ್ರಯತ್ನಿಸಿದ್ದಾರೆ. ಹೀಗಾಗಿ ಗಾಂಧೀಜಿಯವರ ಬದುಕಿನ ರೀತಿ, ನೀತಿಗಳನ್ನು ಕುರಿತು 'ಗಾಂಧೀಲಹರಿ', 'ಗಾಂಧೀಶತಕಂ', ' ಗಾಂಧೀನಿರ್ವಾಣಂ', 'ಗಾಂಧೀಸಂದೇಶ' ಮತ್ತು 'ಗಾಂಧೀವಿಜಯ' ಎಂಬ ಕಾವ್ಯಗಳನ್ನು ಬರೆದಿದ್ದಾರೆ. ಇದರಲ್ಲಿ 'ಗಾಂಧೀ ವಿಜಯ ಅಥವಾ ಸ್ವರಾಜ್ಯ ಭಾರತಂ' ಸ್ವತಂತ್ರ ಮಹಾಕಾವ್ಯವಾಗಿದ್ದು ವಾರ್ಧಕ ಷಟ್ಪದಿಯಲ್ಲಿದೆ. ೧೯೬೨ರಲ್ಲಿ ಪ್ರಕಟವಾಗಿದೆ. 'ಗಾಂಧೀಲಹರಿ' (೧೯೪೮) ಶಿಖರಣೀ ವೃತ್ತದಲ್ಲಿದ್ದು ೩೦ ಪದ್ಯಗಳಿವೆ. ಇಲ್ಲಿ ಕಥೆಯಿಲ್ಲ ಆದರೆ ಗಾಂಧೀಜಿಯವರ ವ್ಯಕ್ತಿತ್ವ, ಬದುಕಿನ ಆಶಯಗಳನ್ನು ಬಿಡಿಬಿಡಿಯಾಗಿ ದಾಖಲಿಸಿದ್ದಾರೆ. ಅಶ್ವಘೋಷನ ' ಸೌಂದರನಂದ' ಮತ್ತು 'ಬುದ್ಧ ಚರಿತೆ' ಈ ಎರಡೂ ಕೃತಿಗಳನ್ನು ಕಡವ ಶಂಭುಶರ್ಮರು ಕನ್ನಡಕ್ಕೆ ಅನುವಾದಿಸಿದ್ದಾರೆ. 'ಸೌಂದರನಂದ' ವನ್ನು ಮೂಲ ಕ್ರಮಕ್ಕೆ ಅನುಗುಣವಾಗಿ ಹಳಗನ್ನಡ ಮತ್ತು ನಡುಗನ್ನಡದಲ್ಲಿ ಪದ್ಯಾನುವಾದ ಮಾಡಿದ್ದಾರೆ. ಬೌದ್ಧಧರ್ಮ ವಿವೇಚನ ಪ್ರಧಾನವಾಗಿರುವ ಈ ಸುಂದರ ಕಾವ್ಯ ಅವರಿಗೆ ಮದರಾಸು ಸರಕಾರದ ಬಹುಮಾನವನ್ನು ತಂದಿದೆ. "ಶಂಭುಶರ್ಮರು ಮೂಲ ಪದ್ಯದ ಪ್ರತಿಶಬ್ದ, ವಿಭಕ್ತಿಗಳನ್ನು ಅನುವಾದಿಸಿದ್ದಾರೆ. ಬಳಸಿದ ಭಾಷೆಯೂ ಬಿಗುವಾಗಿದೆ. ಅನುವಾದದ ಸಂದರ್ಭದಲ್ಲಿ ಛಂದಸ್ಸಿನಲ್ಲಿಯೂ ಸಾಕಷ್ಟು ವೈವಿಧ್ಯತೆಯನ್ನು ತಂದಿದ್ದಾರೆ. ಒಟ್ಟಿನಲ್ಲಿ ಸೌಂದರನಂದ ಬೌದ್ಧಧರ್ಮದ ಉಪದೇಶದ ಸಾರವನ್ನು ಹೊಂದಿದೆ. ಬುದ್ಧಚರಿತದಲ್ಲಿ ಬಂದ ಸಂಕ್ಷಿಪ್ತ ವಿವರಣೆಗಳು ಇಲ್ಲಿ ವಿಸ್ತೃತವಾಗಿ ಬಂದಿದೆ. ಈ ದೃಷ್ಟಿಯಿಂದ ಸೌಂದರನಂದ ಕಾವ್ಯವು ಬುದ್ಧಚರಿತೆಯ ಪ್ರವೇಶಕ್ಕೆ ಪೂರಕ ಮಾಹಿತಿಯನ್ನು ನೀಡುವುದು" (ಡಾ। ಶ್ರೀಧರ ಎಚ್.ಜಿ. (ಸಂ.); ಕಡವ ಶಂಭು ಶರ್ಮ ಕೃತಿ ಸಂಚಯ ೧, ಪ್ರಸ್ತಾವನೆ; ೨೦೦೨; ಪುಟ ೪೩) ಎಂಬುದಾಗಿ ಡಾ। ಶ್ರೀಧರ ಎಚ್.ಜಿ.ಯವರು ಅಭಿಪ್ರಾಯಪಟ್ಟಿದ್ದಾರೆ. ಶರ್ಮರು ಕಾಳಿದಾಸನ ರಘುವಂಶವನ್ನು ಅನುವಾದಿಸಿದ್ದಾರೆ. ಕಡವಶಂಭುಶರ್ಮರ 'ಶ್ರೀಮದ್ಭಗವದ್ಗೀತಾ' ಒಂದು ವಿಶಿಷ್ಟ ಕೃತಿ. ಇದು ಭಗವದ್ಗೀತೆಯ ಅನನ್ಯವಾದ ಅನುವಾದ.

ಈಶ್ವರ ಕೇಶವ ಭಟ್ಟ (ಕೇಶವದಾಸ)ರು 'ಗಣೇಶಾಥರ್ವಶೀರ್ಷ', 'ವಿಷ್ಣು ಸೂಕ್ತರಸಾಯನ', 'ರುದ್ರನಮಕ' ಎಂಬ ಷಟ್ಪದಿ ಕಾವ್ಯಗಳನ್ನು ರಚಿಸಿದ್ದಾರೆ. 'ಅವಧೂತ ಚರಿತ್ರೆ' ಗಣಪತಿ ಅಪ್ಪಣ್ಣ ಹೆಗಡೆ ಭಾಮಿನಿ ಷಟ್ಪದಿಯಲ್ಲಿ ಬರೆದ ಕೃತಿ. ಮುಳಿಯ ಶಂಕರ ಭಟ್ಟರು ದೇಶಭಕ್ತಿಯನ್ನು ಪ್ರೇರೇಪಿಸುವ 'ತಿಲಕಪುರಾಣ' ವೆಂಬ ಷಟ್ಪದಿ ಕಾವ್ಯವನ್ನು ಬರೆದಿದ್ದಾರೆ. 'ಚಂಡಭೀಮ ಕಾವ್ಯ' ಮತ್ತು ' ರಾಮಾಶ್ವಮೇಧ ಸಂಗ್ರಹ' ಇವರ ಇತರ ಕೃತಿಗಳು. ತೆಕ್ಕುಂಜ ಗೋಪಾಲಕೃಷ್ಣ ಭಟ್ಟರು ಪಂಡಿತ ಕವಿಗಳಾಗಿ ಖ್ಯಾತರು. ಇವರ ಮೊದಲ ಕೃತಿ 'ವೀರವಿಲಸಿತ' ಪಿರಿಯಕ್ಕರದಲ್ಲಿದೆ. ಲಕ್ಷ್ಮಣನ ಪುತ್ರ ಚಂದ್ರಕೇತು ಲವಕುಶರನ್ನು ಗುರುತಿಸಿಕೊಂಡ ಉತ್ತರ ರಾಮಾಯಣದ ಕಥೆ ಇದರ ವಸ್ತು. 'ಮುದ್ದಣನ ರಾಮಾಶ್ವಮೇಧ (ಟಿಪ್ಪಣಿ ಸಾರ ಸಮೇತ)' ವನ್ನು ಪ್ರಕಟಿಸಿದ್ದಾರೆ. 'ಮಧುರಂಜನೀ' ಎಂಬುದು ೩೦೧ ಶೃಂಗಾರ ಮುಕ್ತಕಗಳಿಂದ ಕೂಡಿದೆ. ಈ ಕೃತಿ ಸಾಂಗತ್ಯದ ಧಾಟಿಯಲ್ಲಿ ರಚಿತವಾಗಿದೆ.

ಬಡೆಕ್ಕಿಲ ವೆಂಕಟರಮಣ ಭಟ್ಟರು ಬರೆದ 'ಗೀತಾಸಾರ' ಭಾಮಿನಿ ಷಟ್ಪದಿಯಲ್ಲಿ ಬಂದಿರುವ ಶ್ರೇಷ್ಠವಾದ ಕೃತಿ. 'ಹೊಟ್ಟೆಯೂ ಅವಯವಗಳೂ' ಎಂಬ ಚಂಪೂ ಕೃತಿಯನ್ನು ಬರೆದಿದ್ದಾರೆ. 'ಭಾರತ ರಾಜ್ಯಭಾರಂ' ಕೃತಿಯಲ್ಲಿ ಸ್ವಾತಂತ್ರ್ಯೋತ್ತರ ಭಾರತದ ಪರಿಸ್ಥಿತಿಯ ವರ್ಣನೆಯಿದೆ. 'ಸಮಾಜ ಸಂಗೀತ' ಒಂದು ವಿಶಿಷ್ಟ ಚಿಕಿತ್ಸಕ ಕಾವ್ಯ. ಸೊಡಂಕೂರು ತಿರುಮಲೇಶ್ವರ ಭಟ್ಟರು 'ಕವನ ಕುಂಕುಮ' ಎಂಬ ಕಾವ್ಯವನ್ನು ಬರೆದಿದ್ದಾರೆ. ಸಂಸ್ಕೃತ ಮತ್ತು ಕನ್ನಡ ಪಂಡಿತರಾದುದರಿಂದ ಛಂದಸ್ಸಿನ ಮೇಲೆ ಹಿಡಿತ ಮತ್ತು ಸಾಂಪ್ರಾದಾಯಿಕ ಕವಿತ್ವವನ್ನು ಇವರ ಕವನಗಳಲ್ಲಿ ಕಾಣಬಹುದು. 'ದರ್ಪಣ ಸುಂದರಿ', 'ಪಾರಿಜಾತ', ಇವರ ಉಳಿದೆರಡು ಕವನಸಂಕಲನಗಳು. 'ವೈಜಯಂತಿ' ಗಣಪತಿ ಮೊಳೆಯಾರರ ಕವನ ಸಂಕಲನ. ಇದರಲ್ಲಿರುವ ಪ್ರೇಮಗೀತೆಗಳು ಬಹಳ ಸುಂದರವಾಗಿವೆ. ಸರಸ–ಸರಳ–ಸುಂದರ ನಿರೂಪಣೆ ಕವನಗಳ ವಿಶೇಷತೆ. ಕಾವೇರಿಕಾನ ಕೃಷ್ಣ ಭಟ್ಟರು ಬರೆದ 'ಕರ್ಣರಸಾಯನಂ' ಎಂಬುದು ಪಂಪನ 'ಕರ್ಣರಸಾಯನ ಮಲ್ತೆ ಭಾರತಂ' ಎಂಬ ಮಾತಿಗೂ ಪಂಪ ಭಾರತದಲ್ಲಿರುವ ಕರ್ಣ ವಿಷಯಕವಾದ ಇತರ ವೃತ್ತಗಳಿಗೂ ವಿವರವಾದ ವ್ಯಾಖ್ಯಾನವಾಗಿದೆ. ಸಂಸ್ಕೃತ ಕನ್ನಡಗಳಲ್ಲಿ ಉದ್ದಾಮ ಪಾಂಡಿತ್ಯವಿದ್ದ ಕಾವೇರಿಕಾನರು ಮದ್ರಾಸಿನ ಓರಿಯಂಟಲ್ ಲೈಬ್ರೆರಿಯಲ್ಲಿದ್ದ ಜೀರ್ಣವಾದ 'ಗದ್ದಾಯುದ್ಧ' ಕೃತಿಯನ್ನು ಪರಿಷ್ಕರಿಸಿ ಪ್ರಕಟಿಸಿದರು.

ಕನ್ನೆಪ್ಪಾಡಿ ಶಾಸ್ತ್ರಿಗಳು 'ಕವಿವಿಜಯಂ' ಎಂಬ ಖಂಡಕಾವ್ಯವನ್ನು ಬರೆದಿದ್ದಾರೆ. ಕನ್ನಡ ಮತ್ತು ಹಿಂದಿ ಸಾಹಿತ್ಯಗಳಲ್ಲಿ ಪಾಂಡಿತ್ಯವನ್ನು ಹೊಂದಿದ್ದ ಸಿದ್ದಮೂಲೆ ಶಂಕರ ನಾರಾಯಣ ಭಟ್ಟರು 'ಹೂದೋಟ' ಮತ್ತು 'ಗಂಗಾಸಲಿಲ' ಎಂಬ ಸಂಕಲನಗಳನ್ನು ಪ್ರಕಟಿಸಿದ್ದಾರೆ. ನವೋದಯ ಕಾಲದ ಅತ್ಯಂತ ಪ್ರತಿಭಾನ್ವಿತ ಕವಿಗಳಾದ ಗಣಪತಿರಾವ್ ಪಾಂಡೇಶ್ವರರು 'ಹೂಗೊಂಚಲು' ಕವನ ಸಂಕಲನವನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಪ್ರಕೃತಿ– ಅದರಾಚೆಗಿನ ಚೇತನ ಇವುಗಳನ್ನು ಕಂಡು ಅಚ್ಚರಿಪಡುವ ಕವನಗಳಿವೆ. ಕೀರಿಕ್ಕಾಡು ಮಾಸ್ತರ ವಿಷ್ಣು ಭಟ್ಟರು ಬರೆದ 'ಕಾವ್ಯ ಕುಸುಮಗಳು' ಪ್ರಕಟಿತ ಕವನ ಸಂಕಲನ 'ವಿಷ್ಣು ಶರಣನ ದರ್ಪಣ (ಭಾಗ ೧)' ಉಲ್ಲೇಖನೀಯ ಕೃತಿಯಾಗಿದೆ. ಟಿ. ಕೇಶವ ಭಟ್ಟರು 'ಸತ್ವಾವಲೋಕನಂ' ಎಂಬ ಹಳೆಗನ್ನಡ ಕಾವ್ಯ ಬರೆದಿದ್ದಾರೆ. ಕಾಸರಗೋಡಿನ ಸರಕಾರಿ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಸುಬ್ರಾಯ ಭಟ್ಟರು ರನ್ನನ 'ಸಾಹಸ ಭೀಮ ವಿಜಯ'ವನ್ನು 'ಗದಾಯುದ್ಧ ದರ್ಪಣಂ' ಎಂಬುದಾಗಿ ಸಂಪಾದಿಸಿ ವಿಸ್ತೃತ ವ್ಯಾಖ್ಯಾನದೊಂದಿಗೆ ಪ್ರಕಟಿಸಿದ್ದಾರೆ.

ಕೈಂತಜೆ ನರಸಿಂಹ ಭಟ್ಟರು ಭಾಮಿನಿಷಟ್ಪದಿಯ ಪ್ರಾಚೀನ ಕಾವ್ಯ ಪದ್ಧತಿಯಲ್ಲಿ 'ಶ್ರೀದೇವಿ ಮಹಾತ್ಮೆ' 'ತುಳುನಾಡಿನ ಕಲಿಗಳು', 'ಶ್ರೀಹನುಮನದ್ವಿಲಾಸಮ್' ಎಂಬ ಕೃತಿಗಳನ್ನು ರಚಿಸಿದ್ದಾರೆ. ಪಾಲೆಪ್ಪಾಡಿ ಗೋಪಾಲಕೃಷ್ಣ ಭಟ್ಟರು 'ಸೇತುಭಂಗ' ಎಂಬ ಕಥನಕವನದ ಕರ್ತೃ. ಶಂಪಾ ದೈತೋಟರವರು 'ಅಭಾವಗೀತೆ' ಎಂಬ ಕವನ ಸಂಕಲನದ ಕರ್ತೃ. ಮಡಿಯಾಲ ನಾರಾಯಣ ಭಟ್ಟರು 'ಭಾವಾಂಜಲಿ' ಎಂಬ ಕವನ ಸಂಕಲನವನ್ನು ರಚಿಸಿದ್ದಾರೆ. ಯರ್ಮುಂಜ ರಾಮಚಂದ್ರ ಜೋಯಿಸರು ತಮ್ಮ ಅಲ್ಪಾಯುಷ್ಯದಲ್ಲಿಯೇ ಮಹತ್ತ್ವದ ಸಾಹಿತಿಯಾಗಿ ಬೆಳೆಯುವ ಎಲ್ಲ ಲಕ್ಷಣಗಳನ್ನು ತೋರಿಸಿ ತೀರಿಕೊಂಡವರು. ಅವರ ಕವನ ಸಂಕಲನ 'ವಿದಾಯ' ಮರಣೋತ್ತರವಾಗಿ ೧೯೫೭ರಲ್ಲಿ ಪ್ರಕಟವಾಯಿತು. 'ಬಿದ್ದಗರಿ' ಕವನ ಸಂಕಲನದ ಮೂಲಕ ಕುಣಿಹಿತ್ಲು ರಾಮಚಂದ್ರರು ನವೋದಯ ಮತ್ತು ನವ್ಯಗಳ ಸಂಧಿಕಾಲದ ಶ್ರೇಷ್ಠ ಕವಿಯಾಗಿ ಮೂಡಿಬಂದರು. ವೆಂಕಪ್ಪಯ್ಯ ಪಾರೆ 'ಉಷಾ ಪಯಸ್ವಿನೀ' ಹಾಗೂ ನೀರಬಿದಿರೆ ನಾರಾಯಣ 'ಹೊತ್ತೇರುವ ಮುನ್ನ' ಎಂಬ ಕವನ ಸಂಕಲನಗಳನ್ನು ರಚಿಸಿದ್ದಾರೆ.

ಜಿ.ಎಸ್ ಅವಧಾನಿ 'ಎಲ್ಲ ಕವಿತೆಗಳು', 'ಗಂಗೋತ್ರಿಯ ಹಕ್ಕಿಗಳು', 'ಬೆಂಕಿಬಳ್ಳಿ', 'ಹೊಕ್ಕಳು', 'ಹೊತ್ತು ಮುಳುಗುವ ಮುನ್ನ' ಮೊದಲಾದ ಕವನ ಸಂಕಲನಗಳನ್ನು ರಚಿಸಿದ್ದಾರೆ ತಿರುಮಲ ಲಿಂಗಪ್ಪ ಹೆಗಡೆ 'ಅನಂತ ಚತುರ್ದಶಿ ಕಥೆ', 'ಕಥಾತ್ರಯ ಹಾಡು', 'ಸತ್ಯವಿನಾಯಕನ ಹಾಡು' ಮೊದಲಾದ ಸಾಂಪ್ರದಾಯಿಕ ಹಾಡುಗಳನ್ನು ಬರೆದಿದ್ದಾರೆ. ವಿಘ್ನೇಶ್ವರ ವೆಂಕಟರಮಣ ಪಂಡಿತರು 'ದೇವಯಾನಿ', ಎಂಬ ಕಾವ್ಯವನ್ನು ರಚಿಸಿದ್ದಾರೆ. ವಿ.ಜಿ.ಭಟ್ಟರು 'ಅರಣ್ಯರೋದನ', 'ಅರಿಯುತೇನೆ ನಡೆ', 'ಆತ್ಮಗೀತೆ', 'ಉತ್ಥಾನ', 'ಕತ್ತೆಯ ಕನಸು', 'ಬಿಂದು ಬಿಂದು ಸಾರ', 'ಮರಳಿ ಬಂದ ಕವಿತೆ' ಮೊದಲಾದ ಕವನ ಸಂಕಲನಗಳನ್ನು ರಚಿಸಿದ್ದಾರೆ.

ತೀರಾ ಗ್ರಾಮೀಣ ಪ್ರದೇಶದಲ್ಲಿದ್ದುಕೊಂಡು ಗಂಭೀರವಾದ ಕಾವ್ಯವನ್ನು ರಚಿಸಿ ಕನ್ನಡ ಕಾವ್ಯದಲ್ಲಿ ತಮ್ಮದೇ ಆದ ಭಿನ್ನ ಮಾರ್ಗವನ್ನು ರೂಪಿಸಿಕೊಂಡವರು ಸುಬ್ರಾಯ ಚೊಕ್ಕಾಡಿಯವರು 'ತೆರೆ', 'ಬೆಟ್ಟವೇರಿದ ಮೇಲೆ', 'ನಿಮ್ಮವೂ ಇರಬಹುದು', 'ಮೊನ್ನೆಸಿಕ್ಕವರು', 'ಇದರಲ್ಲಿ ಅದು', 'ಹಾಡಿನ ಲೋಕ', 'ಇನ್ನೊಂದು ಬೆಳಗು', 'ಬಂಗಾರದ ಹಕ್ಕಿ', 'ಮಾಗಿಯಕೋಗಿಲೆ' ಮುಂತಾದ ಒಂಬತ್ತು ಕವನಸಂಕಲನಗಳನ್ನು ಬರೆದಿದ್ದಾರೆ. ಆಧುನಿಕತೆಗೆ ವಿಮುಖವಾಗಿ ಪ್ರಕೃತಿಯ ಮಡಿಲಿಗೆ ಮರಳುವ ಉತ್ಸಾಹ ಚೊಕ್ಕಾಡಿಯವರ ಕಾವ್ಯದಲ್ಲಿ ಕಂಡುಬರುತ್ತದೆ. ಚೊಕ್ಕಾಡಿಯವರ ಹೆಚ್ಚಿನ ಕವಿತೆಗಳು ಒಂದು ಬಗೆಯ ಕಥನ ಶೈಲಿಯಲ್ಲಿ ಬೆಳೆಯುತ್ತ ಹೋಗುತ್ತದೆ. 'ಡಿಸೆಂಬರ್ ೬ರ ರಾತ್ರಿ', 'ಈ ಮರದ ಕೆಳಗೆ', 'ಒಂದು ಸಾವು' ಮುಂತಾದ ಕವನಗಳನ್ನು ಈ ನಿಟ್ಟಿನಲ್ಲಿ ಗಮನಿಸಬಹುದು. ಚೊಕ್ಕಾಡಿಯವರ 'ಹಾಡಿನ ಲೋಕ'ದಲ್ಲಿ ಅತ್ಯುತ್ತಮವಾದ ಭಾವಗೀತೆಗಳಿವೆ.

ಡಾ। ರಾಮಚಂದ್ರ ದೇವ ಅವರ ಸಮಗ್ರ ಕಾವ್ಯ 'ಮಾತಾಡುವ ಮರ' ಕಾವ್ಯಾಭ್ಯಾಸಿಗಳ ಗಂಭೀರ ಅಧ್ಯಯನಕ್ಕೆ ಯೋಗ್ಯವಾದ ಕೃತಿ. 'ಇಂದ್ರಪ್ರಸ್ಥ' 'ಡೊಂಕು', 'ಪ್ರಗಾಥಾ', 'ನಾಳೆಯಗ್ರಂಥ', 'ಯುಗ ಮುಗಿದ ಗಳಿಗೆ', 'ಸರ್ಪಸುತ್ತು', 'ಎಷ್ಟೊಂದು ಹುಡುಗಿಯರು' ಮುಂತಾದವು ಓದಿಗೆ ವಿಶೇಷ ಮುದವನ್ನು ನೀಡುವ ಕವನಗಳು. ಪೌರಾಣಿಕ, ಐತಿಹಾಸಿಕ ಅಥವಾ ಕಾಲ್ಪನಿಕ ಕಥಾನಕಗಳ ಸನ್ನಿವೇಶವೊಂದನ್ನು ಎತ್ತಿಕೊಂಡು ತಮ್ಮದೇ ಜಾಡಿಯಲ್ಲಿ ಬರೆಯುವ ರಾಮಚಂದ್ರರು ನವ್ಯರಿಗಿಂತ

ಭಿನ್ನರಾಗುತ್ತಾರೆ. 'ಇಂದ್ರಪ್ರಸ್ಥ', 'ಸರ್ಪಸುತ್ತು', 'ಯುಗ ಮುಗಿದ ಗಳಿಗೆ' ಮುಂತಾದವು ಮಹಾಭಾರತದ ಕಥಾವಸ್ತುವುಳ್ಳವು.

ಡಾ। ಕೆ.ವಿ. ತಿರುಮಲೇಶರು ಅಡಿಗರಿಗಿಂತ ಭಿನ್ನವಾದ ಕಾವ್ಯ ಮಾರ್ಗವೊಂದನ್ನು ಸ್ಥಾಪಿಸಿಕೊಂಡು ಅದರಲ್ಲಿ ಯಶಸ್ವಿಯಾದರು. ಅವರ ಕವನ ಸಂಕಲನಗಳು 'ಮುಖವಾಡಗಳು', 'ವಠಾರ', 'ಮಹಾಪ್ರಸ್ಥಾನ', 'ಮುಖಾಮುಖಿ', 'ಅವಧ', ಮತ್ತು 'ಪಾಪಿಯೂ'. ತಿರುಮಲೇಶರು ದಿನನಿತ್ಯದ ಸಹಜ ಮಾತುಗಳನ್ನೇ ತಮ್ಮ ಕವನಗಳಲ್ಲಿ ಉಪಯೋಗಿಸುತ್ತಾರೆ. ಹಾಗೂ ಛಂದಸ್ಸಿನಲ್ಲಿ ಹಲವು ಬಗೆಯ ಪ್ರಯೋಗಗಳನ್ನು ಮಾಡುತ್ತಾರೆ. 'ಪಾಪಿಯೂ' ಸಂಕಲನದಲ್ಲಿ ಹೊಸ ಬಗೆಯ ಕಥನಕವನಗಳನ್ನು ನೀಡಿ ತಿರುಮಲೇಶರು ಆಧುನಿಕ ಕಾವ್ಯದ ಇನ್ನೊಂದು ಸಾಧ್ಯತೆಯನ್ನು ತೋರಿಸಿದ್ದಾರೆ.

ಡಾ। ರಮಾನಂದ ಬನಾರಿಯವರು ಕಾಸರಗೋಡಿನ ನವ್ಯ ಕವಿ. ಬನಾರಿಯವರು ಯಕ್ಷಗಾನ ಕಲಾವಿದರೂ ಆಗಿರುವುದರಿಂದ ಅವರ ಕವನಗಳಲ್ಲಿ ಯಕ್ಷಗಾನದ ಮಾತುಗಾರಿಕೆ ಮತ್ತು ಹಾಡುಗಳ ಪ್ರಭಾವ ಕಾಣಿಸುತ್ತದೆ. 'ತೊಟ್ಟಿಲು', 'ಕವಿತೆಗಳೇ ಬನ್ನಿ', 'ಜೀವವೃಕ್ಷ', 'ನೋಟದೊಳಗಿನ ನೋಟ' ಅವರ ಕವನ ಸಂಕಲನಗಳು 'ಗುಟುಕುಗಳು' ಮತ್ತು 'ಬಿಂದುಗಳು' ಅವರ ಹನಿಗವನಗಳ ಸಂಕಲನವಾಗಿದೆ. ಕಾಸರಗೋಡಿನವರಾದ ಎಂ. ಗಂಗಾಧರ ಭಟ್ಟರು 'ನೆರಳು', 'ಮುಪ್ಪಿಲ್ಲ ನೆನಪುಗಳಿಗೆ', 'ನಾಕ–ನರಕ' ವೆಂಬ ಕವನ ಸಂಕಲನಗಳನ್ನು ರಚಿಸಿದ್ದಾರೆ. ವೇಣುಗೋಪಾಲ ಕಾಸರಗೋಡು ಇವರು 'ಗರಿಮುರಿದ ಹಕ್ಕಿಗಳು', 'ಗೆರಿಲ್ಲಾ', 'ಬೊಗಸೆ ಮೀರಿದ ಬದುಕು' ಕವನ ಸಂಕಲನಗಳ ಮೂಲಕ ನವ್ಯ ಸಾಹಿತ್ಯವನ್ನು ಬೆಳೆಸಿದ್ದಾರೆ.

ತಿರುಮಲೇಶರಂತೆ ನವ್ಯದ ದಟ್ಟ ವಾತಾವರಣದಲ್ಲಿ ಡಾ। ನಾ. ಮೊಗಸಾಲೆಯವರು ಬರೆಯತೊಡಗಿದರು. 'ವರ್ತಮಾನದ ಮುಖಗಳು', 'ಪಲ್ಲವಿ', 'ಮೊಗಸಾಲೆಯ ನೆನಪುಗಳು', 'ಪ್ರಭಾವ', 'ಸ್ವಂತಕ್ಕೆ ಸ್ವಂತಾವತಾರ', 'ನೆಲದನೆರಳು' ಮೊದಲಾದವು ಅವರ ಕವನ ಸಂಕಲನಗಳು. 'ಪಲ್ಲವಿ' ಕವನ ಸಂಕಲನದಲ್ಲಿ ಮಾತುಗಾರಿಕೆಯನ್ನೇ ಕಾವ್ಯವನ್ನಾಗಿಸಲು ಪ್ರಯತ್ನಿಸಿದ್ದಾರೆ. ಅವರು ಇತ್ತೀಚಿನ ವರ್ಷಗಳಲ್ಲಿ ಬರೆದಿರುವ 'ವ್ಯಕ್ತಮಧ್ಯ', 'ದರ್ಶನ' ಮುಂತಾದ ಸಣ್ಣ ಕಥನ ಕವನಗಳು ರಸ ಪ್ರಧಾನವಾಗಿದ್ದು ನಮ್ಮ ಕಾಲದ ಬದುಕಿನ ವ್ಯಾಖ್ಯಾನಗಳಾಗಿಯೂ ಪ್ರಸ್ತುತವಾಗಿವೆ.

ಜಿ.ಎಸ್ ಉಬರಡ್ಕ (ಗಣಪತಿ ಸುಬ್ರಹ್ಮಣ್ಯ ಭಟ್ಟ) ನವ್ಯಕ್ಕೊಲಿದು ಒಳ್ಳೆಯ ಸಾಹಿತ್ಯ ಕೃಷಿ ಮಾಡುತ್ತಿದ್ದಾರೆ. 'ಕ್ರೂನಿಂತ ಪಾಶಗಳು', 'ಅರಣ್ಯಕಾಂಡ' ಅವರ ಕವನ ಸಂಗ್ರಹಗಳಾಗಿವೆ. ಉಬರಡ್ಕರು ತಮ್ಮ ಪರಿಸರ ಬದುಕನ್ನು ಕಾವ್ಯ ಸಂವೇದನೆಗೊಳಪಡಿಸುವ ಕಾಯಕದಿಂದಾಗಿ ಇಂದಿಗೂ ಪ್ರಸ್ತುತತೆ ಉಳಿಸಿಕೊಂಡಿದ್ದಾರೆ. 'ಮೊಗ್ಗೊಡೆದ ಮೌನ' ಸಂಕಲನದಲ್ಲಿ ಮೂವತ್ತೈದು ಕವಿತೆಗಳು ಸೇರಿವೆ. ಈ ಕೃತಿಯು 'ಪರ್ಲ ಕಾವ್ಯ ಪ್ರಶಸ್ತಿ' ಯಿಂದ ಪ್ರರಸ್ಕೃತವಾಗಿದೆ. ಸ್ವೋಪಜ್ಞತೆಗೆ ಒತ್ತು ಕೊಡುವ ಪ್ರಯೋಗಶೀಲ ಕವಿಗಳಲ್ಲಿ ಬಾಲಸುಬ್ರಹ್ಮಣ್ಯ ಕಂಜರ್ಪಣೆ ಗಮನಾರ್ಹರು. ೧೯೬೭ರ 'ಸ್ವಯಂ ಪ್ರಭೆ' ಕವನಸಂಗ್ರಹದಲ್ಲಿ ಅವರು ಬರೆದ ಹಲವು ಕವನಗಳು ಸಂಕಲಿತವಾಗಿವೆ.ವೈಯಕ್ತಿಕ ಸಾಮಾಜಿಕ ಸಂಬಂಧಗಳ ಹಿನ್ನೆಲೆಯಲ್ಲಿ ಜಗತ್ತನ್ನು ನೋಡುವ, ವೈಚಾರಿಕ– ಭಾವುಕ ಸಂಘರ್ಷವಿರುವ ಇಲ್ಲಿನ ಕವಿತೆಗಳಿಗೆ ಬದುಕೇ ಮೂಲ ದ್ರವ್ಯವಾಗಿದೆ. ಸ್ಥಿರ ಪ್ರತೀಕವೊಂದನ್ನು ಬಳಸಿಕೊಂಡು ಸಂಕೀರ್ಣ ನೆಲೆಯತ್ತ ಸಾಗುವ 'ಬಂಟಮಲೆ' ಯಂತಹ ಕವನಗಳು ಕಂಜರ್ಪಣಿಯವರ ಚಿತ್ರಕ ಶಕ್ತಿಗೆ ಸಾಕ್ಷಿಯಾಗಿದೆ. ನವ್ಯ ಮತ್ತು ನವ್ಯೋತ್ತರ ಬೆಳವಣಿಗೆಯ ಸಮನ್ವಿತ ದೃಷ್ಟಿಕೋನ ಕಂಜರ್ಪಣಿಯವರ ಕವನದಲ್ಲಿ ಕಂಡುಬರುತ್ತದೆ.

ವಿಮರ್ಶಕ ಕೇಶವ ಶರ್ಮರ 'ಅಗ್ನಿರಾಗ' ಕವನ ಸಂಕಲನವು ನಿಜಕ್ಕೂ ಹೊಸರಾಗವೇ ಸರಿ. ಈ ಕವನ ಸಂಕಲನದಲ್ಲಿ ಒಟ್ಟು ಇಪ್ಪತ್ತೆರಡು ಕವನಗಳಿವೆ. ಈ ಕವನ ಸಂಕಲನದ ಬಹು ಮುಖ್ಯ ವಿಶಿಷ್ಟತೆ ಏನೆಂದರೆ ಪುರಾಣದ ಕತೆಗಳನ್ನು ಹೊಸ ಹೊಸ ಆಯಾಮದಲ್ಲಿ ನೋಡುವಂತೆ, ನೋಡಿದ್ದನ್ನು ಬಿಡದೆ ಓದಿಸುವಂತೆ, ಮಾಡುವ ಶಕ್ತಿಯನ್ನು ಪ್ರತಿಯೊಂದು ಕವನಗಳೂ ತಮ್ಮದಾಗಿಸಿಕೊಂಡಿವೆ.

'ಪ್ರಾತ:ಕಾಲದ ಪದ್ಯಗಳು' ಸಂಕಲನದ ಸಂತೋಷ ಚೊಕ್ಕಾಡಿ ಭರವಸೆಯ ಕವಿಯಾಗಿದ್ದಾರೆ. ಅಲ್ಲಿನ 'ಗದ್ದೆ ಬದುವಿನ ಹಾದಿಯಲ್ಲಿ', 'ಪ್ರಾತ:ಕಾಲದ ಪದ್ಯಗಳು', 'ಬೆಕ್ಕು ಮತ್ತು ಕವಿತೆ' ಕವನಗಳ ನಿರೂಪಣಾ ಕ್ರಮದಲ್ಲಿ ಪ್ರಜ್ಞಾವಂತ ಕವಿಯೊಬ್ಬ ತನ್ನ ದಾರಿಯನ್ನು ಕಂಡುಕೊಳ್ಳುತ್ತಿರುವುದು ನಿಚ್ಚಳವಾಗಿ ಗೋಚರವಾಗುತ್ತದೆ.

ಜಯಪ್ರಕಾಶ ಮಾವಿನಕುಳಿ ನವ್ಯ ಸಾಹಿತ್ಯದ ಪ್ರತಿಭಾವಂತ ಸಾಹಿತಿಗಳಲ್ಲಿ ಒಬ್ಬರು. ಕತೆ ಅವರ ಮುಖ್ಯ ಕ್ಷೇತ್ರ. 'ಸಾಗರದಲ್ಲಿ ಸಾಯಂಕಾಲ', 'ಅಶ್ವತ್ಥಾಮ',

‘ವಿರಹದಕಡಲು’ ಅವರ ಕವನಸಂಕಲನಗಳು. ಅವರ ಕವನಗಳಲ್ಲಿ ನವ್ಯ ಪ್ರಜ್ಞೆಯನ್ನು ಕಾಣಬಹುದು. ವಸಂತಕುಮಾರ ಪೆರ್ಲರು ‘ ಮಾತಿನಾಚೆಯ ಮೌನ’, ‘ಕೋಟಿಲಿಂಗ’, ‘ಹುತ್ತದೊಳಗಿನ ಹಾವು’, ‘ವರ್ತಮಾನ’, ‘ಹತ್ತರೊಡನೊಂದು’, ‘ಪಯಸ್ವಿನಿಯ ಮಡಿಲಲ್ಲಿ’ ಎಂಬ ಕವನ ಸಂಕಲನಗಳನ್ನು ಬರೆದಿದ್ದಾರೆ. ಅವರ ಕವನಗಳಲ್ಲಿ ಸಂಕೇತಗಳುಳ್ಳ ವಾಚ್ಯಾರ್ಥ ಸೂಚ್ಯಾರ್ಥ ಎರಡೂ ನೆಲೆಗಳನ್ನು ಕಾಣಬಹುದು. ಪೆರ್ಲರ ‘ಮಾತಿನಾಚೆಯ ಮೌನ’ ಕೃತಿಯಲ್ಲಿ ಮಾತಿನಾಚೆಯ ಮೌನಕ್ಕಿಂತಲೂ ಮೌನದೀಚೆಯ ಮಾತೇ ಹೆಚ್ಚಾಗಿ ಕೇಳಿಸುತ್ತಿದೆ. ಇಲ್ಲಿ ಪೆರ್ಲರು ಮಾತಿಗಿಂತ ಮೌನಕ್ಕೇ ಹೆಚ್ಚು ಪ್ರಾಮುಖ್ಯ ಕೊಟ್ಟಿದ್ದಾರೆ. ‘ಹುತ್ತದೊಳಗಿನ ಹಾವು’ ಸದ್ಯ ಕಾವ್ಯ ಕ್ಷೇತ್ರ ಎದುರಿಸುತ್ತಿರುವ ಸಮಸ್ಯೆ ಸವಾಲುಗಳನ್ನು ಅವರು ಧ್ಯಾನಿಸಿರುವಂತಿದೆ. ನಾರಾಯಣ ಕಂಗಿಲರು ‘ಮತ್ತೇನೆಂದರೆ’ ಕವನ ಸಂಕಲವನ್ನೂ ‘ ಅಂತರಂಗದ ಗಂಗೆ’ ಎಂಬ ಖಂಡ ಕಾವ್ಯವನ್ನೂ ರಚಿಸಿದ್ದಾರೆ. ‘ಮುಗಿಲಹಕ್ಕಿ’ಯು ಮಹೇಶ್ವರಿಯವರ ಕವಿತಾಸಂಕಲನ.

ಹರಿನಾರಾಯಣ ಮಾಡಾವು ‘ಅಂಗರಾಗ’, ಗಣರಾಜ ಕುಂಬ್ಳೆ ‘ಬಿರಿದ ಮೊಗ್ಗು’, ವಿ.ಮ.ಭಟ್ಟ ‘ಶ್ರೀಗಂಧ’, ರಾಧಾಕೃಷ್ಣ ಕಲ್ಚಾರ್ ‘ಕೂಡುಮನೆ’, ‘ಲಕ್ಷ್ಮೀಶ ಕಾಟುಕುಕ್ಕೆ ‘ಮುಕ್ತಿ’, ಗೋಪಾಲಕೃಷ್ಣ ಹೆಗಡೆ ‘ವೈಜಯಂತಿ’, ‘ಚಿಗುರಡಿಕೆ’ ಗಣೇಶರಾಮ ಯಾಜಿ ಇಡಗುಂಜಿ ‘ಭಾವತರಂಗ’ ಮುಂತಾದ ಅನೇಕ ಕವಿಗಳು ಕವನ ಸಂಕಲನಗಳನ್ನು ಬರೆದಿದ್ದಾರೆ.

ಸಂಪ್ರದಾಯದ ಹಾಡುಗಳು, ಭಜನೆ, ಕೀರ್ತನೆ ಮುಂತಾದ ಕ್ಷೇತ್ರಗಳಲ್ಲಿ ಹವ್ಯಕರ ಕೊಡುಗೆ ಅಪಾರವಾದುದು. ವಿ.ಬಿ. ಅರ್ತಿಕಜೆಯವರು ದಾಸರ ಪದಗಳ ರೀತಿಯ ಕೀರ್ತನೆಗಳ ಸಂಕಲನ ‘ನಾದಪೂಜೆ’ಯನ್ನು ರಚಿಸಿದ್ದಾರೆ. ಡಾ। ಶ್ರೀ ಕೃಷ್ಣಭಟ್ ಅರ್ತಿಕಜೆಯವರು ಬರೆದ ‘ಗಾನಮಂಜರಿ’ ಭಜನೆಗಳಿಗೆ ಸಂಬಂಧಿಸಿದ ಕೃತಿಯಾಗಿದೆ. ವಿದ್ವಾನ್ ಕೃ. ಗಣಪತಿ ಭಟ್ ‘ಮಂಗಲಾಷ್ಟಕಂ’, ‘ಕುಂಕುಮಾರ್ಚನೆ’, ಕೇಶವದಾಸ ಕರ್ಕಿ ‘ ಶ್ರೀ ಗೋಕರ್ಣ ಮಹಾಬಲೇಶ್ವರ ಸ್ತೋತ್ರಗಳು’ ‘ಇಡಗುಂಜಿ ಶ್ರೀ ಗಣಪತಿ ಸ್ರೋತ್ರಮಾಲಾ’ ಮುಂತಾದ ಕೃತಿಗಳನ್ನು ರಚಿಸಿದ್ದಾರೆ.

ಹೀಗೆ ಹವ್ಯಕ ಸಾಹಿತಿಗಳು ಕನ್ನಡ ಕಾವ್ಯ ಕ್ಷೇತ್ರದಲ್ಲಿ ಸಂಖ್ಯೆಯಲ್ಲಿಯೂ ಮಹತ್ತ್ವದಲ್ಲಿಯೂ ಮುಖ್ಯವಾದ ಕೊಡುಗೆಗಳನ್ನು ನೀಡಿದ್ದಾರೆ.

### ೩.೩.೨ ನಾಟಕ

ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳು ಶ್ರೀಮಂತವಾಗಿರುವಂತೆ ನಾಟಕ ಪ್ರಕಾರವೂ ಶ್ರೀಮಂತವಾಗಿದೆ. ಪುರಾಣ, ಇತಿಹಾಸ, ಸಾಮಾಜಿಕ ಆಧಾರಿತ, ಅನುವಾದಿತ ಮತ್ತು ಸ್ವತಂತ್ರ ವಿಷಯಗಳಿಗೆ ಸಂಬಂಧಿಸಿದಂತೆ ಹವ್ಯಕರು ನೂರಕ್ಕೂ ಮಿಕ್ಕಿ ನಾಟಕಗಳನ್ನು ರಚಿಸಿದ್ದಾರೆ.

೧೮೮೭ರಲ್ಲಿ ಪ್ರಕಟವಾದ ಕರ್ಕಿ ವೆಂಕಟರಮಣ ಶಾಸ್ತ್ರಿ ರಚಿಸಿದ 'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ' ಎಂಬ ಕೃತಿಯು ಕನ್ನಡ ಸಾಹಿತ್ಯದ ಮೊದಲ ಸ್ವತಂತ್ರ ಸಾಮಾಜಿಕ ನಾಟಕವಾಗಿದೆ. ಒಂದು ವಾಸ್ತವವಾದೀ ನಾಟಕದ ಎಲ್ಲ ಮುಖ್ಯ ಲಕ್ಷಣಗಳೂ 'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ' ದಲ್ಲಿ ಕಂಡುಬರುತ್ತದೆ. ಉತ್ತರ ಕನ್ನಡದ ಹವ್ಯಕ ಭಾಷೆ, ಸಿರ್ಸಿಪೇಟೆಯ ಹವ್ಯಕೇತರ ಶಿಷ್ಟ ಭಾಷೆ,ಕೊಂಕಣಿ, ಉಡುಪಿ ಜಿಲ್ಲೆಯ ಕುಂದಾಪುರದಿಂದ ಬಂದ ಸೇರೆಗಾರನ ಭಾಷೆ ಮತ್ತು ಅಂದಿನ ಕೋರ್ಟ್ ಭಾಷೆಗಳನ್ನು ಪಾತ್ರಗಳಿಗೆ ಮತ್ತು ಸಂದರ್ಭಗಳಿಗೆ ಉಚಿತವಾಗಿ ಬಳಸಿರುವ ಲೇಖಕರು ತಮ್ಮ ಸಾಮಾಜಿಕ ಕಳಕಳಿಯನ್ನು ನಾಟಕೀಯ ಕ್ರಿಯೆಯಲ್ಲಿ ಅಂತರ್ಗತವಾಗಿ ಮೂಡಿಬರುವಂತೆ ಯೋಚಿಸಿರುವುದು ನಾಟಕದ ಕಲಾತ್ಮಕತೆಗೆ ಕಾರಣವಾಗಿದೆ. ಈ ನಾಟಕ ಅನೇಕ ಸಾಮಾಜಿಕ ಸಮಸ್ಯೆಗಳಾದ ಕನ್ಯಾ ವಿಕ್ರಯ ವ್ಯಭಿಚಾರ ಆರ್ಥಿಕ ಅಶಿಸ್ತು , ಅಜ್ಞಾನ, ಧಾರ್ಮಿಕ ಶೋಷಣೆ, ಭ್ರಷ್ಟಾಚಾರ ಮುಂತಾದ ವಿಚಾರಗಳನ್ನು ನಮ್ಮ ಮುಂದೆ ಮಂಡಿಸುತ್ತದೆ. ಕೆಲವು ಪರಿಹಾರಗಳನ್ನೂ, ಶಿಕ್ಷಣ, ಸಾಮಾಜಿಕ ಸುಧಾರಣೆ, ಹೊಸ ಮೌಲ್ಯಗಳ ಆಧಾರದ ಮೇಲೆ ಹೊಸ ಮಾನವೀಯ– ಸಾಮಾಜಿಕ – ಸಂಸ್ಥೆಗಳ ಹುಟ್ಟು ಸೂಚಿಸುತ್ತದೆ. ಹದಿನಾರು ದೃಶ್ಯಗಳ ಈ ನಾಟಕ ಆ ಕಾಲದ ಹವ್ಯಕ ಸಮಾಜದ ಒಂದು ದಟ್ಟ ಚಿತ್ರವನ್ನೇ ನಮ್ಮ ಮುಂದಿಡುತ್ತದೆ. ಒಂದು ನಿರ್ದಿಷ್ಟ ಚಾರಿತ್ರಿಕ ಘಟ್ಟದಲ್ಲಿ ಬದಲಾಗುತ್ತಿದ್ದ ಸಮಾಜದ ಹಿನ್ನೆಲೆಯಲ್ಲಿ ಈ ಚಿತ್ರ ಮೂಡಿರುವುದರಿಂದ 'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ' ಒಂದು ರೀತಿಯಲ್ಲಿ ಒಂದು ಚಾರಿತ್ರಿಕ, ಸಾಂಸ್ಕೃತಿಕ ಭಾರತೀಯ ಮೂಲ ಮಾದರಿಯನ್ನು ಕೆಲವೊಂದು ಪ್ರಾದೇಶಿಕ ವಿವರಗಳಲ್ಲಿ ಮೂರ್ತವಾಗಿಸುತ್ತದೆ. " 'ಇಗ್ಗಪ್ಪ ಹೆಗಡೆ..' ಕನ್ನಡ ವಾಸ್ತವವಾದೀ ನಾಟಕ ಪರಂಪರೆಯ ಆದಿಕೃತಿಯಷ್ಟೆ ಅಲ್ಲ

ಆಧುನಿಕ ಕನ್ನಡ ಸಾಹಿತ್ಯದ ಆದಿಕೃತಿಯೂ ಹೌದು" (ಟಿ.ಪಿ.ಅಶೋಕ; ಸಾಹಿತ್ಯ ಸಂದರ್ಭ; ೧೯೯೧; ಪುಟ ೧೯೮) ಎಂಬುದು ಟಿ.ಪಿ. ಅಶೋಕರ ಅಭಿಪ್ರಾಯ.

ನಾಟಕ ರಚನೆಯಲ್ಲೂ ಪರಿಣತರಾದ ಕಡೆಂಗೋಡ್ಲು ಶಂಕರ ಭಟ್ಟರು 'ಉಷಾ', 'ಗುರುದಕ್ಷಿಣೆ', 'ಹಿಡಿಂಬೆ' ಎಂಬ ಪೌರಾಣಿಕ ನಾಟಕಗಳನ್ನೂ 'ಯಜ್ಞಕುಂಡ' ವೆಂಬ ಐತಿಹಾಸಿಕ ನಾಟಕವನ್ನೂ, 'ವಿರಾಮ'ವೆಂಬ ಸಾಮಾಜಿಕ ಏಕಾಂಕ ನಾಟಕವನ್ನೂ ರಚಿಸಿದ್ದಾರೆ. ಇವರ ನಾಟಕಗಳ ಸಂಭಾಷಣೆ ತುಂಬ ಹರಿತ, ಚುರುಕು. ಅವರ ತರ್ಕ, ರಾಜಕೀಯ ಪ್ರಜ್ಞೆ ನಾಟಕಗಳಲ್ಲೂ ಕಂಡುಬರುತ್ತವೆ. ಪಾಂಡೇಶ್ವರ ಗಣಪತಿ ರಾವ್ ಬರೆದ 'ಬಲಿ ವಾಮನ' ವೆಂಬುದು ಗಾತ್ರದಲ್ಲಿ ಕಿರಿದಾದರೂ ವಿಚಾರದಲ್ಲಿ ಕ್ರಾಂತಿಕಾರಕವಾಗಿದೆ. ಕೆ.ವಿ. ಕೃಷ್ಣ ಭಟ್ಟ 'ಎಲ್ಲರಿಗೂ ಹುಚ್ಚು'. ಮಣಿಲ ಶಿವಶಂಕರ ಶಾಸ್ತ್ರಿ 'ಅನ್ನಬ್ರಹ್ಮ', 'ಮಹಾತ್ಮ ಉದಂಕ' ಕೃತಿಗಳನ್ನು ರಚಿಸಿದ್ದಾರೆ. 'ಕೀಚಕ', 'ದಲಿತೋದ್ಧಾರ', 'ನವಜೀವನ', 'ಬಲಿಬಂಧನ', ಮಧ್ಯಮ ವ್ಯಾಯೋಗ' ಸೊಡಂಕೂರು ತಿರುಮಲೇಶ್ವರ ಭಟ್ಟರ ನಾಟಕ ಕೃತಿಗಳು.

'ಧರ್ಮ-ದಾಸಿ' ದೇರಾಜೆ ಸೀತಾರಾಮಯ್ಯನವರು ಬರೆದ ಏಕಾಂಕ ನಾಟಕ. ಈ ನಾಟಕಕ್ಕೆ ಮೂಲಕತೆಯನ್ನು ಮಹಾಭಾರತದಿಂದ ಆರಿಸಿಕೊಳ್ಳಲಾಗಿದೆ. 'ಧರ್ಮ-ಸಂಕಟ'ವು ಈ ನಾಟಕದ ಕಥಾ ವಸ್ತುವನ್ನು ಪುಷ್ಟೀಕರಿಸುವಂತೆ ಲೇಖಕರು ಚಿತ್ರಿಸಿದ್ದಾರೆ. ಭಾರತ , ಭಾಗವತಗಳ ಮೂಲ ಕಥೆಗೂ 'ಧರ್ಮ ದಾಸಿ' ನಾಟಕದ ಕತೆಗೂ ಸ್ವಲ್ಪ ಅಂತರವಿದೆ. ಕಥೆಯಲ್ಲಿ 'ಸಹಜತೆ' ಹಾಗೂ 'ರಸ' ಪೋಷಣೆಯ ದೃಷ್ಟಿಯಿಂದ ಅಲ್ಲಲ್ಲಿ ಸ್ವಲ್ಪ ವ್ಯತ್ಯಾಸವಿದೆಯೆಂದು ನಾಟಕಕಾರರು ಮುನ್ನುಡಿಯಲ್ಲಿ ಹೇಳಿದ್ದಾರೆ. 'ಧರ್ಮ-ದಾಸಿ' ನಾಟಕ ಧರ್ಮವನ್ನು ಪ್ರತಿಪಾದಿಸುವ ಆರು ದೃಶ್ಯಗಳಿರುವ ನಾಟಕ. ಇಲ್ಲಿನ ಭಾಷೆ ಹಳೆಗನ್ನಡ, ಹೊಸಗನ್ನಡ ಮಿಶ್ರಿತವಾಗಿದೆ. ಇಲ್ಲಿ ಶೃಂಗಾರ, ಕರುಣ ರಸಗಳು ಸನ್ನಿವೇಶಕ್ಕೆ ತಕ್ಕಂತೆ ಬಳಕೆಯಾಗಿವೆ. ಶಬ್ದಾಲಂಕಾರ, ಅರ್ಥಾಲಂಕಾರಗಳಿಂದ ಕೂಡಿ ಸುಂದರವಾಗಿದೆ. ಯಕ್ಷಗಾನ ಭೀಷ್ಮ, ಶೇಣಿ ಗೋಪಾಲಕೃಷ್ಣ ಭಟ್ಟರು 'ಮಾತೃಭಕ್ತಿ', 'ಗೃಹಿಣಿ', 'ರಾಮಾಂಜನೇಯ' ನಾಟಕಗಳನ್ನು ರಚಿಸಿದ್ದಾರೆ. 'ಫಲೋದಯ', 'ಮಾಯಾವಿನಿ', 'ಸಲೀಮಾ' ಎಂಬುದು ಎಡನಾಡು ಗೋಪಾಲಕೃಷ್ಣ ಭಟ್ಟರ ನಾಟಕ ಕೃತಿ. ಜಿ.ಕೆ ಮಧುರಕಾನನ ಕಾವ್ಯನಾಮದ ಗೋಪಾಲಕೃಷ್ಣ ಭಟ್ಟರು 'ಮಹಾಭಿನಿಷ್ಕ್ರಮಣ',

'ಚಂಡಿ', 'ಎಲ್ಲಿ ಪ್ರೇಮವೊ ಅಲ್ಲಿ ದೇವರು', 'ಸತ್ಕಾರ', 'ಸಿದ್ಧಾರ್ಥ', 'ಕಾಳಿದಾಸ' ಮುಂತಾದ ರಂಗಕ್ಕೊಪ್ಪುವ ನಾಟಕಗಳನ್ನು ರಚಿಸಿದ್ದಾರೆ.

'ಶಂಬುಕವಧೆ', 'ಕುಂಭಮೇಳ', 'ವೇಷಧಾರಿ' ಎಂಬುದು ವೆಂಕಪ್ಪ ಭಟ್ಟರ ರಚನೆಯಾಗಿದೆ. ಡಿ. ಮಹಾಲಿಂಗ ಭಟ್ಟರು 'ರಾಮರಾಜ್ಯದ ಮಡಿವಾಳ', 'ಶುಭಶಕುನ', 'ಜೀಮೂತವಾಹನ', 'ಕಸ್ತೂರಿ ಮಿಶ್ರಣ' ಮುಂತಾದ ನಾಟಕಗಳನ್ನು ರಚಿಸಿದ್ದಾರೆ. ಸೀತಾರಾಮ ಪಾಡಿ 'ದುರಂತ ಕೌರವ' ಎಂಬ ನಾಟಕಗಳನ್ನು ಬರೆದಿದ್ದಾರೆ. ಸೀತಾರಾಮ ಪಾಡಿ ರಚಿಸಿದ 'ಪ್ರೇಮ ಯೋಗಿನಿ' ಗೀತಾನಾಟಕವಾಗಿದೆ.

ಗಂಗಾಧರ ಗೋಪಾಲಕೃಷ್ಣ ಹೆಗಡೆ ಅವರು 'ಅತ್ತಿಗೆ', 'ಅಹಲ್ಯೋದ್ಧಾರ', 'ಕುರುಕ್ಷೇತ್ರ', 'ಕೆಸರಿನಲ್ಲಿ ಕಮಲ', 'ಚಲೇಜಾವ್', 'ದಾರಿದೀಪ', 'ಧ್ರುವತಾರಾ', 'ಪುಂಡಲೀಕ', 'ರಥದ ಸಾರಥಿ', 'ಶಾಲಾಮಾಸ್ತರ', 'ಹರಿಶ್ಚಂದ್ರ' ಮುಂತಾದ ನಾಟಕಗಳ ಕರ್ತೃ. ನರಸಿಂಹ ಲಕ್ಷಣ ಹೆಗಡೆ 'ಕರ್ನಾಟಕ ಸಿಂಹಾಸನ', ನಾರಾಯಣ ರಾವ್ ಗೋಪಿ 'ಸಮಾಜ ಸಾಮರಸ್ಯ', 'ಸಮಾಜ ಸ್ವರೂಪ', ಸೀತಾರಾಮ ಶಾಸ್ತ್ರಿ ಹುಲಿಮನೆ 'ಪುತ್ರಾಪೇಕ್ಷೆ', ಸುಬ್ರಾಯ ಶೇಷಪ್ಪ ಹೆಗಡೆ 'ವಿಶ್ವಾಮಿತ್ರ ತಪೋಭಂಗ', ಸಿ.ಕೆ. ತಿರಮಲೇಶ ಚಣಿಲ 'ನನ್ನ ಜೀವನ' ಎಂಬ ನಾಟಕಗಳನ್ನು ರಚಿಸಿದ್ದಾರೆ.

ಖ್ಯಾತ ರಂಗಕರ್ಮಿ ವೇಣಿಗೋಪಾಲ ಕಾಸರಗೋಡು ಸ್ವತ: ನಟರಾಗಿದ್ದು 'ಮಣ್ಣಿನ ಬೊಂಬೆ', 'ರಾಮಾಯಣ', 'ಮಹಾಭಾರತ', 'ಡ್ಯೂಟಿ ಅಂದ್ರೆ ಡ್ಯೂಟಿ', 'ಬಂಗಾರಾಂ', 'ಹೀಗೂ ಆಗುತ್ತೆ', 'ನೀನಲ್ಲಾಂದ್ರೆ ನಿನ್ನಪ್ಪ', 'ಹುಲಿ ಬಂತು ಹುಲಿ', 'ಎಂ.ಡಿ.ಸಾಹೇಬರ ನಾಯಿ', 'ಶಿಲುಬೆ', 'ಯಜ್ಞಪಶು', 'ದೃಷ್ಟಿ', 'ಪ್ರಶ್ನೆ', 'ನಾಯಿಬಾಲ' ಮುಂತಾದ ನಾಟಕಗಳನ್ನು ಬರೆದಿದ್ದಾರೆ 'ರಥಮುಸಲ', 'ಕುದುರೆ ಬಂತು ಕುದುರೆ', 'ಕೊಳಲು ಮತ್ತು ಶಂಖ' ಮತ್ತು 'ಕಾಲೆಂಬ ಕಂಬವು' ರಾಮಚಂದ್ರ ದೇವರ ನಾಟಕ ಕೃತಿಗಳು. 'ರಥಮುಸಲ' ೧೯೮೭ರಲ್ಲಿ ಪ್ರಕಟವಾಯಿತು. ಕ್ರಿ.ಪೂ. ೪೯೩ರ ಕಥೆ ಹೇಳುವ ಈ ನಾಟಕ ಚೈತನ್ಯಯುಕ್ತ ಗಣರಾಜ್ಯವಾದ ವೈಶಾಲಿಯನ್ನು ಮಗಧದ ರಾಜ ಅಜಾತಶತ್ರು ನಾಶಪಡಿಸಲು ಪ್ರಯತ್ನಿಸುವುದನ್ನು ಚಿತ್ರಿಸುತ್ತದೆ. ರಥಮುಸಲ ಬಹು ಆಯಾಮಗಳಿರುವ ನಾಟಕ. ತೃತೀಯ ಜಗತ್ತಿನ ದೇಶಗಳನ್ನು ನಾಶ ಮಾಡ ಹೊರಟ ಮೊದಲ ಜಗತ್ತಿನ ದೇಶಗಳ ಯುದ್ಧದಾಹವನ್ನು ಇದು ತೋರಿಸುತ್ತದೆ; ಜೊತೆಗೆ,

ವೈಯಕ್ತಿಕ ಮತ್ತು ಸಾಮಾಜಿಕ ದುರಂತಗಳ ಬಗ್ಗೆಯೂ ಈ ನಾಟಕ ಗಮನ ಕೇಂದ್ರಿಕರಿಸುತ್ತದೆ. ಚೇತಕನಂಥವರ ಅನನುಭವದಿಂದ ಉಂಟಾಗುವ ವೈಶಾಲಿಯ ಪತನವನ್ನು ಹಂತ ಹಂತವಾಗಿ ಚಿತ್ರಿಸುತ್ತದೆ. ವಸ್ಸಕಾರ ಮತ್ತು ಅವನ ಪತ್ನಿ ಮಲ್ಲಿಕೆಯ ದುರಂತವನ್ನು ತೋರಿಸುತ್ತದೆ.

ಜಯಪ್ರಕಾಶ ಮಾವಿನಕುಳಿ 'ಶೇಫಾಲಿಕಾ', 'ನಿರಾಕರಣ' ನಾಟಕಗಳನ್ನು ರಚಿಸಿದ್ದಾರೆ. ಇವರ 'ಪಾರ್ಟಿ', 'ಕೊಡೆಯಪ್ಪನ ಕಥಾಪ್ರಸಂಗ' 'ಅಕಬರ' ಮೊದಲಾದವು ಕೃತಿಯಾಗಿಯೂ ವೇದಿಕೆಯಲ್ಲಿಯೂ ಯಶಸ್ಸು ಪಡೆದ ನಾಟಕಗಳಾಗಿವೆ. ಮನೋರಮಾ ಎಂ. ಭಟ್ಟ ರವರು 'ಆಯ್ಕೆ', 'ನಿರ್ಧಾರ', 'ಬಲಿ ಮತ್ತು ಇತರ ರೇಡಿಯೋ ನಾಟಕ'ಗಳು ಮೊದಲಾದ ರೇಡಿಯೋ ನಾಟಕಗಳನ್ನು ರಚಿಸಿದ್ದಾರೆ. ಲೀಲಾ ಮಣ್ಣಾಲ 'ನವರಸಾಭಿನಯ' (೨೦ ಪ್ರಸಂಗಗಳು) ಎಂಬ ಕಿರು ನಾಟಕ ಬರೆದಿದ್ದಾರೆ.

ಬ.ಲ. ಸುರೇಶ ಅವರು ಹಲವು ರೇಡಿಯೋ ನಾಟಕಗಳನ್ನು ರಂಗ ನಾಟಕಗಳನ್ನು ಬರೆದಿದ್ದಾರೆ. ಒಡೇರಗುಡ್ಡೆ (೧೯೮೪) ಇವರ ಪ್ರಥಮ ನಾಟಕ. ಮಲೆನಾಡಿನ ಗ್ರಾಮೀಣ ಜನರ ಬದುಕಿನ ಅಂತರಂಗದ ಚಿತ್ರಣ ಇಲ್ಲಿದೆ. ಜಾನಪದ ಶೈಲಿಯಲ್ಲಿ ಈ ನಾಟಕ ರಚನೆಗೊಂಡಿದೆ. ಮೇಳದವರು ಎಷ್ಟೋ ಬಾರಿ ಕತೆಯ ಪ್ರಮುಖ ಘಟನೆಗಳನ್ನು ಹೇಳುತ್ತಾ ನಾಟಕದ ನಡೆಗೆ ಸಹಾಯಕವಾಗುತ್ತಾರೆ. 'ರಂಗ ಸಂಗಮ' ಸುರೇಶರು ರೇಡಿಯೋಗಾಗಿ ಬರೆದ ನಾಲ್ಕು ನಾಟಕಗಳ ಸಂಕಲನ. ಈ ನಾಟಕಗಳಲ್ಲಿ ಮಧ್ಯಮ ವರ್ಗದ ಜನರ ಬದುಕು ಬವಣೆಯ ಕೆಲ ಸಮಸ್ಯೆಗಳ ಚಿತ್ರಣವಿದೆ. ಅದು ವರದಕ್ಷಿಣೆಯಾಗಿರಬಹುದು, ಮೋಸ, ವಂಚನೆ, ನಿರುದ್ಯೋಗ, ನಮ್ಮ ಸುತ್ತ ನಾವೇ ಸೃಷ್ಟಿಸಿಕೊಂಡ ಹಣದ ಹುಚ್ಚು ಇರಬಹುದು. ಇವುಗಳ ನಡುವೆ ಕುಟುಂಬಗಳು, ಜನ ತೊಳಲಾಡುವುದನ್ನು ಲೇಖಕರು ವಿವರಿಸುತ್ತಾರೆ. 'ಯುದ್ಧ' ಹೆಸರೇ ಹೇಳುವ ಹಾಗೆ ಯುದ್ಧದ ಭೀಕರ ದುರಂತವನ್ನು ಸಣ್ಣದೊಂದು ಕುಟುಂಬದ ಹಿನ್ನೆಲೆಯಲ್ಲಿ ಚಿತ್ರಿಸುವ ಕಿರು ನಾಟಕ. ದ್ವಾಪರಯುಗದಲ್ಲಿ ಸ್ವರ್ಗ ಸೇರಿದ ಪಾಂಡವರು ಈಗ ಇಲ್ಲಿಗೆ ಬಂದರೆ ಏನು ಕಂಡಾರು? ಏನು ಪಾಡು ಪಟ್ಟಾರು? ಅವರ ಅನುಭವ ಹೇಗಿದ್ದೀತು? ಈ ವಿಷಯ ಕುರಿತು ಬರೆಯಲಾದ ಹಾಸ್ಯ ನಾಟಕ 'ಪಾಂಡವರ ಅಗ್ನಿ ಪ್ರವೇಶ. 'ಸಂಶೋಧಕರು' ನಾಟಕದಲ್ಲಿ ಮೂವರು ಮೂರು ವಸ್ತುಗಳನ್ನು ಹುಡುಕಲು

ಹೋಗಿ ಒಂದು ರೀತಿಯಲ್ಲಿ ಹುಚ್ಚರಾಗಿ ಆಸ್ಪತ್ರೆ ಸೇರಿಕೊಳ್ಳುತ್ತಾರೆ. ನಾಟಕದಲ್ಲಿ ಸಂಭಾಷಣೆಯೇ ಪ್ರಧಾನವಾಗಿ ರಂಗದ ಮೇಲೆ ಯಾವುದೇ ಕ್ರಿಯೆ ನಡೆಯುವುದಿಲ್ಲ. 'ಹಗಲುಗನಸು' ಏಕಾಂಕ ನಾಟಕ. ಇದರಲ್ಲಿ ಮೆಡಿಕಲ್ ಕಾಲೇಜಿಗೆ ಸಂದರ್ಶನಕ್ಕೆ ಹೋದವನು ಅಲ್ಲಿ ಎದುರಿಸಿದ ಸಮಸ್ಯೆಗಳೇ ಮನೆಯಲ್ಲಿ ರಾದ್ಧಾಂತವಾಗುವುದರ ಚಿತ್ರಣವಿದೆ. 'ಕಾಲಕಣ್ರೋಕಾಲ' ನಾಟಕದಲ್ಲಿ ಬ.ಲ. ಸುರೇಶ ಅವರು ಬೆಳ್ಳಗಿರುವುದೆಲ್ಲ ಹಾಲು ಎಂದು ನಂಬುವ ಯುವಕನ ಕತೆ ಹೇಳಿದ್ದಾರೆ. ರಾಮು ಪುಡಾರಿ ಗುಂಡಣ್ಣನ ಬೋಳೆ ಮಾತುಗಳನ್ನು ನಂಬಿ ತನ್ನ ಬದುಕನ್ನೇ ದುರಂತಕ್ಕೆ ಒಡ್ಡಿಕೊಳ್ಳುವ ಚಿತ್ರಣವಿದೆ.

ಹೀಗೆ ವಿವಿಧ ವಸ್ತುಗಳಿಗೆ ಸಂಬಂಧಿಸಿದಂತೆ ಹವ್ಯಕರು ರಚಿಸಿದ ನಾಟಕಗಳು ಕನ್ನಡ ನಾಟಕ ಸಾಹಿತ್ಯದಲ್ಲಿ ತನ್ನದೇ ಆದ ಛಾಪನ್ನು ಮೂಡಿಸಿವೆ.

### ೩.೩.೩ ಸಣ್ಣಕತೆ

ಸಣ್ಣಕತೆ ಎಂಬ ಸಾಹಿತ್ಯದ ವಿಶಿಷ್ಟ ಪ್ರಕಾರವು ಆರಂಭವಾದುದು ೧೯೦೦ ರಿಂದ ಈಚೆಗೆ. ಕನ್ನಡದಲ್ಲಿ ಕಾದಂಬರಿಯ ತರುವಾಯ ಸಣ್ಣಕತೆಯೇ ಅತ್ಯಂತ ಲೋಕಪ್ರಿಯವಾದ ರೂಪವಾಗಿದೆ. ದಿನಪತ್ರಿಕೆ, ವಾರಪತ್ರಿಕೆ, ವಾಸಪತ್ರಿಕೆ ಹಾಗೂ ಸಂಕಲನಗಳ ಮೂಲಕ ಸಣ್ಣಕಥಾ ಕ್ಷೇತ್ರ ಇಂದು ವ್ಯಾಪಕವಾಗಿ ಬೆಳೆಯುತ್ತಿದೆ. ಈ ಕ್ಷೇತ್ರಕ್ಕೆ ಹವ್ಯಕರ ಕೊಡುಗೆ ಗಣನೀಯವಾದುದು.

ಹವ್ಯಕರಲ್ಲಿ ಪ್ರಥಮವಾಗಿ ಸ್ವತಂತ್ರ ಕಥೆಗಳನ್ನು ಬರೆದ ಕೀರ್ತಿ ಕೊಡಗಿನ ಗೌರಮ್ಮ(೧೯೧೨-೧೯೩೨) ಇವರಿಗೆ ಸಲ್ಲುತ್ತದೆ. ೧೯೩೦ರ ದಶಕದಲ್ಲಿ ಪತ್ರಿಕೆಯಲ್ಲಿ ಬಿಡಿಯಾಗಿ ಪ್ರಕಟವಾದ ಕಥೆಗಳು ಇವರ ಮರಣಾನಂತರ ಸಂಕಲನ ರೂಪದಲ್ಲಿ ಮುದ್ರಣಗೊಂಡವು. ಪ್ರಥಮ ಸಂಕಲನ 'ಕಂಬನಿ' ೧೯೩೯ರಲ್ಲೂ, ದ್ವಿತೀಯ ಸಂಕಲನ 'ಚಿಗುರು' ೧೯೪೨ರಲ್ಲೂ ಪ್ರಕಟವಾದವು. ೧೯೪೭ರಲ್ಲಿ ಮುದ್ರಿತವಾದ 'ಪಳಮೆಗಳು' ಎಂಬ ಒಂದೇ ಕಥಾ ಸಂಕಲನದಿಂದ ಉತ್ತಮ ಕಥೆಗಾರರೆಂದು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸೇಡಿಯಾಪು ಕೃಷ್ಣ ಭಟ್ಟರು ಪ್ರಸಿದ್ಧಿ ಪಡೆದಿದ್ದಾರೆ. ಹೆಸರೇ ಸೂಚಿಸುವಂತೆ ಇವು 'ಪಳಮೆಗಳು', ಎಂದರೆ ಹಳೆಯ ಹೇಳಿಕೆಗಳ ಆಧಾರದಿಂದ ರಚಿತವಾದುವು.

ಕಾವ್ಯಮಯ ಶೈಲಿ ಹಾಗೂ ಸೊಗಸಾದ ನಿರೂಪಣೆ ಸೇಡಿಯಾಪುರವರ 'ಪಳಮೆಗಳು' ಸಂಕಲನದ ಜೀವಾಳವಾಗಿದೆ.

೧೯೪೦-೫೦ ದಶಕದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕ್ರಿಯಾಶೀಲರಾಗಿದ್ದ ದೇವಾಂಗನಾ ಶಾಸ್ತ್ರಿಯವರ ಲಭ್ಯ ಕಥೆಗಳು ಎಂಟು. ಈ ಕಥೆಗಳು ೨೦೦೫ ದಲ್ಲಿ 'ವೇಣೀಸಂಹಾರ' ಎಂಬ ಹೆಸರಿನಲ್ಲಿ ಸಂಕಲನವಾಗಿ ಪ್ರಕಟಗೊಂಡಿದೆ. ಅವರ ಎಲ್ಲ ಕಥೆಗಳು ಸ್ತ್ರೀ ಶೋಷಣೆಯ ವಿಭಿನ್ನ ರೂಪಗಳನ್ನು ಪರಿಚಯಿಸುತ್ತವೆ. ಪುರುಷ ಕೇಂದ್ರಿತ ಏಕಮುಖ ವ್ಯವಸ್ಥೆಯು ಸ್ತ್ರೀಯರು ಅಮಾನವೀಯವಾಗಿರುವುದನ್ನು ಕೇಶಮುಂಡನ, ಬಾಲ್ಯ ವಿವಾಹ, ವೈಧವ್ಯ ಮುಂತಾದ ವೈದಿಕ ಸಮಾಜದ ಸ್ತ್ರೀ ವಿರೋಧಿ ನೀತಿಯು ಸ್ತ್ರೀಯರ ಬದುಕನ್ನು ಘೋರ ಯಾಚನೆಗೆ ಈಡುಮಾಡಿರುವುದನ್ನು ಕಥೆಗಳು ಪರಿಣಾಮಕಾರಿಯಾಗಿ ಚಿತ್ರಿಸಿವೆ.

ಕಡೆಂಗೋಡ್ಲು ಶಂಕರ ಭಟ್ಟರು 'ಗಾಜಿನ ಬಳೆ ಮತ್ತು ಇತರ ಕಥೆಗಳು', 'ಹಿಂದಿನ ಕಥೆಗಳು' ಮತ್ತು 'ದುಡಿಯುವ ಮಕ್ಕಳು' ಎಂಬ ಮೂರು ಕಥಾ ಸಂಕಲನಗಳನ್ನು ಬರೆದಿದ್ದಾರೆ. ಇಷ್ಟು ಕಥೆಗಳಲ್ಲಿ 'ದೊಡ್ಡಣ್ಣ', 'ಅದ್ದಿಟ್ಟು', 'ಹೊಡೆಯುವ ಗಡಿಯಾರ' 'ನನ್ನ ಪತ್ರ' ಮತ್ತು 'ಚೂರಿಯ ಕಥೆ' ಇವು ಅತಿಪ್ರಸಿದ್ಧವಾದ ಕಥೆಗಳು. ಇವರ ಕಥೆಗಳಲ್ಲಿ ಸಮಕಾಲೀನವಾದ ಹಳ್ಳಿಯ ಮತ್ತು ಹಳ್ಳಿಯಿಂದ ಪೇಟೆಗೆ ಬಂದ ಜನರ ಜೀವನ ಚಿತ್ರಣ ಹಾಗೂ ಆಧುನಿಕತೆಯ ಕಡೆಗೆ ಬದಲಾಗುತ್ತಿರುವ ಸಮಾಜದ ಚಿತ್ರಣ ವ್ಯಕ್ತವಾಗಿದೆ. ಕಡೆಂಗೋಡ್ಲು ಶಂಕರ ಭಟ್ಟರ ' ಸಮಗ್ರ ಕಥಾ ಸಂಪುಟ' ವನ್ನು ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದವರು ೨೦೦೪ ರಲ್ಲಿ ಪ್ರಕಟಿಸಿದ್ದಾರೆ.

ಸುಬ್ರಾಯನ್ ರಚಿಸಿದ 'ಕುಟ್ಟಿದೊಣ್ಣಿ' ಸಂಕಲನದ ಎಲ್ಲ ಕಥೆಗಳೂ ಸ್ವಾತಂತ್ರ್ಯ ಪೂರ್ವದ ರಚನೆಗಳಾದರೂ ಇವರ ಸಂಕಲಿತ ಕೃತಿ ೧೯೫೨ರಲ್ಲಿ ಪ್ರಕಟವಾಯಿತು. ಬಡತನ ಮತ್ತು ಹಸಿವಿನ ಸಮಸ್ಯೆಯನ್ನೇ ತನ್ನ ಮೂಲನೆಲೆಯಾಗಿ ಮಾಡಿಕೊಂಡ ಇಲ್ಲಿಯ ಕಥೆಗಳಲ್ಲಿ ಅಪರಾಧ, ಜೀವನಕ್ರಮ ಹಾಗೂ ಬದುಕಿನ ಮೌಲ್ಯಗಳನ್ನು ವಿವೇಚಿಸಿದ್ದಾರೆ. ಕೈಂತಜೆ ಗೋವಿಂದ ಭಟ್ಟರು 'ಕಾಳಿಗೆ ಕಾಣಿಕೆ' ಎಂಬ ಹೆಸರಿನ ಕಥಾ ಸಂಕಲನವನ್ನು ಬರೆದಿದ್ದಾರೆ. 'ಆಕಾಶದೀಪ' ಎಸ್. ಆರ್. ಚಂದ್ರರ ಕಥಾ ಸಂಕಲನ. ಶಕ್ತ ಕಥೆಗಾರರಾದ ಯರ್ಮುಂಜ ರಾಮಚಂದ್ರರ ಕತೆಗಳ ಸಂಕಲನ 'ಚಿಕಿತ್ಸೆಯ ಹುಚ್ಚು

ಮತ್ತು ಇತರ ಕತೆಗಳು' ೧೯೫೫ರಲ್ಲಿ ಪ್ರಕಟವಾಯಿತು. ರಾ.ಮೊ. ವಿಶ್ವಾಮಿತ್ರರ 'ಹಳ್ಳಿಯ ಹಳಬರು' ಕುಂಬಳೆ ಸೀಮೆಯದ್ದೇ ಛಾಪು ಪಡೆದ ವ್ಯಕ್ತಿಗಳ ಒಂದು ವಿಶಿಷ್ಟ ಗೊಂಚಲು. ಮಡಿಯಾಲ ನಾರಾಯಣ ಭಟ್ಟರು 'ಹೃದಯ ಕುಸುಮ' ಮತ್ತು 'ಪೂರ್ಣಿಮಾ' ಎಂಬ ಕಥಾ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಎಸ್. ಎಸ್. ನವಕಾನ ಕಾವ್ಯನಾಮದ ಎನ್.ಶಂಕರ ನಾರಾಯಣ ಭಟ್ಟರು ಅರ್ಥಧಾರಿಗಳಾಗಿ ಪ್ರಸಿದ್ಧರಾಗಿರುವುದಲ್ಲದೆ 'ದೇವರ ಸಾಮ್ರಾಜ್ಯದಲ್ಲಿ', 'ಸೂರ್ಯನೇ ನನಗೆ ಸಾಕ್ಷಿ', 'ಸತ್ಯಮೇಯ ಜಯತೆ' ಎಂಬ ಕಥಾ ಸಂಕಲನಗಳನ್ನು ಬರೆದಿದ್ದಾರೆ.

ಸುಬ್ರಾಯ ಚೊಕ್ಕಾಡಿಯವರು ಬರೆದಿರುವ 'ಬೇರುಗಳು' ಕಥಾ ಸಂಕಲನದಲ್ಲಿ ಎಂಟು ಕತೆಗಳಿವೆ. ೧೯೬೪ ರಿಂದ ೧೯೭೨ ರ ಅವಧಿಯಲ್ಲಿ ಬರೆಯಲ್ಪಟ್ಟ ಈ ಕತೆಗಳು ಸಹಜವಾಗಿ ಆ ಕಾಲದಲ್ಲಿ ಪ್ರವರ್ಧಮಾನವಾಗಿದ್ದ ನವ್ಯ ಚಳವಳಿಯ ಲಕ್ಷಣಗಳನ್ನು ಪ್ರಕಟಿಸುವಂತಿವೆ. ರಾಮಚಂದ್ರ ದೇವ ಅವರ ಮೊದಲ ಕಥಾ ಸಂಗ್ರಹ 'ದಂಗೆಯ ಪ್ರಕರಣ' ೧೯೭೪ರಲ್ಲಿ ಪ್ರಕಟವಾಯಿತು. ಎರಡನೆಯ ಸಂಗ್ರಹ 'ಮೂಗೇಲ ಮತ್ತು ಇತರ ಕಥೆಗಳು' ೧೯೮೫ರಲ್ಲಿ ಪ್ರಕಟಗೊಂಡಿತು. ಕೆ.ವಿ. ತಿರುಮಲೇಶರು ೧೯೮೨ರಲ್ಲಿ 'ನಾಯಕ ಮತ್ತು ಇತರರು', ೧೯೯೦ರಲ್ಲಿ 'ಜಾಗುವಾ ಮತ್ತು ಇತರರು' ಹಾಗೂ ೧೯೯೮ರಲ್ಲಿ 'ಕಳ್ಳಿಗಿಡದ ಹೂ' ಎಂಬ ಮೂರು ಕಥಾ ಸಂಕಲನಗಳನ್ನು ರಚಿಸಿದ್ದಾರೆ. ನಾರಾಯಣ ಕಂಗಿಲ 'ಒಯಸಿಸ್', ಡಾ। ನಾ. ಮೊಗಸಾಲೆ 'ಹಸಿರು ಬಿಸಿಲು', ಜಿ.ಎಸ್. ಉಬರಡ್ಕ 'ಚಿಕ್ಕದೊಂದು ಗಿಳಿಯ ಸಾಕಿ', ಶ್ರೀಕೃಷ್ಣ ಚೊಕ್ಕಾಡಿ 'ನಿರೀಕ್ಷೆ' ಮುಂತಾದ ಕಥಾ ಸಂಕಲನಗಳನ್ನು ರಚಿಸಿದ್ದಾರೆ. ಡಾ। ಜಯಪ್ರಕಾಶ ಮಾವಿನಕುಳಿ 'ಕಾಲ' ಮತ್ತು 'ಮುಖಗಳು' ಎಂಬ ಎರಡು ಕಥಾ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಸರ್ವಾಧಿಕಾರದ ದಬ್ಬಾಳಿಕೆಯ ಹೃದಯಹೀನ ಚಿತ್ರ ಇವರ ಕತೆಗಳ ಅಂತರ್ಯದಲ್ಲಿದೆ. ಮುಳಿಯ ಕೃಷ್ಣಭಟ್ಟರ 'ಪ್ರವಾಹದಲ್ಲಿ ಪ್ರತಿಬಿಂಬ' ಎಂಬ ಕಥಾ ಸಂಕಲನವು ಅವರ ಚೊಚ್ಚಲ ಕೃತಿಯಾಗಿ ಪ್ರಕಟವಾಗಿದೆ. 'ಕಲ್ಯಾಣಿಯ ಕರುಣ ಕಥೆ' ಎಂಬ ನೀಳ್ಗತೆಯನ್ನು ಏಡ್ಸ್ ಜಾಗೃತಿಗಾಗಿ ವೇಣಿಗೋಪಾಲ ಕಾಸರಗೋಡು ಬರೆದಿದ್ದಾರೆ.

'ವಸಂತದ ಹೂವುಗಳು' ಸಂಕಲನದ ಎ.ಪಿ ಮಾಲತಿಯವರು ಮನುಷ್ಯ ವರ್ಗದವರ ನೋವು ನಲಿವುಗಳನ್ನು, ಮನುಷ್ಯನ ಮೃಗೀಯತೆ, ಮಾನವೀಯ ಮುಖಗಳನ್ನು ಕತೆಗಳಲ್ಲಿ ಚೆನ್ನಾಗಿ ಚಿತ್ರಿಸಿದ್ದಾರೆ. ಮನೋರಮಾ ಎಂ. ಭಟ್ 'ಸ್ವಯಂವರ' ಎಂಬ ಕಥಾ ಸಂಕಲನವನ್ನು ಬರೆದಿದ್ದಾರೆ. 'ಗಂಗಾ ಪಾದೇಕಲ್' ಕಳೆದ ಕಾಲು ಶತಮಾನದಲ್ಲಿ ಕನ್ನಡದ ಒಬ್ಬರು ಪ್ರಮುಖ ಕತೆಗಾರ್ತಿಯಾಗಿ, ನಿರಂತರವಾಗಿ ಕತೆಗಳನ್ನು ಬರೆಯುತ್ತಾ ಬಂದಿದ್ದಾರೆ. 'ಪುಲಪೇಡಿ ಮತ್ತು ಇತರ ಕಥೆಗಳು', 'ಹೆಜ್ಜೆ ಮೂಡದ ಹಾದಿಯಲ್ಲಿ', 'ಹೊಸ ಹೆಜ್ಜೆ', 'ವಾಸ್ತವ' 'ಕ್ಷಮಯಾ ಧರಿತ್ರಿ' 'ನೆಲೆ ತಪ್ಪಿದ ಹಕ್ಕಿ', 'ಮನ್ನಣೆಯ ದಾಹ' ಎಂಬ ಏಳು ಕಥಾ ಸಂಕಲನಗಳನ್ನು ಬರೆದಿದ್ದಾರೆ. ಗಂಗಾ ಪಾದೇಕಲ್ ಅವರು ಸ್ತ್ರೀಲೋಕದ ವಿಶಿಷ್ಟ ಸಮಸ್ಯೆಗಳನ್ನು ಕೈಗೆತ್ತಿಕೊಳ್ಳುತ್ತಾರೆ ಮತ್ತು ಅವರ ನಾಯಕಿಯರೆಲ್ಲ ಇತ್ಯಾತ್ಮಕವಾಗಿ ಯೋಚಿಸುವ ಧೃಡನಿಲುವಿನವರು. ಮಧ್ಯಮ ವರ್ಗದ ಆಸೆ, ಆಕಾಂಕ್ಷೆ, ನೋವು, ನಿರಾಸೆಗಳನ್ನು ಕಲಾತ್ಮಕವಾಗಿ ತಮ್ಮ ಕತೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ.

ಸವಿತಾ ಎಸ್ ಭಟ್ ಅಡ್ವಾಯಿ 'ಪುಟ್ಟತ್ತೆ' ಎಂಬ ಕಥಾ ಸಂಕಲನದಿಂದ ಗಮನಾರ್ಹರಾಗಿದ್ದಾರೆ. ಇಲ್ಲಿನ ಕತೆಗಳು ಗ್ರಾಮೀಣ ಬದುಕನ್ನು ಆಪ್ತವಾಗಿ ಸೆರೆ ಹಿಡಿಯುತ್ತವೆ. ವೃತ್ತಿಯಲ್ಲಿ ಅಧ್ಯಾಪಕಿಯಾಗಿರುವ ಲೀಲಾ ಮಣ್ಣಾಲರು 'ಹೊಣೆ ಮತ್ತು ಇತರ ಕತೆಗಳು' ಮತ್ತು 'ತೆರೆ' ಎಂಬ ಕಥಾ ಸಂಕಲನಗಳನ್ನು ರಚಿಸಿದ್ದಾರೆ. ಡಾ। ಮಣಿಮಾಲಿನಿಯವರ 'ಬಾಜಿರ ಕಂಬದ ಒಳಸುತ್ತು' ಕಥಾ ಸಂಕಲನ ೨೦೦೭ರಲ್ಲಿ ಮರಣೋತ್ತರವಾಗಿ ಪ್ರಕಟಗೊಂಡಿದೆ. 'ಉಗ್ರಾಣ ಪಶಸ್ತಿ'ಯನ್ನು ಪಡೆದಿರುವ ಈ ಕೃತಿಯಲ್ಲಿ ಕನ್ನಡದ ಒಂದು ಉಪಭಾಷೆಯಾದ ಹವ್ಯಕದ ಅನೇಕ ಪ್ರಯೋಗಗಳು, ಆ ಭಾಗದ ಸಾಂಸ್ಕೃತಿಕ ಬಿಕ್ಕಟ್ಟುಗಳು, ತಲ್ಲಣಗಳು ಹಾಗೂ ವೈರುಧ್ಯಗಳು ಕಂಡುಬರುತ್ತವೆ. ಅಚ್ಚ ಪ್ರಾದೇಶಿಕತೆಯ ಭಾವ ಮತ್ತು ಭಾಷೆ ಈ ಸಂಕಲದ ವೈಶಿಷ್ಟ್ಯವಾಗಿದೆ.

'ಅಧೋ ಮುಖ' ಮುಖಾಂತರ' ಶ್ರೀಧರ ಬಳಗಾರ, 'ಅಪ್ಪಚ್ಚಿ' ಡಾ। ರಾಜು ಹೆಗಡೆ, 'ಅರ್ಥ', 'ಪ್ರವಾಹ', 'ಸ್ವೀಕಾರ' ಭಾಗೀರಥಿ ಹೆಗಡೆ, 'ಅಲೆದಅಲೆ' ಶಿವರಾಮ ಹೆಗಡೆ ಬಾಳೆಗದ್ದೆ, 'ಇಂಡಾ' ಟಿ.ಎಂ. ರಮೇಶ, 'ಒಂದು ತಗಡಿನ ಚೂರು' ಅಶೋಕ ಹೆಗಡೆ, 'ಕಥಾ ಕುಂಜ' ಗ.ಸು. ಪಟೇಲ ಬರಿಗೆ, 'ಕನ್ನಡಿಯಲ್ಲಿ ಕಂಡಾಗ' 'ಕಳೆದು

ಕೊಂಡದ್ದು' ವಿಜಯಾಶ್ರೀಧರ, 'ಕನ್ನಡಿಯಲಿ ಕರೆನಾಡು' ಜಿ.ಶಂ.ಪರ್ಲ, 'ಕರೆಗೆ ಓಗೊಟ್ಟ ಕಾರ್ಡೀರ್ಲೀಯಾ'ಚಿಂಚ ಹಿಡಿದ ಮೀನು' ಭಾರತೀಸುತ, 'ಕಾವಡಿ' ಬನವಾಸಿ ವೆಂಕಟೇಶ ದೀಕ್ಷಿತ 'ಕುಬ್ಲಾ' ಜಿ.ಎಸ್. ಭಟ್ಟ, 'ಕೊಡಗಿನ ಸುಮಗಳು' ಜಿ.ಟಿ.ನಾರಾಯಣ ರಾವ್, 'ಗುರುವನ ಶೋಕ ಮತ್ತು ಇತರ ಕಥೆಗಳು' ಕಂಜರ್ಪಣಿ ತಿಮ್ಮಪ್ಪಯ್ಯ, 'ಧಾರಾ' ಶ್ರೀಕಂಠ ಪುತ್ತೂರು 'ನಡೆದದ್ದು ನಡೆಯಲಾರದ್ದು' ಶೇಷಗಿರಿ ಮಾವಿನಕುಳಿ, 'ಪಿಶಾಚಿಗೃಹ' ಶಿವರಾಮ ಗಂಗೊಳ್ಳಿ, 'ಬದುಕು' ಪ.ರಾಮಕೃಷ್ಣ ಶಾಸ್ತ್ರಿ, 'ಬಬ್ರುವಾಹನ ಎಂಬ ಇರುವೆ' ಚಿಂತಾಮಣಿ ಕೊಡ್ಲಕೆರೆ, 'ಬಯಲು ಬತ್ತಲು' ನಾ.ಸು ಭರತನಹಳ್ಳಿ, 'ಮಾರಿ ಬಲಿ ಬೀಸಿತ್ತು' ಪಡಾರು ಮಹಾಬಲೇಶ್ವರ ಭಟ್ಟ, 'ಸವಾರಿ' ತಿರುಮಲ ಮಾವಿನಕುಳಿ, 'ಸುತ್ತಲಿನ ಸತ್ಯ' ವಿ.ಟಿ. ಹೆಗಡೆ ಮೊದಲಾದವರು ಸಣ್ಣಕತೆಗಳನ್ನು ರಚಿಸಿದ್ದಾರೆ.

ಡಾ। ಎಲ್. ಆರ್. ಹೆಗಡೆಯವರು ಜಾನಪದ ಕ್ಷೇತ್ರದಲ್ಲಿ ವಿಶಿಷ್ಟವಾದ ಸಾಧನೆಯನ್ನು ಮಾಡಿದ್ದಾರೆ. 'ಅಪೂರ್ವ ಮೃದಂಗ ಮತ್ತು ಇತರ ಕಥೆಗಳು', 'ಅವರಿವರು ಹೇಳಿದ ಕಥೆಗಳು', 'ಉತ್ತರ ಕನ್ನಡದ ಜನಪದ ಕಥೆಗಳು', 'ಒಗಟುಗಳು ಮತ್ತು ಕಥೆಗಳು', 'ಕರ್ನಾಟಕದ ಕರಾವಳಿಯ ಜನಪದ ಕಥೆಗಳು', 'ಕರಾವಳಿಯ ಕಥೆಗಳು', 'ಕುಮಾರಿ ಮರಾಠಿಗಳ ಕಥೆಗಳು', 'ಗಾದೆ ಕಥೆಗಳು', 'ಸಿದ್ಧಿಯರ ಕಥೆಗಳು', 'ಜನಪದ ಭಾರತದ ಕಥೆಗಳು', 'ಜಾನಪದ ಕಥೆಗಳು', 'ಜಾನಪದ ಗಿರಿಜನರ ಕಥೆಗಳು', 'ಜೈನ ಭಾರತದ ಕಥೆಗಳು', 'ನಮ್ಮ ಜನಪದ ಕಥೆಗಳು', 'ಮಲೆನಾಡಿನ ಸೆರಗಿನ ಕಥೆಗಳು', 'ಸಣ್ಣ ಸೂಸ ಹೇಳಿದ ಕಥೆಗಳು', 'ಹಕ್ಕಿ ನರಸಣ್ಣನ ಕಥೆಗಳು' 'ಹೊನ್ನಮ್ಮನ ಮನೆಯ ಕಥೆಗಳು' ಮುಂತಾದ ಜಾನಪದಕ್ಕೆ ಸಂಬಂಧಿಸಿದ ಕಥೆಗಳನ್ನು ಹೆಗಡೆಯವರು ಸಂಪಾದಿಸಿದ್ದಾರೆ.

ಕನ್ನಡ ಸಣ್ಣ ಕಥಾ ಕ್ಷೇತ್ರಕ್ಕೆ ಹವ್ಯಕರು ಅಮೂಲ್ಯವಾದ ಕೊಡುಗೆಯನ್ನು ಕೊಟ್ಟಿದ್ದಾರೆ. ಆ ಕುರಿತು ವಿವರವಾದ ಅಧ್ಯಯನವನ್ನು ಮುಂದಿನ ಅಧ್ಯಾಯಗಳಲ್ಲಿ ನಡೆಸಲಾಗುವುದು.

### ೩.೩.೪ ಕಾದಂಬರಿ

ಕಾದಂಬರಿ ಎಲ್ಲ ಆಧುನಿಕ ಸಾಹಿತ್ಯ ಪ್ರಕಾರಗಳಂತೆ ಕನ್ನಡದಲ್ಲಿಯೂ ಅತ್ಯಂತ ಜನಪ್ರಿಯ ಸಾಹಿತ್ಯ ಪ್ರಕಾರವಾಗಿ ಬೆಳೆದುಬಂದಿದೆ. ಈ ಸಾಹಿತ್ಯ ಪ್ರಕಾರ ಸಾಮಾನ್ಯ ಜನರ ಆಶೋತ್ತರಗಳನ್ನು, ಅಭಿರುಚಿಗಳನ್ನು, ಸಂಸ್ಕೃತಿಯ ಮಟ್ಟವನ್ನು ವಿವರವಾಗಿ ಪ್ರತಿಬಿಂಬಿಸುವ ಮಾಧ್ಯಮವಾಗಿದೆ. ಹವ್ಯಕ ಸಮುದಾಯದವರು ನಾಡಿನ ಇತರ ಸಮುದಾಯದವರಂತೆ ಕಾದಂಬರಿ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡು ವಿಶಿಷ್ಟವಾದ ಕಾದಂಬರಿಗಳನ್ನು ರಚಿಸಿದ್ದಾರೆ. ಕಾದಂಬರಿ ಕ್ಷೇತ್ರಕ್ಕೆ ಹವ್ಯಕ ಮಹಿಳೆಯರೂ ತಮ್ಮ ಅಪೂರ್ವವಾದ ಕೊಡುಗೆಯನ್ನು ನೀಡಿದ್ದಾರೆ.

ಮುಳಿಯ ತಿಮ್ಮಪ್ಪಯ್ಯನವರು ಬರೆದ 'ವೀರಬಂಕೆಯ' ಒಂದು ಐತಿಹಾಸಿಕ ಕಾದಂಬರಿ. ವೀರಬಂಕೆಯ ನೃಪತುಂಗನ ಕುಮಾರನಾದ ಕೃಷ್ಣನ ಸಾಮಂತರಾಜ ಬಂಕಾಪುರ (ಬಂಕೆಯಪುರ)ದ ಒಡೆಯ. ಇವನ ಸಾಹಸ ಗಾಥೆಯೇ ಈ ಕಾದಂಬರಿಯ ವಸ್ತು. ಈ ಕಾದಂಬರಿಯಲ್ಲಿ ಹಿಂದೂ ರಾಷ್ಟ್ರಕೂಟ ಸಾಮ್ರಾಜ್ಯದ ಸ್ಥಿತಿಗತಿಗಳೂ, ಆ ಕಾಲದ ಜನರ ನಡತೆಗಳೂ ಚಿತ್ರಿತವಾಗಿವೆ. ಅಲ್ಲಲ್ಲಿ ಶಾಸನಾಧಾರಗಳನ್ನು ಅಡಿ ಟಿಪ್ಪಣಿಯಲ್ಲಿ ಕೊಟ್ಟು ಇದರ ಚಾರಿತ್ರಿಕತೆಯನ್ನು ಸ್ಫುಟಗೊಳಿಸುತ್ತಾ ಈ ಕಾದಂಬರಿ ಸಾಗುತ್ತದೆ. ತಿಮ್ಮಪ್ಪಯ್ಯನವರ ಕಲ್ಪನಾ ಚಮತ್ಕಾರಗಳನ್ನು ಕಾಣುವುದರೊಂದಿಗೆ ಅವರಿಗೆ ಸಹಜವಾದ ದೇಸಿಯ ಸೊಗಸನ್ನು ಇದರಲ್ಲಿ ಕಾಣಬಹುದು. ತಿಮ್ಮಪ್ಪಯ್ಯನವರ ಇನ್ನೊಂದು ಕಾದಂಬರಿ 'ಪಶ್ಚಾತ್ತಾಪ'ವು ೧೯೩೪ರಲ್ಲಿ ಪ್ರಕಟವಾಯಿತು. ಈ ಕಾದಂಬರಿಯಲ್ಲಿ ಹವೀಕರಲ್ಲಿ ಬಳಕೆಯಲ್ಲಿರುವ ಎಷ್ಟೋ ಮನೆ ಮಾತುಗಳು ಸೇರಿಕೊಂಡಿವೆ. ನಾಗಪ್ಪಯ್ಯನಿಗೂ ಕೋರ್ಟಿನ ಪೇದೆ ಸಿದ್ದಯ್ಯನಿಗೂ ಆಗುವ ಸಂಭಾಷಣೆ, ಮಂಗಳೂರಲ್ಲಿ ನಾಗಪ್ಪಯ್ಯನು ಮಂಗನಂತಾದ ಸನ್ನಿವೇಶ ಇತ್ಯಾದಿಗಳು ಸ್ವಾರಸ್ಯವಾಗಿ ಮೂಡಿಬಂದಿವೆ.

ಜಿ.ಬಿ. ಜೋಶಿ, ದೇವುಡು, ವಿ.ಎಂ. ಇನಾಮದಾರ, ಅನಕೃ, ಶ್ರೀರಂಗ ಮುಂತಾದವರು ಕಾದಂಬರಿಗಳನ್ನು ಬರೆಯುತ್ತಿದ್ದ ನವೋದಯ ಕಾಲದ ಮೊದಲ ಘಟ್ಟದಲ್ಲಿ ಕಡೆಂಗೋಡ್ಲು ಶಂಕರ ಭಟ್ಟರು ಕಾದಂಬರಿ ರಚನೆಗೆ ತೊಡಗಿದರು. ಶಂಕರ ಭಟ್ಟರ ಮೊದಲ ಕಾದಂಬರಿ 'ಧೂಮಕೇತು' ೧೯೩೭ರಲ್ಲಿ ಪ್ರಕಟವಾಯಿತು. ದೇವತಾ

ಮನುಷ್ಯ ೧೯೪೬ರಲ್ಲೂ 'ಲೋಕದ ಕಣ್ಣು' ೧೯೩೬ರಲ್ಲೂ ಪ್ರಕಟವಾಯಿತು. 'ಧೂಮಕೇತು' ಕಾದಂಬರಿ ನೇರವಾಗಿ ನೀತಿಯನ್ನು ಉಪದೇಶ ಮಾಡದೇ ಹೋದರೂ ನೈತಿಕ ಉದ್ದೇಶವೊಂದು ಕಾದಂಬರಿಯ ಹಿಂದಿದೆ ಎಂಬುದು ಸ್ಪಷ್ಟ. ವಸ್ತು ಸಮಕಾಲೀನ ಸಮಾಜದ್ದು ಎನ್ನಿಸಿದರೂ- ಇಲ್ಲಿನ ಎಲ್ಲ ಪಾತ್ರಗಳೂ ಕಾದಂಬರಿಕಾರರ ಉದ್ದೇಶಕ್ಕೆ ಬದ್ಧವಾಗಿರುವುದರಿಂದ ಮಾದರಿಗಳಾಗಿಬಿಡುತ್ತವೆ. 'ಧೂಮಕೇತು' ಸಂವಿಧಾನ ಕಥಾನಕಗಳ ದೃಷ್ಟಿಯಿಂದಲೂ ದಕ್ಷಿಣ ಕನ್ನಡದ ದೇಸಿ ನುಡಿಯ ಬೆಡಗಿನೊಂದಿಗೆ ಹಳಗನ್ನಡ ಸಂಸ್ಕೃತಗಳ ಬಿಗುವನ್ನೂ, ಯಕ್ಷಗಾನದ ಸೊಗಡನ್ನೂ ಒಳಗೊಂಡ ಶೈಲಿಯಿಂದಲೂ ಗಮನ ಸೆಳೆಯುತ್ತದೆ. ಮಡಿಯಾಲ ನಾರಾಯಣಭಟ್ಟರು ಬರೆದ 'ಒಡಹುಟ್ಟಿದವರು' ಕಾದಂಬರಿಯಲ್ಲಿ ಕೌಟುಂಬಿಕ ಜೀವನದಲ್ಲಿ ಸಹೋದರರ ಸಂಬಂಧ ಬಾಂಧವ್ಯಗಳಲ್ಲಿ ಉಂಟಾಗುವ ವೈಷಮ್ಯ, ಸಾಮರಸ್ಯಗಳ ಸುಂದರ ಚಿತ್ರಣ ಮೂಡಿಬಂದಿದೆ. 'ಇಂದುಮತಿ' ಎಂಬುದು ಅವರ ಇನ್ನೊಂದು ಕಾದಂಬರಿ.

ದಿ.ನಾರಾಯಣರಾಯರು 'ಭಾರತೀಸುತ' ಎಂಬ ಕಾವ್ಯನಾಮದಿಂದ ಪೌರಾಣಿಕ, ಚಾರಿತ್ರಿಕ, ಸಾಮಾಜಿಕ ಕಾದಂಬರಿಗಳನ್ನು ಬರೆದು ಪ್ರಸಿದ್ಧರಾಗಿದ್ದಾರೆ. 'ಅಮಾತ್ಯ ನಂದಿನಿ', 'ಅವಳದಾರಿ', 'ಇರಾನಿನ ವೀರರು', 'ಇಳಿದು ಬಾತಾಯಿ', 'ಎಡಕಲ್ಲು ಗುಡ್ಡದ ಮೇಲೆ', 'ಕಾಲಯಾನ', 'ಕೊಳಲಿನ ಕರೆ', 'ಕಂದನನ್ನು ಕದ್ದವನು', 'ಗಿರಿಕನ್ನಿಕೆ', 'ಗಿಳಿಯು ಪಂಜರದೊಳಿಲ್ಲ', 'ಚಿಗುರು ಹಾಸಿಗೆ', 'ಜ್ಞಾನ ಯಾತ್ರಿಕ', 'ತಲೆ ತಿರುಕ ಯೋಧ'(ಅನುವಾದಿತ), 'ದೊರೆ ಮಗಳು', 'ನನ್ನ ಅತ್ತಿಗೆ', 'ಪೆಟ್ರೆಯಾ', 'ಬಯಲು ದಾರಿ', 'ಬೆಳಕಿನೆಡೆಗೆ', 'ಬೆಳ್ಳಿ ಮೂಡಿತು', 'ಬಂಗಾರ ಕುಲುಮೆ', 'ಬೆಂಕಿಯ ಮಳೆ', 'ಮನದನ್ನೆ ಮಾಲತಿ', 'ವಕ್ರರೇಖೆ'(ಭಾಗಶಃ ಹವಿಗನ್ನಡ), 'ವಲ್ಮೀಕ', 'ವೈದ್ಯನ ಮಗಳು', 'ಶತದ್ರು ದಂಡೆಗೆ', 'ಸಾಧನ ಕುಟೀರ', 'ಸಂತಾನ ಭಿಕ್ಷೆ', ' ಸ್ವಾಧೀನ ಜೀವನ', 'ಹಾವಿನಹುತ್ತ', 'ಹುಲಿಬೋನು', 'ಹುಲಿಯ ಹಾಲಿನ ಮೇವು'. ಈ ಕಾದಂಬರಿಗಳಲ್ಲಿ 'ಎಡಕಲ್ಲು ಗುಡ್ಡದ ಮೇಲೆ'; 'ಗಿರಿಕನ್ನಿಕೆ', 'ಬಯಲುದಾರಿ', 'ಹುಲಿಯ ಹಾಲಿನ ಮೇವು' ಕೃತಿಗಳು ಚಲನಚಿತ್ರವಾಗಿ ಪ್ರಸಿದ್ಧಿಯನ್ನು ಪಡೆದಿವೆ.

ರಾ.ಮೊ. ವಿಶ್ವಾಮಿತ್ರ ಎಂಬುದು ರಾಮಮೊಳೆಯಾರರ ಕಾವ್ಯನಾಮ. 'ವಿವೇಕ ಸಾಹಿತ್ಯ ಮಾಲೆ'ಯ ಮೂಲಕ ಅವರು ಹಲವು ಕೃತಿಗಳನ್ನು ಪ್ರಕಟಿಸಿದ್ದಾರೆ. ಕಾದಂಬರಿ

ಮತ್ತು ಶಿಶು ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. 'ಯಮದೂತ', 'ವಿಶ್ವಪ್ರೇಮ', 'ತಿಳಿವಿನ ಹಾದಿ', ' ಬೇನೆಯ ಬಾಳ್ವೆ', 'ತ್ಯಾಗಮಯಿ', 'ರಕ್ತದಾನ', 'ರತ್ನಾಕರಸಿದ್ಧ', 'ಅಪ್ಪಾಜಿ', 'ಸಾವಿರದ ಸಂಪತ್ತು', 'ಅಭಯಾರಾಣಿ', 'ಸಾಣೂರ ರಾಯರು', 'ವೈಶಾಲಿನೀ' ಮುಂತಾದ ಕಾದಂಬರಿಗಳನ್ನು ಬರೆದಿದ್ದಾರೆ. ರಾ.ಮೊ. ವಿಶ್ವಾಮಿತ್ರರ 'ಅಭಯರಾಣಿ' ಉಳ್ಳಾಲದ ರಾಣಿ ಅಭಯದೇವಿಯನ್ನು ಕುರಿತ ಸುಂದರವಾದ ಕೃತಿ. ಹಳ್ಳಿಯ ಬದುಕು, ಪ್ರಾಮಾಣಿಕ ದುಡಿಮೆ, ವಿದ್ಯಾವಂತಿಕೆ, ದೇಶಪ್ರೀತಿ ಮತ್ತು ಸರಳತೆಗಳನ್ನು ಮನುಷ್ಯನ ಬಾಳು ಹೊಂದಿರಬೇಕು. ಅಲ್ಲಿಯ ಸಂಕೀರ್ಣ ಸಮಸ್ಯೆ ಹಾಗೂ ಮಾನವ ತನ್ನ ಸಣ್ಣತನಗಳಿಂದ ತಂದುಕೊಳ್ಳುವ ವಿಷಮತೆಗಳಿಗೆ ಗಾಂಧಿಯುಗದ ಮೌಲ್ಯಗಳು ಪರಿಹಾರವಾಗಬಲ್ಲವು ಎಂಬ ನಂಬಿಕೆ ರಾ.ಮೊ. ವಿಶ್ವಾಮಿತ್ರರ ಕಾದಂಬರಿಗಳಲ್ಲಿ ಕಂಡುಬರುತ್ತವೆ.

ಎಂ. ಎನ್.ಭಟ್ಟರು(ಮೊಳೆಯಾರು ನಾರಾಯಣ ಭಟ್ಟ) 'ಭ್ರಾಂತಿಯ ಸುಳಿಯಲ್ಲಿ', 'ಮಣ್ಣನಂಜು', 'ಕುರುಡುಕಾಸು', ಎಂಬ ಕಾದಂಬರಿಗಳನ್ನು ರಚಿಸಿದ್ದಾರೆ. ಎಂ. ಎನ್ ಭಟ್ಟರ ಕಾದಂಬರಿಗಳಲ್ಲಿ ಗಡಿನಾಡಿನ ಹಳ್ಳಿಯ ವಿವರಗಳು ಹೆಚ್ಚು ಶಕ್ತಿಶಾಲಿಯಾಗಿ ಮೂಡಿಬಂದಿವೆ. ಕೆ.ಎಸ್.ಭಟ್ಟ ಬೇಳ ಇವರ 'ಚಂದ್ರಶೇಖರ' ಕಾದಂಬರಿಯು ಕೂಡಾ ಕುಂಬಳೆ ಸೀಮೆಯ ಪರಿಸರ, ಗ್ರಾಮ ವಿಷಮತೆ ಗಾಂಧೀ ಮೌಲ್ಯಗಳು, ಇಪ್ಪತ್ತನೆಯ ಶತಮಾನದ ಪರಿವರ್ತನೆಗಳಿಗೆ ತೆರೆಯುವಿಕೆ ಮುಂತಾದ ಅಂಶಗಳನ್ನು ಚರ್ಚಿಸುತ್ತವೆ. ಶ್ರೀಮಿತ್ತೂರು ಕಾವ್ಯನಾಮದಿಂದ ಎಂ. ವೆಂಕಟರಮಣ ಭಟ್ ಅವರು 'ಉತ್ತರಾಯಣ', 'ಮಧುರ ಬಂಧನ', 'ಕೈದಿಯ ಕೊನೆಯ ಊರು' 'ಕರಿನೆರಳು' ಎಂಬ ಕಾದಂಬರಿಗಳನ್ನು ಬರೆದಿದ್ದಾರೆ. ಗಣಪತಿ ಮೊಳೆಯಾರರು 'ಪೂರ್ವಪುಣ್ಯ' ಮತ್ತು 'ಪುರಸ್ಕಾರ' ಎಂಬ ಸ್ವತಂತ್ರ ಸಾಮಾಜಿಕ ಕಾದಂಬರಿಯನ್ನು ರಚಿಸಿದ್ದಾರೆ. 'ರುಂಡವಿಲ್ಲದ ಮುಂಡ', 'ಸಿಂಗರದ ಉಂಗುರ', 'ಕರವಸ್ತ್ರ' ಇವುಗಳು ಕೀರಿಕ್ಕಾಡು ಮಾಸ್ತರ ವಿಷ್ಣು ಭಟ್ಟರ ಪತ್ತೇದಾರಿ ಕಾದಂಬರಿಗಳು. ಮುಳಿಯ ಶಂಕರ ಭಟ್ಟರು ಬರೆದ ಕಾದಂಬರಿ 'ಚಾಣಕ್ಯತಂತ್ರ'.

ಡಾ। ನಾ. ಮೊಗಸಾಲೆಯವರು 'ಉಪ್ಪು', 'ಅರ್ಥ', 'ಹದ್ದು', 'ದೃಷ್ಟಿ', 'ಮಣ್ಣಿನ ಮಕ್ಕಳು', 'ಅನಂತ', 'ಕನಸಿನ ಬಳ್ಳಿ', 'ನನ್ನದಲ್ಲದ್ದು', 'ಕ್ಷಾಮ' 'ತೊಟ್ಟಿ' ಮತ್ತು

‘ಉಲ್ಲಂಘನೆ’ ಮುಂತಾದ ಕಾದಂಬರಿಗಳನ್ನು ರಚಿಸಿದ್ದಾರೆ. ಡಾ। ತಾಳ್ತಜೆ ವಸಂತಕುಮಾರರು ‘ಮರೀಚಿಕೆ’ ಕಾದಂಬರಿ ಬರೆದಿದ್ದಾರೆ. ವಿಚಿತ್ರ ಯೇತಡ್ಕ ಬರೆದ ಕಾದಂಬರಿ ‘ಪರಿಮಳದ ಹಿಂದೆ’, ಟಿ.ಎಂ. ಸುಬ್ಬರಾಯ ‘ಸೇತುಬಂಧ’, ಟಿ. ಮಹಾಬಲೇಶ್ವರ ಭಟ್ಟ ‘ಅಣ್ಣತಂಗಿ’, ಮಾಂಬಾಡಿ ವೆಂಕಟರಮಣ ಭಟ್ಟ ‘ಸಾಮ್ರಾಜ್ಯ ಶಿಲ್ಪಿ’, ವನಮಾಲಾ ಕೇಶವ ಭಟ್ಟ ‘ಬದುಕಿನ ಚತುರೆ’, ಎಂ. ಕೇಶವ ಭಟ್ಟರು ‘ಸಮನ್ವಯ’ ಕಾದಂಬರಿಗಳನ್ನು ರಚಿಸಿದ್ದಾರೆ. ಮುಳಿಯ ಕೃಷ್ಣ ಭಟ್ಟರು ಬರೆದ ‘ಹುಚ್ಚುಹೊಳೆ’ ಪ್ರಾದೇಶಿಕತೆಯ ಸೊಗಸಿನಿಂದ ಕೂಡಿದೆ. ಬಡೆಕ್ಕಿಲ ಕೃಷ್ಣ ಭಟ್ಟರು ‘ಅರಿಕೇಸರಿ’, ‘ವಿಷ ವರ್ತುಲ’, ‘ಸೋತು ಗೆದ್ದವಳು’ ಮುಂತಾದ ಕಾದಂಬರಿಗಳನ್ನು ರಚಿಸಿದ್ದಾರೆ.

‘ಸಂತೆಮನೆ’ ಸುಬ್ರಾಯ ಚೊಕ್ಕಾಡಿಯವರ ಏಕೈಕ ಪ್ರಕಟಿತ ಕಾದಂಬರಿ. ಕೆ.ವಿ ತಿರುಮಲೇಶರು ‘ಆರೋಪ’, ‘ಅನೇಕ’, ‘ತರಂಗಾಂತರ’, ‘ಮುಸುಗು’ ಎಂಬ ಕಾದಂಬರಿಗಳನ್ನು ರಚಿಸಿದ್ದಾರೆ. ‘ಆಹುತಿ’, ‘ಕಲ್ಯಾಣಿಯ ಕರುಣಕಥೆ’, ‘ಬಯಲಾಟ’ ವೇಣಿಗೋಪಾಲ ಕಾಸರಗೋಡು ಅವರು ರಚಿಸಿದ ಕಾದಂಬರಿಗಳು. ಜಯಪ್ರಕಾಶ ಮಾವಿನಕುಳಿ ‘ಅಂತರ’ ಕಾದಂಬರಿಯನ್ನು ರಚಿಸಿದ್ದಾರೆ. ನಾರಾಯಣ ಕಂಗಿಲರು ‘ಬಹುರೂಪಿ’ ಎಂಬ ಕಾದಂಬರಿ ಬರೆದಿದ್ದಾರೆ.

ಎಸ್. ಚಂದ್ರಶೇಖರ ಚೊಕ್ಕಾಡಿಯವರು ‘ಅರಣ್ಯಕಾಂಡ’, ‘ಸಮರ–ತಂತ್ರ ಮತ್ತು ಪ್ರದಕ್ಷಿಣೆ’, ‘ದುರಂತ’, ‘ಸೂರ್ಯಗ್ರಹಣ’, ‘ಡಾಮರು ಮತ್ತು ನೆರಳು’, ‘ಕ್ಷಕಿರಣ’, ‘ಶಿಲಾಮಯಿ’ ಮತ್ತು ‘ಅಲ್ಲಿ ಸಲ್ಲದವರು’ ಕಾದಂಬರಿಗಳನ್ನು ಬರೆದಿದ್ದಾರೆ. ಅವರ ಕಾದಂಬರಿಗಳು ಸುಲಲಿತವಾಗಿ ಓದಿಸಿಕೊಂಡು ಹೋಗುತ್ತವೆ ಹಾಗೂ ಮನೋರಂಜನೆ ನೀಡುತ್ತವೆ. ಅವರ ಕಾದಂಬರಿಗಳಲ್ಲಿ ವೈವಿಧ್ಯತೆ ಇದೆ. ‘ತರಂಗ’ ಸಾಪ್ತಾಹಿಕದಲ್ಲಿ ಬಹುಮಾನ ಗಿಟ್ಟಿಸಿದ ‘ಅರಣ್ಯಕಾಂಡ’ ಅರಣ್ಯ ಸಂರಕ್ಷಣೆಯ ಸಾಮಾಜಿಕ ಕಳಕಳಿಯನ್ನು ಪ್ರತಿಫಲಿಸುತ್ತದೆ. ಚೊಕ್ಕಾಡಿಯವರ ‘ದುರಂತ’ ಕಾದಂಬರಿ ಕೂಜುಮಲೆ ಕೆಂಪುಹರಳು ಲೂಟಿ ಪ್ರಸಂಗದ ಛಾಯಾನುವರ್ತಿಯಾಗಿ ನಿಸರ್ಗ ಪ್ರೇಮವನ್ನೂ, ಪ್ರಾಕೃತಿಕ ಸಂಪತ್ತಿನ ಲೂಟಿಯಿಂದ ಮನುಕುಲಕ್ಕೆ ಸಂಭವಿಸಬಹುದಾದ ದುರಂತದ ಎಚ್ಚರಿಕೆ ಗಂಟೆಯನ್ನೂ ಅನುರಣಿಸುತ್ತ ಸಾಗುವ ಕುತೂಹಲಕಾರಿ ಕಥನ.

ಬ.ಲ.ಸುರೇಶ ಅವರು ಐದು ಕಾದಂಬರಿಗಳನ್ನು ಬರೆದಿದ್ದಾರೆ. 'ಮರಳು ದಿಬ್ಬದ ಮೇಲೆ', 'ಶುಭೋದಯ' ಮತ್ತು 'ವಿದ್ರೂಪಕಾಮನೆ' ಇವರ ಸಾಮಾಜಿಕ ಕಾದಂಬರಿ. ಬರುತ್ತಿದ್ದಾನೆ 'ಯುಗಪುರುಷ' ಒಂದು ಸಾಹಸಮಯ ಕಾದಂಬರಿ. 'ಪ್ರಕ್ಷುಬ್ಧ' ನಿಗೂಢ ಕಾದಂಬರಿ 'ಮರಳು ದಿಬ್ಬದ ಮೇಲೆ' ಕನ್ನಡಕ್ಕೆ ಹೊಸದೆನ್ನಬಹುದಾದ ಕಥಾ ವಸ್ತುವನ್ನು ಹೊಂದಿರುವ ಕೃತಿ. ಸುರೇಶ ಅವರು ಕೆಲ ವರುಷ ಮಿಲಿಟರಿಯಲ್ಲಿದ್ದವರು. ಅಲ್ಲಿಯ ಬದುಕನ್ನು ಕಂಡು ಅನುಭವಿಸಿದವರು. ತಮ್ಮ ಅನುಭವಕ್ಕೆ ಕಾದಂಬರಿಯ ರೂಪವನ್ನು ನೀಡಿದ್ದಾರೆ. ಬರುತ್ತಿದ್ದಾನೆ ಯುಗ ಪುರುಷ ಕಾದಂಬರಿಯಲ್ಲಿ ಸೇಠ್‌ಗಿಂತಲೂ ಅವನನ್ನು ಬಲಿ ತೆಗೆದು ಕೊಳ್ಳುವ ನಾಯಕನ ಜೀವನ ಚಿತ್ರಣ ಕುತೂಹಲಕರವಾಗಿದೆ. ಭ್ರಷ್ಟಾಚಾರದ ಆಗರಗಳಾಗಿ ಪರಿವರ್ತನೆ ಹೊಂದುತ್ತಿರುವ ನಮ್ಮ ನಗರಗಳು, ಸಾಮಾಜಿಕ, ರಾಜಕೀಯ ವ್ಯವಸ್ಥೆ ಹೇಗೆ ನಮ್ಮ ತರುಣರನ್ನು ನಕ್ಸಲೈಟ್‌ಗಳನ್ನಾಗಿ ಉಗ್ರವಾದಿಗಳನ್ನಾಗಿ ಪರಿವರ್ತಿಸುತ್ತಿದೆ ಎಂಬುದಕ್ಕೆ ಈ ಕಾದಂಬರಿ ಒಂದು ಉದಾಹಣೆಯಾಗಬಲ್ಲದು.

ಶ್ರೀಕಂಠ ಪುತ್ತೂರು 'ದೇವರ ಸಾಮ್ರಾಜ್ಯ', 'ಹೊಸ ಸಮಯ' ಮತ್ತು 'ಪಯಣ' ಕಾದಂಬರಿಗಳನ್ನು ಬರೆದಿದ್ದಾರೆ. ಸ್ವಾತಂತ್ರ್ಯಪೂರ್ವ ಬ್ರಾಹ್ಮಣ ಸಮಾಜ ಎದುರಿಸುತ್ತಿದ್ದ ಆರ್ಥಿಕ ಏರುಪೇರು, ಸ್ವಜಾತಿ ಬಾಂಧವರೊಳಗಿನ ಅಸೂಯಾಪರತೆ ದೃಢಮನಸ್ಸೊಂದು ಬದುಕನ್ನು ನಿಭಾಯಿಸಿದ ಬಗೆಯನ್ನು 'ಪಯಣ' ಕಾದಂಬರಿ ಚಿತ್ರಿಸುತ್ತದೆ. ರಾಧಾಕೃಷ್ಣ ಕಲ್ಚಾರರ 'ಕೂಡುಮನೆ' ಕಾದಂಬರಿ ಅವಿಭಕ್ತ ಕುಟುಂಬವೊಂದು ವಿಘಟನೆಗೊಂಡ ಮೇಲೂ ಕಾಲಾಂತರದಲ್ಲಿ ಪುನಃ ಕೂಡು ಮನೆಯಾಗಬೇಕೆಂಬ ಆಶಯವನ್ನು ಹೊಂದಿದೆ. ಎ.ಪಿ.ಮಾಲತಿಯವರು ಕಾದಂಬರಿ ಕ್ಷೇತ್ರದಲ್ಲಿ ವ್ಯಾಪಕವಾದ ಕೃಷಿ ಮಾಡಿದ್ದಾರೆ. ಎ.ಪಿ.ಮಾಲತಿಯವರು 'ಅರ್ಧಾಂಗಿ', 'ಆಘಾತ', 'ಅನಿಶ್ಚಯ', 'ಅತೃಪ್ತೆ', 'ಅಲೋಕ', 'ಹೊಸಹೆಜ್ಜೆ', 'ಮಿನುಗದಚುಕ್ಕೆ', 'ಸರಿದತೆರೆ', 'ಬದಲಾಗದವರು', 'ದೇವ', 'ಅಂಜನಾ', 'ತಿರುಗಿದ ಚಕ್ರ', 'ಪುನರ್ಮಿಲನ', 'ನೂಪುರಗಾನ', 'ಸೋಲಿನಲ್ಲಿ ಗೆಲುವು', 'ಕಾಡು ಕರೆಯಿತು', 'ವಕ್ರರೇಖೆ', 'ಮಂದಾರ', 'ಖಾಲಿಮನೆ', 'ಪುಣ್ಯದ ಎಣ್ಣೆ' ಮುಂತಾದ ಕಾದಂಬರಿಗಳನ್ನು ಬರೆದಿದ್ದಾರೆ. ಮಾಲತಿಯವರ 'ಆಘಾತ' 'ಅರ್ಧಾಂಗಿ', 'ಅತೃಪ್ತ' ಕಾದಂಬರಿಗಳಲ್ಲಿ ಮನಃಶಾಸ್ತ್ರೀಯ ಚಿಂತನೆ ಕಂಡುಬರುತ್ತದೆ.

'ದೇವ' ವಿಶಿಷ್ಟ ಸಮಸ್ಯೆಯೊಂದರ ಚಿತ್ರಣ ನೀಡುವ ಕಾದಂಬರಿ. ಗುಪ್ತವಾಗಿದ್ದ ವಿಚಾರವೊಂದು ಬಯಲಾದಾಗ ಕಾದಂಬರಿಯ ನಾಯಕ 'ದೇವ' ಅನುಭವಿಸುವ ಮಾನಸಿಕ ತೊಳಲಾಟದ ಚಿತ್ರಣ ಸಹಜವಾಗಿ ಮೂಡಿ ಬಂದಿದೆ. ಮೂಢನಂಬಿಕೆ, ಅಂಧಕಾರಗಳಿಂದ ತುಂಬಿದ ಗ್ರಾಮಸ್ಥ ಜನರನ್ನು ಶೋಷಿಸುವ ರೀತಿಯನ್ನು ವಿಶ್ಲೇಷಿಸುತ್ತ, ಅಲ್ಲಿ ಆಗಬೇಕಾದ ಬದಲಾವಣೆಯ ಅನಿವಾರ್ಯತೆಯನ್ನು 'ಬದಲಾಗದವರು' ಕಾದಂಬರಿ ಚಿತ್ರಿಸುತ್ತದೆ. ಹಳ್ಳಿಯ ಪ್ರತಿಯೊಬ್ಬನೂ ಸಾಕ್ಷರತೆಯನ್ನು ಪಡೆಯದೆ ಜನರ ಜೀವನ ರೀತಿ ಸುಧಾರಣೆಯಾಗದು, ಹಳ್ಳಿಯವರಲ್ಲಿದ್ದ ಅಜ್ಞಾನವನ್ನು ಹೊಡೆದೋಡಿಸಲು ವೈಜ್ಞಾನಿಕ, ವೈಚಾರಿಕ ಮನೋಭಾವವನ್ನು ಬೆಳೆಸಲು ಪ್ರತಿಯೊಬ್ಬರೂ ಸಾಕ್ಷರರಾಗಬೇಕು ಎಂಬುದಾಗಿ ಕಾದಂಬರಿಯಲ್ಲಿ ಸಾಕ್ಷರತೆಯ ಮಹತ್ತ್ವವನ್ನು ಲೇಖಕರು ತಿಳಿಸಿದ್ದಾರೆ.

'ನೂಪುರಗಾನ' ಕಾದಂಬರಿಯಲ್ಲಿ ನಾಟ್ಯವೇ ಜೀವನದ ಉಸಿರು ಎಂಬಂತೆ ಕಂಡುಬರುವ ಗಾಯತ್ರಿಯ ಜೀವಕ್ಕೆ ಜೀವ ತುಂಬುವ ನಾಟ್ಯಕಲೆಯ ಮುಂದೆ ಗಂಡು ಸೋಲನ್ನು ಅನುಭವಿಸುವ ಚಿತ್ರಣವಿದೆ. ವೈವಾಹಿಕ ಜೀವನದಿಂದ ಸ್ತ್ರೀ ಸ್ವಾತಂತ್ರ್ಯವನ್ನು ಕಳೆದುಕೊಂಡ ಹೆಣ್ಣೆ, ತಾನು ಕಲಿತ ವಿದ್ಯೆಗೆ ಗೌರವ ಸಿಗದೇ ಹೋದಾಗ ಪ್ರತಿಭಟನೆಯನ್ನು ತೋರುವ ದೃಶ್ಯ ಕಂಡುಬರುತ್ತದೆ. 'ಪುನರ್‌ಮಿಲನ' ಕಾದಂಬರಿಯಲ್ಲಿ ಹೆಣ್ಣು ಮಾಡಿದ ಒಂದು ತಪ್ಪು ಅವಳ ಇಡೀ ಜೀವನಕ್ಕೆ ಹೇಗೆ ಮುಳುವಾಗುತ್ತದೆ ಎಂಬ ವಿಶ್ಲೇಷಣೆಯಿಂದ ಮಾಲತಿಯವರ ಹೆಣ್ಣಿಗೆ ಸಾಮಾಜಿಕವಾಗಿ ನ್ಯಾಯ ಒದಗಿಸಬೇಕಾದ ಬಗೆಯನ್ನು ಸ್ತ್ರೀಪರ ಕಾಳಜಿಯೊಂದಿಗೆ ಮಾಲತಿಯವರು ನಿರೂಪಿಸಿದ್ದಾರೆ. 'ಮಿನುಗುವ ಚುಕ್ಕೆ'ಯಲ್ಲಿ ಹೆಣ್ಣೆ ಸಂಸಾರದ ಆಧಾರವಾಗುವ ಬಗೆಯನ್ನು 'ಶಾಂಭವಿ'ಯ ಪಾತ್ರದ ಮೂಲಕ ಲೇಖಕರು ವಿವೇಚಿಸಿದ್ದಾರೆ. ಬಡ ಸಂಸಾರಕ್ಕೆ ದುಡಿದು ಆರ್ಥಿಕವಾಗಿ ನೆರವು ನೀಡಬಲ್ಲ, ಶಾಂಭವಿಯ ಜೀವನದ ಸಾಧನೆಯ ಚಿತ್ರಣ ಈ ಕಾದಂಬರಿಯಲ್ಲಿದೆ. ಮಾಲತಿಯವರು ಹಳ್ಳಿಯ ಜೀವನ ಮತ್ತು ಮುಂಬಯಿಯ ಯಾಂತ್ರಿಕ ಬದುಕಿನ ಜೀವನವನ್ನು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಅವರ ಕಾದಂಬರಿಗಳಲ್ಲಿ ಬದುಕಿನ ನಗ್ನ ಸತ್ಯಗಳಿವೆ, ಚಿಂತನೆಗಳಿವೆ. ಮಾತ್ರವಲ್ಲದೆ ಪರಂಪರೆ ಮತ್ತು ಆಧುನಿಕತೆಗಳ ಸಂಘರ್ಷ ತೋರಿ ಬರುತ್ತದೆ.

ಗಂಗಾ ಪಾದೇಕಲ್ ಅವರು 'ಹೊನ್ನಳ್ಳಿಯಲ್ಲೊಮ್ಮೆ', 'ಸೆರೆಯಿಂದ ಹೊರಗೆ', 'ಪಯಣದ ಹಾದಿಯಲ್ಲಿ', 'ಬಂಗಾರದ ಜಿಂಕೆಯ ಹಿಂದೆ', 'ಮೌನ ರಾಗಗಳು', 'ಇನ್ನೊಂದು ಅಧ್ಯಾಯ', 'ಅದೃಷ್ಟ ರೇಖೆ', 'ಕನಕಾಂಬರಿ' ಮೊದಲಾದ ಕಾದಂಬರಿಗಳನ್ನು ಬರೆದಿದ್ದಾರೆ. ಸಾಮಾಜಿಕ ಹಿಂಸೆಯನ್ನನುಭವಿಸುವ ಅಸಹಾಯಕ ಹೆಣ್ಣಿನ ತೊಳಲಾಟ 'ಪಯಣದ ಹಾದಿಯಲ್ಲಿ' ಕೃತಿಯಲ್ಲಿ ಕಂಡು ಬರುತ್ತದೆ. 'ಬಂಗಾರದ ಜಿಂಕೆಯ ಹಿಂದೆ' ಕೃತಿಯಲ್ಲಿ ಸ್ವಾರ್ಥ ಬುದ್ಧಿ ಇತರರ ಕಷ್ಟಗಳನ್ನು ಗ್ರಹಿಸುವ ಸೂಕ್ಷ್ಮತೆಯನ್ನು ಕಳೆದುಕೊಳ್ಳುತ್ತದೆ ಎಂಬ ವಿವರಗಳು ಚಿತ್ರಿತವಾಗಿವೆ. 'ವಿಭಿನ್ನರು' ಮತ್ತು 'ಅನಾವರಣ' ಕಾದಂಬರಿಗಳು ಲೀಲಾ ಮಣ್ಣಾಲರ ಪ್ರಕಟಿತ ರಚನೆಗಳು 'ವಿಭಿನ್ನರು' ಕೃತಿಯಲ್ಲಿ ವಿಧವಾ ವಿವಾಹವಾಗುವ ವ್ಯಕ್ತಿಗಳಲ್ಲಿ ಅಭಿಪ್ರಾಯ ಭೇದದ ಸಂಶಯ ತಲೆದೋರಿ, ಅಂತ್ಯದಲ್ಲಿ ತಪ್ಪು ತಿಳಿದು ಸಮಸ್ಯೆ ನಿವಾರಣೆಯಾಗುವ ಸಂದರ್ಭವಿದೆ. 'ಅನಾವರಣ' ದಲ್ಲಿ ಪ್ರೌಢಾವಸ್ಥೆಯ ಹೆಣ್ಣೆ ಗಂಡಿನ ಮಧ್ಯೆ ಲೈಂಗಿಕಾರ್ಷಣೆಗೆ ಭಿನ್ನವಾದ ನಿರ್ವ್ಯಾಜ ಸ್ನೇಹ ಸಂಬಂಧದ ಸಾಧ್ಯತೆಯನ್ನು ವಿವರಿಸಿದ್ದಾರೆ.

ನಾರಾಯಣ ವೆಂಕಟೇಶ ಕುರುಡಿಯವರು 'ಧರ್ಮಪಾಲ', 'ಪದ್ಮಿನಿ', 'ಮಹಾರಾಣಿ', 'ಲಕ್ಷ್ಮೀಬಾಯಿ', 'ಶ್ರೀಕೃಷ್ಣ ದೇವರಾಯ', 'ಶ್ರೀಮಂತ ನಾನಾ ಸಾಹೇಬ ಪೇಶವೆ' ಮೊದಲಾದ ಕಾದಂಬರಿಗಳನ್ನು ರಚಿಸಿದ್ದಾರೆ. ಪ.ಸು.ಭಟ್ಟ ಕುಮಟಾ ಇವರು 'ಆತ್ಮಾರ್ಪಣೆ', 'ಕಪ್ಪು ಚಿರತೆ', 'ಕುರುಡುಕಣ್ಣು', 'ಜಾರುಬಂಡೆ', 'ಸಾವಿರ ಪ್ರಣಯಿಗಳು', ಮುಂತಾದ ಕಾದಂಬರಿಗಳನ್ನು ಬರೆದಿದ್ದಾರೆ. ಕಾದಂಬರಿ ಕ್ಷೇತ್ರದಲ್ಲಿ ವಿಶೇಷ ಸಾಧನೆ ಮಾಡಿದ ದೊಡ್ಡೇರಿ ವೆಂಕಟಗಿರಿ ರಾವ್ 'ರತ್ನಿಯಮಗಳು', 'ಅವದಾನ', 'ಸಂಪ್ರದಾನ', 'ವಿಷಯ ವೀಚಿಗಳು', 'ದೃಷ್ಟಿದಾನ', 'ಸಮುದಿತ', 'ನಲ್ಮೆಯ ನೆಲೆ', 'ಮುಕ್ತಾ' ಮುಂತಾದ ಕಾದಂಬರಿಗಳನ್ನು ರಚಿಸಿದ್ದಾರೆ.

### ೩.೩.೫ ವಿಮರ್ಶೆ

ಹಳಗನ್ನಡ ಕೃತಿಗಳಿಗೆ ಟೀಕೆ ಬರೆಯುವಲ್ಲಿ ಹಾಗೂ ಅವುಗಳ ಮುನ್ನುಡಿಗಳಲ್ಲಿ ಹೊಸಗನ್ನಡ ವಿಮರ್ಶೆಯ ಹುಟ್ಟನ್ನು ಕಾಣಬಹುದು. ಹೊಸಗನ್ನಡ ಸಾಹಿತ್ಯ ಕೃತಿಗಳ ರಚನೆಗಳಲ್ಲಿ ಲೇಖಕರು ಸಾಹಿತ್ಯ, ಭಾಷೆ, ವಸ್ತು ಮೊದಲಾದವುಗಳ ಬಗೆಗೆ ವಿಮರ್ಶೆ ಮಾಡಿದ್ದು ಕಂಡುಬರುತ್ತದೆ. ಸಾಹಿತ್ಯ, ಕಲೆ, ಸಂಗೀತ, ಶಾಸ್ತ್ರ, ಯಕ್ಷಗಾನ ಮೊದಲಾದ

ವಿಷಯಗಳಿಗೆ ಸಂಬಂಧಿಸಿದಂತೆ ಹವ್ಯಕ ಬರಹಗಾರರು ವಿಮರ್ಶಾಗ್ರಂಥಗಳನ್ನು ಬರೆದಿದ್ದಾರೆ. ವಿಮರ್ಶಾ ಕ್ಷೇತ್ರದಲ್ಲಿ ಹವ್ಯಕರ ಕೊಡುಗೆ ವೈವಿಧ್ಯತೆಯಿಂದ ಕೂಡಿದೆ.

'ಪಾರ್ತಿಸುಬ್ಬ' ಮುಳಿಯ ತಿಮ್ಮಪ್ಪಯ್ಯನವರ ವಿಮರ್ಶಾಗ್ರಂಥ. ಇದರಲ್ಲಿ ಯಕ್ಷಗಾನ ಕವಿ ಸುಬ್ಬನ ಕಾಲ–ದೇಶ– ಕೃತಿಗಳ ತಲಸ್ಪರ್ಶಿಯಾದ ವಿವೇಚನೆಯಿದೆ. ಸೇಡಿಯಾಪು ಕೃಷ್ಣ ಭಟ್ಟರ 'ಕನ್ನಡ ವರ್ಣಗಳು' ೧೯೫೫ರಲ್ಲಿ ಪ್ರಕಟವಾಯಿತು. ಈ ಕೃತಿಗೆ ಮದರಾಸು ಸರಕಾರದ ಪ್ರಶಸ್ತಿ ಬಂದಿದೆ. ಛಂದಃಶಾಸ್ತ್ರಕ್ಕೆ ಸಂಬಂಧಿಸಿದ ಸೇಡಿಯಾಪು ಅವರ ಎಲ್ಲ ಬರಹಗಳು 'ಕನ್ನಡ ಛಂದಸ್ಸು' (ಕನ್ನಡ ಛಂದೋರೂಪಗಳ ವಿವೇಚನೆ) ಮತ್ತು 'ಛಂದೋಗತಿ' (ಛಂದಸತ್ತ್ವಗಳ ಹಾಗೂ ಗತಿ ಭೇದಗಳ ವಿವೇಚನೆ ಮತ್ತು ವಿವೃತಿ) ಎಂಬೆರಡು ಗ್ರಂಥಗಳಲ್ಲಿ ಅಡಕವಾಗಿವೆ. ಕನ್ನಡದಲ್ಲಿ ಯತಿಯಸ್ಥಾನ, ತ್ರಿಪದಿಯು ತ್ರಿಮೂರ್ತಿಗಣ ಘಟಿತವೇ ಹೊರತು ಮಾತ್ರಾಗಣದ ಗಣಿತವಲ್ಲವೆಂಬ ವಿಚಾರಗಳನ್ನು 'ಕನ್ನಡ ಛಂದಸ್ಸು' ಎಂಬ ದೀರ್ಘವಾದ ಪ್ರಬಂಧದಲ್ಲಿ ವಿವೇಚಿಸಿದ್ದಾರೆ. ಇವೆರಡು ಛಂದಃಶಾಸ್ತ್ರಕ್ಕೆ ಸೇಡಿಯಾಪುರವರ ಅವಿಸ್ಮಯಣೀಯ ಕೊಡುಗೆಗಳು. ಶಬ್ದಾರ್ಥ ವಿಚಾರಕ್ಕೆ ಸಂಬಂಧಿಸಿ 'ಕೆಲವು ದೇಶನಾಮಗಳು' ಮತ್ತು 'ತಥ್ಯದರ್ಶನ' ಎಂಬ ಕೃತಿಯನ್ನು ಬರೆದಿದ್ದಾರೆ. ಮೇಲೆ ಹೇಳಿದ ಗ್ರಂಥಗಳೆರಡರಲ್ಲೂ ಭಾಷೆಯ ಪದಗಳಲ್ಲಿ ಅಡಗಿರುವ ಸಾಂಸ್ಕೃತಿಕ, ಐತಿಹಾಸಿಕ ತಥ್ಯಗಳನ್ನು ಅವರು ಹೊರತೆಗೆದಿದ್ದಾರೆ. ಸೇಡಿಯಾಪು ಅವರ 'ವಿಚಾರ ಪ್ರಪಂಚ' ೧೯೯೨ರಲ್ಲಿ ಪ್ರಕಟವಾಯಿತು. ಸಾಹಿತ್ಯ ವಿಚಾರ, ಭಾಷಾವಿಚಾರ, ಕಲಾವಿಚಾರ ಮತ್ತು ನಾನಾವಿಚಾರ ಎಂಬ ಐದು ವಿಭಾಗಗಳಲ್ಲಿ ೭೧ ಲೇಖನಗಳು ಇಲ್ಲಿ ಸಂಕಲಿತವಾಗಿವೆ. ಸೇಡಿಯಾಪು ಅವರ ಶಾಸ್ತ್ರವಿಚಾರ ನೈಪುಣ್ಯ, ಖಚಿತ ವಿಶೇಷಣಾ ವಿಧಾನ ಮತ್ತು ಸ್ವತಂತ್ರ ವಿಚಾರಶೀಲತೆಗೆ ಉದಾಹರಣೆಯಾದ ಈ ಕೃತಿಗೆ ಅವರ ಮರಣಾನಂತರ ೧೯೯೬ರಲ್ಲಿ ಕರ್ನಾಟಕ ಸರಕಾರವು ಕನ್ನಡದ ಉನ್ನತ ಸಾಹಿತ್ಯ ಪುರಸ್ಕಾರವಾದ 'ಪಂಪ ಪ್ರಶಸ್ತಿ' ಯನ್ನಿತ್ತು ಗೌರವಿಸಿತು.



'ಕನ್ನಡ ಸಮಾಸಗಳು' ತೆಕ್ಕುಂಜ ಗೋಪಾಲಕೃಷ್ಣ ಭಟ್ಟರ ಕನ್ನಡ ವ್ಯಾಕರಣ ಗ್ರಂಥ. ಪರಿಭಾಷೆಗಳು, ಸಮಾಸಗಳು, ಸಮಾಸ ಕಾರ್ಯಗಳು ಎಂಬ ಮೂರು ಅಧ್ಯಾಯಗಳು ಇದರಲ್ಲಿವೆ. 'ವಾಙ್ಮಯ ತಪಸ್ಸು' ಕಡೆಂಗೋಡ್ಲು ಶಂಕರ ಭಟ್ಟರ

ಮಹತ್ತ್ವದ ವಿಮರ್ಶಾಗ್ರಂಥ. 'ಕನ್ನಡ ನುಡಿಯ ಹಿಂದು ಮುಂದು', 'ಕನ್ನಡ ನುಡಿಯ ಏಳಿಗೆ', 'ಕವಿಕಾವ್ಯ ಮೀಮಾಂಸೆ', 'ವಾಙ್ಮಯ ಶಕ್ತಿ', 'ವಾಙ್ಮಯ ತಪಸ್ಸು', 'ಕವಿ ಲಕ್ಷ್ಮೀಶ', 'ಶ್ರೀಕಂಠಯ್ಯನವರ ಹೆದ್ದಾರಿ' ಮುಂತಾದ ಪ್ರಬಂಧಗಳಲ್ಲಿ ಅವರ ಸಂಸ್ಕೃತಿ ಪ್ರಿಯತೆ, ಪರಂಪರೆಯ ಬಗ್ಗೆ ವಸ್ತುನಿಷ್ಠ ಪ್ರಜ್ಞೆ ಸಾಹಿತ್ಯದ ಆರೋಗ್ಯಕರ ಬೆಳವಣಿಗೆಯ ಬಗೆಗೆ ಅವರಿಗಿರುವ ತೀವ್ರ ಕಳಕಳಿ ಕಂಡುಬರುತ್ತದೆ.

'ಕನ್ನಡ ಸಂಸ್ಕೃತಿ', 'ಕೇಶಿರಾಜ', 'ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ', ಪ್ರೊ. ಎಂ. ಮರಿಯಪ್ಪ ಭಟ್ಟರ ವಿಮರ್ಶಾಗ್ರಂಥಗಳು. 'ಕನ್ನಡ ಸಂಸ್ಕೃತಿ' ೧೯೭೬ರಲ್ಲಿ ಪ್ರಕಟಗೊಂಡಿದೆ. ಈ ಕೃತಿಯಲ್ಲಿ ಒಟ್ಟು ಮೂವತ್ತೈದು ಲೇಖನಗಳಿವೆ. ಈ ಪ್ರಕಟಣೆಯಲ್ಲಿ ಸಮಾಜ-ಸಂಸ್ಕೃತಿಗೆ ಸಂಬಂಧಿಸಿದ ಐದು ಲೇಖನಗಳು ಸಾಹಿತ್ಯಕ್ಕೆ ಸಂಬಂಧಿಸಿದ ಹದಿನಾರು ಲೇಖನಗಳು, ಭಾಷೆ ಮತ್ತು ವ್ಯಾಕರಣಕ್ಕೆ ಸಂಬಂಧಿಸಿದ ಹದಿನಾಲ್ಕು ಲೇಖನಗಳು ಸಂಕಲಿತವಾಗಿದೆ. ಈ ಕೃತಿಯ ಲೇಖನಗಳನ್ನು ಲೇಖಕರು ಸಮಾಜ-ಸಂಸ್ಕೃತಿ, ಕವಿ-ಕಾವ್ಯ ಮತ್ತು ಭಾಷೆ-ವ್ಯಾಕರಣ ಎಂಬ ಶಿರೋನಾಮೆಗಳಡಿಯಲ್ಲಿ ಸಂಕಲಿಸಿದ್ದಾರೆ. ಈ ಪ್ರಬಂಧಗಳನ್ನು ಓದಿದವರಿಗೆ ಮೊದಲ ಬಾರಿಗೇ ಮರಿಯಾಪ್ಪ ಭಟ್ಟರ ಅಧ್ಯಯನದ ಆಳ ಮತ್ತು ಅಗಲವೆಷ್ಟೆಂದು ವೇದ್ಯವಾಗದಿರದು ಅವರು ಕನ್ನಡ ಸಾಹಿತ್ಯ, ವ್ಯಾಕರಣ, ಭಾಷಾಶಾಸ್ತ್ರ ಮೊದಲಾದವುಗಳ ನಿಷ್ಠಾವಂತ ಅಭ್ಯಾಸಿಯೆಂಬುದು ಸ್ಪಷ್ಟ. 'ಕೇಶಿರಾಜ' ಭಟ್ಟರು ಬರೆದ ಒಂದು ಪರಿಚಯಾತ್ಮಕ ಕೃತಿ. ಇದರಲ್ಲಿ ಕೇಶಿರಾಜನ ಪರಿಚಯವಿದೆ. ಜೊತೆಗೆ ಅವನ ಮಹತ್ತ್ವದ ಕೃತಿಯಾದ ಶಬ್ದ ಮಣಿದರ್ಪಣದ ಸ್ಥೂಲ ಚಿತ್ರಣವಿದೆ. ಸಾಹಿತ್ಯಾಸಕ್ತರಿಗೆ ಉಪಯುಕ್ತವಾಗುವಂತೆ ಶಬ್ದ ಮಣಿದರ್ಪಣದ ಮುಖ್ಯ ಸೂತ್ರಗಳನ್ನು ಈ ಕೃತಿಯಲ್ಲಿ ವ್ಯಾಖ್ಯಾನಿಸಲಾಗಿದೆ. ಕನ್ನಡ ಸಾಹಿತ್ಯಕ್ಕೆ ಕೇಶಿರಾಜನ ಕೊಡುಗೆಯೇನು ಮತ್ತು ಅವನ ಸ್ಥಾನಮಾನಗಳೇನು ಎಂಬುದನ್ನು ಭಟ್ಟರು ಆಧಾರಸಹಿತವಾಗಿ ನಿರೂಪಿಸಿದ್ದಾರೆ. ಮರಿಯಪ್ಪ ಭಟ್ಟರ 'ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ' ಕೃತಿ ೧೯೬೦ರಲ್ಲಿ ಪ್ರಕಟವಾಯಿತು. ಒಂದು ಕಾವ್ಯವನ್ನು ಸರಿಯಾಗಿ ಅರ್ಥ ಮಾಡಿಕೊಂಡು ಅದರ ಸ್ವಾರಸ್ಯವನ್ನು ಸವಿಯಬೇಕೆನ್ನುವ ಓದುಗನು ಅದರ ಕರ್ತೃವಿನ ಕಾಲ, ದೇಶ, ಕುಲಗೋತ್ರ, ಅವನು ಬೆಳೆದ ಪಂಥ, ಪರಿಸರ, ಅವನ ಮೇಲಾದ ಇತರ ಕವಿಗಳ ಪ್ರಭಾವ ಮುಂತಾದ ವಿಚಾರಗಳನ್ನು ತಿಳಿದಿರಬೇಕಾಗುತ್ತದೆ. ಸಾಹಿತ್ಯದ ನಿಜವಾದ ವಿದ್ಯಾರ್ಥಿಗೆ ಇಂತಹ

ಗ್ರಂಥಗಳು ಕೈದೀವಿಗೆ ಇದ್ದಂತೆ. ಮರಿಯಪ್ಪ ಭಟ್ಟರು ತಮಗಿಂತ ಹಿಂದಿನ ಕವಿ ಚರಿತ್ರೆಕಾರರ ಸಾಹಿತ್ಯ ಚರಿತ್ರೆಕಾರರ, ಅನೇಕ ಸಂಶೋಧನ ಲೇಖನಗಳ ಅನುಭವದ ಅಡಿಗಲ್ಲಿನ ಮೇಲೆ ತಮ್ಮ 'ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ' ಯನ್ನು ರಚಿಸಿದ್ದಾರೆ. ಈ ಗ್ರಂಥದಲ್ಲಿ ಕನ್ನಡ ಸಾಹಿತ್ಯದ ಇತಿಹಾಸವನ್ನು ಹಳಗನ್ನಡ ಸಾಹಿತ್ಯದ ಆರಂಭಕಾಲದಿಂದ ಹಿಡಿದು ಹೊಸಗನ್ನಡ ಸಾಹಿತ್ಯದವರೆಗೆ ಸಂಕ್ಷಿಪ್ತವಾಗಿ ನಿರೂಪಿಸಲಾಗಿದೆ. ಈ ಗ್ರಂಥಕ್ಕೆ ರಾಜ್ಯ ಪ್ರಶಸ್ತಿ ದೊರೆತಿದೆ. ಈ ಗ್ರಂಥವು ಮೂರು ಬಾರಿ ಮುದ್ರಣಗೊಂಡುದು ಇದರ ಜನಪ್ರಿಯತೆಗೆ ನಿದರ್ಶನ.

ಡಿ.ಎನ್ ಶಂಕರ ಭಟ್ಟರು ಐವತ್ತು ವರ್ಷಗಳಿಂದ ವ್ಯಾಕರಣವೆಂದರೇನು ಮತ್ತು ಪ್ರಪಂಚದ ಬೇರೆ ಬೇರೆ ಭಾಷೆಗಳಲ್ಲಿ ಎಂತಹ ವ್ಯಾಕರಣ ನಿಯಮಗಳು ಬಳಕೆಯಲ್ಲಿವೆ ಎಂಬ ವಿಷಯದ ಕುರಿತಾಗಿ ಸಂಶೋಧನೆ ನಡೆಸುತ್ತಿದ್ದಾರೆ. ಶಂಕರ ಭಟ್ಟರು 'ಕನ್ನಡ ಭಾಷೆಯ ಕಲ್ಪಿತ ಚರಿತ್ರೆ'(೧೯೭೦), 'ಭಾಷೆಯ ಬಗೆಗೆ ನೀವೇನು ಬಲ್ಲಿರಿ?'(೧೯೭೦), 'ಕನ್ನಡ ವಾಕ್ಯಗಳು (೧೯೭೮), 'ಕನ್ನಡ ಪದಗಳ ಒಳರಚನೆ' (೧೯೯೯), 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ' (೨೦೦೦), 'ಕನ್ನಡದ ಸರ್ವನಾಮಗಳು'(೨೦೦೩) ಮತ್ತು 'ಕನ್ನಡ ವಾಕ್ಯಗಳ ಒಳರಚನೆ'(೨೦೦೪) ಕೃತಿಗಳನ್ನು ಬರೆದಿದ್ದಾರೆ. 'ಕನ್ನಡ ವಾಕ್ಯಗಳ ಒಳರಚನೆ' ಕೃತಿಯಲ್ಲಿ ಕನ್ನಡ ವಾಕ್ಯಗಳ ಒಳರಚನೆಯನ್ನು ಭಾಷಾ ವಿಜ್ಞಾನದ ದೃಷ್ಟಿಕೋನಗಳ ಮೂಲಕ ಪರಿಶೀಲಿಸಿದ್ದಾರೆ.

ಸುಬ್ರಾಯ ಚೊಕ್ಕಾಡಿ ಅವರ 'ಕೃತಿ ಶೋಧ' ಕೃತಿಯಲ್ಲಿ ಹದಿಮೂರು ವಿಮರ್ಶಾ ಲೇಖನಗಳಿವೆ. ಈ ಹದಿಮೂರರಲ್ಲಿ ಎ.ಕೆ. ರಾಮಾನುಜನ್ ಅವರ 'ಹೊಕ್ಕುಳಲ್ಲಿ ಹೂವಿಲ್ಲ', 'ರಾಜರತ್ನಂ ಅವರ ಗದ್ಯ ಪ್ರಪಂಚ' ಮತ್ತು 'ಭಾರತೀಸುತರ ಕಥೆಗಳು' ಎಂಬ ಮೂರು ಲೇಖನಗಳನ್ನು ಹೊರತು ಪಡಿಸಿದರೆ ಉಳಿದೆಲ್ಲವೂ ದಕ್ಷಿಣ ಕನ್ನಡ ಜಿಲ್ಲೆಯ ಸಾಹಿತಿಗಳ ಕುರಿತಾದದ್ದು. ದಕ್ಷಿಣ ಕನ್ನಡ ಜಿಲ್ಲೆಯ ವಿವಿಧ ಕಡೆಗಳಲ್ಲಿ ನಡೆಸಲಾದ ವಿಚಾರ ಸಂಕಿರಣಗಳಲ್ಲಿ ಮಂಡಿಸಲಾದ ಪ್ರಬಂಧಗಳ ಸಂಕಲನವಿದು 'ಒಳಹೊರಗು' ಅವರ ಎರಡನೆಯ ವಿಮರ್ಶಾ ಲೇಖನಗಳ ಸಂಗ್ರಹ. ಈ ಸಂಕಲನದ ಹನ್ನೊಂದು ಲೇಖನಗಳಲ್ಲಿ ಮೊದಲ ಮೂರು ಲೇಖನಗಳು ಚೊಕ್ಕಾಡಿಯವರ ಸ್ವಂತ ಬರವಣಿಗೆಗೆ ಸಂಬಂಧಿಸಿದ್ದು. ಈ ಸಂಕಲನದಲ್ಲಿ 'ಕವಿತೆ ಓದುವ ವಿಧಾನ', 'ಕಾರಂತರ ಮರಳಿ

ಮಣ್ಣಿಗೆ', 'ಎಕ್ಕುಂಡಿ ನಮನ', 'ಚಿತ್ತಾಲರ ಮೂರು ದಾರಿಗಳು', ಮುಂತಾದ ಲೇಖನಗಳಿವೆ. '೧೯೯೦ ರ ಕಾವ್ಯ ಸಮೀಕ್ಷೆ' ಲೇಖನದಲ್ಲಿ ಕನ್ನಡದ ಅನೇಕ ಸಮಕಾಲೀನ ಮುಖ್ಯ ಕವಿಗಳ ಬಗ್ಗೆ ಸಾಕಷ್ಟು ಹೊಸ ವಿಚಾರಗಳಿವೆ.

ಕೆ.ವಿ ತಿರುಮಲೇಶ್ ಅವರು 'ವ್ಯಕ್ತಿ ಮತ್ತು ಪರಂಪರೆಗಳು', 'ಬೇಂದ್ರೆಯವರ ಕಾವ್ಯ ಶೈಲಿ', 'ಅಸ್ತಿತ್ವವಾದ', 'ಸಮ್ಮುಖ' ಮುಂತಾದ ವಿಮರ್ಶಾ ಕೃತಿಗಳನ್ನು ಬರೆದಿದ್ದಾರೆ. ಮಾತ್ರವಲ್ಲದೆ ಇಂಗ್ಲೀಷ್ ಭಾಷೆಯಲ್ಲಿ 'Derrida's Heel of Achille'ಎಂಬ ವಿಮರ್ಶಾಗ್ರಂಥವನ್ನು ರಚಿಸಿದ್ದಾರೆ. 'ಹರಿಹರನ ರಗಳೆಗಳು', 'ಸಿಂಗಾರ', 'ಸಾರಸ', 'ಮುತ್ತಿನ ಸತ್ತಿಗೆ', 'ಹನಿಎಣ್ಣೆ' ಡಾ। ವಸಂತಕುಮಾರ ತಾಳ್ತಜೆಯವರ ವಿಮರ್ಶಾಗ್ರಂಥಗಳು. ಅವರ 'ಮುತ್ತಿನ ಸತ್ತಿಗೆ' ಕೃತಿಗೆ 'ಗೋರೂರು ಸಾಹಿತ್ಯ ಪ್ರಶಸ್ತಿ' ಲಭಿಸಿದೆ. ಡಾ। ಕೆ. ಕೇಶವಶರ್ಮರು 'ಕ್ರಿಯೆ ಪ್ರಕ್ರಿಯೆ', 'ಶಬ್ದ ರೇಖೆ', ಎಂಬ ಗ್ರಂಥಗಳನ್ನು ರಚಿಸಿದ್ದಾರೆ. 'ಮುಚ್ಚು ಮತ್ತು ಇತರ ಲೇಖನಗಳು' (೧೯೯೪) ಸಂಕಲನದಲ್ಲಿ ಡಾ। ರಾಮಚಂದ್ರ ದೇವರು ೧೯೭೩-೧೯೯೪ರ ದೀರ್ಘ ಅವಧಿಯಲ್ಲಿ ಬರೆದ ಹದಿನೈದು ವೈಚಾರಿಕ ಹಾಗೂ ವಿಮರ್ಶಾತ್ಮಕ ಲೇಖನಗಳಿವೆ. ಸಾಹಿತ್ಯ ವಿಷಯಗಳಿಗೆ ಸಂಬಂಧಿಸಿದ ಲೇಖನಗಳು ಜಯಪ್ರಕಾಶ ಮಾವಿನಕುಳಿಯವರ 'ಅಂತರ', 'ಅವಲೋಕನ' ಕೃತಿಗಳಲ್ಲಿ ಕಂಡುಬರುತ್ತವೆ.

**೩.೩.೬ ಸಂಶೋಧನೆ**

'ಸಂಶೋಧನೆ' ಪದಕ್ಕೆ ಎರಡು ಅರ್ಥಗಳಿವೆ ಶುದ್ಧಗೊಳಿಸು ಅಥವಾ ತಿದ್ದು ಎಂಬುದು ಅರ್ಥವಾದರೆ 'ಹುಡುಕು' ಎಂಬುದು ಮತ್ತೊಂದು ಅರ್ಥವಾಗಿದೆ. ಎರಡನೆಯ ಅರ್ಥ ಸಾಹಿತ್ಯ ಸಂಶೋಧನೆಗೆ ಸಂಬಂಧಿಸಿದುದು. ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ವೈವಿಧ್ಯಮಯವಾದ ಕೃತಿ ರಚಿಸಿದ ಹವ್ಯಕ ಲೇಖಕರು ಹಿಂದಿನ ಕವಿಗಳ ಕಾಲ, ದೇಶಗಳ ಬಗ್ಗೆ ಸಂಶೋಧನೆಯನ್ನು ನಡೆಸಿದ್ದಾರೆ. ಭಾಷೆ, ಸಾಹಿತ್ಯ, ಶಾಸ್ತ್ರ, ಯಕ್ಷಗಾನ ಮುಂತಾದ ವಿಚಾರಗಳ ಕುರಿತು ಸಂಶೋಧನೆಯನ್ನು ಕೈಗೊಂಡ ಲೇಖಕರು ತಮ್ಮ ಅಭಿಪ್ರಾಯಗಳನ್ನು ಕೃತಿರೂಪದಲ್ಲಿ ನೀಡಿದ್ದಾರೆ. ತಮ್ಮ ಜನಾಂಗದ ಸಂಸ್ಕೃತಿ, ಸಾಹಿತ್ಯದ ಕುರಿತು ಸಂಶೋಧನೆಯನ್ನು ನಡೆಸಿ ಅವರ ವಿಶಿಷ್ಟ ಕೊಡುಗೆಗಳನ್ನು ಗುರುತಿಸಿದ್ದಾರೆ.

ಮುಳಿಯ ತಿಮ್ಮಪ್ಪಯ್ಯನವರ 'ನಾಡೋಜ ಪಂಪ' ಯಾವ ಕಾಲಕ್ಕೂ ಸ್ಥಾಯಿಯಾಗಿ ಉಳಿಯುವ ಸಂಶೋಧನಾತ್ಮಕ ಮಹಾಪ್ರಬಂಧ. ಕನ್ನಡದ ಒಬ್ಬ ಮಹಾಕವಿಯನ್ನು ಅವರು ಅರ್ಥವಿಸಿಕೊಂಡ ಗೌರವಿಸಿದ ಬಗೆ ಹೇಗೆಂಬುದು ಆ ಗ್ರಂಥದಿಂದ ಮನದಟ್ಟಾಗುತ್ತದೆ. ಈ ಕೃತಿಯಲ್ಲಿ ಭಾರತವನ್ನು ವರ್ಣಿಸುವ ನೆಪದಲ್ಲಿ ಪಂಪ ತನ್ನ ಆಶ್ರಯದಾತನಾದ ಅರಿಕೇಸರಿಯನ್ನು ಅರ್ಜುನನೊಂದಿಗೆ ಅಭಿನ್ನವಾಗಿ ಬಣ್ಣಿಸಿದ ರೀತಿಯ ಚಿತ್ರಣವಿದೆ ಅರಿಕೇಸರಿಯ ಮನೆಮಂದಿಯನ್ನೆಲ್ಲಾ ಮುಳಿಯರು ತಮ್ಮ ಕೃತಿಯಲ್ಲಿ ಪರಿಚಯಿಸಿದ್ದಾರೆ. ಇದು ಮುಳಿಯರ ಸಾಧನೆಯ ಫಲ "ಹತ್ತು ವರ್ಷಗಳ ಅಧ್ಯಯನ ಸಂಶೋಧನೆ– ಚಿಂತನೆಗಳ ಫಲವಾಗಿ ಈ 'ನಾಡೋಜ ಪಂಪ' ಕೃತಿಯ ಉದಯವಾಯಿತು ತಿಮ್ಮಪ್ಪಯ್ಯನವರು ಅಭಿನವ ನಾಡೋಜ ಎನಿಸಿದರು. ಪಂಪನ ಅಧ್ಯಯನಕ್ಕೆ ಈ ಕೃತಿ ಮಾರ್ಗದರ್ಶನ ಮಾಡುವುದಲ್ಲದೆ ಆ ಕಾಲದ ಚಾಲುಕ್ಯರ ಇತಿಹಾಸದ ಮೇಲೂ ಹೊಸ ಬೆಳಕು ಚೆಲ್ಲುತ್ತದೆ. ಇದು ಚಿರಕಾಲ ನಿಲ್ಲುವ ಕೃತಿ" (ರಾಮಚಂದ್ರ ಎಂ. (ಸಂ.); ತುರಾಯಿ; ೧೯೯೭; ಪುಟ ೬೧,೬೨) ಎಂಬುದಾಗಿ ಪ್ರೊ.ಎಂ. ರಾಜಗೋಪಾಲಾಚಾರ್ಯರು ಅಭಿಪ್ರಾಯಪಟ್ಟಿದ್ದಾರೆ. ತಿಮ್ಮಪ್ಪಯ್ಯನವರ 'ಕವಿರಾಜಮಾರ್ಗ ವಿವೇಕ' ಇನ್ನೊಂದು ಅಮೂಲ್ಯವಾದ ಸಂಶೋಧನ ಗ್ರಂಥ. ಈ ಗ್ರಂಥದ ಕರ್ತೃ ನೃಪತುಂಗನಲ್ಲ ಎಂದು ನಿರ್ಧರಿಸುವುದಲ್ಲದೆ ಇದು ರಾಷ್ಟ್ರಕೂಟರ ಇತಿಹಾಸದ ಮೇಲೂ ಬೆಳಕು ಚೆಲ್ಲುತ್ತದೆ.

ಶಬ್ದಾರ್ಥ ಸಂಶೋಧಕ ಸೇಡಿಯಾಪು ಅವರು ಇಬ್ಬರು ಮಿತ್ರರೊಡನೆ ಸೇರಿ 'ಕನ್ನಡ ನಿಘಂಟು' ಎಂಬ ಶಬ್ದಕೋಶವನ್ನು ರಚಿಸಿದ್ದಾರೆ. "ಸೇಡಿಯಾಪು ಅತ್ಯುತ್ತಮ ನೈಘಂಟುಕರೂ ಹೌದು. ಸಹಕರ್ತೃವಾಗಿ ಅವರು ರೂಪಿಸಿದ ಕನ್ನಡ ನಿಘಂಟುವಿನಿಂದಾಗಿ ಮಾತ್ರವಲ್ಲದೆ ನಿತ್ಯ ವಿದ್ಯಾರ್ಥಿಯೆಂಬಂತೆ ಶ್ಲಥೀಕೃತ ಗ್ರಂಥಗ್ರಂಥಿಯಾಗಿ ಅವರು ಪರಾಮರ್ಶಿಸಿರುವ ಕಿಟ್ಟೆಲ್ ಮತ್ತು ಆಪಟೆ ನಿಘಂಟುಗಳೇ ಸಾಕು ಅವರ ಪದಸಂಪದವನ್ನೂ, ಶಬ್ದಮಾರ್ಗದ ಅಶ್ವದಾಟಿಯನ್ನೂ ಸೊಗಸಾಗಿ ಮನವರಿಕೆ ಮಾಡುತ್ತವೆ" (ರಾಮಚಂದ್ರ. ಎಂ. (ಸಂ.); ೧೯೯೭; ತುರಾಯಿ; ಪುಟ ೮೨,೮೩). ಎಂಬುದಾಗಿ ಶತಾವಧಾನಿ ಆರ್. ಗಣೇಶ್ ಅಭಿಪ್ರಾಯಪಟ್ಟಿದ್ದಾರೆ. 'ತುಳುದೇಶ ಭಾಷಾ ವಿಚಾರವು' ಎಂಬುದು ಕಡವ ಶಂಭುಶರ್ಮರ ಸಂಶೋಧನ ಕೃತಿ.

ತುಳುನಾಡಿನ ವಿಚಾರದಲ್ಲಿ ಅವರ ಆಲೋಚನೆಗಳು, ಅಭಿಪ್ರಾಯಗಳು ಇದರಲ್ಲಿ ವ್ಯಕ್ತವಾಗಿವೆ. ಈ ಕೃತಿಗೆ ಮದರಾಸು ಸರಕಾರದಿಂದ ಬಹುಮಾನ ಲಭಿಸಿದೆ.

ಡಾ. ಪಿ. ಶ್ರೀಕೃಷ್ಣ ಭಟ್ಟರು ಹಲವು ಸಂಶೋಧನ ಲೇಖನಗಳನ್ನೂ 'ಕನ್ನಡ ವ್ಯಾಕರಣ ಪರಂಪರೆಯ ಮೇಲೆ ಸಂಸ್ಕೃತದ ಪ್ರಭಾವ' ಎಂಬ ಸಂಶೋಧನಾ ಗ್ರಂಥವನ್ನು ಪ್ರಕಟಿಸಿದ್ದಾರೆ. ಡಾ। ತಾಳ್ತಜೆ ವಸಂತ ಕುಮಾರರು 'ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ', 'ಸಂಶೋಧನಾರಂಗ' ಮುಂತಾದ ಸಂಶೋಧನಾ ಗ್ರಂಥಗಳನ್ನು ಬರೆದಿದ್ದಾರೆ. 'ಯರ್ಮುಂಜ ರಾಮಚಂದ್ರ ಬದುಕು ಬರಹ' ವೇಣಿಗೋಪಾಲ ಕಾಸರಗೋಡು ಅವರ ಸಂಶೋಧನ ಕೃತಿ. ಕೆ.ಕೇಶವ ಶರ್ಮರು 'ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಹೆಣ್ಣಿನ ಪರಿಕಲ್ಪನೆ' ಎಂಬ ಮಹಾಪ್ರಬಂಧವನ್ನು ಬರೆದಿದ್ದಾರೆ.

ಕುಕ್ಕಿಲ ಕೃಷ್ಣಭಟ್ಟರು 'ಛಂದೋಂಬುಧಿ', 'ಪಾರ್ತಿಸುಬ್ಬನ ಯಕ್ಷಗಾನಗಳು' ಮತ್ತು 'ಭಾರತೀಯ ಸಂಗೀತಶಾಸ್ತ್ರ' ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ಅವರು ಸಂಪಾದಿಸಿದ 'ಛಂದೋಂಬುಧಿ' ಗ್ರಂಥ ಸಂಪಾದನೆಯಲ್ಲಿ ಒಂದು ಮಾದರಿ ಕೃತಿಯಾಗಿದೆ. ಛಂದಸ್ಸಿನ ಮೂಲ ತತ್ತ್ವಗಳ ವಿವೇಚನೆ ಇಲ್ಲಿ ತುಂಬ ಸೊಗಸಾಗಿ ಮೂಡಿಬಂದಿದೆ. "ಛಂದಸ್ಸಿನ ಅಧ್ಯಯನ ಮಾಡುವವರಿಗೆ ಬೇಕಾಗುವ ವಿಸ್ತಾರವಾದ ಮಾಹಿತಿಯೂ, ಪ್ರೌಢ ವಿವೇಚನೆಯೂ ಇರುವ ಈ ಗ್ರಂಥ, ಛಂದಸ್ಸಿನ ಮೇಲೆ ಬಲು ಉತ್ಕೃಷ್ಟ ಸ್ವತಂತ್ರ ಗ್ರಂಥದ ಮೌಲ್ಯ ಹೊಂದಿದೆ" (ಬೋಳಂತಕೋಡಿ ಈಶ್ವರ ಭಟ್ಟ (ಸಂ.)ಅಭಿಮಾನ; ೧೯೭೨; ಪುಟ ೧೭೦ ಎಂಬುದಾಗಿ ಎಂ ಪ್ರಭಾಕರ ಜೋಶಿ ಅಭಿಪ್ರಾಯಪಟ್ಟಿದ್ದಾರೆ. 'ಭಾರತೀಯ ಸಂಗೀತ ಶಾಸ್ತ್ರ' ಎಂಬುದು ಸಂಗೀತ ಸಂಶೋಧನೆಯಲ್ಲಿ ಅಪೂರ್ವವೆನಿಸಿದ ಗ್ರಂಥ. ಶ್ರುತಿ ಸಮಸ್ಯೆ ಇಪ್ಪತ್ತೆರಡು ಶ್ರುತಿಗಳ ವಿಚಾರ ಮುಂತಾದವುಗಳ ವಿವೇಚನೆ ಇಲ್ಲಿದೆ. 'ಪಾರ್ತಿಸುಬ್ಬನ ಯಕ್ಷಗಾನಗಳು' ಇದು ಯಕ್ಷಗಾನ ಸಾಹಿತ್ಯದಲ್ಲೇ ಒಂದು ಅಮೂಲ್ಯ ಗ್ರಂಥ: ಪಾರ್ತಿಸುಬ್ಬನ ಎಲ್ಲ ಪ್ರಸಂಗಗಳನ್ನು ಅವನು ಹೇಳಿದ ಬತ್ತೀಸರಾಗ, ಬತ್ತೀಸತಾಳಗಳೊಂದಿಗೆ ಅಳವಡಿಸಿ ಇಲ್ಲಿ ಕೊಟ್ಟಿದ್ದಾರೆ.

ಡಾ। ಶ್ರೀಕೃಷ್ಣ ಭಟ್ ಅರ್ತಿಕಜೆ 'ಕನ್ನಡದಲ್ಲಿ ಶತಕ ಸಾಹಿತ್ಯ' ಎಂಬ ಸಂಶೋಧನಾ ಮಹಾ ಪ್ರಬಂಧವನ್ನು ರಚಿಸಿದ್ದಾರೆ. ಡಾ। ಡಿ.ಎನ್. ಶಂಕರಭಟ್ಟರ 'Desceription Analysis of Tulu '೧೯೬೭ (Deccan college, Post

Greducte and Pesearch Institute Poona) ಇಂಗ್ಲಿಷ್ ಗ್ರಂಥ ಉಡುಪಿ ಕಡೆಯ ಬ್ರಾಹ್ಮಣರ ತುಳುಭಾಷೆಯನ್ನು ಆಧುನಿಕ ಭಾಷಾ ವಿಜ್ಞಾನದ ದೃಷ್ಟಿಯಿಂದ ಸಂಶೋಧನಾತ್ಮಕವಾಗಿ (ಮುಖ್ಯವಾಗಿ gramatical analysis'ಗೆ ಪ್ರಾಧಾನ್ಯವಿತ್ತಿರುವ) ವಿವರಿಸುವ ಸಂಶೋಧನಾ ಸಂಪ್ರಬಂಧವಾಗಿದೆ. ಡಾ। ಹರಿಕೃಷ್ಣ ಭರಣ್ಯರು 'ಪ್ರವೇಶ', 'ಸಂಶೋಧನ ವಿಧಾನ' (ಸಹಲೇಖಕರೊಂದಿಗೆ), 'ಕಾವೇರಿಕಾನ ಕೃಷ್ಣ ಭಟ್ಟರ ಬದುಕು-ಬರಹ' ಮೊದಲಾದ ಸಂಶೋಧನಾ ಗ್ರಂಥಗಳನ್ನು ಬರೆದಿದ್ದಾರೆ 'ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ (೧೮೬೦-೧೯೨೦)' ಎಂಬುದು ಅವರ ಸಂಶೋಧನಾ ಸಂಪ್ರಬಂಧವಾಗಿದೆ.

ಜಯಪ್ರಕಾಶ ಮಾವಿನಕುಳಿಯವರು 'Politics and Culture' ಎಂಬ ಸಂಶೋಧನಾ ಸಂಪ್ರಬಂಧವನ್ನು ರಚಿಸಿದ್ದಾರೆ. 'ತಾಳಮದ್ದಲೆ ಪ್ರಸಂಗ ಮತ್ತು ಸೃಜನಶೀಲತೆ' ಎಂಬುದು ವಿಜಯನಳಿನಿ. ಆರ್. ಹೆಗಡೆಯವರ ಸಂಶೋಧನಾ ಮಹಾಪ್ರಬಂಧ. ಸ್ವತಃ ತಾಳಮದ್ದಳೆ ಅರ್ಥಧಾರಿಯಾಗಿರುವ ಅವರು ಯಕ್ಷಗಾನ ತಾಳಮದ್ದಲೆಯ ಕುರಿತು ಸಂಪ್ರಬಂಧ ಬರೆದು ಪಿ.ಹೆಚ್.ಡಿ. ಪದವಿ ಪಡೆದಿದ್ದಾರೆ. 'ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧಕಲೆ (ಕ್ರಿ.ಶ.೪೫೦ ರಿಂದ ೧೩೫೦)' ಎಂಬುದು ಡಾ। ಶ್ರೀಧರ ಎಚ್.ಜಿಯವರ ಸಂಶೋಧನಾ ಮಹಾಪ್ರಬಂಧ. ಡಾ। ಶಾಲಿನಿ ರಘನಾಥ ಭಟ್ಟ ಅವರದು 'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ ಒಂದು ಅಧ್ಯಯನ' ಎಂಬುದು ಸಂಶೋಧನಾ ಮಹಾಪ್ರಬಂಧ. ಅವರ 'ಉಪಭಾಷಾ ಅಧ್ಯಯನ' ಎಂಬುದು ಭಾಷಾಶಾಸ್ತ್ರಕ್ಕೆ ಸಂಬಂಧಿಸಿದ ಕಿರು ಪುಸ್ತಕ. 'ಕನ್ನಡ ಮೊದಲ ಕಾದಂಬರಿಗಳ ಸ್ತ್ರೀವಾದಿ ಓದು' ಯು. ಮಹೇಶ್ವರಿಯವರ ಸಂಶೋಧನಾ ಮಹಾಪ್ರಬಂಧ ಡಾ। ಯು. ಶಂಕರ ನಾರಾಯಣ ಭಟ್ಟರ 'ಪಂಪನ ಛಂದಃಶಿಲ್ಪ' ಎಂಬ ಕೃತಿಯು ಕನ್ನಡ ಭಾಷೆ ಮತ್ತು ಸಾಹಿತ್ಯದ ಅಭ್ಯಾಸಿಗಳಿಗೆ ಮಹತ್ತ್ವದ ಆಕರಗಳಾಗಿವೆ. ಶೇಕ್‌ಸ್ಪಿಯರ್ ಮತ್ತು ಕನ್ನಡ ನಾಟಕ ಪರಂಪರೆಯ ಸಂಬಂಧವನ್ನು ಡಾ।ರಾಮಚಂದ್ರ ದೇವ ಅವರು ಅತ್ಯಂತ ಸಮರ್ಥವಾಗಿ ತಲಸ್ಪರ್ಶಿಯಾಗಿ 'ಶೇಕ್‌ಸ್ಪಿಯರ್; ಎರಡು ಸಂಸ್ಕೃತಿ'ಗಳಲ್ಲಿ ಎಂಬ ಮಹಾಪ್ರಬಂಧದಲ್ಲಿ ವಿವೇಚಿಸಿದ್ದಾರೆ. ಕಳೆದ ನೂರಿಪ್ಪತ್ತು ವರ್ಷಗಳಲ್ಲಿ ಕನ್ನಡದಲ್ಲಿ ಬಂದ ಶೇಕ್‌ಸ್ಪಿಯರ್ ಅನುವಾದ-ರೂಪಾಂತರಗಳ ಅಧ್ಯಯನ ಇದು. ಡಾ। ಗೀತಾ ವಸಂತ

ಭಟ್ಟ ಇವರು 'ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯದಲ್ಲಿ ಸ್ತ್ರೀವಾದಿ ಚಿಂತನೆಗಳು' ವಿಷಯದಲ್ಲಿ ಸಂಶೋಧನಾ ಸಂಪ್ರಬಂಧವನ್ನು ರಚಿಸಿದ್ದಾರೆ. 'ಭಾರತೀಯ ಸಾಹಿತ್ಯದಲ್ಲಿ ದ್ರೌಪದಿ' ಮಣಿಮಾಲಿನಿ ವಿ.ಕೆ. ಅವರ ಸಂಶೋಧನಾ ಮಹಾಪ್ರಬಂಧ. ಹೆಲೆನ್ ಉಲ್‌ರಿಚ್ ಎಂಬವರು ಶಿವಮೊಗ್ಗ ಜಿಲ್ಲೆಯ ಹವ್ಯಕ ಭಾಷೆ ಮತ್ತು ಸಂಸ್ಕೃತಿಯನ್ನು ಕುರಿತು ಅಧ್ಯಯನ ಮಾಡಿ 'Clause Structure Of Northern Havyaka Kannada A Tagmatic Analysis' ಎಂಬ ಗ್ರಂಥವನ್ನು ರಚಿಸಿದ್ದಾರೆ.

### ೩.೩.೭ ಯಕ್ಷಗಾನ ಪ್ರಸಂಗ ಸಾಹಿತ್ಯ

'ಯಕ್ಷಗಾನ'ವು ಕರಾವಳಿ ಕರ್ನಾಟಕದ ಒಂದು ವಿಶಿಷ್ಟ ರಂಗಕಲೆ. ಇದು ಕರಾವಳಿ ಜಿಲ್ಲೆಗಳಾದ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಬಳಕೆಯಲ್ಲಿವೆ. ಹಾಗೆಯೇ ಇದು ಕನ್ನಡ ನಾಡಿನ ಇತರ ಭಾಗಗಳಲ್ಲಿಯೂ ಬೇರೆ ಬೇರೆ ರೂಪಗಳಲ್ಲಿ ಕಂಡುಬರುತ್ತದೆ. ಯಕ್ಷಗಾನವು ಸಂಗೀತ ನೃತ್ಯ ರೂಪಕವಾಗಿದ್ದು, ಅದಕ್ಕೆ ಪೂರಕವಾದ ವಿವಿಧ ಛಂದೋಬದ್ಧ ಗೇಯ ಪಠ್ಯ ಸಾಮಾಗ್ರಿಯನ್ನು ಒಳಗೊಂಡಿದೆ. ಇದೇ ಪ್ರಸಂಗ ಸಾಹಿತ್ಯ. ಯಕ್ಷಗಾನ ಪ್ರಯೋಗಕ್ಕೆ ಆಧಾರಗಳಾದ ಇಂಥ ನೂರಾರು ರಂಗ ಕೃತಿಗಳು ಶತಮಾನಗಳಿಂದ ರಚಿತವಾಗಿವೆ. ಹವ್ಯಕ ಲೇಖಕರು ಯಕ್ಷಗಾನಕ್ಕೆ ಸಂಬಂಧಿಸಿದಂತೆ ಹಲವಾರು ಪ್ರಸಂಗಗಳನ್ನು ರಚಿಸಿದ್ದಾರೆ. ಈ ಎಲ್ಲ ಪ್ರಸಂಗಗಳ ಕಥಾ ವಸ್ತುವು ಮುಖ್ಯವಾಗಿ ಪೌರಾಣಿಕ, ಐತಿಹಾಸಿಕ, ಜಾನಪದ, ಕಲ್ಪಿತ, ಸಂಸ್ಕೃತ ನಾಟಕಾಧಾರಿತ ಸಾಮಾಜಿಕ ಹೀಗೆ ಹಲವು ಆಕರಗಳನ್ನು ಬಳಸಿ ಬಂದಿವೆ.

ಯಕ್ಷಗಾನ ಪ್ರಸಂಗ ಸಾಹಿತ್ಯದಲ್ಲಿಯೇ ಅತ್ಯಂತ ಪ್ರಾಚೀನವಾದ ಕೃತಿ 'ಆದಿಪರ್ವ'. "ಈ ಕೃತಿಯ ಪ್ರಾಚೀನತೆಯನ್ನು ಸಿದ್ಧಪಡಿಸುವ ಅಂಶಗಳು ಹೀಗಿವೆ. ಸಾಂಗತ್ಯದ ಅಭಾವ ಭಾಮಿನೀ ವಾರ್ಧಕ್ಯಗಳ ಅಭಾವ ಪ್ರಸಂಗ ಪೀಠಿಕೆಗಳ ಸ್ವರೂಪ, ವಚನ ದ್ವಿಪದಿಗಳ ಆಧಿಕ್ಯ, ಆದಿ ಮತ್ತು ರೂಪಕ ತಾಳಗಳ ಅಭಾವ, ಜಾನಪದ ಮಟ್ಟುಗಳ ಬಳಕೆ ಪಂಚಕವೆಂಬ ಛಂದೋರೂಪ ಇತ್ಯಾದಿ ಅಂಶಗಳ ಕುರಿತು ಪ್ರಸ್ತಾವನೆಯಲ್ಲಿ ವಿಸ್ತಾರವಾದ ಚರ್ಚೆಯಿದೆ. ಈ ಕಾರಣದಿಂದ ಅದು ಈವರೆಗೆ ನಮಗೆ ದೊರೆತಿರುವ ಎಲ್ಲ ಕೃತಿಗಳಿಗಿಂತ ಪ್ರಾಚೀನವಾದುದೆಂದೂ ಸುಮಾರು ೧೩-೧೪ನೆಯ ಶತಮಾನಕ್ಕೆ ಸೇರಿದ ಕೃತಿಯಿರಬಹುದೆಂದು ಪ್ರತಿಪಾದಿಸಲಾಗಿದೆ." (ನಾರಾಯಣ

ಶಾನಭಾಗ (ಸಂ.); ಹವ್ಯಕ ಯಕ್ಷಗಾನ ಕವಿ ಕಾವ್ಯಸೂಚಿ; ೨೦೦೮; ಪುಟ ೯೨) ಎಂಬುದು ಪ್ರೊ.ಎಂ.ಎ. ಹೆಗಡೆ ಸಿದ್ದಾಪುರ ಅವರ ಅಭಿಪ್ರಾಯ.

ಹದಿನಾರನೆಯ ಶತಮಾನದ ಆದಿಭಾಗಕ್ಕೆ ಸೇರಿದ ವಿಷ್ಣುವು 'ವಿರಾಟಪರ್ವ' ವಲ್ಲದೆ 'ಬಾಣಾಸುರ ಕಾಳಗ', 'ಇಂದ್ರಕೀಲ' ಮುಂತಾದ ಪ್ರಸಂಗಗಳನ್ನು ಬರೆದಿದ್ದಾನೆ. ವಿಷ್ಣುವಿನ ಸಮಕಾಲೀನನೆನ್ನಬಹುದಾದ ನಗಿರೆಯ ಸುಬ್ರಹ್ಮಣ್ಯ ಇವರ 'ಶಂಬರಾಸುರ ಕಾಳಗ' ಹಾಗೂ 'ರಾವಣೋದ್ಭವ ಎಂಬ ಕೃತಿಗಳು ಅಚ್ಚಾಗಿವೆ. ಹದಿನೇಳನೆಯ ಶತಮಾನದವನಾದ ಹಳೇಮಕ್ಕಿ ರಾಮ 'ಕೃಷ್ಣಾರ್ಜುನ ಕಾಳಗ'ದ ಕರ್ತೃ. ಅದೇ ಕಾಲದ ಹಟ್ಟಿಯಂಗಡಿ ರಾಮಭಟ್ಟರು 'ಸುಭದ್ರಾಕಲ್ಯಾಣ', 'ಅತಿಕಾಯಕಾಳಗ', 'ದ್ರೌಪದೀ ಸ್ವಯಂವರ', 'ಲವಕುಶರ ಕಾಳಗ' ಮತ್ತು 'ಧ್ರುವಚರಿತ್ರೆ' ಗಳಂಥ ಕೃತಿಗಳನ್ನು ನೀಡಿದ್ದಾರೆ. 'ಉತ್ತರ ಕನ್ನಡದ ಪ್ರಸಿದ್ದ ಮನೆತನಗಳಲ್ಲೊಂದಾದ ಸಭಾಹಿತ ಮನೆತನಕ್ಕೆ ಸೇರಿದ ವಿಷ್ಣುವು ಸುಮಾರು ೧೮ನೆಯ ಶತಮಾನದವನೆಂದು ಡಾ। ಕಾರಂತರು ಊಹಿಸಿದ್ದಾರೆ" (ನಾರಾಯಣ ಶಾನಭಾಗ(ಸಂ.); ಹವ್ಯಕ ಯಕ್ಷಗಾನ ಕವಿ ಕೃತಿಸೂಚಿ; ೨೦೦೮; ಪುಟ ೯೬)ಎಂಬುದು ಪ್ರೊ.ಎಂ.ಎ. ಹೆಗಡೆಯವರ ಅಭಿಪ್ರಾಯ ವಿಷ್ಣು ಸಭಾಹಿತನ ಕೃತಿಗಳು 'ಶತಾಸ್ಯರಾವಣಕಾಳಗ' ಮತ್ತು 'ಚಂದ್ರಹಾಸ ಚರಿತೆ'.

ಕ್ರಿ.ಶ ೧೯೦೦ರ ನಂತರ ಯಕ್ಷಗಾನ ಪ್ರಸಂಗ ಸಾಹಿತ್ಯ ರಚನೆ ವೈವಿಧ್ಯಮಯವಾಗಿ ಬೆಳೆದಿದೆ. 'ಯಕ್ಷಗಾನ ವಾಚಸ್ಪತಿ' ಎನಿಸಿದ ಶೇಣಿ ಗೋಪಾಲಕೃಷ್ಣ ಭಟ್ಟ (೧೯೧೮-೨೦೦೬)ರು ಅರ್ಥಧಾರಿ ಮಾತ್ರವಲ್ಲದೆ ವೇಷಧಾರಿ, ಹರಿದಾಸ ಎಂಬಂತೆ ಬಹುಮುಖವಾಗಿ ಬೆಳೆದಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ ಕೃಷಿ ಮಾಡಿದ ಶೇಣಿಯವರ ಯಕ್ಷಗಾನ ಪ್ರಸಂಗ ಕೃತಿಗಳೆಂದರೆ 'ಉದ್ದಾಲಕ', 'ಕವಿರತ್ನಕಾಳಿದಾಸ', 'ಬ್ರಹ್ಮರ್ಷಿ', 'ಮಧ್ಯಮ ವ್ಯಾಯೋಗ', 'ಮೇಘನಾದ ವಿಜಯ', 'ರಾಮಾಂಜನೇಯ', 'ಶಂಕರ ವಿಜಯ', 'ಶಂಬೂಕವಧೆ', 'ಶ್ರೀಕಣಿಪುರ ಕ್ಷೇತ್ರ ಮಹಾತ್ಮೆ', 'ಶ್ರೀಮತಿ ಪರಿಣಯ'.

ಸ್ವತಃ ಅರ್ಥಧಾರಿಗಳಾಗಿರುವ ಕೀರಿಕ್ಕಾಡು ಮಾಸ್ತರ್ ವಿಷ್ಣುಭಟ್ಟ (೧೯೧೩-೧೯೮೬)ರು 'ಅಮೋಘವರ್ಷ ನೃಪತುಂಗ', 'ಊರ್ವಶೀ ಪುರೂರವ', 'ಕಂಜಾಕ್ಷಿ ಕಲ್ಯಾಣ', 'ಕನಕಲೇಖಾ', 'ಕಲ್ಪಸುಂದರಿ ಕಲ್ಯಾಣ', 'ಜರಾಸಂಧ ಪರಾಭವ',

'ಪಾಂಚಜನ್ಯ', 'ಭೀಮಶಂಕರ ಮಹಿಮೆ', 'ಭ್ರಮರ ಕುಂತಳೆ ಕಲ್ಯಾಣ', 'ಮಿತ್ರಗುಪ್ತ ವಿಜಯ', 'ಮೃಗಾವತೀ ಪರಿಣಯ', 'ರಾಜಾ ಸುದರ್ಶನ', 'ವೀರ ಅಭಿಮನ್ಯು', 'ಶಿವನಾಮ ಮಹಿಮೆ', 'ಶ್ರೀರಾಮ ಪಟ್ಟಾಭಿಷೇಕ', 'ಸೀತಾ ಪರಿತ್ಯಾಗ', 'ಸುಲೋಚನಾ ಸ್ವಯಂವರ' ಮುಂತಾದ ೯೭ ಯಕ್ಷಗಾನ ಪ್ರಸಂಗಗಳನ್ನು ವಿರಚಿಸಿ, ಯಕ್ಷಲೋಕ ಸಾಹಿತ್ಯವನ್ನು ಸಮೃದ್ಧಗೊಳಿಸಿದರು.

ಎಂ.ಜಿ. ಬರವಣಿಯವರು 'ಅವಂತೀ ಅಮರಾವತಿ', 'ಕನಕವೇಣಿ ಕಲ್ಯಾಣ', 'ಕರ್ಣ ರತ್ನಾವತಿ', 'ಕುಂಭಕರ್ಣ ಕಾಳಗ', 'ಕೂರ್ಮರಾಯ ದಿಗ್ವಿಜಯ', 'ಚಂದ್ರಮುಖೀ ಸ್ವಯಂವರ' 'ಚಂದ್ರರೇಖಾ ಪರಿಣಯ', 'ತ್ರಿಪಾದದಾನ' ಮುಂತಾದ ೫೮ ಯಕ್ಷಗಾನ ಪ್ರಸಂಗಗಳನ್ನು ರಚಿಸಿದ್ದಾರೆ. ಗುಂಡೂ ಸೀತಾರಾಮ ರಾವ್ ಅವರು 'ಅಂಶ ವಿಂಶತಿ', 'ಕಚದೇವಯಾನಿ', 'ಕಲಿಕ್ರೋಧನ', 'ಚಕ್ರಚಂಡಿಕಾ', 'ಚಿತ್ರಾಂಗದಾರ್ಜುನ', 'ದಕ್ಷಾಧ್ವರ' ಮೊದಲಾದ ೪೧ ಪ್ರಸಂಗಗಳನ್ನು ಬರೆದಿದ್ದಾರೆ.

ತಲೆಂಗಳ ಶಂಭಟ್ಟ 'ಅಕ್ಷಯಾಂಬರ ವಿಲಾಸ', ವಳಕ್ಕುಂಜ ನರಸಿಂಹ ಭಟ್ಟ 'ಕಾಶ್ಮೀರ ಕಾಳಗ', ಅಜ್ಜನಗದ್ದೆ ಗಣಪಯ್ಯ ಭಾಗವತ 'ಖಾಂಡವವನ ದಹನ', ಸುಬ್ರಾಯ ವೆಂಕಪ್ಪ ಹೆಗಡೆ 'ಗರುಡವಿಜಯ' ಮತ್ತು 'ಪದ್ಮಾವತೀ ಪರಿಣಯ', ಎಸ್. ಆರ್. ಪಾಡಿ 'ಚಂದ್ರಶಾಸನ', ತಲೆಂಗಳ ರಾಮಕೃಷ್ಣ ಭಟ್ಟ 'ಚಂದ್ರಾಭ್ಯುದಯ', 'ಚೆನ್ನೆದ ಮಣೇ',(ತುಳು ಪ್ರಸಂಗ), 'ಜಗಜ್ಯೋತಿ ಬಸವೇಶ್ವರ', ಕಿಡಂಜಿ ಮಹಾಬಲಭಟ್ಟ 'ಚಿತ್ರಾಂಗದೆ ವಿಲಾಸ', ವಿಶ್ವವಿನೋದ ಬನಾರಿ 'ತೊಡಿಕ್ಕಾನ ಕ್ಷೇತ್ರ ಮಹಾತ್ಮೆ', ಎಂ.ಎ. ಹೆಗಡೆ ಸಿದ್ಧಾಪುರ 'ತ್ರಿಶಂಕು ಚರಿತ್ರೆ', ಜಿ.ಜಿ ಹೆಗಡೆ ವರ್ಧನ 'ಭಾರತ ವಿಜಯ', ಬಡೆಕಿಲ ವೆಂಕಟರಮಣ ಭಟ್ಟ 'ಭೀಮವಿಜಯ' ಮತ್ತು 'ವಾಜಿಗ್ರಹಣ' ಅಥವಾ ಯೌವನಾಶ್ವಕಾಳಗ', ಕೆ.ಗೋವಿಂದ ಭಟ್ಟ 'ಮಹಾವೀರ' ಮತ್ತು 'ರತ್ನಕಂಕಣ', ಅಂಬೆಮೂಲೆ ಗೋವಿಂದ ಭಟ್ಟ 'ಯಕ್ಷಗಾನ ಫೋರ್ಜರಿ', 'ರಾಜಹಂಸ ವಿಜಯ', ಮಣಿಲ ಸುಬ್ಬಣ್ಣ ಶಾಸ್ತ್ರಿ 'ಯಜ್ಞದತ್ತ ಚರಿತ್ರೆ', ತಾಳ್ತಜೆ ಕೃಷ್ಣ ಭಟ್ಟ 'ರಾವಣ ಚರಿತೊ' (ತುಳು ಪ್ರಸಂಗ), ಹಲಸಿನಹಳ್ಳಿ ನರಸಿಂಹ ಶಾಸ್ತ್ರಿ 'ವೀರ ಮಣಿ ಕಾಳಗ', 'ಶಿಲ್ಪ ಪರ್ವ' 'ಭೀಷ್ಮ ವಿಜಯ', 'ರುಕ್ಮಾಂಗದ ಚರಿತ್ರೆ' ಮುಂತಾದ ಯಕ್ಷಗಾನ ಪ್ರಸಂಗಗಳನ್ನು ಹವ್ಯಕ ಸಾಹಿತಿಗಳು ಬರೆದಿದ್ದಾರೆ.

ಹರಿಕೃಷ್ಣ ಭಟ್ಟರ 'ಮಧುಪ ಮಹಾತ್ಮೆ' ಜೇನುನೊಣಗಳ ಹಿರಿಮೆಯನ್ನು ಚಿತ್ರಿಸುವ ಯಕ್ಷಗಾನ ಪ್ರಸಂಗ ಕೃತಿ. ಕೆ.ವಿ.ಗೋವಿಂದ ಭಟ್ಟರ 'ಸಮಗ್ರ ವಾಲಿ ವಿಜಯ' ಹಾಗೂ 'ಶ್ರೀಕೃಷ್ಣ ಪರಂಧಾಮ' ಪ್ರಸಂಗಗಳು ಹಳೆಯ ಪರಂಪರೆಯ ಪೌರಾಣಿಕ ಪ್ರಸಂಗಗಳ ಮಾದರಿಯಲ್ಲಿವೆ. ವಿಶ್ವವಿನೋದ ಬನಾರಿಯವರು 'ಶಬರಿಮಲೆ ಅಯ್ಯಪ್ಪ' ಪ್ರಸಂಗ ಬರೆದಿದ್ದಾರೆ.

"ಆಧುನಿಕ ಹವ್ಯಕ ಕವಿಗಳ ಸಾಲಿನಲ್ಲಿ ಹೊಸ್ತೋಟ ಮಂಜುನಾಥ ಭಾಗವತರ ಸ್ಥಾನ ಮಹತ್ತರವಾದುದು ೧೬೧ ಯಕ್ಷಗಾನ ಪ್ರಸಂಗಗಳನ್ನು ರಚಿಸಿದ ಅವರ ಸಾಧನೆ ಯಕ್ಷಗಾನ ಇತಿಹಾಸದಲ್ಲಿಯೇ 'ಅತ್ಯಧಿಕ ಪ್ರಸಂಗ ರಚನೆಯ ದಾಖಲೆ' ಎನಿಸುವಂತಹದು" (ನಾರಾಯಣ ಶಾನಭಾಗ (ಸಂ.): ಹವ್ಯಕ ಯಕ್ಷಗಾನ ಕವಿ ಕಾವ್ಯಸೂಚಿ, ೨೦೦೮; ೯ ಎಂಬುದು ಡಾ। ಕಬ್ಬಿನಾಲೆ; ವಸಂತ ಭಾರಧ್ವಾಜರ ಅಭಿಪ್ರಾಯ. ಮಂಜುನಾಥ ಭಾಗವತರು ಬರೆದ ರಾಮಾಯಣಕ್ಕೆ ಸಂಬಂಧಿಸಿದ ಪ್ರಸಂಗಗಳು 'ಶ್ರೀ ರಾಮ ಮಹಿಮೆ' (ರಾಮಾಯಣದ ೧೯ ಪ್ರಸಂಗಗಳು. ೧೯೯೪ರಲ್ಲಿ ಮುದ್ರಿತ ಹಾಗೂ ಭಾಗವತಕ್ಕೆ ಸಂಬಂಧಿಸಿದ ಪ್ರಸಂಗಗಳು 'ಶ್ರೀ ಕೃಷ್ಣ ಮಹಿಮೆ' (ಭಾಗವತ ದಶಮಸ್ಕಂದದ ೨೦ ಪ್ರಸಂಗಗಳು ೨೦೦೦ ದಲ್ಲಿ ಮುದ್ರಿತ) ಎಂಬ ಹೆಸರಿನಲ್ಲಿ ಸಂಕಲನ ರೂಪದಲ್ಲಿ ಮುದ್ರಿತಗೊಂಡಿವೆ. 'ಅಕ್ಕಮಹಾದೇವಿ', 'ಅಕ್ಕರ ವಿಜಯ', 'ಅವಿಕ್ಷಿತ ವಿಜಯ', 'ಅಶ್ವಮೇಧಜ್ವಾಲೆ', 'ಏಕಲವ್ಯ', 'ಕಾಳಿಂಗ ಮರ್ದನ' ಮುಂತಾದ ಪ್ರಸಂಗಗಳು ಅರ್ಥ ಸಹಿತವಾಗಿವೆ.

### ೩.೩.೮ ಪತ್ರಿಕೋದ್ಯಮ

ಆಧುನಿಕ ಯುಗದಲ್ಲಿ ಪತ್ರಿಕೆಗಳ ಪಾತ್ರ ಬಹಳ ಪ್ರಮುಖವಾದದ್ದು ಪತ್ರಿಕೆಗಳನ್ನು ಸರಕಾರಕ್ಕೂ ಪ್ರಜೆಗಳಿಗೂ ನಡುವಿನ ಸೇತುವೆ ಎನ್ನಬಹುದು. ದೇಶದಲ್ಲಿ ಜಗತ್ತಿನಲ್ಲಿ ನಡೆಯುವ ಸುದ್ದಿಯನ್ನು ಜನಸಾಮಾನ್ಯರಿಗೆ ತಿಳಿಸುವುದು ಇದರ ಗುರಿ. ಜತೆಗೆ ನಮ್ಮ ಕುಂದುಕೊರತೆಗಳನ್ನು ಪತ್ರಿಕೆಗಳ ಮೂಲಕ ಸರಕಾರಕ್ಕೆ ತಿಳಿಸಬಹುದು. ಜ್ಞಾನ ಪ್ರಸಾರವೂ ಇದರ ಮುಖ್ಯ ಧ್ಯೇಯಗಳಲ್ಲಿ ಒಂದು. ಕನ್ನಡ ಪತ್ರಿಕೆಗಳು ಇಂಥ ಉದ್ದೇಶವನ್ನು ಪೂರೈಸಲೆಂದೇ ಹುಟ್ಟಿದಂಥವು.

ಪತ್ರಿಕೋದ್ಯಮ ಕ್ಷೇತ್ರಕ್ಕೆ ಹವ್ಯಕರು ಬಂದು ಶತಮಾನವೇ ಕಳೆದಿವೆ. ಪತ್ರಿಕೋದ್ಯಮದ ತಿಳುವಳಿಕೆ ನೀಡಲು ಯಾವ ಶಿಕ್ಷಣ ಸಂಸ್ಥೆಯೂ ಶಕ್ತವಿರದ ಕಾಲದಲ್ಲಿ ಈ ಕ್ಷೇತ್ರಕ್ಕಿಳಿದು ಲೇಖನಿಯ ಚುರುಕನ್ನು ಜನತೆಗೆ ತೋರಿಸಿದವರು ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದ ಕರ್ಕಿ ವೆಂಕಟರಮಣ ಶಾಸ್ತ್ರಿಗಳು. ಅವರು 'ಹವ್ಯಕ ಸುಬೋಧ' ಪತ್ರಿಕೆಯನ್ನು ೧೮೮೪ ರಲ್ಲಿ ಮುಂಬಯಿಯಿಂದ ಕೆಲಕಾಲ ನಡೆಸಿದರು. ಅವರಿಗೆ ಸಹಾಯಕರಾಗಿ ನಿಂತವರು, ಬೂದಿ ಮಹಾಬಲೇಶ್ವರ ಭಟ್ಟರು. ನಿರ್ಭೀತಿಯಿಂದ ಶಾಸ್ತ್ರಿಗಳು ಬ್ರಿಟಿಷ್ ಸರಕಾರದ ಲೋಪದೋಷಗಳನ್ನು ಖಂಡಿಸಿ ಬರೆಯುತ್ತಿದ್ದರು. ನಮ್ಮ ರಾಜ್ಯದಲ್ಲಿ ಪತ್ರಿಕೋದ್ಯಮ ಕ್ಷೇತ್ರದಲ್ಲಿ ದುಡಿದ ಮೊದಲ ಹವ್ಯಕರೆಂದರೆ ಕರ್ಕಿ ವಿನಾಯಕ ಶಾಸ್ತ್ರಿಯವರು. ಕಾರವಾರದಿಂದ 'ವಿನೋದಿನೀ' ಮಾಸ ಪತ್ರಿಕೆಯನ್ನು ೧೯೦೫–೦೯ರವರೆಗೆ ನಡೆಸಿದ ಮೊದಲ ಪತ್ರಕರ್ತರು. ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ನಡಹಳ್ಳಿ ವೆಂಕಪ್ಪನವರು 'ಆರ್ಯಧರ್ಮ' ಪ್ರಕಾಶ' ಹಾಗೂ 'ಹವ್ಯಕೋದಯ'ಗಳಂಥ ವೈಚಾರಿಕ, ಧಾರ್ಮಿಕ, ಮಂತ್ರಜ್ಞಾನ ನೀಡಬಲ್ಲ ಮಾಸಪತ್ರಿಕೆಗಳನ್ನು ಪ್ರಾರಂಭಿಸಿದರು. ಜನರಲ್ಲಿ ಓದುವ ಹವ್ಯಾಸ ತರಲು ಯತ್ನಿಸಿದರು.

ಕಡೆಂಗೋಡ್ಲು ಅವರ ಹೆಸರನ್ನು ಅಜರಾಮರವಾಗಿರಿಸಿದ ಕ್ಷೇತ್ರ ಪತ್ರಿಕೋದ್ಯಮ. ೧೯೨೭ರಲ್ಲಿ ಮದರಾಸಿನ ದಿ.ಡಾ.ಯು. ರಾಮರಾಯರು ಸ್ಥಾಪಿಸಿದ 'ರಾಷ್ಟ್ರ ಬಂಧು' ವಾರಪತ್ರಿಕೆಯ ಆರಂಭದಿಂದ ಇಪ್ಪತ್ತೈದು ವರ್ಷ ಶಂಕರ ಭಟ್ಟರು ಅದರ ಸಂಪಾದಕರಾಗಿದ್ದರು. ಅವರು ಸಾವಿರಾರು ಅಗ್ರಲೇಖನಗಳನ್ನು ಬರೆದರು. ಅವರು ವಿಮರ್ಶಿಸದ, ಟೀಕಿಸದ ವಿಷಯಗಳಿಲ್ಲ. 'ರಾಷ್ಟ್ರ ಬಂಧು' ವನ್ನು ಬಿಟ್ಟ ಮೇಲೆ ಶಂಕರ ಭಟ್ಟರು 'ರಾಷ್ಟ್ರಮತ' ಎಂಬ ವಾರಪತ್ರಿಕೆಯನ್ನು ಆರಂಭಿಸಿ ಹತ್ತು ವರ್ಷ ನಡೆಸಿದರು.

ಮುಳಿಯ ತಿಮ್ಮಪ್ಪಯ್ಯನವರು ೧೯೧೬ರಲ್ಲಿ ಪೇಜಾವರ ಭೋಜರಾಯರ ಜೊತೆ ಸೇರಿ 'ಕನ್ನಡ ಕೋಗಿಲೆ' ಎಂಬ ಮಾಸ ಪತ್ರಿಕೆಯನ್ನು ಪ್ರಾರಂಭಿಸಿದರು. ಬಳಿಕ ೧೯೧೯ರ ತನಕವೂ ಶ್ರದ್ಧೆಯಿಂದ ಪತ್ರಿಕೆಯನ್ನು ನಡೆಸಿದರು. ಮಡಿಯಾಲ ನಾರಾಯಣ ಭಟ್ಟರು 'ಸೇವಾ ಮೃತ' ವೆಂಬ ಪತ್ರಿಕೆಯ ಸಂಪಾದಕರಾಗಿ ತಮ್ಮ ಸಂಸ್ಥೆಯ ಮುಖವಾಣಿಯೆಂಬಂತೆ ಲೇಖನಗಳನ್ನು ಬರೆದರು. ೧೯೬೭ರಲ್ಲಿ 'ಸೇವಾಮೃತ' ಪತ್ರಿಕೆಯನ್ನು ತ್ರೈಮಾಸಿಕವಾಗಿ ಹೊರಡಿಸಿದ ಶ್ರೀಯುತರು ಮರುವರ್ಷದಿಂದ ಅದನ್ನು

ಮಾಸ ಪತ್ರಿಕೆಯಾಗಿ ಲೋಕ ಸೇವಾ ವೃಂದ ಸಂಸ್ಥೆಯ ಮೂಲಕ ಪ್ರಕಟಿಸಿದರು. ಪ್ರೊ.ಎಂ. ರಾಮಕೃಷ್ಣ ಭಟ್ಟರು ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳ 'ಅಮೃತವಾಣಿ' ಎಂಬ ಸಾಂಸ್ಕೃತಿಕ ಪತ್ರಿಕೆಯನ್ನು ಸ್ಥಾಪಿಸಿ, ಅಂತಹ ಮಾಸಿಕ ಪತ್ರಿಕೆಯಾಗಿ ಎರಡು ವರ್ಷಕಾಲ ನಡೆಸಿದರು.

ಉತ್ತಮ ಪತ್ರಕರ್ತರಾದ ಬಿ.ಎಸ್. ಗೋಪಾಲಕೃಷ್ಣರು ಮಡಿಕೇರಿಯಲ್ಲಿ 'ನಂದಾದೀಪ' ಮಾಸಿಕ, 'ಶಕ್ತಿ' ಸುದ್ದಿ ದೈನಿಕ, 'ಸಂಧ್ಯಾ' ದೈನಿಕ ಮುಂತಾದ ಪತ್ರಿಕೆಯನ್ನು ವೈವಿಧ್ಯಮಯವಾಗಿ ನಡೆಸಿದ ಕೀರ್ತಿಗೆ ಪಾತ್ರರಾಗಿದ್ದಾರೆ. ಬಿ.ಎಸ್. ಗೋಪಾಲಕೃಷ್ಣರವರು ತಮ್ಮ ಕಾರ್ಯಕ್ಷಮತೆ, ಉದ್ಯೋಗ ನಿಷ್ಠೆಗಳಿಂದಾಗಿ ಅಖಿಲ ಕರ್ನಾಟಕ ಪತ್ರಿಕಾ ಸಂಘದ ಅಧ್ಯಕ್ಷರಾಗಿ ದುಡಿದು ಒಳ್ಳೆಯ ಪತ್ರಿಕೋದ್ಯಮಿಯಾಗಿ ಹೆಸರು ಪಡೆದರು.

ಕರ್ನಾಟಕದ ಮಾಜಿ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರು ಶಿರಸಿಯಿಂದ 'ಶಿರಸಿ ಸಮಾಚಾರ' ಎಂಬ ಪ್ರಥಮ ವಾರ್ತಾ ಸಾಪ್ತಾಹಿಕವನ್ನು ಪ್ರಾರಂಭಿಸಿದರು. ಅವರಿಗೆ ಸಹಾಯಕರಾಗಿದ್ದ ಎಸ್. ಜಿ. ಹೆಗಡೆ ಬಹುಕಾಲ ಪತ್ರಿಕೆಯನ್ನು ನಡೆಸಿಕೊಂಡು ಬಂದರು. ಸ್ವತಃ ಪತ್ರಕರ್ತರಾದ ಪ.ಸು.ಭಟ್ ಅವರು 'ಸಮನ್ವಯ' ಹಾಗೂ 'ಪ್ರಜಾಪ್ರಭುತ್ವ' ಎಂಬ ಪತ್ರಿಕೆಯನ್ನು ಯಶಸ್ವಿಯಾಗಿ ಕೆಲಕಾಲ ನಡೆಸಿದರು. 'ಪ್ರಜಾಪ್ರಭುತ್ವ' ರಾಜಕೀಯ ಸುದ್ದಿಗಳ ಜನಪ್ರಿಯ ಪತ್ರಿಕೆಯಾಗಿತ್ತು. ಹಿರಿಯ ಸಾಹಿತಿ ವಿ.ಬಿ. ಹೊಸಮನೆಯವರು 'ಕಲಾದರ್ಶನ' ಎಂಬ ತ್ರೈಮಾಸಿಕ ಪತ್ರಿಕೆಯನ್ನು ಕಳೆದ ಮೂರು ದಶಕಗಳಿಂದ ನಡೆಸಿಕೊಂಡು ಬರುತ್ತಿದ್ದಾರೆ.

ಇಪ್ಪತ್ತನೆಯ ಶತಮಾನದ ಉತ್ತರಾರ್ಧದ ಪ್ರಾರಂಭದಲ್ಲಿ ಶಿಕ್ಷಣ ತಜ್ಞ ಲಿಂಗೇಶ ಶರ್ಮಾ ಸಹಕಾರಿ ತತ್ತ್ವ ಸಂಸ್ಕೃತಿಯ ಕುರಿತು ಜನರಲ್ಲಿ ಅರಿವು ಉಂಟು ಮಾಡಲು 'ಕಾಮಧೇನು', 'ಮಧುಬನ' ಪತ್ರಿಕೆಗಳನ್ನು ನಡೆಸಿ ಯಶಸ್ವಿ ಪತ್ರಕರ್ತರೆಸಿದರು 'ಅಖಿಲ ಹವ್ಯಕ ಮಹಾಸಭಾ (ರಿ.)'ದ ಉದ್ದೇಶ ,ಸಾಧನೆ, ಕಾರ್ಯಗಳನ್ನು ತಿಳಿಸಲು ೧೯೬೩ರಲ್ಲಿ ಪ್ರಾರಂಭವಾದ 'ಹವ್ಯಕ' ಪತ್ರಿಕೆ ತ್ರೈಮಾಸಿಕವಾಗಿದ್ದು ಕೆಲ ಕಾಲಾನಂತರ ಮಾಸಿಕವಾಗಿ ಅನೇಕ ಹಿರಿಯರ ಸತತ ಪ್ರಯತ್ನದ ಫಲವಾಗಿ ಇಂದಿಗೂ ನಡೆಯುತ್ತಿದೆ. ವೃತ್ತಿಯಲ್ಲಿ ಪ್ರಾಧ್ಯಾಪಕರಾಗಿರುವ ವಿ.ಬಿ. ಅರ್ತಿಕಜೆಯವರು ಮೂರು ದಶಕಗಳ ಕಾಲ ನಾಡಿನ

ವಿವಿಧ ಪತ್ರಿಕೆಗಳಲ್ಲಿ ಪತ್ರಕರ್ತರಾಗಿ ಸೇವೆ ಸಲ್ಲಿಸಿದ್ದಾರೆ. ವಿ.ಬಿ. ಅರ್ತಿಕಜೆಯವರ ಅಂಕಣ ಬರಹಗಳ ಸಂಕಲನ 'ಹೀಗೊಂದು ವೃತ್ತಾಂತ', ಮತ್ತು 'ಮಾರ್ದನಿ' ಕೃತಿರೂಪದಲ್ಲಿ ಪ್ರಕಟಗೊಂಡಿದೆ.

ಪ್ರಸ್ತುತ ಕರ್ನಾಟಕದ ಜನಪ್ರಿಯ ದೈನಿಕ 'ಕನ್ನಡ ಪ್ರಭ' ಪತ್ರಿಕೆಯ ಸಂಪಾದಕರಾಗಿರುವ ವಿಶ್ವೇಶ್ವರ ಭಟ್ಟರು 'ವಕ್ರ ತುಂಡೋಕ್ತಿ', 'ಜನಗಳ ಮನ' (ಅಂಕಣ ಲೇಖನ), 'ನೂರೆಂಟು ಮಾತು ಭಾಗ-೧', 'ನೂರೆಂಟು ಮಾತು ಭಾಗ-೨', 'ನೂರೆಂಟು ಮಾತು ಭಾಗ-೩' ಮುಂತಾದ ಕೃತಿಗಳನ್ನು ರಚಿಸಿದ್ದಾರೆ.

ಹೊರ ನಾಡುಗಳಾದ ಮುಂಬಯಿ, ಪುಣೆ, ದೆಹಲಿ, ಮದರಾಸುಗಳನ್ನು ಸೇರಿದ ಹವ್ಯಕರು ತಮ್ಮ ಧ್ಯೇಯೋದ್ದೇಶಗಳನ್ನು ಹರಡಲು ತಮ್ಮದೇ ಆದ ನಿಯತಕಾಲಿಕವನ್ನು ನಡೆಸುತ್ತಿದ್ದಾರೆ. ಅಂತೆಯೇ ಅನೇಕ ಹವ್ಯಕರು ಹಲವಾರು ಪತ್ರಿಕೆಗಳನ್ನು ರಾಜ್ಯದಾದ್ಯಂತ ನಡೆಸಿ ಯಶಸ್ವಿ ಪತ್ರಕರ್ತರಾಗಿದ್ದಾರೆ.

### ೩.೩.೯ ಮಕ್ಕಳ ಸಾಹಿತ್ಯ

ಕಾವ್ಯ, ನಾಟಕ, ಸಣ್ಣಕಥೆಗಳ ಮೂಲಕ ಹವ್ಯಕರು ಮಕ್ಕಳ ಸಾಹಿತ್ಯ ಕ್ಷೇತ್ರಕ್ಕೆ ಅಪೂರ್ವವಾದ ಕೊಡುಗೆಯನ್ನು ಸಲ್ಲಿಸಿದ್ದಾರೆ. ವಿಭಜಿತ ದಕ್ಷಿಣ ಕನ್ನಡಕ್ಕೆ ಸೇರಿದ ಕವಿಗಳಲ್ಲಿ ಪರಮೇಶ್ವರ ಭಟ್ ಬಾಳಿಲ, ಸಿ.ಎಚ್. ಲಕ್ಷ್ಮಿ, ಎಸ್. ಆರ್. ಪಾಡಿ ಮುಂತಾದವರು ಕಾವ್ಯ ಪ್ರಕಾರಕ್ಕೆ ಅಮೂಲ್ಯವಾದ ಕೊಡುಗೆಗಳನ್ನಿತ್ತಿದ್ದಾರೆ. ೧೯೮೮ರಲ್ಲಿ ಪ್ರಕಟವಾದ ಕೆ. ಪರಮೇಶ್ವರ ಭಟ್ ಬಾಳಿಲ ಅವರ 'ಬಣ್ಣದ ಬೆಳಕು' ಸಂಕಲನದಲ್ಲಿನ 'ಕೇರೆ' ಕವನ, ಭಟ್ಟರು ಮಗುವಿನ ಮನಸ್ಸು ಕುತೂಹಲಕ್ಕೆ ಸ್ಪಂದಿಸುವ ರೀತಿಯನ್ನು ಗ್ರಹಿಸುವುದಕ್ಕೆ ಸಾಕ್ಷಿ. 'ಮುದ್ದು ಗೆಳೆಯ', 'ನಂದನ', 'ಕಾಮನ ಬಿಲ್ಲು', 'ಹೊಂಬೆಳಕು' ಕವಯಿತ್ರಿ ಸಿ.ಎಚ್. ಲಕ್ಷ್ಮಿಯವರು ಬರೆದ ಶಿಶುಗೀತೆಗಳ ಸಂಕಲನವಾಗಿದೆ.

'ಎಸಳು' ಮಹಾಲಿಂಗೇಶ್ವರ ಪಟ್ಟಾಜೆ, 'ಎಳೆಯರ ಗೆಳೆಯ' ಡಾ। ರಮಾನಂದ ಬನಾರಿ, 'ಎಳೆಯರ ಗೊಂಚಲು' ಸರೋಜಿನಿ ಆರ್. ಭಟ್ಟ, 'ಒಡನಾಡಿ' ಪಂಕಜ ಸವಣೂರು, 'ಕಂದನ ಕಿನ್ನರಿ' ಪಿ. ಕೃಷ್ಣ ಭಟ್ಟ, 'ಕನ್ನಡ ಕಸ್ತೂರಿ' ಸವಿತಾ ಭಟ್. ಅಡ್ವಾಯಿ, 'ಚಿಲಿಪಿಲಿ' ಈಶ್ವರಿ ಕೆ. ಭಟ್ಟ, 'ನಗು – ಮಗು' ಬಾಲಮಧುರ ಕಾನನ, 'ನೀತಿ

ಸುಧೆ' ಜಿ. ಅಯ್. ಭಟ್ಟ, 'ಶ್ರೀಗಂಧ' ವಿ.ಮ. ಭಟ್ಟ ಅಡ್ಯನಡ್ಕ ಮುಂತಾದವರು ಮಕ್ಕಳ ಕವನಗಳನ್ನು ರಚಿಸಿದ್ದಾರೆ.

ನವೋದಯ ಯುಗದ ಗದ್ಯ ನಿರ್ಮಾಪಕರಲ್ಲಿ ಬೋಳಂತಕೋಡಿ ಶಂಕರ ಭಟ್ಟರ ಹೆಸರು ಗಣ್ಯವಾದುದು. ಶಿಶು ಸಾಹಿತ್ಯ ಕ್ಷೇತ್ರದಲ್ಲಿ ಅವರು ಮಾಡಿದ ಕಾರ್ಯ ಅಮೋಘವಾದುದು. ಬಿ.ಎಂ. ಶರ್ಮಾ ಅವರು ತಮ್ಮ ಹಿರಿಯ ಸೋದರ ಬಿ. ಶಂಕರ ಭಟ್ಟರ ಜೊತೆಗೂಡಿ ಕದ್ರಿಯಲ್ಲಿ 'ಕನ್ನಡ ಪ್ರಪಂಚ ಪ್ರಕಾಶನ' ಸಂಸ್ಥೆಯನ್ನು ಹುಟ್ಟು ಹಾಕಿದರು. ಈ ಸಂಸ್ಥೆ ಕನ್ನಡದಲ್ಲಿ 'ಮಕ್ಕಳ ಮಂಟಪ' ಮಾಲಿಕೆಯಲ್ಲಿ ನೂರಕ್ಕೂ ಅಧಿಕ ಮಕ್ಕಳ ಕಥಾ ಸಾಹಿತ್ಯ ಕೃತಿಗಳನ್ನು ಪ್ರಕಟಿಸಿದೆ. ಅಮೇರಿಕದ ಕತೆಗಳು, ಜಪಾನಿನ ಕತೆಗಳು, ಯರೋಪಿನ ಕತೆಗಳು, ಚೀನದ ಕತೆಗಳು, ದ್ವಿಪಾಂತರದ ಕತೆಗಳು, ಅಂಡರ್ಸನ್ನಿನ ಕತೆಗಳು, ದೇಶಾಂತರ ಕತೆಗಳು, ಚಾಸರನ ಕತೆಗಳು, ಗ್ರೀಕ್ ವೀರರು, ಗುಣಾಢ್ಯನ ಕತೆಗಳು, ವಿಷ್ಣು ಶರ್ಮನ ಕತೆಗಳು, ಗ್ರೀಕ್ ಸಹೋದರರ ಕತೆಗಳು ಎಂಬಂತೆ ವಿಶ್ವ ಕಥಾ ಭಂಡಾರವನ್ನೇ ಅವರು ಸೂರೆ ಮಾಡಿ ಬಿಟ್ಟಿದ್ದಾರೆ, ಅದರ ಸೊಬಗನ್ನೆಲ್ಲ ಎಳೆಯರಿಗೆ ಉಣ ಬಡಿಸಿದ್ದಾರೆ. ಅವರು ಸುಮಾರು ೮೨ ಕಥಾ ಸಂಕಲನಗಳನ್ನು ರಚಿಸಿದ್ದಾರೆ. ಅವುಗಳ ಭಾಷೆ ಸರಳ, ಶೈಲಿ ಸುಂದರ ಮಾತ್ರವಲ್ಲದೆ ಕುತೂಹಲ ಕೆರಳಿಸುವ ರಚನೆಯಾಗಿದೆ. ಕನ್ನಡ ಪ್ರಪಂಚ ಪ್ರಕಾಶನದ ವತಿಯಿಂದ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲಾ ವಿದ್ಯಾರ್ಥಿಗಳಿಗಾಗಿ 'ಚೆಲುಗನ್ನಡ ಪಾಠಮಾಲೆ' ಎಂಬ ಕನ್ನಡ ಪಠ್ಯ ಪುಸ್ತಕಗಳ ಸರಣಿಯೂ ಪ್ರಕಟವಾಗಿದೆ.

ಪ. ರಾಮಕೃಷ್ಣ ಶಾಸ್ತ್ರಿ ಮಕ್ಕಳಿಗಾಗಿ 'ಆನೆ ಮತ್ತು ಇರುವೆ', 'ಚೀನಾ ದೇಶದ ಜನಪದ ಕಥೆಗಳು', 'ಚಿನ್ನದ ಗರಿ', 'ಚಿನ್ನದ ಸೇಬು', 'ಬದುಕುವ ದಾರಿ', 'ಮೀನಿನ ಪಾಲು', 'ಹಿಮದ ಹುಡುಗಿ', 'ಮುತ್ತಿನ ಚೆಂಡು', ಮೊದಲಾದ ಕಥಾ ಸಂಕಲನಗಳನ್ನು ರಚಿಸಿದ್ದಾರೆ. ಭಾರತೀಸುತರು 'ಅಕ್ಕ ತಂಗಿಯರು', 'ಇಲಿಮಗಳು ಹಾಡಿದಾಗ', 'ಕಳ್ಳರ ಫಜೀತಿ', 'ಕಾವೇರಿ', 'ಕಿಲಾಡಿ ಮಂಗಣ್ಣ', 'ನಳದಮಯಂತಿ', 'ಮಂತ್ರದ ಕೋಲು', 'ಹುಲಿಗಳ ದಿಬ್ಬಣ' ಮುಂತಾದ ೧೯ ಕಥಾಸಂಕಲನಗಳನ್ನು ಬರೆದಿದ್ದಾರೆ. ರಾ.ಮೊ. ವಿಶ್ವಾಮಿತ್ರರು 'ಜಾಣ ಮೋಹನ', 'ತುಂಟ ಬಾಲಣ್ಣ', 'ತೋಳವೂ ಹಂಸವೂ' 'ಬೀರಬಲ್ಲನ ಕತೆಗಳು', 'ಭಕ್ತರ ಕತೆಗಳು', 'ಮಾಯಕ ಕಲ್ಲು', 'ವೀರವರ', 'ವೀರ

ವಿರೋಚನ', 'ಶಿವಪ್ಪನ ಸಾಹಸ', 'ಸ್ಕಂದ ಗುಪ್ತ' ಮೊದಲಾದ ಕಥಾ ಸಂಕಲನಗಳ ಮೂಲಕ ಮಕ್ಕಳ ಸಾಹಿತ್ಯ ಕ್ಷೇತ್ರಕ್ಕೆ ಗಣನೀಯ ಸೇವೆ ಸಲ್ಲಿಸಿದ್ದಾರೆ. ಎಡನಾಡು ಗೋಪಾಲಕೃಷ್ಣ ಭಟ್ಟರು 'ಮಕ್ಕಳ ಗೆಳೆಯ', 'ಪಂಪ ರಾಮಾಯಣದ ಕಥೆ', 'ಭೋಜರಾಜನ ಕಥೆಗಳು' ಎಂಬ ಕೃತಿಗಳನ್ನು ರಚಿಸಿದ್ದಾರೆ.

ಸಿ.ಎಚ್. ಲಕ್ಷ್ಮಿ ಮಕ್ಕಳ ಮನೋಧರ್ಮವನ್ನು ಅರಿತು ಅವರ ಮನಸ್ಸಿಗೆ ಮುದ ನೀಡುವ 'ಭಕ್ತ ಧ್ರುವ ಮತ್ತು ದಾನಶೂರ ಕರ್ಣ', 'ಸ್ಯಮಂತಕ ಮಣಿ', 'ಭಕ್ತ ಸುದಾಮ', 'ಬಲಿಮೋಕ್ಷ', 'ಭಕ್ತ ಅಂಬರೀಶ' ಎಂಬ ಕಿರು ನಾಟಕಗಳನ್ನು ಬರೆದಿದ್ದಾರೆ. ಮಡಿಯಾಲ ನಾರಾಯಣ ಭಟ್ಟರು 'ಹೊಸ ಬದುಕು', 'ಬಲಿದಾನ', 'ಪರಿವರ್ತನೆ', 'ಸ್ನೇಹ ಸಮಾಗಮ', 'ಬದುಕೇ ಬಂಗಾರ' ಮುಂತಾದ ವಿದ್ಯಾರ್ಥಿಗಳು ಅಭಿನಯಿಸುವುಕ್ಕಾಗಿ ಮಾದರಿಯಾಗತಕ್ಕ ನಾಟಕಗಳನ್ನು ರಚಿಸಿದ್ದಾರೆ.

## ೩.೩.೧೦ ಅನುವಾದ ಸಾಹಿತ್ಯ

ಭಾಷೆ ಬೆಳೆಯಲು ಭಾಷಾಂತರ ಅತ್ಯಗತ್ಯ. ಭಾಷಾಂತರದಿಂದ ಮೂಲಭಾಷೆಯ ಸಂಸ್ಕೃತಿ, ಸಮಾಜ, ಜೀವನದರ್ಶನವಾಗುತ್ತದೆ. ಯಾವುದೇ ಒಂದು ಭಾಷೆಯು ಅದರ ಸತ್ತ್ವವನ್ನು ಕಳೆದುಕೊಂಡು ನೀರಸವಾದಂಥ ಸಂದರ್ಭದಲ್ಲಿ ಭಾಷಾಂತರವೆಂಬ ಕ್ರಿಯೆಯಿಂದ ಆ ಭಾಷೆಯನ್ನು ಸಮೃದ್ಧಿಗೊಳಿಸಬಹುದು. ಯಾವ ಭಾಷೆಯಲ್ಲಿ ಹೆಚ್ಚಿನ ಭಾಷಾಂತರಗಳಿರುತ್ತವೆಯೋ, ಆ ಭಾಷೆಯು ಹೆಚ್ಚು ಸಮೃದ್ಧವಾಗಿರುತ್ತದೆ. ಇಂಗ್ಲಿಷ್ ಭಾಷೆಯ ಸಮೃದ್ಧಿಗೆ, ಆ ಭಾಷೆಗೆ ಪ್ರಪಂಚದ ಇತರ ಭಾಷೆಗಳಿಂದ ಭಾಷಾಂತರಗಳು ಹರಿದು ಬಂದಿರುವುದೇ ಕಾರಣವಾಗಿದೆ. ಈ ಎಲ್ಲಾ ಅಂಶಗಳನ್ನೂ ಗಮನಿಸಿದಾಗ ಭಾಷಾಂತರದ ಅಗತ್ಯ, ಮಹತ್ತ್ವದ ಅರಿವಾಗುತ್ತದೆ. ಕನ್ನಡ ಸಾಹಿತ್ಯಕ್ಕೆ ಮೊದಲು ಸಂಸ್ಕೃತ ಭಾಷೆಯಿಂದ ಭಾಷಾಂತರಗಳು ಬಂದವು. ಅನಂತರ ಹೊಸಗನ್ನಡ ಕಾಲಕ್ಕೆ ಐರೋಪ್ಯ ಭಾಷೆಗಳಿಂದ ಭಾಷಾಂತರಗಳು ಬಂದವು. ಹವ್ಯಕ ಸಾಹಿತಿಗಳು ಸಂಸ್ಕೃತ, ಹಿಂದಿ, ಇಂಗ್ಲಿಷ್ ಭಾಷೆಯಲ್ಲಿನ ಕಾವ್ಯ, ನಾಟಕ, ಕಾದಂಬರಿಗಳನ್ನು ಅನುವಾದಿಸಿದ್ದಾರೆ.

ಕಡವ ಶಂಭುಶರ್ಮರು ಅಶ್ವಘೋಷನ 'ಸೌಂದರನಂದ' ಮತ್ತು 'ಬುದ್ಧಚರಿತೆ' ಎಂಬ ಎರಡೂ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಮಾತ್ರವಲ್ಲದೆ ಭಾಸನ

ಪ್ರತಿಮಾ ನಾಟಕ ಮತ್ತು ಶ್ರೀ ಹರ್ಷನ ನಾಗಾನಂದಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಶರ್ಮರು ಸಿದ್ಧಸಂಪ್ರದಾಯದ 'ಸಿದ್ಧಸಿದ್ಧಾಂತ ಪದ್ಧತಿ', 'ಚರ್ಪಟನಾಥ ಶತಕಂ', 'ಸಿದ್ಧಸಿದ್ಧಾಂತ ಸಂಗ್ರಹ' 'ಅಮರೌಘ ಶಾಸನಂ', 'ಅಮರ ಕಥಾ', 'ಅಮರ ಲೋಕ ಕಾವ್ಯಂ', 'ಆತ್ಮವಾದ', 'ಮನ್ಮಥಾ ಕಥಾ', 'ಯೋಗ ಬೀಜಂ' ಮತ್ತು 'ಗೋರಕ್ಷ ಪದ್ಧತಿ' ಮುಂತಾದ ಸಂಸ್ಕೃತ ಗ್ರಂಥಗಳ ಅನುವಾದ ಮಾಡಿ ನಾಥಪಂಥದ ಪರಿಚಯವನ್ನು ಕನ್ನಡಿಗರಿಗೆ ಮಾಡಿಕೊಟ್ಟಿದ್ದಾರೆ. ನೀರ್ಪಾಜೆ ಭೀಮ ಭಟ್ ಕನ್ನಡದ ಕಲ್ಹಣನೆಂದೇ ಹೆಸರುವಾಸಿಯಾದವರು. ಅವರು ಕಲ್ಹಣನ 'ರಾಜ ತರಂಗಿಣಿ'ಯನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಸಂಸ್ಕೃತ ಮೂಲದ 'ರಾಜ ತರಂಗಿಣಿ' ಸುಲಭವಾಗಿ ಅನುವಾದಕ್ಕೆ ದಕ್ಕದ ಕೃತಿ. ಈ ಕೃತಿಗಾಗಿ ಅನುವಾದಕ ನೀರ್ಪಾಜೆಯವರಿಗೆ ೧೯೯೭ನೇ ಸಾಲಿನ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ ದೊರಕಿದೆ. ಅವರು 'ವಿಕ್ರಮಾಂಕದೇವ ಚರಿತಮ್' ಕೃತಿಯನ್ನು ಸಂಸ್ಕೃತದಿಂದ ಅನುವಾದಿಸಿದ್ದಾರೆ. ಚ. ಈಶ್ವರ ಶಾಸ್ತ್ರಿ ಪಂಬೆತ್ತಾಡಿಯವರು 'ಮನಸ್ಮೃತಿ'ಯನ್ನು ಅಚ್ಚುಕಟ್ಟಾಗಿ ಅನುವಾದಿಸಿ ಕನ್ನಡಕ್ಕೆ ತಂದಿದ್ದಾರೆ. ವಿದ್ವಾನ್ ಎನ್. ರಂಗನಾಥ ಶರ್ಮರು ' ಶ್ರೀ ಶಾಂಕರಸೂಕ್ತಿ ಮುಕ್ತಾವಲೀ', 'ವ್ಯಾಸ ತಾತ್ಪರ್ಯ ನಿರ್ಣಯ', 'ಶ್ರೀ ಶಂಕರ ಚರಿತಾಮೃತಂ' ಮೊದಲಾದ ಕೃತಿಗಳನ್ನು ಅನುವಾದಿಸಿದ್ದಾರೆ.

ಮೊಳೆಯಾರು ಶಂಕರನಾರಾಯಣ ಭಟ್ಟರು ಸಂಸ್ಕೃತ ಸಾಹಿತ್ಯದಲ್ಲಿ ಹೆಸರಾಂತ ಕವಿಗಳಾದ ಭಾಸ, ಭಾರವಿ, ಭವಭೂತಿ, ದಿಙ್ನಾಗ ಮೊದಲಾದವರ ಕೃತಿ ರತ್ನಗಳನ್ನು ಕನ್ನಡಕ್ಕೆ ತಂದಿದ್ದಾರೆ. ದಿಙ್ನಾಗನ 'ಕಂದಮಾಲೆ', ಭವಭೂತಿಯ 'ಉತ್ತರ ರಾಮ ಚರಿತಂ', 'ದರ್ಪಕ ವಿಜಯಂ' ಎಂಬ ನಾಟಕಗಳನ್ನು ಕನ್ನಡಿಸಿದ್ದಾರೆ. 'ಪಾಶುಪಾತ' ಭಾರವಿಯ ಕಿರಾತಾರ್ಜುನೀಯದ ಗದ್ಯಾನುವಾದ. ಭಾಸನ ಮೂರು ಏಕಾಂಕಗಳನ್ನು ಕನ್ನಡಿಸಿರುವುದು ಅವರ ಇನ್ನೊಂದು ಸಾಧನೆ. ಗಣಪತಿ ಮೊಳೆಯಾರರು ಸಂಸ್ಕೃತದಿಂದ 'ಮಹಾವೀರ ಚರಿತಮ್' (ಭವಭೂತಿ), 'ಲಟಕಮೇಕಲಮ್' (ಶಶಿಧರ), 'ಮತ್ತೆ ವಿಲಾಸ ಪ್ರಹಸನ' (ಸಂಸ್ಕೃತದ ಎರಡು ಪ್ರಹಸನಗಳು-(ಮಹೇಂದ್ರ ವಿಕ್ರಮ ವರ್ಮ), 'ಚಂಡ ಕೌಶಿಕ' (ಆರ್ಯಕ್ಷೇಮೀಶ್ವರ), 'ವಿದ್ಧಶಾಲ ಭಂಜಿಕೆ' (ರಾಜಶೇಖರ), 'ವೇಣೀ ಸಂಹಾರ' (ಭಟ್ಟ ನಾರಾಯಣ), 'ಮುದ್ರಾ ರಾಕ್ಷಸ' (ವಿಶಾಖ ದತ್ತ), 'ಅಭಿಜ್ಞಾನ ಶಾಕುಂತಲ' (ಕಾಳಿದಾಸ), ಎಂಬ ನಾಟಕಗಳನ್ನು ಕನ್ನಡಕ್ಕೆ

ಅನುವಾದಿಸಿದ್ದಾರೆ. ನೀರ್ಪಾಜೆ ಭೀಮ ಭಟ್ಟರು 'ಮಾಲವಿಕಾಗ್ನಿ ಮಿತ್ರ', 'ವಾಸವದತ್ತೆ', 'ರತ್ನಾವಳಿ', 'ಮಾಲತಿ ಮಾಧವ', 'ಮಣ್ಣಿನ ಬಂಡಿ' ಕೃತಿಗಳನ್ನು ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ. ಮೇಣ ರಾಮಕೃಷ್ಣ ಭಟ್ಟರು ಭಟ್ಟ ನಾರಾಯಣನ 'ವೇಣೀ ಸಂಹಾರ', ಕಾಳಿದಾಸನ 'ಅಭಿಜ್ಞಾನ ಶಾಕುಂತಲ', ಭಾಸ ಕವಿಯ 'ಅವಿಮಾರಕ', ವಿಶಾಖದತ್ತನ 'ಮುದ್ರಾರಾಕ್ಷಸ' ಆರ್ಯಕ್ಷೇಮೀಶ್ವರನ 'ಚಂಡ ಕೌಶಿಕ', ರಾಜಶೇಖರನ 'ವಿದ್ಧಶಾಲ ಭಂಜಿಕೆ' ಶಂಖಧರನ 'ಲಟಕಮೇಲಕಮ್' ಮತ್ತು ಮಹೇಂದ್ರ ವಿಕ್ರಮವರ್ಮನ 'ಮತ್ತೆ ವಿಲಾಸ ಪ್ರಹಸನಮ್' (ಒಂದೇ ಪುಸ್ತಕದಲ್ಲಿ), ಭವಭೂತಿಯ 'ಮಹಾವೀರ ಚರಿತಮ್' ಹೀಗೆ ಎಂಟು ಕೃತಿಗಳನ್ನು ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ.

ಡಾ। ರಾಮಚಂದ್ರದೇವ ಅವರು ವಿಲಿಯಂ ಷೇಕ್ಸ್‌ಪಯರ್‌ನ 'ಮಾಕ್‌ಬೆತ್' ಮತ್ತು 'ಹ್ಯಾಮ್ಲೆಟ್' ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಚಾರ್ಲ್ಸ್ ಡಿಕನ್ಸ್‌ನ 'David Copperfield'ಕಾದಂಬರಿಯನ್ನು ಎ.ಪಿ.ಸುಬ್ಬಯ್ಯನವರು ಕನ್ನಡಕ್ಕೆ ಅನುವಾದಿಸಿ 'ಡೇವಿಡ್ ಕಾಪರ್ ಫೀಲ್ಡ್' ಎಂಬ ಹೆಸರಿನಿಂದ ಪ್ರಕಟಿಸಿದ್ದಾರೆ. ವಿಕ್ಟರ್ ಹ್ಯೂಗೋನ 'Les Miserables' ಇದರ ಸಂಗ್ರಹಾನುವಾದವನ್ನು 'ದುಃಖಾರ್ತರು' ಎಂಬ ಹೆಸರಿನಿಂದ ಪ್ರಕಟಿಸಿದ್ದಾರೆ. ಅವುಗಳು ಭಾಷಾಂತರವಾದರೂ ಮೂಲಕ್ಕೆ ಸರಿಮಿಗಿಲೆನ್ನುವಂತೆ ಬಂದಿದೆ. ಎ. ನರಸಿಂಹ ಭಟ್ಟರು 'Mahakavi Govinda Pai', 'Thus Sng Mankutimma', 'Thus Sang Marula Muniya' ಮುಂತಾದವು ಕನ್ನಡದಿಂದ ಇಂಗ್ಲಿಷ್‌ಗೆ ಅನುವಾದಿತಗೊಂಡ ಕೃತಿಗಳಾಗಿವೆ.

ಬಿ.ಎಂ. ಶರ್ಮಾರಿಗೆ ಹಿಂದಿ ಸಾಹಿತ್ಯದಲ್ಲಿ ಆಳವಾದ ಪಾಂಡಿತ್ಯವಿತ್ತು. ಹಿಂದಿ ಸಾಹಿತ್ಯಕ್ಷೇತ್ರದ ಮಹಾ ವಿದ್ವಾಂಸ, ದಾರ್ಶನಿಕ ರಾಹುಲ ಸಾಂಕೃತ್ಯಾಯನರ ಎರಡು ಪ್ರಸಿದ್ಧ ಕೃತಿಗಳನ್ನು ಅವರು ಕನ್ನಡಕ್ಕೆ ಅನುವಾದಿಸಿದ್ದಾರೆ. ಅವುಗಳಲ್ಲಿ ಒಂದು 'ವೋಲ್ಗಾ-ಗಂಗಾ' ಆರ್ಯರ ಕಾಲದಿಂದ ಭಾರತೀಯ ನಾಗರೀಕತೆ ನಡೆದು ಬಂದ ದಾರಿಯನ್ನು ವರ್ಣಿಸುವ ಕೃತಿ. ಇನ್ನೊಂದು ಕೃತಿ 'ಸಿಂಹಸೇನಾಪತಿ' ರಾಹುಲ ಸಾಂಕೃತ್ಯಾಯನರ ಈ ಕೃತಿ ಬುದ್ಧನ ಕಾಲದ ಭಾರತದಲ್ಲಿದ್ದ ಸಣ್ಣ ಪುಟ್ಟ ಗಣರಾಜ್ಯಗಳ ಧಾರ್ಮಿಕ, ಸಾಂಸ್ಕೃತಿಕ, ರಾಜಕೀಯ ಜೀವನದ ಚಿತ್ರಣವಿದೆ. ಡಾ। ರಾಮಚಂದ್ರ ಅನಂತ ಹೆಗಡೆಯವರು

ಶಿವರಾಮ ಕಾರಂತರ 'ಬೆಟ್ಟದ ಜೀವ' ಕಾದಂಬರಿಯನ್ನು 'ಕಾನನ ಜೀವ' ಎಂಬುದಾಗಿ ಹಿಂದಿಗೆ ಅನುವಾದಿಸಿದ್ದಾರೆ.

### ೩.೩.೧೧ ಪಾಕ ಶಾಸ್ತ್ರ

ಕ್ರಿ.ಶ. ೧೫ನೆಯ ಶತಮಾನದಲ್ಲಿ ಬದುಕಿ ಬಾಳಿದ ಮೂರನೆಯ ಮಂಗರಸನು, ವಿಜಯನಗರ ಸಾಮ್ರಾಜದ ವೈಭವ ಜೀವನವನ್ನು ಕಣ್ಣಾರೆ ಕಂಡವನು ಎಂತಲೇ ಈ ಕವಿಗೆ ಅನೇಕ ಬಗೆಯ ಸವಿಯಡಿಗೆಯ ಪ್ರತ್ಯಕ್ಷ ಪರಿಚಯವಿದೆ. ಜೈನ ತತ್ತ್ವಶಾಸ್ತ್ರದಲ್ಲಿ ಇವನು ಪರಿಣತನಿದ್ದಂತೆಯೇ ಪಾಕಶಾಸ್ತ್ರದಲ್ಲಿಯೂ ಆಳವಾದ ಜ್ಞಾನವನ್ನು ಪಡೆದಿದ್ದಾನೆ. 'ಸೂಪಶಾಸ್ತ್ರ' ಎಂಬ ಹೆಸರಿನಿಂದ ಇವನು ಒಂದು ಪದ್ಯ ಗ್ರಂಥವನ್ನು ಬರೆದಿದ್ದಾನೆ. ಇದರಲ್ಲಿ ಪಿಷ್ಟಪಾಕ, ಪಾನಕ, ಶಾಕಪಾಕ, ದಂಶಕಪಾಕ ಮೊದಲಾದ ಬೇರೆ ಬೇರೆ ಷಡ್ರಸವಿಪಾಕ ಭೇದಗಳನ್ನು ವಿವರವಾಗಿ ಹೇಳಿದ್ದಾನೆ.

ಅಡುಗೆ ಮಾಡುವುದೂ ಒಂದು ಕಲೆ. ಬಗೆ ಬಗೆಯ ದವಸಧಾನ್ಯಗಳು, ಹಾಲು, ತುಪ್ಪ, ಸಕ್ಕರೆ, ತರಕಾರಿಗಳಿದ್ದರೂ ಸರಿಯಾಗಿ ಅಡುಗೆ ತಿಳಿದರೆ ಮಾತ್ರ ರುಚಿಕಟ್ಟಾಗಿ ವ್ಯಂಜನಗಳನ್ನು ತಯಾರಿಸಲು ಸಾಧ್ಯವಾಗುತ್ತದೆ. ಈ ಕಲೆ ಕರಗತವಾಗಬೇಕಿದ್ದರೆ ಸ್ವಲ್ಪ ಪರಿಶ್ರಮ ಅಗತ್ಯ. ಹೊಸದಾಗಿ ಅಡುಗೆ ಮಾಡುವವರಿಗೆ ಹಾಗೂ ಪಾಕಶಾಸ್ತ್ರದಲ್ಲಿ ಪ್ರಾವೀಣ್ಯತೆಯನ್ನು ಹೊಂದುವವರಿಗೆ ಉಪಯೋಗವಾಗುವಂತೆ ಹವ್ಯಕ ಮಹಿಳೆಯರು ಪಾಕಶಾಸ್ತ್ರಕ್ಕೆ ಸಂಬಂಧಿಸಿದ ಕೃತಿಗಳನ್ನು ಬರೆದಿದ್ದಾರೆ. ಕಡಂಬಿಲ ಸರಸ್ವತಿ ಬರೆದ 'ಅಡಿಗೆ' ಪಾಕಶಾಸ್ತ್ರದ ಪುಸ್ತಕ ಹದಿನೆಂಟು ಮುದ್ರಣ ಕಂಡಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಚಲಿತವಿರುವ ಅಡುಗೆ ಪದ್ಧತಿಯನ್ನು ಅವರು ತಮ್ಮ ಕೃತಿಯಲ್ಲಿ ಪರಿಚಯಿಸಿದ್ದಾರೆ. "ಈಗ 'ಅಡಿಗೆ' ಪುಸ್ತಕವನ್ನು ನೋಡುವಾಗ ನಮಗೆ ವಿಸ್ಮಯವಾಗುತ್ತದೆ. ನಮ್ಮಲ್ಲಿ ಇಷ್ಟು ಅಧಿಕ ಸಂಖ್ಯೆಯಲ್ಲಿ ವಿವಿಧ ಪಾಕಗಳಿವೆಯೇ ಎಂಬ ವಿಸ್ಮಯವಾಗುತ್ತದೆ. ಪರವಾಗಿಲ್ಲ, ಪ್ರಾಯಶಃ ಉಂಡು ತಿನ್ನುವುದರಲ್ಲಿ ಕನ್ನಡಿಗರು ಇತರರಿಗಿಂತ ಎಂದಿಗೂ ಹಿಂದೆ ಬೀಳಲಾರರು. ಎಂಬುದು ಹೆಗ್ಗಳಿಕೆಯ ವಿಷಯ. ಒಟ್ಟಿನಲ್ಲಿ ೪೭೦ ಬೇರೆ ಬೇರೆ ಪಾಕಗಳ ತಯಾರಿಕೆಗೆ ಸೂತ್ರಗಳನ್ನು ಇಲ್ಲಿ ಹೇಳುತ್ತಾರೆ". (ಕಡಂಬಿಲ ಸರಸ್ವತಿ, ಅಡಿಗೆ; ಮೊದಲಮಾತು; ೧೯೯೨; ಪುಟ ೩) ಎಂಬುದು ಪ್ರೊ. ಎಂ. ಮರಿಯಪ್ಪ ಭಟ್ಟರ ಅಭಿಪ್ರಾಯ. ಸವಿತಾ ಎಸ್.ಭಟ್. ಅಡ್ವಾಯಿಯವರು ಬರೆದ 'ಸವಿಯೂಟ' ಪಾಕಕಲೆಯ

ಕುರಿತ ಕೃತಿ. ಸಾಂಪ್ರದಾಯಿಕ ಅಡುಗೆಯೊಂದಿಗೆ ಆಧುನಿಕ ತಿಂಡಿ, ತಿನಸುಗಳು, ಖಾದ್ಯಗಳು, ಪದಾರ್ಥ, ಪಾಯಸಗಳು ಸರಿಯಾಗಿ ತಯಾರಿಸುವ ವಿಧಾನಗಳು, ಬೇಕಾದ ತರಕಾರಿ ಮತ್ತು ಜೀನಸುಗಳು , ಅಡುಗೆ ಕೋಣೆಯ ಅವಶ್ಯಕ ಪಾತ್ರೆ ಮತ್ತು ಉಪಕರಣಗಳು ಮುಂತಾದ ಮಾಹಿತಿಗಳನ್ನು ಲೇಖಕರು ಈ ಪುಸ್ತಕದಲ್ಲಿ ಒದಗಿಸಿದ್ದಾರೆ. ಹಳೆಯ ಕಾಲದ ಆರೋಗ್ಯಕರ ತಂಬುಳಿಯಿಂದ ಅತ್ಯಾಧುನಿಕ ಐಸ್‌ಕ್ರೀಂನವರೆಗೆ ೬೦೦ಕ್ಕೂ ಅಧಿಕ ಪದಾರ್ಥಗಳು, ತಿಂಡಿಗಳು, ಪಾಯಸಗಳು ಮತ್ತು ಆಧುನಿಕ ಅಡುಗೆಯ ವೈವಿಧ್ಯಗಳು ಈ ಕೃತಿಯಲ್ಲಿ ನಿರೂಪಿತವಾಗಿವೆ. ಸ್ವಾನುಭವ ಈ ಕೃತಿಯ ವೈಶಿಷ್ಟ್ಯ. ಬಿ.ಎಸ್. ಕಾವೇರಿಯವರು 'ಅಡುಗೆಯ ಸೌಭಾಗ್ಯ' ಎಂಬ ಕೃತಿಯನ್ನು ರಚಿಸಿದ್ದಾರೆ. 'ಪಾಕಸಂಗಮ' ಆಶಾ ತಿಮ್ಮಪ್ಪಯ್ಯನವರ ಕೃತಿ. ಲೀಲಾ ಮಣ್ಣಾಲರು 'ಸ್ವಾದಿಷ್ಟ ಉಪಾಹಾರ' ಪುಸ್ತಕದಲ್ಲಿ ನೂರಾರು ಬಗೆಯ ತಿಂಡಿಗಳನ್ನು ತಯಾರಿಸುವ ವಿಧಾನಗಳನ್ನು ತಿಳಿಸಿದ್ದಾರೆ. ಈ ಕೃತಿಯಲ್ಲಿ ಮೂವತ್ತು ಬಗೆಯ ವ್ಯಂಜನಗಳ ತಯಾರಿ ಕುರಿತ ವಿವರಗಳಿವೆ. ಕೊನೆಯಲ್ಲಿ ಕಿವಿಮಾತುಗಳ ರೀತಿಯ ಉಪಯುಕ್ತ ಮಾಹಿತಿಗಳನ್ನು ಅನುಭವದ ಹಿನ್ನೆಲೆಯಲ್ಲಿ ಒದಗಿಸಿದ್ದಾರೆ. ಸಾಂಪ್ರದಾಯಿಕ ಖಾದ್ಯಗಳೊಂದಿಗೆ ಹಲವಾರು ಹೊಸ ರುಚಿಗಳನ್ನು ಸೇರಿಸಿರುವುದು, ವಿವರಣೆ ಸಂಕ್ಷಿಪ್ತ ಹಾಗೂ ಸ್ಪಷ್ಟವಾಗಿರುವುದು ಈ ಕೃತಿಯ ವೈಶಿಷ್ಟ್ಯ.

### ೩.೩.೧೨ ಇಂಗ್ಲೀಷ್ ಕೃತಿಗಳು

ಕನ್ನಡ, ಸಂಸ್ಕೃತ, ಹಿಂದಿ ಭಾಷೆಗಳಲ್ಲದೆ ಇಂಗ್ಲಿಷ್ ಭಾಷೆಯಲ್ಲಿಯೂ ಹವ್ಯಕರು ವೈವಿಧ್ಯಮಯ ಕೃತಿಗಳನ್ನು ರಚಿಸಿದ್ದಾರೆ.

ಮೇಣ ರಾಮಕೃಷ್ಣ ಭಟ್ಟರು 'Essentials of Horary Astrology', 'Fundamentals of Astrology', 'Suri Ramdasgeeta' ಮುಂತಾದ ಕೃತಿಗಳನ್ನು ಇಂಗ್ಲಿಷ್‌ನಲ್ಲಿ ರಚಿಸಿದ್ದಾರೆ. 'Fundamentals of Astrology' (ಇಪ್ಪತ್ತೆರಡು ಅಧ್ಯಾಯನಗಳ ಕೃತಿ)ಅವರ ಅಧ್ಯಯನಗಳ ಆಳ ವಿಸ್ತಾರವನ್ನು ತಿಳಿಸುವ ಗ್ರಂಥ. 'An Outline Grammer of Havyaka' ಎಂಬ ಕೃತಿಯನ್ನು ಡಿ.ಎನ್. ಶಂಕರ ಭಟ್ಟರು ರಚಿಸಿದ್ದಾರೆ. ಡಾ. ಎ.ಕೆ. ಶಾಸ್ತ್ರಿ 'History of Shringeri' ಎಂಬ

ಕೃತಿಯನ್ನು ರಚಿಸಿದ್ದಾರೆ. ಡಾ.ಕೆ.ಜಿ. ಶಾಸ್ತ್ರಿಯವರ 'The Havyka Dialect of North Kanara' ಎಂಬ ಕೃತಿಯನ್ನು ಬರೆದಿದ್ದಾರೆ. 'Pun in Sanskrit Literature- A New Approach' ಎಂಬುದು ಡಾ. ಗುರುಪಾದ ಕೆ. ಹೆಗಡೆಯವರ ಕೃತಿ. ಡಾ. ಎನ್.ಜೆ. ಹೆಗಡೆಯವರು 'Agro Forestry', 'Bio-Enerey', 'Mother Nuture', 'Let us Protect our Enviornment' ಎಂಬ ಆಂಗ್ಲಭಾಷೆಯ ಕೃತಿಗಳನ್ನು ರಚಿಸಿದ್ದಾರೆ. ಸ್ವತಃ ನ್ಯಾಯಾವಾದಿಗಳೂ ಕಾನೂನು ಸಲಹೆಗಾರರೂ ಆದ ಶೋಭಾ ಪಂಡಿತರು ಬರೆದ 'Business Law Commentory' ಮತ್ತು 'Conceptual Analysis of the Consumer Protection Act- Commentary' ಎಂಬುದು ಗ್ರಾಹಕ ಕಾನೂನಿಗೆ ಸಂಬಂಧಿಸಿದ ಕೃತಿ. ಡಾ. ಸುನಂದಾ ಶಾಸ್ತ್ರಿಯವರು ಬರೆದ 'Sanskrit for Beginners' ಎಂಬ ಕೃತಿ ಅಮೇರಿಕಾ ವಿಶ್ವವಿದ್ಯಾನಿಲಯದಲ್ಲಿ ಪಠ್ಯಪುಸ್ತಕವಾಗಿದೆ. ವಿ.ಆರ್. ಭಟ್ಟ ಕೆಕ್ಕಾರು ಎಂಬವರು 'Essays in Criminal Law' ಎಂಬ ಕೃತಿಯನ್ನೂ, ಶಂಭು ಭಟ್ಟ ಮದ್ಗುಣಿ 'Commercial Fruits of India' ಎಂಬ ಗ್ರಂಥವನ್ನು ರಚಿಸಿದ್ದಾರೆ.

ಡಾ. ಸುನಂದಾಶಾಸ್ತ್ರಿ ಅವರು 'ವಾಸ್ತು ಶಾಸ್ತ್ರ' ಎಂಬ ಕೃತಿಯನ್ನು ಮರಾಠಿ ಭಾಷೆಯಲ್ಲಿ ಬರೆದಿದ್ದಾರೆ. ಮೇಣ ರಾಮಕೃಷ್ಣ ಭಟ್ಟರು ಸಂಸ್ಕೃತದಲ್ಲಿ 'ಕಾವ್ಯೋದ್ಯಾನಮ್' ಹಾಗೂ 'ಅರ್ಜುನ' ಎಂಬ ಕೃತಿಯನ್ನು ರಚಿಸಿದ್ದಾರೆ.

**೩.೩.೧೩ ಇತರ**

ಹವ್ಯಕ ಸಾಹಿತಿಗಳು ಕಾವ್ಯ, ಸಣ್ಣಕತೆ, ಕಾದಂಬರಿ, ನಾಟಕ ಮುಂತಾದ ಸೃಜನಶೀಲ ಸಾಹಿತ್ಯ ಪ್ರಕಾರಗಳಲ್ಲದೆ ವ್ಯಕ್ತಿ ವಿಚಾರ, ಸಂಸ್ಕೃತಿ, ಸಾಹಿತ್ಯ ಚರಿತ್ರೆ, ನಿಘಂಟು, ಗ್ರಂಥ ಸಂಪಾದನೆ, ಕೃಷಿ ಮೊದಲಾದ ವಿಚಾಗರಗಳಿಗೆ ಸಂಬಂಧಿಸಿದ ಕೃತಿಗಳನ್ನು ರಚಿಸಿದ್ದಾರೆ. ಭಿನ್ನ ಭಿನ್ನ ವಿಚಾರಗಳಿಗೆ ಸಂಬಂಧಿಸಿದ ಕೃತಿಗಳಲ್ಲಿ ಕೆಲವು ಪರಿಚಯಾತ್ಮವಾಗಿ ಕಂಡುಬಂದರೆ, ಕೆಲವು ಸಾಹಿತ್ಯಾಭ್ಯಾಸಿಗಳ ದೃಷ್ಟಿಯಿಂದ

ಉಪಯುಕ್ತವಾಗಿವೆ. ಹವ್ಯಕರ ಆಸಕ್ತಿಯ ವಿಷಯಗಳ ವೈಶಾಲ್ಯವನ್ನು ಪರಿಚಯಿಸಿಕೊಡುವ ಆ ಕೃತಿಗಳು ಅವರ ಪಾಂಡಿತ್ಯದ ಆಳಕ್ಕೂ ಸಾಕ್ಷಿಯಾಗಿವೆ.

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಪ್ರೊ. ಎಂ.ಮರಿಯಪ್ಪ ಭಟ್ಟರು ಉಲ್ಲೇಖಾರ್ಹ ಸೇವೆ ಸಲ್ಲಿಸಿದ ಹಿರಿಯರು. ಜೀವಿತದ ಬಹುಭಾಗವನ್ನು ಮದರಾಸಿನಲ್ಲಿ ತಮಿಳು ಭಾಷಿಕರ ಮಧ್ಯೆಯೇ ಕಳೆದರೂ ಅಲ್ಲಿ ಕನ್ನಡದ ಕೆಲಸವನ್ನು ಮಾಡಿದವರು. ನಿಘಂಟುಗಾರರಾಗಿ ಮರಿಯಪ್ಪ ಭಟ್ಟರು ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿದ ಸೇವೆ ಶ್ಲಾಘನೀಯವಾದುದು. ಕನ್ನಡನಾಡಿನ ವಿಶ್ವವಿದ್ಯಾನಿಲಯಗಳು ಮಾಡಬೇಕಾಗಿದ್ದ ಕಿಟ್ಟೆಲ್ ಕೋಶದ ಪುನರ್‌ಮುದ್ರಣದಂತಹ ಕಾರ್ಯವನ್ನು ತಮಿಳುನಾಡಿನ ವಿಶ್ವವಿದ್ಯಾನಿಲಯ ಕೈಗೊಳ್ಳುವುದಕ್ಕೆ ಕಾರಣರಾದವರು ಪ್ರೊ. ಮರಿಯಪ್ಪ ಭಟ್ಟರು. ಇದರಿಂದಾಗಿ ಅವರು 'ಅಭಿನವ ಕಿಟ್ಟೆಲ್' ಎಂಬ ಬಿರುದಿಗೆ ಪಾತ್ರರಾಗಿದ್ದಾರೆ. ಎಂಟು ವರ್ಷಗಳಲ್ಲಿ ಅದರ ನಾಲ್ಕು ಸಂಪುಟಗಳನ್ನು ಪರಿಷ್ಕರಿಸಿ ಪ್ರಕಟಿಸಿದರು. ಈ ಅರ್ಥಕೋಶದ ನಾಲ್ಕು ಸಂಪುಟಗಳು ಕ್ರಮವಾಗಿ ೧೯೬೮, ೧೯೬೯, ೧೯೭೦ ಮತ್ತು ೧೯೭೧ರಲ್ಲಿ ಪ್ರಕಟವಾದವು. ೧೯೭೭ರಲ್ಲಿ ಡಾ. ಎ. ಶಂಕರ ಕೆದಿಲಾಯ ಅವರೊಂದಿಗೆ ಸೇರಿ ಮ್ಯಾನರ್‌ನ 'ತುಳು-ಇಂಗ್ಲಿಷ್ ನಿಘಂಟು'ನ್ನು ಪರಿಷ್ಕರಿಸಿ ವಿಸ್ತೃತ ರೂಪದಲ್ಲಿ ಸಂಪಾದಿಸಿದರು. ಮರಿಯಪ್ಪ ಭಟ್ಟರು ರಚಿಸಿದ 'ಹವ್ಯಕ-ಇಂಗ್ಲಿಷ್ ನಿಘಂಟು' ೧೯೮೨ರಲ್ಲಿ ಪ್ರಕಟವಾಯಿತು.**"Dravidian Comparative Vocabulary Volume-1"** ಎಂಬ ಕೃತಿಯನ್ನು ಮರಿಯಪ್ಪ ಭಟ್ಟರು ತೆಲುಗಿನ ಎನ್. ವೆಂಕಟರಾವ್, ತಮಿಳಿನ ಆರ್.ಪಿ. ಸೇತುಪಿಳ್ಳೆ ಹಾಗೂ ಮಲೆಯಾಳದ ಎಸ್.ಕೆ. ನಾಯರ್ ಅವರೊಂದಿಗೆ ಸೇರಿ ೧೯೫೫ರಲ್ಲಿ ರಚಿಸಿದ್ದಾರೆ. ಮದರಾಸು ವಿಶ್ವವಿದ್ಯಾನಿಲಯ ಪ್ರಕಟಿಸಿದ ಈ ಕೃತಿ ದ್ರಾವಿಡ ಭಾಷಾ ವಿಜ್ಞಾನಕ್ಕೆ ದೊಡ್ಡ ಕೊಡುಗೆಯಾಗಿದೆ. ಮರಿಯಪ್ಪ ಭಟ್ಟರು ಒಳ್ಳೆಯ ಸಂಪಾದಕರೂ ಹೌದು. 'ಅಭಿನವ ಮಂಗರಾಜ ನಿಘಂಟು', ಗುಣಚಂದ್ರನ 'ಛಂದಸ್ಸಾರ', 'ವರ್ಧಮಾನ ಪುರಾಣ', 'ಪಾರ್ಶ್ವನಾಥ ಪುರಾಣ', 'ಜಾತಕ ತಿಲಕ', 'ವಿಷ್ಣು ಪುರಾಣ(ಪಂಚಮಾಂಶ)', 'ಸಂಗೀತ ರತ್ನಾಕರ', 'ವ್ಯವಹಾರ ಗಣಿತ', 'ಸದ್ಗುರು ರಹಸ್ಯ' ಮುಂತಾದವು ಅವರಿಂದ ಸಂಪಾದಿತವಾದ ಹಳಗನ್ನಡ ಕೃತಿಗಳು. ಭಟ್ಟರು ಈ ಕೃತಿಗಳಿಗೆ ವಿಸ್ತಾರವಾದ ಹಾಗೂ ಸಂಶೋಧನಾತ್ಮಕವಾದ ಮುನ್ನುಡಿ

ಬರೆದಿದ್ದಾರೆ. ಈ ಕೃತಿಗಳನ್ನಲ್ಲದೆ ಹೊಸಗನ್ನಡ ಕವಿತೆಗಳ ಸಂಕಲನ ಗ್ರಂಥವಾದ 'ಕಾವ್ಯಶ್ರೀ' ಮತ್ತು 'ಹಳಗನ್ನಡ-ನಡುಗನ್ನಡ ಕಾವ್ಯಸಂಗ್ರಹ' ಕೃತಿಗಳನ್ನೂ 'ನಾಲ್ನುಡಿ-ನಾಣ್ನುಡಿ' ಎಂಬ ಗ್ರಂಥವನ್ನೂ ಸಂಪಾದಿಸಿದ್ದಾರೆ. 'Dravidic Studies'ಕೃತಿ ಭಾಷಾ ವಿಜ್ಞಾನ ಕ್ಷೇತ್ರಕ್ಕೆ ಅವರು ನೀಡಿದ ಮಹತ್ತ್ವದ ಕೊಡುಗೆ.

ಗಣ್ಯ ವಿದ್ವಾಂಸರಾದ ಟಿ. ಕೇಶವ ಭಟ್ಟರು 'ಭಾಷಾದೀಪಿಕೆ', 'ಭಾಷಾ ಭಾಸ್ಕರ', 'ತೂಗುದೀವಿಗೆ', 'ಹಾಡಿನ ಚೂಡಾಮಣಿ', 'ಸಂಶೋಧನ ರತ್ನಮಾಲಿಕೆ', ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ಶ್ರೀಯುತರು 'ಹವ್ಯಕ ಶೋಭಾನೆಗಳು' (೧೯೮೬) ಎಂಬ ಬೃಹತ್ ಸಂಪುಟದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಅಜ್ಞಾತ ಹವ್ಯಕ ಕವಿಗಳು ಹೆಣೆದ ಅನೇಕ ಹಾಡುಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಅವರು ಹವ್ಯಕರು ಬಳಸುವ ಭಾಷೆಯಲ್ಲಿ ಕಂಡುಬರುವ ಶಬ್ದಗಳನ್ನೂ, ಅದಕ್ಕಿರುವ ಮೀಸಲು ಅರ್ಥವನ್ನೂ ಕಂದಪದ್ಯದಲ್ಲಿಯೇ ತಿಳಿಸಿದ್ದಾರೆ.

ದೇರಾಜೆ ಸೀತಾರಾಮಯ್ಯನವರ 'ಶ್ರೀರಾಮಚಂತಾಮೃತಂ' ಗದ್ಯದಲ್ಲಿ ರಚಿತವಾಗಿದೆ. ದೇರಾಜೆಯವರ ಕೃತಿಯಲ್ಲಿ ಕಲವೊಂದು ಬದಲಾವಣೆಗಳಿದ್ದರೂ ಅದು ವಾಲ್ಮೀಕಿ ವಿರಚಿತ ಮೂಲಕಾವ್ಯದ ಚೌಕಟ್ಟನ್ನೇ ಹೊಂದಿದೆ. ಹೊಸಗನ್ನಡ ಗದ್ಯದಲ್ಲಿರುವ ಈ ಗ್ರಂಥದಲ್ಲಿ ಅನುಕ್ರಮವಾಗಿ ಬಾಲಕಾಂಡ, ಅಯೋಧ್ಯಾಕಾಂಡ, ಅರಣ್ಯಕಾಂಡ, ಕಿಷ್ಕಿಂದಾಕಾಂಡ, ಸುಂದರಕಾಂಡ, ಯುದ್ಧಪೂರ್ವಕಾಂಡ, ಯುದ್ಧೋತ್ತರ ಕಾಂಡ, ಮತ್ತು ಉತ್ತರಕಾಂಡಗಳೆಂಬ ವಿಭಾಗಗಳಿವೆ. ಒಂದು ಸಮಗ್ರ ರಾಮಾಯಣ ಗ್ರಂಥವಾಗಿ ಮೂಡಿಬಂದ 'ಶ್ರೀರಾಮಚರಿತಾಮೃತಂ' ಕನ್ನಡ ಸಾರಸ್ವತ ಲೋಕದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಹೊಂದಿದೆ. ಹೊಸಗನ್ನಡ ಗದ್ಯದಲ್ಲಿರುವ 'ಶ್ರೀಮನ್ಮಹಾಭಾರತ ಕಥಾಮೃತಂ' ವ್ಯಾಸ ವಿರಚಿತ ಮೂಲ ಭಾರತದ ಕಥೆಯನ್ನೇ ಹೊಂದಿದೆ. ಇದು ಸಮಗ್ರ ಭಾರತದ ಕಥೆಯನ್ನೊಳಗೊಂಡ ಕನ್ನಡ ಗದ್ಯದಲ್ಲಿ ರಚಿತವಾದ ಮೊತ್ತಮೊದಲ ಮಹಾಭಾರತ ಕೃತಿಯಾಗಿದೆ. ಪರ್ವಗಳನ್ನು ವಿಭಾಗಿಸುವಲ್ಲಿ ದೇರಾಜೆಯವರು ವ್ಯತ್ಯಾಸ ಮಾಡಿಕೊಂಡಿದ್ದಾರೆ. ಮೂಲಭಾರತದಲ್ಲಿರುವ ಪ್ರಸ್ತಾವನಾಪರ್ವ, ಪುರಾಣಪರ್ವ ವಂಶಾವತರಣಪರ್ವ, ಆದಿಪರ್ವ, ಸಭಾಪರ್ವ, ಅರಣ್ಯಪರ್ವ, ವಿರಾಟಪರ್ವ, ಉದ್ಯೋಗ ಪರ್ವ, ಶಾಂತಿಪರ್ವ, ಅಶ್ವಮೇಧಿಕ ಪರ್ವ, ಆಶ್ರಮವಾಸಿಕ ಪರ್ವ, ಮತ್ತು

ಮಹಾಪ್ರಸ್ಥಾನಿಕ ಪರ್ವಗಳ ಹೆಸರನ್ನು ಹಾಗೆಯೇ ಇಟ್ಟುಕೊಂಡಿದ್ದಾರೆ. ಈ ಕೃತಿಯನ್ನು ದೇರಾಜೆಯವರು ಸರಳವಾಗಿ ಸುಂದರ ಶೈಲಿಯಲ್ಲಿ ನಿರೂಪಿಸಿದ್ದಾರೆ. 'ಕುರುಕ್ಷೇತ್ರಕ್ಕೊಂದು ಆಯೋಗ' ದೇರಾಜೆಯವರ ವಿಶಿಷ್ಟ ಕೃತಿ. ಮಹಾಭಾರತದಲ್ಲಿ ಬರುವ ಮಹಾನ್ ವ್ಯಕ್ತಿಗಳನ್ನು ಹಾಗೂ ಘಟನೆಗಳನ್ನು ವಿಮರ್ಶಾತ್ಮಕವಾಗಿ ಈ ಕೃತಿ ವಿಶ್ಲೇಷಿಸುತ್ತದೆ. ಕನ್ನಡ ಸಾಹಿತ್ಯದಲ್ಲಿ ಇಂತಹ ತಂತ್ರವನ್ನು ಬಳಸಿ ರಚಿತವಾದ ಕೃತಿಗಳು ವಿರಳ. ಈ ಕೃತಿಯಲ್ಲಿ ಧರ್ಮ, ಅಧರ್ಮ, ನ್ಯಾಯ, ಅನ್ಯಾಯಗಳ ವಿಶ್ಲೇಷಣೆಯಿದೆ. 'ರಾಮರಾಜ್ಯದ ರೂವಾರಿ'ಯು ಬಹ್ವಂಶದಲ್ಲಿ 'ಶ್ರೀಮದ್ರಾಮಾಯಣ'ದ ಬಾಲಕಾಂಡವನ್ನು ಆಧರಿಸಿ ರೂಪುಗೊಂಡ ದೇರಾಜೆಯವರ ಕೃತಿ. ಪುರಾಣಗಳನ್ನು ಸಮಕಾಲಿನ ದೃಷ್ಟಿಯಿಂದ ಲೌಕಿಕವಾಗಿ ವಿವೇಚಿಸಬಲ್ಲ ದೇರಾಜೆಯವರ ಚಿಂತನಶೀಲತೆಗೆ 'ರಾಮರಾಜ್ಯದ ರೂವಾರಿ' ಒಂದು ಉತ್ತಮ ನಿದರ್ಶನವಾಗಿದೆ. ದೇರಾಜೆಯವರ 'ಭೀಷ್ಮಾರ್ಜುನ' ಮತ್ತು 'ಸುಭದ್ರಾರ್ಜುನ' ಕೃತಿಗಳು ಯಕ್ಷಗಾನ ಪದಕ್ಕೆ ಅರ್ಥವಿವರಣೆಯನ್ನು ಬರೆದ ಕೃತಿಗಳಾಗಿವೆ. 'ಯಕ್ಷಗಾನ ವಿವೇಚನೆ' ಅವರ ಜೀವನವನ್ನು ಬಹುಪಾಲು ಆವರಿಸಿದ ಕಲೆಯೊಂದರ ವಿಶ್ಲೇಷಣೆಯಾಗಿದೆ. ಯಕ್ಷಗಾನ ಹೇಗಿರಬೇಕು, ಅದರ ಗುರಿ–ಗತಿಗಳೇನು ಎಂಬುದನ್ನು ಇಲ್ಲಿ ವಿವರಿಸಿದ್ದಾರೆ. ಯಕ್ಷಗಾನ ಅಭ್ಯಾಸಿಗಳಿಗೆ ಇದೊಂದು ಉಪಯುಕ್ತ ಕೃತಿ.

ಮಡಿಯಾಲ ನಾರಾಯಣ ಭಟ್ಟರು ಬರೆದ 'ಅಧ್ಯಾಪಕ' ಎಂಬ ಕೃತಿ ಅವರ ಮಹತ್ತ್ವಪೂರ್ಣ ಗ್ರಂಥ. ಈ ಕೃತಿಯಲ್ಲಿ ಓರ್ವ ಅಧ್ಯಾಪಕನ ಬದುಕು, ಕರ್ತವ್ಯಗಳನ್ನು ಅವರು ಚೆನ್ನಾಗಿ ನಿರೂಪಿಸಿದ್ದಾರೆ. 'ಭೀಷ್ಮ' , 'ವಿಕ್ರಮ ಸಾರ್ವಭೌಮ' ಎಂಬುದು ಮೊಳೆಯಾರು ಶಂಕರನಾರಾಯಣ ಭಟ್ಟರ ಪ್ರೌಢ ಗದ್ಯ ರಚನೆಗಳು. ಯರ್ಮುಂಜ ಶಂಕರ ಜೋಯಿಸರು 'ವೈಜಯಂತಿ ಪಂಚಾಂಗ'ವನ್ನು ರಚಿಸಿದ್ದಾರೆ. 'ಗುರುಪೀಠಗಳ ಅವನತಿ' ಹಾಗೂ 'ಅರ್ಥ ಸಿದ್ಧಾಂತದ ರಹಸ್ಯ ವಿಚಾರ' ಅವರ ಇನ್ನೆರಡು ಕೃತಿಗಳು. ಸಂಸ್ಕೃತ ಮತ್ತು ಕನ್ನಡ ಭಾಷೆಗಳೆರಡರಲ್ಲಿಯೂ ಪಂಡಿತರಾಗಿದ್ದ ಪರಕ್ಕಜೆ ಶಂಭು ಭಟ್ಟರ 'ವಾಙ್ಮಯ ತಪಸ್ಸು' ಕೃತಿಯಲ್ಲಿ ಮಾತು ಮತ್ತು ಆಚರಣೆಗಳ ಮಹತ್ತ್ವನ್ನು ವಿವರಿಸಿದ್ದಾರೆ. ಗಣಪತಿ ಮೊಳೆಯಾರರು 'ರಘುವಂಶದ ಕಥೆ' ಹಾಗೂ 'ಭಾರತದ ಬೆಳಕು' (ಜೀವನ ಚರಿತ್ರೆ) ಎಂಬ ಕೃತಿಗಳನ್ನು ರಚಿಸಿದ್ದಾರೆ.

ಕೊಡಗಿನ ಇತಿಹಾಸದ ಮೇಲೆ ಸಾಕಷ್ಟು ಬೆಳಕು ಚೆಲ್ಲುವ ಕೃತಿ 'ಕೊಡಗಿನ ಇತಿಹಾಸ' ರಚಿಸಿದ ಡಿ.ಎನ್. ಕೃಷ್ಣಯ್ಯ ಸಾಹಿತ್ಯಕ್ಕೆ ಮೌಲಿಕ ಕೊಡುಗೆ ನೀಡಿದ್ದಾರೆ. ಸುಮಾರು ಮೂರು ದಶಕಗಳ ಹಿಂದೆ 'ನವಭಾರತ' ಪತ್ರಿಕೆಯಲ್ಲಿ 'ಶಿಂಗಣ್ಣಾ' ಎಂಬ ಹೆಸರಿನಿಂದ ವ್ಯಂಗ್ಯಚಿತ್ರಗಳನ್ನು ಬರೆದು ಪ್ರಕಟಿಸುತ್ತಿದ್ದ ಕನ್ನೆಪ್ಪಾಡಿ ರಾಮಕೃಷ್ಣರು ನಮ್ಮ ಜಿಲ್ಲೆಯ ಅದ್ವಿತೀಯ ವ್ಯಂಗ್ಯಚಿತ್ರಕಾರರು. ರಾಜಕೀಯ, ಸಮಾಜದ ಪ್ರಚಲಿತ ವಿದ್ಯಾಮಾನ, ಸಾಂಸ್ಕೃತಿಕ ವಲಯದ ಆಗುಹೋಗುಗಳ ಬಗ್ಗೆ ಕ್ಷ-ಕಿರಣ ಬೀರುತ್ತಿದ್ದ ಅವರ ವ್ಯಂಗ್ಯಚಿತ್ರಗಳು ಖಚಿತ ರೇಖೆಗಳಿಂದ ಸಮಾಜಕ್ಕೆ ಚುಚ್ಚುಮದ್ದು ನೀಡುತ್ತಿದ್ದವು. ಕನ್ನೆಪ್ಪಾಡಿ ರಾಮಕೃಷ್ಣ ಅವರ ಜೀವನ ಸಾಧನೆ ಮತ್ತು ವ್ಯಂಗ್ಯ ಚಿತ್ರಗಳನ್ನು ಮನೋರಮಾ ಎಂ.ಭಟ್ ಅವರು 'ವ್ಯಂಗ್ಯ ಬದುಕು' ಎಂಬುದಾಗಿ ಸಂಪಾದಿಸಿದ್ದಾರೆ.

ಬಿ.ಶಂಕರ ಭಟ್ಟರು 'ಕನ್ನಡಕ್ಕಾಗಿ ದುಡಿದವರು', 'ಕನ್ನಡ ಸಾಹಿತ್ಯ', 'ದಕ್ಷಿಣಕನ್ನಡ ಜಿಲ್ಲೆಯ ಪತ್ರಿಕೆಗಳು' ಮೊದಲಾದ ಉಪಯುಕ್ತ ಪುಸ್ತಕಗಳನ್ನು ಬರೆದಿದ್ದಾರೆ. ಶೇಣಿ ಗೋಪಾಲಕೃಷ್ಣ ಭಟ್ಟರು 'ಯಕ್ಷಗಾನ ಮತ್ತು ನಾನು' (೧೯೮೧) ಎಂಬ ಗ್ರಂಥದ ಮೂಲಕ ತಮ್ಮ ಕಲಾಜೀವನದ ಅಂತರಂಗವನ್ನೇ ತೆರೆದಿಟ್ಟಿದ್ದಾರೆ. ಅವರ ಕಲಾಚಿಂತನೆ ಮತ್ತು ರಂಗದಲ್ಲಾದ ಪರಿವರ್ತನೆಗಳ ಸ್ಫುಟವಾದ ಅವಲೋಕನ ಅಲ್ಲಿ ಸಹೃದಯರಿಗೆ ಅಭ್ಯವಾಗುತ್ತದೆ. ಕೀರಿಕ್ಕಾಡು ಮಾಸ್ತರ ವಿಷ್ಣು ಭಟ್ಟರು ಬರೆದ 'ಯಕ್ಷರಸ ಜೀವನ' ಎಂಬುದು ಅವರ ಆತ್ಮಕಥೆ. ತಾಳಮದ್ದಳೆಗೆ ಸಂಬಂಧಿಸಿದಂತೆ ಉಪಯುಕ್ತ ಮಾಹಿತಿಗಳನ್ನು ನೀಡುವ ಗ್ರಂಥವಾಗಿದೆ. ಬಡೆಕ್ಕಿಲ ವೆಂಕಟರಮಣ ಭಟ್ಟರು 'ಕರ್ನಾಟಕ ಪರಿಸ್ಥಿತಿ ಮತ್ತು ಇತರ ಕೃತಿಗಳು', 'ಸಂದೇಹ ಸೂಚಿ', 'ಸೂಕ್ತಿವಾದ' ಎಂಬ ಕೃತಿಗಳನ್ನು ರಚಿಸಿದ್ದಾರೆ. 'ಕರ್ನಾಟಕ ಪರಿಸ್ಥಿತಿ ಮತ್ತು ಇತರ ಕೃತಿಗಳು' ರಾಜ್ಯದ ಪರಿಸ್ಥಿತಿಯನ್ನು ವರ್ಣಿಸುವ ಸಂದರ್ಭದಲ್ಲಿ ಲೇಖಕರು ಈ ದೇಶದ ಜನ, ಅವರ ಆಚಾರವಿಚಾರ, ಸಾಮಾಜಿಕ-ರಾಜಕೀಯ ಸ್ಥಿತಿಗತಿಗಳನ್ನು ಕುರಿತು ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. 'ಸಂದೇಹ ಸೂಚಿ' ಕೃತಿಯು ವೈದ್ಯ ಗ.ಸು. ಪಾಟೀಲರ 'ಹವ್ಯಕ ಸಮಾಜ ಮತ್ತು ಶ್ರೀ ಗುರುಮಠದ ಇತಿಹಾಸ' ಪುಸ್ತಕಕ್ಕೆ ವಿಮರ್ಶಾತ್ಮಕ ಪ್ರತಿಕ್ರಿಯೆಯಾಗಿದೆ.

ಚಕ್ರಕೋಡಿ ಈಶ್ವರ ಶಾಸ್ತ್ರಿಗಳು 'ಸಂಧ್ಯಾವಂದನೆ', 'ಬಾಲ ವ್ಯಾಕರಣ' (ಪಾಣಿನಿಯ ೧೨೫೦ ಸೂತ್ರಗಳು), 'ನ್ಯಾಯದರ್ಶನ' (ಲೌಕಿಕ ಗ್ರಂಥ), 'ಪಂಚಾಯತನ

ಪೂಜಾಕ್ರಮ' (ಎಲ್ಲ ವೇದ ಶಾಖೆಯವರಿಗೆ), 'ಭಾರತೀಯ ಮನಶ್ಶಾಸ್ತ್ರ' ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಕೈತಂಜೆ ನರಸಿಂಹ ಭಟ್ಟರು ರಚಿಸಿದ 'ಶೀಮಲ್ಲಿಕಾರ್ಜುನ ಮಹತಿ' ತೋಡಿಕಾನ ಕ್ಷೇತ್ರದ ಕುರಿತ ಸಾಹಿತ್ಯ ಕೃತಿಯಾಗಿದೆ. ಪಾಂಡೇಲು ಶಂಕರನಾರಾಯಣ ಭಟ್ಟರು ವೈದಿಕ, ಧಾರ್ಮಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಅತ್ಯುತ್ತಮ ಸೇವೆ ಸಲ್ಲಿಸಿ ಸಮ್ಮಾನಿತರಾಗಿರುವುದಲ್ಲದೆ 'ಸನಾತನ ಸಂಸ್ಕಾರಗಳು' ಎಂಬ ಕೃತಿಯನ್ನು ರಚಿಸಿದ್ದಾರೆ. ಕಾಕುಂಜೆ ಕೃಷ್ಣ ಭಟ್ಟರು ಸಂಸ್ಕೃತಾಭ್ಯಾಸಿ ಕನ್ನಡಿಗರಿಗೆ ಉಪಯುಕ್ತವಾಗುವ 'ಸಂಸ್ಕೃತ ಕನ್ನಡ ಸುವರ್ಣ ಕೋಶ'ವನ್ನು ಬರೆದಿದ್ದಾರೆ. ತಾಳ್ತಜೆ ಕೃಷ್ಣ ಭಟ್ಟರ 'ಯಕ್ಷಗಾನ ಪ್ರಭಾ' ಯಕ್ಷಗಾನ ಶಾಸ್ತ್ರಾಧ್ಯಯನಕ್ಕೆ ಸಂಬಂಧಪಟ್ಟ ಕೃತಿಯಾಗಿದೆ. 'ಬಣ್ಣದ ವೇಷ ಮತ್ತು ಇತರ ಉಪನ್ಯಾಸಗಳು' ಮುಳಿಯ ಮಹಾಬಲ ಭಟ್ಟರ ಕೃತಿ. ಸೇಡಿಯಾಪು ಕೃಷ ಭಟ್ಟರು ಬರೆದಿಟ್ಟ ಆತ್ಮಕಥನವು ಅವರ ಅಪೇಕ್ಷೆಯಂತೆ ಅವರ ಮರಣಾನಂತರ 'ಈಶ್ವರ ಸಂಕಲ್ಪ ಮತ್ತು ದೈವಲೀಲೆ' ಎಂಬ ಅವರ ಜೀವನದರ್ಶನಕ್ಕೆ ದ್ಯೋತಕವಾದ ಹೆಸರಿನಲ್ಲಿ ಹೊರಬಂದಿದೆ.

ಪಡಾರು ಮಹಾಬಲೇಶ್ವರ ಭಟ್ಟರು 'ಚಂದ್ರಾವಳಿ ಹಾಡು', 'ಜಾನಪದ ಸಾಹಿತ್ಯ', 'ಪಾರಿಜಾತದ ಹಾಡು', 'ಬಸುರಿಯ ಹಾಡುಗಳು', 'ಹೆಮ್ಮಕ್ಕಳ ಹಾಡುಗಳು' ಮೊದಲಾದ ಜನಪದ ಸಾಹಿತ್ಯದ ಹಲವು ಕಿರುಸಂಕಲಗಳನ್ನು ಸಂಪಾದಿಸಿದ್ದಾರೆ. ವಿ.ಬಿ. ಹೊಸಮನೆಯವರ 'ಮದುವೆಯ ಮಂಟಪ' ಕೂಡಾ ಅದೇ ರೀತಿಯ ಕಿರುಸಂಕಲನ. ಮದರಾಸಿನಲ್ಲಿದ್ದರೂ ಜಿಲ್ಲೆಯ ಜಾನಪದವನ್ನು ಗಾಢವಾಗಿ ಪ್ರೀತಿಸುತ್ತಲಿರುವ ಡಾ। ಶ್ರೀಕೃಷ್ಣ ಭಟ್ ಅರ್ತಿಕಜೆಯವರು 'ಜಾನಪದ ಜೀವನ' ಹಾಗೂ 'ಹವ್ಯಕ ಗಾದೆಗಳು' ಎಂಬ ಎರಡು ಕೃತಿಗಳನ್ನು ರಚಿಸಿದ್ದಾರೆ. ಜಾನಪದ ಜೀವನದಲ್ಲಿ ಹವ್ಯಕ ಜನಾಂಗದ ಗೀತೆಗಳಿವೆ. ಅವುಗಳಿಗೆ ಸಮಾಜ ಶಾಸ್ತ್ರೀಯ ಮಟ್ಟದಲ್ಲಿ ವಿಶ್ಲೇಷಣೆಯಿದೆ. ಗೀತೆಗಳು ಹವೀಕರ ಭಾಷಾ ವೈಶಿಷ್ಟ್ಯಗಳನ್ನು ಹೃದಯ ಸಂಸ್ಕಾರವನ್ನು ಪ್ರತಿನಿಧಿಸುತ್ತದೆ. ಇವರದೇ 'ಹವ್ಯಕ ಗಾದೆಗಳು' ಒಂದು ಅಮೂಲ್ಯವಾದ ಸಂಕಲನವಾಗಿದೆ. ಈ ಕೃತಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು, ಪಂಜ ಹಾಗೂ ಕುಂಬಳೆ ಸೀಮೆಗಳ ಅಸಂಖ್ಯಾತ ಹವ್ಯಕರ ಮನೆಮಾತಿನಲ್ಲಿ, ದಿನಬಳಕೆಯಲ್ಲಿ ಹಾಸುಹೊಕ್ಕಾಗಿ ಲೀಲಾಜಾಲವಾಗಿ ಹರಿದು ಬಂದಿರುವ ಸಾವಿರಾರು ಗಾದೆಗಳನ್ನು ಸಂಗ್ರಹಿಸಿ, ಸಂಪಾದಿಸಿ, ಕನ್ನಡದಲ್ಲಿ

ಶಬ್ದಕೋಶವನ್ನು ಕೊಟ್ಟಿದ್ದಾರೆ. ಅರ್ತಿಕಜೆಯವರು 'ಸಹಸ್ರಾರ್ಧ ತುಳುಗಾದೆಗಳು' ಎಂಬ ಗ್ರಂಥವನ್ನು ಸಂಪಾದಿಸಿದ್ದಾರೆ.

ಕನ್ನಡ ಪ್ರವಾಸ ಕಥನಕಾರರಲ್ಲಿ ಶಿರಂಕಲ್ಲು ಈಶ್ವರ ಭಟ್ಟರ ಹೆಸರು ಗಮನಾರ್ಹವಾದುದು. 'ಮುಕ್ತಿನಾಥದ ಪಥದಲ್ಲಿ', 'ಅಮರನಾಥ ದರ್ಶನ', 'ಚತುರ್ಧಾಮ ದರ್ಶನ', 'ಅವಂತಿಕಾ ಪ್ರವಾಸ', 'ಭಾರತದ ಚತುರ್ಧಾಮ ಯಾತ್ರೆ' ಎಂಬ ಐದು ಕೃತಿಗಳನ್ನು ರಚಿಸಿದ್ದಾರೆ. 'ಅಮೇರಿಕಾ ನಾನು ಕಂಡಂತೆ' ಶ್ರೀಮಿತ್ತೂರು ಅವರ 'ಪ್ರವಾಸ ಕಥನ'. ಪುಂಡಿಕ್ಯಾ ಗಣಪಯ್ಯ ಭಟ್ಟರ 'ಯುರೋಪ್ ನೆನಪುಗಳು' ಪ್ರವಾಸ ಸಾಹಿತ್ಯ ಕೃತಿ. ಈ ಕೃತಿಯು ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಗಳಿಸಿದೆ. ಎಸ್.ಬಿ. ಖಂಡಿಗೆಯವರು 'ಕಡಲತೀರದಿಂದ ಹಿಮಗಿರಿಯವರೆಗೆ' ಎಂಬ ಕೃತಿಯನ್ನು ರಚಿಸಿದ್ದಾರೆ.

ಡಾ। ರಾಮಚಂದ್ರದೇವ ಅವರ ಆಯ್ದ ಅಂಕಣಗಳ ಬರಹಗಳು 'ಮಾತುಕತೆ ೧೯೯೪- ೧೯೯೭' ಎಂಬ ಹೆಸರಿನಲ್ಲಿ ಪ್ರಕಟವಾಗಿದೆ. ಕೆ.ವಿ. ಅಕ್ಷರ ಅವರ 'ರಂಗ ಪ್ರಪಂಚ' ಪ್ರಪಂಚದ ರಂಗಭೂಮಿಗಳನ್ನು ಪರಿಚಯಿಸುವ ಕೃತಿಯಾಗಿದೆ. 'ಸಮ್ಮುಖದಲ್ಲಿ ಸ್ವಗತ' ಅವರ ಲೇಖನಗಳ ಸಂಗ್ರಹ ಕೃತಿ. 'ಮಾವಿನ ಮರದಲ್ಲಿ ಬಾಳೆಯ ಹಣ್ಣು' ರಂಗಭೂಮಿಯ ಕುರಿತ ಅಕ್ಷರರ ಬರಹವಾಗಿದೆ. ಡಾ। ಶಾಲಿನಿ ರಘುನಾಥ ಭಟ್ಟರು 'ಉತ್ತರ ಕನ್ನಡ ಜಿಲ್ಲೆಯ ಹವ್ಯಕರ ಹಾಡುಗಳು' ಎಂಬ ಕೃತಿಯನ್ನು ಸಂಪಾದಿಸಿದ್ದಾರೆ. 'ನಾಟಕಕಾರ ಸಂಸ', 'ಮಹಿಳೆ ಮತ್ತು ಶಿಕ್ಷಣ', 'ಸಮನ್ವಿತ' ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ನಾರಾಯಣ ಕುಪ್ಪಯ್ಯ ಹೆಗಡೆಯವರು 'ಆಧ್ಯಾತ್ಮ ರಾಮಾಯಣ ಭಾಗ ೧, ಭಾಗ ೨', 'ಆಧ್ಯಾತ್ಮ ಶತಕ ಮತ್ತು ಭಕ್ತಿ ಸುಧಾರಸ', 'ಜ್ಞಾನ ವಾಸಿಷ್ಠ', 'ದೇವಿ ಮಹಾತ್ಮೆ', 'ಪರಮಾತ್ಮ ಬೋಧೆ', 'ಪ್ರಹ್ಲಾದ ಚರಿತೆ', 'ಬತ್ತಲೇಶ್ವರ ರಾಮಾಯಣ' ಮುಂತಾದ ಗ್ರಂಥಗಳನ್ನು ಸಂಪಾದಿಸಿದ್ದಾರೆ. ವಿಚಿತ್ರ ಏತಡ್ಕ ಕಾವ್ಯನಾಮದ ವೈ.ಎಸ್. ಹರಿಹರ ಭಟ್ಟರು 'ಮೊಮ್ಮಗನಿಗೆ ಬರೆದ ಪತ್ರ', 'ಇಚ್ಛಾಮರಣಿ', 'ತೀರದ ಫಲ', 'ಪರಿಮಳದ ಹಿಂದೆ', 'ಸಮರ ಕಹಳೆ' ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ಎಸ್. ನಾರಾಯಣ ಭಟ್ಟರು 'ನವೋದಯ ವ್ಯಾಕರಣ' ಮತ್ತು 'ಕೈಲಾಸ ಮತ್ತು ಮಾನಸ ಸರೋವರ' ಎಂಬ

ಕೃತಿಗಳನ್ನು ಬರೆದಿದ್ದಾರೆ. ಕಿಬ್ಬಚ್ಚಲು ಮಂಜಮ್ಮ 'ವೇದಾಂತ ತತ್ತ್ವಸಾರ' ಎಂಬ ಕೃತಿಯನ್ನು ರಚಿಸಿದ್ದಾರೆ.

ಜಿ.ಎನ್. ಅಶೋಕವರ್ಧನರು ಆರೋಹಣ ತಂಡದೊಡನೆ ದಕ್ಷಿಣಕನ್ನಡದ ಕೆಲವು ನಿಸರ್ಗರಮಣೀಯ ತಾಣಗಳಿಗೆ ದ್ವಿಚಕ್ರ ವಾಹನಗಳ ಮೇಲೆ ಹೋಗಿ ಬಂದ ಸಾಹಸ ಯಾತ್ರೆಯ ವಿವರಗಳನ್ನು 'ಚಕ್ರವರ್ತಿಗಳು' ಎಂಬ ಕೃತಿಯಲ್ಲಿ ಮನೋಹರವಾಗಿ ನೀಡಿದ್ದಾರೆ. ಕೈಂತಜೆ ವಿಷ್ಣು ಭಟ್ಟರ 'ಬೇಟೆಯ ಸುತ್ತುಮುತ್ತು' ರೋಚಕವಾದ ಅನುಭವಗಳನ್ನೊಳಗೊಂಡ ಕೃತಿ. ಬೇಟೆಯೊಂದಿಗೆ ಪರಿಸರ, ವನ್ಯಜೀವಿಗಳು, ಏಲಕ್ಕಿ ಮಲೆ, ಜನಪದ ನಂಬಿಕೆಗಳು ಮುಂತಾದ ವಿಷಯಗಳಿಂದ ತುಂಬಿದ ಈ ಕೃತಿಯು ಒಂದು ಸಮೃದ್ಧ ಜೀವನಾನುಭವವನ್ನು ಬಿಂಬಿಸುತ್ತದೆ. ವಸಂತಕುಮಾರ ಪೆರ್ಲರು 'ಪುತ್ತೂರು ತಾಲೂಕು ದರ್ಶನ' ಎಂಬ ಕೃತಿಯನ್ನು ರಚಿಸಿದ್ದಾರೆ. ನ್ಯಾಯ ಶಾಸ್ತ್ರಕ್ಕೆ ಸಂಬಂಧಿಸಿದಂತೆ 'ಹಿಂದೂ ವಿವಾಹ ಶಾಸನ', 'ಹಿಂದೂ ಜೀವನಾಂಶ ಮತ್ತು ದತ್ತಕ ಕಾಯಿದೆ' ಎಂಬ ಬೋಳಂತಕೋಡಿ ಈಶ್ವರ ಭಟ್ಟರ ಕೃತಿ ಪ್ರಕಟಗೊಂಡಿದೆ. ಮಾತ್ರವಲ್ಲದೆ ಕೆನೆತ್ ಅಂಡರ್‌ಸನ್ ಅವರ ಇಂಗ್ಲಿಷ್ ಕೃತಿಯನ್ನು 'ಶಿವನಪ್ಪಳ್ಳಿಯ ಕಪ್ಪು ಚಿರತೆ' ಎಂದು ಅನುವಾದಿಸಿದ್ದಾರೆ. ಈಶ್ವರ ದೈತೋಟರ 'ಅಂತರದೃಷ್ಟಿ' ಅಂಕಣಗಳ ಬರಹ.

'ಸಾರ್ಥಕ' (ಪ್ರೊ. ಮರಿಯಪ್ಪ ಭಟ್ ಸಂಸ್ಮರಣ ಗ್ರಂಥ) ಕೃತಿಯನ್ನು ಡಾ।ಶ್ರೀಕೃಷ್ಣ ಭಟ್ ಅರ್ತಿಕಜೆಯವರು ಸಂಪಾದಿಸಿದ್ದಾರೆ. 'ಸಮರಸ' (ಪ್ರೊ. ವಿ.ಬಿ. ಮೊಳೆಯಾರ ಅಭಿನಂದನ ಗ್ರಂಥ) ಗ್ರಂಥವನ್ನು ಬೋಳಂತಕೋಡಿ ಈಶ್ವರ ಭಟ್ಟರು ಸಂಪಾದಿಸಿದ್ದಾರೆ. ಕಡವ ಶಂಭುಶರ್ಮರು ಬರೆದ ಸಾಹಿತ್ಯ ಕೃತಿಗಳನ್ನು ಡಾ। ಶ್ರೀಧರ ಎಚ್.ಜಿ.ಯವರು 'ಕಡವ ಶಂಭು ಶರ್ಮರ ಕೃತಿ ಸಂಚಯ ೧', 'ಕಡವ ಶಂಭು ಶರ್ಮ ಕೃತಿ ಸಂಚಯ ೨', 'ಕಡವ ಶಂಭು ಶರ್ಮ ಕೃತಿ ಸಂಚಯ ೩', 'ಕಡವ ಶಂಭು ಶರ್ಮ ಕೃತಿ ಸಂಚಯ ೪' ಸಂಪುಟಗಳಲ್ಲಿ ಸಂಪಾದಿಸಿ ಪ್ರಕಟಿಸಿದ್ದಾರೆ. ಡಾ। ಜಯಪ್ರಕಾಶ ಮಾವಿನಕುಳಿಯವರು 'ಸಂಗಮ', 'ಚೂಡಾಮಣಿ', 'ಸುವರ್ಣಸಂಸ್ಕೃತಿ' ಮುಂತಾದ ಸ್ಮರಣಸಂಚಿಕೆಗಳನ್ನು ಸಂಪಾದಿಸಿದ್ದಾರೆ. ವಿ.ಬಿ. ಮೊಳೆಯಾರರು 'ಕಾರಂತ

ಚಿಂತನ', 'ಫರ್ಡಿನೆಂಡ್ ಕಿಟ್ಟೆಲ್', 'ಸಂಕುಲ', ಸಮುಚ್ಚಯ', 'ಸಂಚಿತ', 'ಸಮುಚಿತ' ಮುಂತಾದ ಕೃತಿಗಳನ್ನು ಬರೆದಿದ್ದಾರೆ.

ಕಾದಂಬರಿಕಾರರಾಗಿ ಪ್ರಸಿದ್ಧರಾದ ಎ.ಪಿ. ಮಾಲತಿಯವರು 'ಸುಖದ ಹಾದಿ', 'ದಿವ್ಯಪಥ', 'ಗ್ರಾಮೀಣ ಮಹಿಳೆಯರು', 'ಹಳ್ಳಿಗೆ ಬಂದ ಎಳೆಯರು', 'ಮಕ್ಕಳ ಪಾಲನೆ', 'ಸಮಯದ ಸದುಪಯೋಗ' ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಮಾಲತಿಯವರ 'ಸುಖದ ಹಾದಿ' ಚಿಂತನ ಕೃತಿ ನಿರೀಕ್ಷೆ ಮೀರಿ ಜನಪ್ರಿಯತೆ ಗಳಿಸಿ, ೧೯೮೩ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಗಳಿಸಿತು. ಮಾಲತಿಯವರು 'ಸುಖದ ಹಾದಿ' ಮತ್ತು 'ದಿವ್ಯಪಥ' ಎಂಬ ಕೃತಿಗಳಲ್ಲಿ ವೈಚಾರಿಕ ಚಿಂತನೆಗಳನ್ನು ಬೆಳೆಸಿದ್ದಾರೆ. 'ಸುಖದ ಹಾದಿ' ತನ್ನ ನೂರು ಪುಟಗಳ ವ್ಯಾಪ್ತಿಯಲ್ಲಿ ಹದಿಮೂರು ಲೇಖನಗಳನ್ನು ಒಳಗೊಂಡಿದೆ. ಇವುಗಳಲ್ಲಿ ವ್ಯಕ್ತಿಯ ಬುದ್ಧಿ, ಮನಸ್ಸು ಮತ್ತು ಶರೀರಗಳಲ್ಲಿ ವ್ಯಾಪಿಸಿರುವ ಸುಖಾಪೇಕ್ಷೆಯ ಮೂಲವನ್ನೂ ಅದರ ವ್ಯಾಪಕತೆಯನ್ನೂ ವಿವರಿಸಿ, ವಿಶ್ಲೇಷಿಸಲಾಗಿದೆ. ಜೀವನದಲ್ಲಿ ವ್ಯಕ್ತಿಯ ನೆಮ್ಮದಿಗೆ ಮಾರಕವಾಗುವ ದೌರ್ಬಲ್ಯಗಳನ್ನು ಗುರುತಿಸಿ, ಅವುಗಳ ನಿವಾರಣೆಗೆ ಪರಿಹಾರಗಳನ್ನು ಸೂಚಿಸಿದ್ದಾರೆ. 'ದಿವ್ಯಪಥ' ಮಹಿಳೆಯರನ್ನೇ ಗಮನದಲ್ಲಿಟ್ಟುಕೊಂಡು ಬರೆದ ಲೇಖನಗಳ ಸಂಕಲನ. ಇದರಲ್ಲಿ ಮಹಿಳೆ ವಿವಿಧ ವಯೋಮಾನಗಳಲ್ಲಿ ಎದುರಿಸುವ ಸಂಕೀರ್ಣ ಸನ್ನಿವೇಶಗಳ ಸ್ವರೂಪ ಮತ್ತು ವಿನ್ಯಾಸ, ಸ್ವಾವಲಂಬನೆಯ ಅಗತ್ಯ, ಸಂತೋಷ ಮತ್ತು ಶಾಂತಿಯನ್ನು ಸಾಧಿಸುವ ಬಗೆಯ ಕುರಿತಂತೆ ಎ.ಪಿ. ಮಾಲತಿಯವರ ವಿಚಾರಗಳು ಮೂಡಿಬಂದಿವೆ. ಡಾ। ನಿರಂಜನ ವಾನಳ್ಳಿಯವರು ಪತ್ರಿಕೋದ್ಯಮಕ್ಕೆ ಸಂಬಂಧಿಸಿದಂತೆ 'ಪತ್ರಿಕೋದ್ಯಮ ಶಿಕ್ಷಣ', 'ಕನ್ನಡದಲ್ಲಿ ಕಲೆ ಸಾಹಿತ್ಯ ಪತ್ರಿಕೆಗಳು', 'ನುಡಿ ಚಿತ್ರಗಳು', 'ಸುದ್ದಿಯಷ್ಟೇ ಅಲ್ಲ', 'ಮೊಗೆದಷ್ಟೂ ನೆನಪುಗಳು', 'ಎರಡು ದಡಗಳ ನಡುವೆ' (ಪತ್ರಕರ್ತರ ಒಳನೋಟ) ಮುಂತಾದ ಕೃತಿಗಳನ್ನು ರಚಿಸಿದ್ದಾರೆ.

ಜಿ.ಟಿ. ನಾರಾಯಣ ರಾಯರು ಕನ್ನಡದ ಪ್ರಸಿದ್ಧ ವಿಜ್ಞಾನ ಲೇಖಕರಲ್ಲೊಬ್ಬರು. 'ಆಲ್ಬರ್ಟ್ ಐನ್‌ಸ್ಟೀನರ ಮಾನವೀಯ ಮುಖ', 'ಶ್ರೀನಿವಾಸ ರಾಮಾನುಜನ್', 'ಐವರು ವಿಜ್ಞಾನಿಗಳು', 'ಆಕಾಶದ ಅದ್ಭುತಗಳು', 'ದೂಮಕೇತು', 'ಗ್ರಹಣಗಳು', 'ಜಾತಕ ಮತ್ತು ಭವಿಷ್ಯ', ಶ್ರುತಗಾನ', 'ಸವಾಲನ್ನು ಎದುರಿಸುವ ಛಲ', 'ವೈಜ್ಞಾನಿಕ ಮನೋಧರ್ಮ',

‘ಸೂರ್ಯನ ಸಾಮ್ರಾಜ್ಯ’ ಅವರ ಪ್ರಮುಖ ಕೃತಿಗಳು. ತನ್ನ ಎನ್.ಸಿ.ಸಿ. ಅನುಭವದ ಹಿನ್ನಲೆಯಲ್ಲಿ ಅವರು ಬರೆದ ಕೃತಿ ‘ಎನ್.ಸಿ.ಸಿ. ದಿನಗಳು’ ‘ಮುಗಿಯದ ಪಯಣ’ ಅವರ ಆತ್ಮಕತೆಯ ಕುರಿತಾಗಿದೆ. ವಿಜ್ಞಾನ ಸಾಹಿತ್ಯ ನಿರ್ಮಾಣ ಕ್ಷೇತ್ರದಲ್ಲಿ ಅಡ್ಯನಡ್ಕ ಕೃಷ್ಣ ಭಟ್ಟರು ಮಾಡಿರುವ ಸಾಧನೆ ಅಪೂರ್ವವಾದುದು. ‘ಗಗನ ಯುಗ’, ‘ಬೆಳ್ಳಿ ಚುಕ್ಕಿ’ ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಸಿ.ಎಚ್. ಗೋಪಾಲಕೃಷ್ಣ ಭಟ್ಟರು ‘ಉಪಯುಕ್ತ ವಿಜ್ಞಾನ’ ಎಂಬ ಕೃತಿಯನ್ನು ರಚಿಸಿದ್ದಾರೆ.

ವಾಗ್ಭಟ ಎಂಬ ಕಾವ್ಯನಾಮದಲ್ಲಿ ಪತ್ರಿಕೆಗಳಲ್ಲಿ ಬರೆಯುತ್ತಿದ್ದ ನೀರ್ಪಾಜೆ ಭೀಮ ಭಟ್ಟರ ವಿಡಂಬನಾತ್ಮಕ ಕಿರು ಬರಹಗಳು ನಾಲ್ಕು ಕೃತಿಗಳಾಗಿ ಹೊರಬಂದಿದ್ದು ಕನ್ನಡ ವಿಡಂಬನಾ ಸಾಹಿತ್ಯಕ್ಕೆ ಗಣನೀಯ ಕೊಡುಗೆಗಳಾಗಿವೆ. ‘ಅಂಟಿಕೊಳ್ಳುವ ಆಸಾಮಿಗಳು’, ‘ಚೌಚೌ’, ‘ಹಸ್ತಶುದ್ಧಿ’ ಹಾಗೂ ‘ಚಿತ್ರಾನ್ನ’ ಎಂಬುದು ಇವರ ವಿಡಂಬನಾ ಕೃತಿಗಳು. ಎಸ್. ಆರ್. ಚಂದ್ರ ಅವರು ೧೯೪೭೭ರಲ್ಲಿ ‘ಒಗ್ಗರಣೆ’ ಎಂಬ ವಿನೋದ ಪ್ರಬಂಧ ಸಂಕಲನವನ್ನು ಪ್ರಕಟಿಸಿದ ಬಳಿಕ ೧೯೯೦ರಲ್ಲಿ ‘ತೋಚಿದ್ದು ಬಾಚಿದ್ದು’ ಎಂಬ ನಗೆ ಲೇಖನಗಳ ಸಂಗ್ರಹ ಪ್ರಕಟಿಸಿದ್ದಾರೆ. ಒಗ್ಗರಣೆಯಲ್ಲಿ ಪ್ರಬಂಧದ ಮಾದರಿಯಲ್ಲಿ ವಿನೋದ, ಹಾಸ್ಯ ಮತ್ತು ವ್ಯಂಗ್ಯಗಳಿಗೆ ಪ್ರಾಮುಖ್ಯ ದೊರೆತಿದ್ದರೆ, ಎರಡನೆಯ ಕೃತಿ ‘ತೋಚಿದ್ದು ಬಾಚಿದ್ದು’ರಲ್ಲಿ ವಿಚಾರಗಳ ಮೂಲಕ ವ್ಯಂಗ್ಯಕ್ಕೆ ಇಂಬು ದೊರೆತಿದೆ. ಕೈತಂಜೆ ಗೋವಿಂದ ಭಟ್ಟರ ‘ಚಿರಪರಿಚಿತ’ ಒಂದು ವಿಡಂಬನಾತ್ಮಕ ಕೃತಿಯಾಗಿದೆ. ಎಂ.ಬಿ. ಮರಕಿಣಿಯವರು ತಮ್ಮ ವಿಶಿಷ್ಟವಾದ ಗದ್ಯ ಶೈಲಿಯಿಂದ ಪ್ರಸಿದ್ಧರಾಗಿದ್ದಾರೆ. ‘ರೂಪರಾಶಿಗಳ ಸಂತೆ’ ಎಂಬುದು ಅವರ ಲಲಿತ ಪ್ರಬಂಧಗಳ ಸಂಕಲನ. ವೃತ್ತಿ ಜೀವನ, ಕೌಟುಂಬಿಕ ಬದುಕು, ಗ್ರಾಮೀಣ ಬದುಕು, ನಮ್ಮ ಸಂಪ್ರದಾಯ, ಆಚರಣೆಗಳು, ವ್ಯಕ್ತಿ ವೈಚಿತ್ರಗಳು, ರಾಜಕೀಯ ವ್ಯವಸ್ಥೆಗಳು, ಹೀಗೆ ಭುವನೇಶ್ವರಿ ಹೆಗಡೆಯವರ ಲೇಖನದ ವಸ್ತು, ವಿಸ್ತಾರವೂ, ವೈವಿಧ್ಯಪೂರ್ಣವೂ ಆಗಿದೆ. ‘ಎಂಥದು ಮರಾಯ್ರೆ’, ‘ನಕ್ಕು ಹಗುರಾಗಿ’, ‘ಮುಗುಳು’, ‘ಹಾಸ–ಭಾಸ’, ‘ಕೈಗುಣ ಬ್ಯಾಗುಣ’ ಮುಂತಾದವು ಹೆಗಡೆಯವರ ಕೃತಿಗಳು.

ವೈದ್ಯ ಶಂಕರನಾರಾಯಣ ಭಟ್ಟರು ‘ಅಜ್ಜಿಮದ್ದು’, ‘ಆರೋಗ್ಯ ಸಾಧನ’, ‘ಆರೋಗ್ಯ ಜೀವನ’, ‘ಬಾಣಂತಿ ಉಪಚಾರ’ ಮುಂತಾದ ಆಯುರ್ವೇದಕ್ಕೆ

ಸಂಬಂಧಿಸಿದ ಪುಸ್ತಕಗಳನ್ನು ಬರೆದಿದ್ದಾರೆ. 'ಆಯುರ್ವೇದಿಯ ಬ್ರಹ್ಮಜ್ಞಾನ', 'ಮಧುಮೇಹ', 'ದಕ್ಷಿಣ ಕನ್ನಡ ಕೃಷಿಕರ ಕುಮ್ಕಿ ಹಕ್ಕು', 'ಮಂಗನ ಕಾಯಿಲೆ' ಮೊದಲಾದ ಪುಸ್ತಕಗಳು ಡಾ.ಪಿ.ಯಸ್. ಮಹಾಲಿಂಗ ಭಟ್ಟರ ಹಲವಾರು ವರ್ಷಗಳ ಅಧ್ಯಯನ, ಸಂಶೋಧನೆಗಳ ಫಲ. ವೆಂಕಟರಾಯ ದೈತೋಟರು 'ಅನ್ನ-ಆರೋಗ್ಯ – ಔಷಧ' ಎಂಬ ಶೀರ್ಷಿಕೆಯ ಪುಸ್ತಕವನ್ನು ಪ್ರಕಟಿಸಿದ್ದಾರೆ. ಕೃಷಿ ಶಾಸ್ತ್ರಗಳಲ್ಲಿ ಪಂಡಿತರಾದ ಡಾ। ಮಹಾಲಿಂಗ ಭಟ್ಟರು 'ಕಂಗು ತೆಂಗುಗಳ ಕೃಷಿ', 'ತರಕಾರಿ ಕೃಷಿ', 'ಪಂಪಿನ ದೋಷ ಮತ್ತು ನಿವಾರಣೆಗಳ ಕೈಪಿಡಿ', ಎಂಬ ಪುಸ್ತಕಗಳನ್ನು ಬರೆದಿದ್ದಾರೆ. 'ಜೇನುನೊಣ ಸಾಕುವಿಕೆ' ಎಂಬುದು ಪೈಲೂರು ಲಕ್ಷ್ಮೀನಾರಾಯಣರಾಯರ ಕೃತಿ. ನಿರ್ಮಲಾ ಭಟ್ಟರು 'ಬುದ್ಧಿಮಾಂದ್ಯತೆ ಮತ್ತು ವಿಶೇಷ ಶಿಕ್ಷಣ', 'ಬುದ್ಧಿಮಾಂದ್ಯತೆ ತಂದೆ ತಾಯಿಯರಿಗೆ ಮಾರ್ಗದರ್ಶನ' ಎಂಬ ಕೃತಿಗಳನ್ನು ರಚಿಸಿದ್ದಾರೆ. 'ಶ್ರೀಕುವೆಂಪು ಸ್ತ್ರೀವಾದಿ ಚಿಂತನೆ' ಉಷಾ ಮೊಳೆಯಾರರು ಬರೆದ ಕೃತಿ. ಕುವೆಂಪು ಅವರ ಶ್ರೀರಾಮಾಯಣ ದರ್ಶನಂ ಕುರಿತ ಇಲ್ಲಿಯ ಬರೆಹ ಸ್ತ್ರೀವಾದಿ ನೆಲೆಗಳಿಂದ ಕೂಡಿದೆ.

### ೩.೩.೧೪ ಹವಿಗನ್ನಡ ಸಾಹಿತ್ಯ

'ಹವ್ಯಕ ಕನ್ನಡವು' ಕನ್ನಡದ ಒಂದು ಉಪಭಾಷೆ. "ಈ ನುಡಿಗೆ 'ಹವಿಗನ್ನಡ'ವೆಂಬ ಅನ್ವರ್ಥವಾದ ಹೆಸರನ್ನು ಈ ನುಡಿಯ ಸಾಹಿತ್ಯ ರಚನೆಯಲ್ಲಿ ಮೊದಲಬಾರಿಗೆ ಬಳಸಿದವರು ಕವಿ, ಸಾಹಿತಿ ವೆಂಕಟೇಶ್ವರ ದೊಡ್ಮನೆ-ತಲಕಾಲಕೊಪ್ಪ, ಅವರು ತಮ್ಮ 'ಹವಿಗನ್ನಡ'ವೆಂಬ ಕವಿತೆಯನ್ನು ಹವ್ಯಕ ಪತ್ರಿಕೆಯ ಜನವರಿ ೧೯೯೨ರ ಸಂಚಿಕೆಯಲ್ಲಿ ಪ್ರಕಟಿಸಿದ್ದಾರೆ." (ಡಾ. ಹರಿಕೃಷ್ಣ ಭರಣ್ಯ; ಈ ನೆಲದ ಕಂಪು; ೨೦೦೬; ಪುಟ ೧೩) ಎಂಬುದಾಗಿ ಡಾ. ಹರಿಕೃಷ್ಣ ಭರಣ್ಯ ಅಭಿಪ್ರಾಯಪಟ್ಟಿದ್ದಾರೆ. ಹವ್ಯಕ ಸಮುದಾಯದವರು ಮನೆಯೊಳಗೆ ಬಳಸುವ ಭಾಷೆಗೆ ಹವಿಗನ್ನಡ ಎಂದು ಹೆಸರು. ಇದರಲ್ಲಿ ಪ್ರಾಂತ್ಯಬೇಧಗಳಿವೆ. "ಆಡುನುಡಿ, ಉಪಭಾಷೆ, ನಮ್ಮ ಭಾಷೆ, ಹವೀಕ ಕನ್ನಡ ಹೀಗೆ ಹಲವಾರು ಹೆಸರುಗಳಿಂದ ಕರೆಸಿಕೊಳ್ಳುವ ಈ ನುಡಿಯಲ್ಲಿ ಸಾಹಿತ್ಯದ ರಚನೆಗಳು ಆರಂಭಗೊಂಡಾಗ ಇದಕ್ಕೊಂದು ಸಾಮಾನ್ಯವೆನಿಸಿದ ಹಾಗೂ ಸಾರ್ವಜನಿಕವಾದ ಹೆಸರಿನ ಅಗತ್ಯವಿದೆ. ಹವೀಕರು ಆಡುವ ಕನ್ನಡವೆಂಬ ಅರ್ಥದಲ್ಲಿ ಹಾಗೂ ಸುಲಭವಾಗುವಂತೆ 'ಹವಿಗನ್ನಡ'ವೆಂಬ ಹೆಸರನ್ನೇ ಇಲ್ಲಿ ಆರಿಸಿಕೊಳ್ಳಲಾಗಿದೆ".

(ಡಾ.ಹರಿಕೃಷ್ಣ ಭರಣ್ಯ; ಈ ನೆಲದ ಕಂಪು; ೨೦೦೬; ಪುಟ ೧೫) ಎಂಬುದು ಡಾ. ಹರಿಕೃಷ್ಣ ಭರಣ್ಯರ ಅಭಿಪ್ರಾಯ.

### ಸಾಹಿತ್ಯ ರಚನೆ

ತುಂಬ ಹಿಂದೆಯೇ ಈ ಆಡುನುಡಿಯಲ್ಲಿ ಕವಿತೆಗಳು, ನಾಟಕಗಳ ರಚನೆ, ಬಯಲಾಟ, ಯಕ್ಷಗಾನ, ತಾಳಮದ್ದಳೆ ಪ್ರಯೋಗವಾದುದರ ಬಗ್ಗೆ ಅಲ್ಲಲ್ಲಿ ದಾಖಲೆಗಳು ಸಿಗುತ್ತದೆ. ಪೂರ್ತಿಯಾಗಿ ಹವಿಗನ್ನಡದಲ್ಲೇ ಸಮೃದ್ಧವಾದ ಸಾಹಿತ್ಯ ರಚನೆಯಾಗಲಿಲ್ಲವೆನ್ನುವುದು ಸ್ಪಷ್ಟ. ಈ ವರೆಗೆ ಲಭ್ಯವಾದ ಕೃತಿಗಳಲ್ಲಿ ೧೮೮೭ರಲ್ಲಿ ರಚನೆಯಾದ ಕರ್ಕಿ ವೆಂಕಟರಮಣ ಶಾಸ್ತ್ರಿಯವರ 'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ'ವೇ ಮೊತ್ತ ಮೊದಲ ಸಾಹಿತ್ಯ ಕೃತಿ ಎನಿಸಿದೆ. ಕನ್ನಡದಲ್ಲಿ ಹಲವಾರು ಉಪಭಾಷೆಗಳಿದ್ದರೂ ಸಾಹಿತ್ಯಾಭಿವ್ಯಕ್ತಿಯನ್ನು ಪಡೆದುಕೊಳ್ಳುವಂತಿರುವಂಥವು ಕೆಲವೇ ಕೆಲವು ಮಾತ್ರ. ಹವಿಗನ್ನಡದಲ್ಲಿ ಈಗಾಗಲೇ ನಾಟಕಗಳು, ಮುಕ್ತಕಗಳು, ಕವನ, ಪ್ರಬಂಧ, ಸಣ್ಣಕಥೆ, ಹರಟೆ, ಕಾದಂಬರಿಗಳು ಮುಂತಾಗಿ ಸಾಹಿತ್ಯದ ವಿವಿಧ ಪ್ರಕಾರಗಳು ಪ್ರಕಟಗೊಳ್ಳುತ್ತಿವೆ. ಹಿರಿಯ ಕವಿಗಳೂ ವಿದ್ವಾಂಸರೂ ಆದ ಬಾಳಿಲ ಪರಮೇಶ್ವರ ಭಟ್ಟರು ಮೂಲದ ವ್ಯಾಸಭಾರತವನ್ನು ಆಧರಿಸಿ, ಹವಿಗನ್ನಡದಲ್ಲಿ 'ಧರ್ಮವಿಜಯ'ವೆಂಬ ಹೆಸರಿನಿಂದ ಮಹಾಕಾವ್ಯವೊಂದನ್ನು ರಚಿಸಿದ್ದಾರೆ (೨೦೦೫).

ಹವಿಗನ್ನಡದಲ್ಲಿ ರಚನೆಯಾದ ಕವಿತೆಗಳಲ್ಲಿ ಪ್ರಧಾನವಾಗಿ ಹವಿಗನ್ನಡ ನುಡಿ, ಸಂಸ್ಕೃತಿ, ಆಚಾರ–ವಿಚಾರಗಳಿಗೆ ಸಂಬಂಧಿಸಿದಂತೆ ಹವ್ಯಕ ಗೀತೆಗಳನ್ನು ರಚಿಸಲಾಗಿದೆ. ೧೯೮೫ರಲ್ಲಿ ಕಲ್ಲೂರು ಶಂಭು ಅನಂತ ಅವರು 'ಹವ್ಯಕ ಗೀತಾ' ಎಂಬ ಹವ್ಯಕ ಕವನ ಸಂಕಲನವನ್ನು ರಚಿಸಿ ಪ್ರಕಟಿಸಿದ್ದಾರೆ. ಈ ಕವನ ಸಂಕಲನದಲ್ಲಿ ಇಪ್ಪತ್ತೊಂಬತ್ತು ಬೇರೆಬೇರೆ ಆಶಯಗಳನ್ನೊಳಗೊಂಡ ಕವಿತೆಗಳಿವೆ. ಸಂಪ್ರದಾಯ ಬದ್ಧವಾಗಿ ಗಣಪತಿ ಸ್ತುತಿ, ಶಾರದಾಸ್ತುತಿ ಹೀಗೆ ಆರಂಭಗೊಳ್ಳುವ ಈ ಕೃತಿಯಲ್ಲಿ ಹವ್ಯಕರ ಆಚಾರ, ವಿಚಾರ, ಆಹಾರ, ವ್ಯವಹಾರ, ನಂಬಿಕೆ, ಹವ್ಯಾಸ, ಹವ್ಯಕ ಸಂಪ್ರದಾಯದ ಬೀಗರಿಗೆ ಸ್ವಾಗತ, ಬೀಗರ ಜಗಳ. ಬೂಟಾಟಿಕೆ, ಸಾಂತ್ವನ ಹೀಗೆ ಅನೇಕ ಹರಹುಗಳಿಂದ ಕೂಡಿದ ಕವಿತೆಗಳಿವೆ. 'ಯೋಚ್ನೆ' ಮಹಾದೇವ ಹೆಗಡೆ ಮತ್ತಳ್ಳಿಯವರು (೧೯೮೫) ಬರೆದ ಕವನ ಸಂಕಲನ. ಇದರಲ್ಲಿ ಒಟ್ಟು ಇಪ್ಪತ್ತೊಂದು ಕವಿತೆಗಳಿವೆ. 'ಹವ್ಯಕ'ರ ಮನೆ, ಮನೆಯೊಳಗಿನ

ವಿಚಾರ, ಮಡದಿ, ಮಕ್ಕಳು, ಯುವಕರ ಆಧುನಿಕತೆ, ಆತಿಥ್ಯ– ಹೀಗೆ ಹಲವಾರು ಮುಖಗಳನ್ನು ಬಿಂಬಿಸುವ ರಚನೆಗಳಿವೆ. 'ಹೊತ್ಮೂಡ್ತು ಮೂಡ್ಲಲ್ಲಿ' ಎಂಬುದು ಮಹಾದೇವ ಹೆಗಡೆ ಮತ್ತಳ್ಳಿಯವರ ೧೯೮೭ರಲ್ಲಿ ಪ್ರಕಟವಾದ ಕವನ ಸಂಕಲನ.

ವಿಚಿತ್ರ ಏತಡ್ಕ ಅವರ 'ಅವಿಲು' ದಕ್ಷಿಣ ಕನ್ನಡದ ಹವ್ಯಕ ಕನ್ನಡದಲ್ಲಿ ರಚಿಸಲಾದ ಮೊದಲ ಸಂಕಲನ. 'ಅವಿಲು' (೧೯೯೨) ಹತ್ತೊಂಬತ್ತು ದೊಡ್ಡ ಹಾಗೂ ಚಿಕ್ಕ ಕವನಗಳ ಸಂಕಲನ. ಹೆಸರೇ ಸೂಚಿಸುವಂತೆ ಬೇರೆ ಬೇರೆ ರುಚಿಗಳುಳ್ಳ ಘಟಕಗಳನ್ನೊಳಗೊಂಡ ಕವಿತೆಗಳ ಪಾಕ ವಿಶೇಷ. ೧೯೯೩ರಲ್ಲಿ ಪ್ರಕಟವಾದ ಸವಿತಾ ಭಟ್ ಅಡ್ವಾಯಿಯವರ 'ಹೂಮಾಲೆ' ಕವನ ಸಂಕಲನದಲ್ಲಿ ಚುಟುಕುಗಳೂ ಸೇರಿ ಒಟ್ಟು ೨೧ ಕವನಗಳಿವೆ. "ಇದು ಹವ್ಯಕ ಮಹಿಳಾ ಲೇಖಕಿಯೊಬ್ಬರ ಸ್ವತಂತ್ರವಾದ ಮೊದಲ ಕವನ ಸಂಕಲನ ಎನ್ನಿಸುತ್ತದೆ" (ಡಾ। ಹರಿಕೃಷ್ಣ ಭರಣ್ಯ; ಈ ನೆಲದ ಕಂಪು; ೨೦೦೬; ಪುಟ ೯೮) ಎಂಬುದಾಗಿ ಡಾ। ಹರಿಕೃಷ್ಣ ಭಣ್ಯರು ಅಭಿಪ್ರಾಯಪಟ್ಟಿದ್ದಾರೆ. 'ಗೆಣಸಲೆ' ಡಾ। ಹರಿಕೃಷ್ಣ ಭರಣ್ಯರು ೧೯೯೫ರಲ್ಲಿ ಪ್ರಕಟಿಸಿದ ಸುಮಾರು ೩೦೦ಕ್ಕೂ ಮಿಕ್ಕಿದ ತ್ರಿಪದಿ ರಚನೆಯಾದ ಮುಕ್ತಕವಾಗಿದ್ದು ಇದು ಪೂರ್ತಿಯಾಗಿ ದಕ್ಷಿಣ ಕನ್ನಡ ಹವ್ಯಕ ಆಡುನುಡಿಯಲ್ಲಿದೆ. ಗಣಪತಿ ದಿವಾಣರ 'ಕನ್ನಡಿ'ಯು ೧೯೯೫ರಲ್ಲಿ ಪ್ರಕಟಗೊಂಡ ಚಿಕ್ಕ ಕವನ ಸಂಕಲನ. ಇದರಲ್ಲಿ ನಲತ್ತೈದು ಕವನಗಳಿವೆ. ಈ ಸಂಕಲನದಲ್ಲಿ ಹವೀಕರ ಹಳೆಯ ಸಂಪ್ರದಾಯ, ಕುಟುಂಬ ಜೀವನ, ಹೆಂಡತಿ–ಮಕ್ಕಳು, ಮನೆ, ಮದುವೆ, ಉಪನಯನ ಹೀಗೆ ಅನೇಕ ವಿಚಾರಗಳು ಬಂದಿವೆ.

'ಜೇನುಹನಿ' ಪ್ರೊ.ವಿ.ಬಿ. ಅರ್ತಿಕಜೆಯವರ ಕವನ ಸಂಕಲನ. ಇದರಲ್ಲಿ ಸುಮಾರು ಎಂಭತ್ತು ಹನಿಗವನಗಳಿವೆ. ಈ ಕವನ ಸಂಕಲನದಲ್ಲಿ ಹವ್ಯಕ ಸಂಸ್ಕೃತಿಯ ಪುನರುತ್ಥಾನದ ಬಗೆಗೆ ಬೆಳಕನ್ನು ತೋರುವ ಹಾಗೆಯೇ ಹವ್ಯಕ ಆಡುನುಡಿ, ಸಾಹಿತ್ಯ ರಚನೆ, ಜನಪದ ಸಾಹಿತ್ಯ, ಸಂಸ್ಕೃತಿ ರಕ್ಷಣೆ ಇತ್ಯಾದಿ ವಿವರಗಳನ್ನು ಹೇಳುವ ರಚನೆಗಳಿವೆ. 'ಒಂದಿಷ್ಟು ಕುಟುಕುಟು' ಶಂ.ಪಾ. ದೈತೋಟ ಅವರು ಸಾಂದರ್ಭಿಕವಾಗಿ ರಚಿಸುತ್ತಾ ಬಂದ ಕೆಲವು ದೊಡ್ಡ ಕವಿತೆಗಳೂ ಸೇರಿದಂತೆ ಸುಮಾರು ಎಪ್ಪತ್ತೊಂಬತ್ತು ಚುಟುಕುಗಳ ಸಂಕಲನ. 'ಕಾವ್ಯ ತೋರಣ' ಮ.ರಾ. ಹೆಗಡೆಯವರ ಕವಿತೆಗಳ ಸಂಕಲನ. 'ಹೂಗುತ್ಯೆಂದೆ' ಇಪ್ಪತ್ತಾರು ಮಂದಿ ಹವಿಗನ್ನಡ ಕವಿಗಳ ಇಪ್ಪತ್ತಾರು

ಕವನಗಳ ಸಂಕಲನವನ್ನು ಡಾ. ವಿಶ್ವಮರಕಿಣಿಯವರು ಸಂಪಾದಿಸಿ ಪ್ರಕಟಿಸಿದ್ದಾರೆ. ಇದರಲ್ಲಿಯ ಎಲ್ಲ ಕವಿತೆಗಳೂ 'ಪ್ರೀತಿ'ಗೆ ಸಂಬಂಧಿಸಿದವು.

ಕೆ.ಪರಮೇಶ್ವರ ಭಟ್ಟರು ಹವಿಗನ್ನಡ ನುಡಿಯಲ್ಲಿ ಚುಟುಕುಗಳು, ವೃತ್ತಗಳು, ಪದ್ಯಗಳು ಹಾಗೂ ಕಥನ ಕಾವ್ಯಗಳನ್ನು ಬರೆದಿದ್ದಾರೆ. ೧೯೯೩ರಲ್ಲಿ ಪ್ರಕಟವಾದ 'ಕಿಟ್ಟಣ್ಣನ ಪ್ರೀತಿ' ಬಾಳಿಲರ ಮೊದಲ ಕಥನಕಾವ್ಯ. ಇದು ಭಕ್ತಿ ಕುಚೇಲನ ಶ್ರೀಕೃಷ್ಣ ಭಕ್ತ ಹಾಗೂ ಪೀತಿಗಳನ್ನು ಚಿತ್ರಿಸಿರುವ ನೀಳ್ಗವನ. 'ಹೊಳಪಿನ ಹಾದಿ' ಬಾಳಿಲರ ಎರಡನೆಯ ನೀಳ್ಗವನ. ಇದರಲ್ಲಿ ಬಾಲಕ ಧ್ರುವನ ಭಕ್ತಿಯ ಕತೆಯಿದೆ. ಇದರಲ್ಲಿ ೧೪೧ ಚೌಪದಿಗಳಿವೆ. ಶ್ರೀಮತಿ ಸವಿತಾ ಭಟ್. ಅಡ್ವಾಯಿ, ಸೇರಾಜೆ ಶ್ರೀನಿವಾಸ ಭಟ್ಟ, ಬಲನಾಡು ಸುಬ್ಬಣ್ಣ ಭಟ್ಟ, ಬಾಳಿಲ ಪರಮೇಶ್ವರ ಭಟ್ಟ, ಎಂ.ಆರ್. ದತ್ತಾತ್ರೇಯ ಶಿಕಾರಿಪುರ, ಜಲಜಸುಖ ಬೆಳ್ಳಾರೆ, ಡಾ. ಶ್ರೀಕೃಷ್ಣ ಚೊಕ್ಕಾಡಿ ಮೊದಲಾದವರು ಹವ್ಯಕ ಭಾಷೆ, ಹವ್ಯಕ ಸಂಸ್ಕೃತಿ ವಿಚಾರಗಳ ಕುರಿತು ಬಿಡಿ ಕವನಗಳನ್ನು ರಚಿಸಿದ್ದಾರೆ. ಅನೇಕ ಹವ್ಯಕರು ಹವಿಗನ್ನಡದಲ್ಲಿ ವೃತ್ತ, ಕಂದ, ಚೌಪದಿ ಮೊದಲಾದ ಛಂದೋರೂಪಗಳಲ್ಲಿ ಭಕ್ತಿಗೀತೆಗಳನ್ನು ರಚಿಸಿದ್ದಾರೆ. 'ಸ್ವಗತ' ವಿಚಿತ್ರ ಏತಡ್ಕ, 'ಕಾಕೆ' ಮತ್ತು 'ಕೂಸಿನ ಆಸೆ' ವಿಜಯಾ, 'ಅಬ್ಬೆಯ ನೆಂಪು' ಶ್ರೀಕೃಷ್ಣ ಚೊಕ್ಕಾಡಿ, 'ತಂಗೆಯ ಕೊರಗು' ಸವಿತಾ ಭಟ್. ಅಡ್ವಾಯಿ, 'ಜಾಲಿಯ ಹೂಗು', 'ಎನ್ನಮನೆ' 'ಎನ್ನ ಬಾಲಂಗೆ', ಅಂಬಿಕಾ ಪಡಾರು, 'ಹೊಳೆಕೆರೆ', 'ಎಲ್ಲಿಗೆ?', 'ಹಲ್ಲಿಶಕುನ', 'ಹಗಲಿರುಳು' ಹರಿಕೃಷ್ಣ ಭರಣ್ಯ ಮುಂತಾದವರ ಭಾವಗೀತೆಗಳ ರಚನೆಯಲ್ಲಿ ಮಾನಸಿಕ ಒಳತೋಟಿಯ ಪ್ರಾಮಾಣಿಕ ಅಭಿವ್ಯಕ್ತಿ, ಜೀವನದ ದೃಷ್ಟಿಕೋನ, ತಾಯಿಯ ಹಿರಿಮೆ, ತಂಗಿಯ ಅಂತರಂಗದ ಕೊರಗು, ಹದಿಹರೆಯದ ಹುಡುಗಿಯರ ಆಸೆ, ಆಕಾಂಕ್ಷೆಗಳ ಚಿತ್ರಣ ಕಂಡುಬರುತ್ತದೆ. ಗಣೇಶ ಪ್ರಸಾದ ಪಾಂಡೇಲು, ಕುತ್ಯಾಡಿ ಗಣೇಶ, ಎಸ್.ಬಿ. ಹೇಟ್, ವಿಚಿತ್ರ ಏತಡ್ಕ, ಶಂಪಾ ದೈತೋಟ, ಬಾಲ ಮಧುರಕಾನನ ಮುಂತಾದ ಕವಿಗಳು ಹಾಸ್ಯ ಪದ್ಯಗಳನ್ನು ರಚಿಸಿದ್ದಾರೆ.

**ಧರ್ಮವಿಜಯ (ಮಹಾಕಾವ್ಯ)**

ಹವಿಗನ್ನಡದಲ್ಲಿ ಪೂರ್ತಿಯಾಗಿ ರಚನೆಗೊಂಡ ಮಹಾಕಾವ್ಯ 'ಧರ್ಮವಿಜಯ'ವು ೨೦೦೫ರಲ್ಲಿ ಪ್ರಕಟವಾಗಿವೆ. "ಇದು ಈ ನುಡಿಯಲ್ಲಿ ರಚಿತವಾದ ಮೊದಲ

ಮಹಾಕಾವ್ಯವೆನಿಸುತ್ತದೆ” (ಡಾ. ಹರಿಕೃಷ್ಣ ಭರಣ್ಯ; ಈ ನೆಲದ ಕಂಪು; ೨೦೦೬; ಪುಟ ೧೨೮) ಎಂಬುದಾಗಿ ಹವಿಗನ್ನಡ ಸಾಹಿತಿ ಡಾ. ಹರಿಕೃಷ್ಣ ಭರಣ್ಯರು ಅಭಿಪ್ರಾಯಪಟ್ಟಿದ್ದಾರೆ. ಇದನ್ನು ರಚಿಸಿದವರು ಖ್ಯಾತ ಕವಿ ವಿದ್ವಾಂಸ ಬಾಳಿಲ ಕೆ. ಪರಮೇಶ್ವರ ಭಟ್ಟರು. ಇವರು ಹವಿಗನ್ನಡದಲ್ಲಿ ಈಗಾಗಲೇ ಹಲವಾರು ಕವಿತೆಗಳನ್ನು ಖಂಡ/ಕಥನ ಕಾವ್ಯಗಳನ್ನು ಪ್ರಕಟಿಸಿದ್ದಾರೆ. ಈ ಕಾವ್ಯವು ಸರಳ ರಗಳೆಯಲ್ಲಿ ರಚಿತವಾಗಿದೆ. ಈ ಕಾವ್ಯದಲ್ಲಿ ಮೂವತ್ತು ಅಧ್ಯಾಯಗಳಿವೆ. ಮೂವತ್ತೊಂದನೆಯ ಅಧ್ಯಾಯದಲ್ಲಿ ಚಿಂತನೆಗೆ ಹಚ್ಚುವ ವಿಮರ್ಶೆಯಿದೆ. ಕೊನೆಯಲ್ಲಿ ಇದರೊಳಗೆ ಬಳಕೆಯಾದ ಪಾರಿಭಾಷಿಕ ಪದಗಳಿಗೆ ಅರ್ಥವನ್ನು ಕೊಡಲಾಗಿದೆ.

ಕಾವ್ಯದೊಳಗಿನ ಪ್ರತಿಯೊಂದು ಅಧ್ಯಾಯಕ್ಕೂ ಹವಿಗನ್ನಡದ ಜಾಯಮಾನಕ್ಕೆ ಹೊಂದುವ ಶೀರ್ಷಿಕೆಯನ್ನು ಕೊಡಲಾಗಿದೆ. ಉದಾಹರಣೆಗೆ ಪೀಠಿಕೆ, ಕಥಾಪ್ರವೇಶಕ್ಕೆ 'ಒಳಬನ್ನಿ' ಎಂಬ ಆತ್ಮೀಯ ಆಹ್ವಾನ; ದ್ರುಪದನ ಗರ್ವಭಂಗಕ್ಕೆ 'ಅಮಲು ಇಳಿಸಿದ್ದು'; ಬಕಾಸುರನ ವಧೆಗೆ 'ಊರಿಂದ ಮಾರಿ ಎಬ್ಬಿದ್ದು; ಜೂಜಾಟಕ್ಕೆ 'ಶೆನಿ ಬಿಡುಗೋ', ನಳಚರಿತ್ರೆಗೆ 'ಗುಜು ಗುಂಟನ ಕತೆ; ಕೃಷ್ಣ ಸಂಧಾನಕ್ಕೆ 'ಬಳ್ಳಿ ಇಲ್ಲದೆ ಕಟ್ಟಿದ' ಹೀಗೆ ಮೂವತ್ತು ಅಧ್ಯಾಯಗಳನ್ನು ಬೇರೆಬೇರೆಯಾಗಿ ಹೆಸರಿಸಲಾಗಿದೆ.

ಈ ಕೃತಿಯ ಕವಿ ಹುಟ್ಟಿ ಬೆಳೆದುದು ಕುಂಬಳೆ ಸೀಮೆಯಲ್ಲಾದ ಕಾರಣ ಈ ಕಾವ್ಯದಲ್ಲಿ ಪ್ರಧಾನವಾಗಿ ಕುಂಬಳೆ ಸೀಮೆಯ ಹವಿಗನ್ನಡ ಆಡುನುಡಿಯನ್ನು ಬಳಸಿದ್ದಾರೆ. ಕಾವ್ಯಾರಂಭದಲ್ಲಿ ಗುರುವಂದನ, ವಿಘ್ನರಾಜನ ಸ್ತುತಿ, ಹೆತ್ತವರ ಸ್ಮರಣೆ, ದೈವಸ್ತುತಿ ಹೀಗೆ ಶಾಸ್ತ್ರಬದ್ಧವಾಗಿ ಆರಂಭಿಸಿ, ತಮ್ಮ ಸ್ವಂತ ಪರಿಚಯವನ್ನು ಹೇಳಿ, ಕಾವ್ಯದೊಳಗಿನ ತಮ್ಮ ಮಿತಿಗಳನ್ನು ಹೇಳುತ್ತಾರೆ.

ಈ ಕಾವ್ಯವು ಮುಖ್ಯವಾಗಿ ವ್ಯಾಸ ಭಾರತದ ಮೂಲಕಥೆಯನ್ನು ಹಾಗೆಯೇ ಇಟ್ಟುಕೊಂಡು ರಚಿತವಾಗಿದೆ. ರಾಜಧಾನಿಯಾದ ಹಸ್ತಿನಾವತಿಯಲ್ಲಿ ಪ್ರದೀಪನು ರಾಜ್ಯವಾಳುತ್ತಿರುವುದರಿಂದ ಮೊದಲುಗೊಂಡು ಮಹಾಭಾರತ ಯುದ್ಧವು ಮುಗಿದು ಧರ್ಮರಾಜನು ಪಟ್ಟಾಭಿಷಿಕ್ತನಾದನೆಂಬಲ್ಲಿವರೆಗಿನ ಸಮಗ್ರ ಭಾರತ ಕತೆಯನ್ನು ಇಲ್ಲಿ ನಿರೂಪಿಸಲಾಗಿದೆ. ಕಥಾ ಸನ್ನಿವೇಶಗಳನ್ನು ಆದಷ್ಟೂ ಆಧುನಿಕ ಜೀವನದ ರೀತಿಗೆ

ಹೋಲಿಸಿಕೊಂಡು ವಿಮರ್ಶಿಸುತ್ತಾ ಅಲ್ಲಲ್ಲಿ ನೀತಿ –ತತ್ವ– ಸಂದೇಶಗಳನ್ನು ಹೇಳಿರುವುದು ಇಲ್ಲಿನ ವಿಶೇಷತೆಯಾಗಿದೆ.

ಕವಿ ಪರಮೇಶ್ವರ ಭಟ್ಟರು ಕಲ್ಪನಾ ಲಹರಿಯು ವಿಶಿಷ್ಟವಾದುದು. ಅದಕ್ಕೆ ತಕ್ಕಂತೆ ಭಾಷೆಯನ್ನು ಅವರು ದುಡಿಸಿಕೊಂಡ ರೀತಿಯಲ್ಲಿ ಅವರ ಸ್ವಂತಿಕೆಯು ಎದ್ದು ಕಾಣುವಂಥದು. ಭೀಮ ದುರ್ಯೋಧನರು ತಾವು ಕಲಿತ ವಿದ್ಯಾ ನೈಪುಣ್ಯಗಳನ್ನು ಪ್ರದರ್ಶಿಸುವ ವರ್ಣನೆಯ ಸಂದರ್ಭದಲ್ಲಿ :

"ಬಂದದೆರಡಾನೆಗಳೊ?
ಅಲ್ಲ, ದುರ್ಯೋಧನನು ಭೀಮನೂ ಗದೆ ಹಿಡಿದು !
ಕೆಲವು ಜನ ಭೀಮಂಗೆ, ಕೆಲವು ಮತ್ತೊಬ್ಬಂಗೆ
ಜಯಕಾರ ಮಾಡಿದವು. ಏರಿತ್ತು ಹುಮ್ಮಸ್ಸು !
ಅದ! ಗದೆಯ ನೆಗ್ಗಿದವು, ಬಗ್ಗಿದವು ಬಡುದವೋ !
ಧಡಧಡನೆ ಶಬ್ದ ! ಗದೆಗಳ ಡಿಕ್ಕಿ. ಅವು ಸೊಕ್ಕಿ
ಜೆಪ್ಪಿದವು. ನುರ್ಪಿದವು. ಪೀಂಕಿದವು. ತಪ್ಪಿತ್ತೊ ?
ಅಲ್ಲ, ನೆತ್ತಿಯ ಬಾಗ ಬಿಟ್ಟಿತ್ತೊ ! ಕಾದಾಟ
ರಜ ಹೊತ್ತೊ? ಅವರ ತಿರುಗಾಟಕ್ಕೆ ಸುಳಿಗಾಳಿ !
ಗದೆಯ ಪೆಟ್ಟಿನ ಬೆಶಿಗೆ ತೋರಣವೆ ಬಾಡಿತ್ತು.
ಒಂದೊಂದು ಹೂಂಕಾರಕದುರುತ್ತು ಚೆಪ್ಪರವೆ !
ಅಲ್ಲಪ್ಪ ಜೆನರುಸುಲೆ ಇಲ್ಲೆ !!"(ಕೆ.ಪರಮೇಶ್ವರ ಭಟ್ ಬಾಳಿಲ; ಧರ್ಮವಿಜಯ;೨೦೦೫; ಪುಟ ೬೧).

ಮುಂದೆ ಭೀಮನಿಂದ ಹತನಾದ ಬಕಾಸುರನನ್ನು ವರ್ಣಿಸಿದ ರೀತಿ :

"ಅದರ ಮೀಸೆಯೊ ಅಬ್ಬ, ಬೆದುರ ಬೇರಿನ ಹಾಂಗೆ.
ಕಣ್ಣು ಸುಟ್ಟವಿನ ಗುಳಿ, ಅಟ್ಟ ನೋಡುವ ಮೂಗು.
ಹಲ್ಲೆರಡು ನೀಡಿದ್ದು ತಲೆಕೆದರಿ ಬಿಕ್ಕಿದ್ದು,
ತೆಗಲೆ ಸಿಗಿದರೆ ಮೂರು ಕೋಲಿನಗಲದ ಹಲಗೆ

ಸಿಕ್ಕುಗಿಷ್ಟೂ ಕಾಲ ಊರಿನ ನುಂಗಿದ ಇದರ

ಕಾಮಲೆಯ ಇಳಿಸಿದವ ಗಟ್ಟಗನೆ ಸೈ" ಹೇಳಿ

ಹೆಮ್ಮಕ್ಕೊ ಮಕ್ಕೊ ಜವ್ವನಿಗಂದ್ರು ಅಜ್ಜಂದ್ರು

ಇವನ ಹೊಗಳಿದವೆಷ್ಟೊ ರೀತಿ॥" (ಕೆ.ಪರಮೇಶ್ವರ ಭಟ್ ಬಾಳಿಲ;ಧರ್ಮವಿಜಯ;೨೦೦೫;ಪುಟ ೯೭).

ಕವಿ ಬಾಳಿಲ ಪರಮೇಶ್ವರ ಭಟ್ಟರು 'ಧರ್ಮ ವಿಜಯ' ಮಹಾಕಾವ್ಯದಲ್ಲಿ ನೂರಕ್ಕೂ ಹೆಚ್ಚು ಸಹಜವಾದ ಪಡೆನುಡಿ- ನುಡಿಗಟ್ಟುಗಳನ್ನು ಸಂದರ್ಭಕ್ಕೆ ತಕ್ಕಂತೆ ಬಳಸಿದ್ದಾರೆ. ಹಾಗೆಯೇ ಹವಿಗನ್ನಡ ಗಾದೆಗಳನ್ನು ಮತ್ತು ಸಹಜ ಬೈಗಳನ್ನು ಸಂದರ್ಭ- ಸನ್ನಿವೇಶಗಳಿಗೆ ತಕ್ಕಂತೆ ಬಳಸಿಕೊಂಡಿದ್ದಾರೆ. "ಹವಿಗನ್ನಡವು ಕನ್ನಡದ ಒಂದು ವಿಶಿಷ್ಟ ಹಾಗೂ ಐತಿಹಾಸಿಕ ಮಹತ್ತ್ವವುಳ್ಳ ಆಡಿನುಡಿಯೆಂಬುದು ಇಲ್ಲೂ ರುಜುವಾತಾಗಿದೆ. ಕವಿಯು ತಮ್ಮ ತಾಯ್ನುಡಿಯಲ್ಲೇ ಹೇಳಿದ್ದರಿಂದ, ಅವರ ಶಕ್ತಿ ಸಾಮರ್ಥ್ಯ ಸಂಪತ್ತುಗಳನ್ನು ಒಂದು ಮಟ್ಟದಲ್ಲಿ ತೋರಿಸಿಕೊಟ್ಟಂತಾಗಿದೆ. ಹವಿಗನ್ನಡವು ಹಳಗನ್ನಡ- ನಡುಗನ್ನಡಗಳನ್ನು ಎಷ್ಟರಮಟ್ಟಿಗೆ ತನ್ನ ಗರ್ಭದಲ್ಲಿ ಉಳಿಸಿಕೊಂಡಿದೆ ಎಂಬುದಕ್ಕಿರುವ ಸಾಕ್ಷಿಯೂ ಹೌದು. ಕನ್ನಡ ಕಾವ್ಯಲೋಕಕ್ಕೆ ಇದೊಂದು ಅಪೂರ್ವ ಕೊಡುಗೆ ಹೇಗೋ ಹಾಗೇ ಹವಿಗನ್ನಡ ಜನರ, ನುಡಿಯ ಸಾಂಸ್ಕೃತಿಕ ಮಹತ್ತ್ವಗಳನ್ನು ದಾಖಲಿಸುವ ಪ್ರಯತ್ನವಾಗಿಯೂ ಇದೊಂದು ಅಮೂಲ್ಯ ಕೃತಿಯೆನಿಸುತ್ತದೆ. (ಡಾ. ಹರಿಕೃಷ್ಣ ಭರಣ್ಯ; ಈ ನೆಲದ ಕಂಪು; ೨೦೦೬; ಪುಟ ೧೩೭) ಎಂಬುದು ಡಾ. ಹರಿಕೃಷ್ಣ ಭರಣ್ಯರ ಅಭಿಮತ.

ಹವಿಗನ್ನಡ ನುಡಿಯಲ್ಲಿ ಮೊದಲ ಯಕ್ಷಗಾನ ಪ್ರಸಂಗ ಕೃತಿಯು ಪ್ರಕಟವಾದುದು ೧೯೯೧ರಲ್ಲಿ ಕೆ. ವಿಶ್ವವಿನೋದ ಬನಾರಿಯವರು 'ದಕ್ಷಾಧ್ವರ' ಎಂಬ ಪುಟ್ಟದಾದ ಯಕ್ಷಗಾನ ಪ್ರಸಂಗ ಕೃತಿಯನ್ನು ರಚಿಸಿದ್ದಾರೆ. ಕವಿ ವಿದ್ವಾನ್ ತಾಳ್ತಜೆ ಕೃಷ್ಣಭಟ್ಟರಿಂದ ರಚಿತವಾದ 'ಮಯೂರವರ್ಮ ವಿಲಾಸ' ಯಕ್ಷಗಾನ ಕೃತಿಯಲ್ಲಿ ಕದಂಬ ವಂಶದ ಮಯೂರವರ್ಮನ ಕಥೆಯಿದೆ. ಕನ್ನಡನಾಡನ್ನು ಕಟ್ಟಿದ ಮೊದಲ ಅರಸನಾದ ಮಯೂರವರ್ಮನು ಧಾರ್ಮಿಕ ಆಚರಣೆಗಳ ಸಲುವಾಗಿ ಅಹಿಚ್ಛತ್ರದಿಂದ ೩೨ ಬ್ರಾಹ್ಮಣ

ಕುಟುಂಬಗಳನ್ನು ಹವ್ಯಕ ಮಂಡಲಕ್ಕೆ ಕರೆತಂದನೆಂಬ ಚರಿತ್ರೆಯನ್ನು ಹೇಳುವ ಯಕ್ಷಗಾನ ಕೃತಿ ಇದಾಗಿದೆ.

'ನೀರಮೇಲಣಗುಳ್ಳೆ' ಚಂದ್ರಶೇಖರ ಚೊಕ್ಕಾಡಿಯವರು ಬರೆದ ಎಪ್ಪತ್ತಾರು ಪುಟಗಳುಳ್ಳ ಹವಿಗನ್ನಡ ಕಿರುಕಾದಂಬರಿಯಾಗಿದೆ. ಕಾದಂಬರಿಕಾರರು ಇದನ್ನು ವಿಟ್ಲ ಸೀಮೆಯ ಹವ್ಯಕ ನುಡಿಯಲ್ಲಿ ಬರೆದಿದ್ದಾರೆ. ಪ್ರಧಾನ ಕತೆಯೊಂದಿಗೆ ಹಲವಾರು ಘಟನೆಗಳನ್ನು, ಹವ್ಯಕ ಸಮುದಾಯದ ಒಳಹೊರಗುಗಳನ್ನು ಕೊಟ್ಟಿರುವುದು ಇಲ್ಲಿನ ವಿಶೇಷತೆಯಾಗಿದೆ. ಹವಿಗನ್ನಡದಲ್ಲಿ ಬಂದ ಮೊದಲ ಕಾದಂಬರಿಗಳ ಸಾಲಿನಲ್ಲಿ ಇದೂ ಒಂದೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಡಾ. ಹರಿಕೃಷ್ಣ ಭರಣ್ಯರು ರಚಿಸಿದ 'ದೊಡ್ಡ ಜಾಲು' ಎಂಬ ಪುಟ್ಟ ಕಾದಂಬರಿಯಲ್ಲಿ ಎರಡು ಕುಟುಂಬಗಳ ಮೂರು ತಲೆಮಾರಿನ ಬೆಳವಣಿಗೆಯ ಚಿತ್ರಣವಿದೆ. ಈ ಕಾದಂಬರಿಯಲ್ಲಿ ಹವ್ಯಕ ಸಮಾಜದ ರೀತಿನೀತಿಗಳು, ನಡವಳಿಕೆಗಳು, ಭಾಷೆ – ನುಡಿಗಟ್ಟುಗಳನ್ನು ಆಯಾ ಪರಿಸರದ ಹಾಗೂ ಸನ್ನಿವೇಶದ ಹಿನ್ನೆಲೆಯಲ್ಲಿ ಭರಣ್ಯರು ಯಥಾವತ್ತಾಗಿ ಬಳಸಿದ್ದಾರೆ. ಹವ್ಯಕ ಭಾಷೆಯ ಮೊದಲ ಕಾದಂಬರಿ ಎಂಬುದು ಮಾತ್ರವಲ್ಲದೆ ಹವ್ಯಕ ಸಮಾಜದ ಜೀವನ ಕ್ರಮ, ನಂಬಿಕೆ ಹಾಗೂ ಭಾಷೆಗಳನ್ನು ಸಮರ್ಥವಾಗಿ ದಾಖಲಿಸುತ್ತದೆ. 'ದೊಡ್ಡ ಜಾಲು' ಕಾದಂಬರಿ ೨೦೦೨ರಲ್ಲಿ ತಮಿಳು ಭಾಷೆಗೆ ಅನುವಾದಗೊಂಡಿದೆ. 'ಇಳಂಭಾರತಿ'ಯೆಂಬ ಕಾವ್ಯನಾಮದಿಂದ ಪ್ರೊ. ರುದ್ರ ತುಳಸೀದಾಸರು ಇದನ್ನು ತಮಿಳು ಭಾಷೆಗೆ ಭಾಷಾಂತರಿಸಿದ್ದಾರೆ.

'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ' ಹವ್ಯಕ ಆಡುನುಡಿಯಲ್ಲಿ ಮೊತ್ತಮೊದಲಿಗೆ ಪ್ರಕಟವಾಗಿರುವ ಸ್ವತಂತ್ರ ಸಾಮಾಜಿಕ ನಾಟಕವಾಗಿದೆ. ೧೮೮೭ರಲ್ಲಿ ರಚನೆಯಾದ ಈ ಕೃತಿಯು ಹೊಸಗನ್ನಡದ ಆರಂಭದ ನಾಟಕ ಎಂಬುದು ಚಾರಿತ್ರಿಕ ಸತ್ಯ. ಇದರ ಕರ್ತೃ ಕರ್ಕಿ ವೆಂಕಟರಮಣ ಶಾಸ್ತ್ರಿಗಳು ಹತ್ತೊಂಬತ್ತನೇ ಶತಮಾನದಲ್ಲಿ ಉತ್ತರ ಕನ್ನಡ ಹವ್ಯಕ ಸಮಾಜದಲ್ಲಿದ್ದ ಆಚಾರ-ವಿಚಾರಗಳು, ಕನ್ಯಾ ಶುಲ್ಕದ ಪಿಡುಗು, ಬಾಲ್ಯ ವಿವಾಹ ಪದ್ಧತಿ ಹಾಗೂ ಅದರ ದುಷ್ಪರಿಣಾಮಗಳು ಮುಂತಾದ ವಿಚಾರಗಳನ್ನು ಇದರಲ್ಲಿ ಚಿತ್ರಿಸಿದ್ದಾರೆ. ಡಾ। ಶಾಲಿನಿ ರಘುನಾಥರು ಈ ನಾಟಕದ ಮೂಲ ಆವೃತ್ತಿಯೊಂದಿಗೆ ಹೊಸಗನ್ನಡ ಆವೃತ್ತಿಯನ್ನು ದೀರ್ಘವಾದ ಪ್ರಸ್ತಾವನೆಯೊಂದಿಗೆ ೧೯೮೮ರಲ್ಲಿ ಪ್ರಕಟಿಸಿದ್ದಾರೆ.

ಬ.ಲ. ಸುರೇಶ ಅವರು ೧೯೮೭ರಲ್ಲಿ ಸಿದ್ಧಪಡಿಸಿ ೧೯೮೫ರಲ್ಲಿ ರಂಗವೇರಿದ 'ಕಗ್ಗಳ್ಳಿಲೊಂದಿನ' ನಾಟಕ ಕೃತಿಯು ಪುಸ್ತಕ ರೂಪದಲ್ಲಿ ೧೯೮೬ರಲ್ಲಿ ಪ್ರಕಟಗೊಂಡಿದೆ. ನಡಹಳ್ಳಿ ಶ್ರೀಪಾದರಾವ್ ಬರೆದ 'ನಮ್ಮೆಲ್ಲರ ಬದುಕಿನ ಕಥೆ' (೧೯೮೬) ನಾಟಕವು ಪೂರ್ತಿಯಾಗಿ ಸಾಗರ ಸೀಮೆಯ ಹವಿಗನ್ನಡದಲ್ಲಿ ರಚನೆಯಾಗಿದ್ದು, ವರದಕ್ಷಿಣೆಯ ಪಿಡುಗನ್ನು ಚಿತ್ರಿಸುತ್ತದೆ. ೧೯೯೦ರಲ್ಲಿ ಡಾ. ಹರಿಕೃಷ್ಣ ಭರಣ್ಯರ 'ಹೀಗೊಂದು ಮದುವೆ' ನಾಟಕವು ಪ್ರಕಟವಾಯಿತು. ಇದು ಹಾಸ್ಯಮಯ ರಂಜನೆಯ ನಾಟಕವಾಗಿದೆ. ಇದರಲ್ಲಿ ಆರು ಪಾತ್ರಗಳಿದ್ದು ಆರು ಅಂಕಗಳಲ್ಲಿವೆ. 'ದತ್ತು ಮಾಣಿಯ ಮದುವೆ ಪ್ರಸಂಗ' ೧೯೯೦ರಲ್ಲಿ ರಚನೆಯಾದ ಹವಿಗನ್ನಡ ನಾಟಕವಾಗಿದೆ. ಇದರ ಕರ್ತೃ ಸಿರ್ಸಿ ತಾಲೂಕಿನ ಎಂ.ಜಿ. ಶಾಸ್ತ್ರಿಗಳು. ೧೯೯೩ರಲ್ಲಿ ಪಡಾರು ಮಹಾಬಲೇಶ್ವರ ಭಟ್ಟರು 'ನಂಬ್ರಂದ ಜಂಬ್ರಕ್ಕೆ' ಎಂಬ ನಾಟಕವನ್ನು ರಚಿಸಿದ್ದಾರೆ. ಆ ಕಾಲದ ಹವ್ಯಕ ಮನೆಯೊಂದರ ಚಿತ್ರಣವಿರುವ ಈ ನಾಟಕದಲ್ಲಿ ಹಳೆ ಹಾಗೂ ಹೊಸ ತಲೆಮಾರುಗಳ ಅಭಿಪ್ರಾಯ ಭೇದಗಳ ಚಿತ್ರಣವಿದೆ. ಅಪ್ಪ ಹಾಗೂ ಮಕ್ಕಳೊಳಗಿನ ಅಭಿಪ್ರಾಯ ಭೇದಕ್ಕೆ ಆ ಕಾಲದ ವಿದ್ಯಾಭ್ಯಾಸ ಪದ್ಧತಿ, ಹಳೆ ಜನರ ಮರ್ಜಿ ಇತ್ಯಾದಿಗಳು ಹೇಗೆ ಕಾರಣವಾಗಿದೆ ಎಂಬುದರ ಚಿತ್ರಣವಿದೆ. ಈ ನಾಟಕದಲ್ಲಿ ಪಂಜ, ಕುಂಬಳೆ ಹಾಗೂ ವಿಟ್ಲ ಸೀಮೆಯ ಹವ್ಯಕ ನುಡಿಯ ಪ್ರಭೇದಗಳನ್ನು ಬಳಸಲಾಗಿದೆ.

ವಿ.ತಿ. ಶೀಗೇಹಳ್ಳಿಯವರ 'ತಲೆಗಳಿ' ಕಾದಂಬರಿ ೪೪೮ ಪುಟಗಳಲ್ಲಿ ೫೦ ಅಧ್ಯಾಯಗಳಿರುವ ಒಂದು ಬೃಹತ್ ಕೃತಿ. ಇದರ ಕಥಾವಸ್ತು ಉತ್ತರಕನ್ನಡ ಜಿಲ್ಲೆಯ ಸಿದ್ಧಾಪುರ ಕಡೆಯದಾಗಿದ್ದು ಸಂಭಾಷಣೆಗಳನ್ನು ಅದೇ ಆಡುನುಡಿಯಲ್ಲಿ ದಾಖಲಿಸಿದೆ. ಹವ್ಯಕ ಕುಟುಂಬದ ಕವಲಕೊಪ್ಪ ಸುಬ್ರಾಯ ಹೆಗಡೆಯ ಬದುಕು ಬಡತನದಿಂದಾರಂಭಿಸಿ, ದೈವಾನುಗ್ರಹದಿಂದ ದೊರೆಯುವ ನಿಧಿಯಿಂದಾಗಿ ಆತನು ಕಳೆದುಕೊಂಡ ಸ್ಥಾನ–ಮಾನ ಆರ್ಥಿಕ ನೆಲೆಗಳನ್ನು ಮತ್ತೆ ಗಳಿಸಿಕೊಳ್ಳುವುದು, ಮುಂದೆ ಆತನು ಮನೆಗೆ, ಊರಿಗೆ ಹಾಗೂ ಕುಟುಂಬ–ಸಮಾಜಕ್ಕೆ ಅತ್ಯಂತ ಬೇಕಾದವನಾಗುವ ಬಗೆಯನ್ನು ಸಮಗ್ರವಾಗಿ ಚಿತ್ರಿಸುತ್ತದೆ. ಕಥೆಯ ಕಾಲವು ಸುಮಾರು ೧೯೧೦ ರಿಂದ ೧೯೩೦ ಆಗಿರುವುದರಿಂದ, ಆಧುನಿಕತೆಯಿಂದ ದೂರ ಇರುವ ಹವ್ಯಕ ಕುಟುಂಬದಲ್ಲಿನ ದೈನಂದಿನ ಆಗು ಹೋಗುಗಳನ್ನು ಕೃಷಿ–ಬೇಸಾಯ ಪದ್ಧತಿ, ಸಾಂಸ್ಕೃತಿಕ ವಿಚಾರಗಳನ್ನು ತೆರೆದಿಡುತ್ತಾ ಹೋಗುತ್ತದೆ. ಸಮಾಜದ ಬೋಳೇತನ-ಕುಂದುಕೊರತೆಗಳನ್ನು ಹೇಳುತ್ತಾ

ಅವಕ್ಕೆ ಚಿಕಿತ್ಸೆಯನ್ನು ನೀಡಲಾಗಿದೆ. ಕಾದಂಬರಿಕಾರರು ಸ್ವತಃ ಕಲಾವಿದರೂ ಆಗಿರುವುದರಿಂದ ಪುರಾಣ, ಭಾರತ, ರಾಮಾಯಣ, ಭಾಗವತಗಳಲ್ಲಿನ ವಿಚಾರಗಳನ್ನು ಕಾದಂಬರಿಯಲ್ಲಿ ಬಳಸಿಕೊಳ್ಳುತ್ತಾರೆ. ಹವಿಗನ್ನಡ-ಶಿಷ್ಟ ಕನ್ನಡಗಳನ್ನು ಹಿತಮಿತಿಯಾಗಿ ಬಳಸಿದ್ದಾರೆ. "ಬಹುಶಃ ಇಷ್ಟು ವ್ಯಾಪಕವಾಗಿ ಒಂದು ನಿರ್ದಿಷ್ಟ ಪ್ರದೇಶದ ಹವ್ಯಕ ಸಮಾಜದ ಭಾಷಿಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ವಿಚಾರಗಳು ಕಾದಂಬರಿಯೊಳಗೆ ಚಿತ್ರಿತವಾಗಿರುವುದು ಬೇರೆ ಇಲ್ಲ" (ಶ್ರೀಕಾಂತ ಹೆಗಡೆ (ಸಂ) ಹವ್ಯಕ. ಮಾಸಪತ್ರಿಕೆ ; ಎಪ್ರಿಲ್ ೨೦೧೧; ಪುಟ ೨೬) ಎಂಬುದಾಗಿ ಡಾ. ಹರಿಕೃಷ್ಣ ಭರಣ್ಯರು ಅಭಿಪ್ರಾಯಪಟ್ಟಿದ್ದಾರೆ.

ಹವ್ಯಕ ಸಂಸ್ಕೃತಿಗೆ ಸಂಬಂಧಿಸಿದಂತೆ ಹವಿಗನ್ನಡ ಭಾಷೆಯಲ್ಲಿ ಮಕ್ಕಳ ಸಾಹಿತ್ಯ, ಹಾಸ್ಯ, ಹರಟೆ, ನಗೆಹನಿ, ಪ್ರಬಂಧಗಳು, ಅಂಕಣಬರಹ, ಲೇಖನಗಳು ಮುಂತಾಗಿ ಸುಮಾರು ಸಾವಿರ ಸಂಖ್ಯೆಯ ಬರಹಗಳು ಬಿಡಿಯಾಗಿ ಪ್ರಕಟವಾಗಿವೆ. ಹೊಸಗನ್ನಡದ ಮೊತ್ತಮೊದಲ ಸ್ವತಂತ್ರ ಸಾಮಾಜಿಕ ನಾಟಕ 'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ' (೧೮೮೭) ದಿಂದಾರಂಭಿಸಿ ಇಂದಿನವರೆಗೆ ಹವಿಗನ್ನಡ ಆಡುನುಡಿಯಲ್ಲಿ ರಚಿಸಲಾದಂಥ ರಚನೆಗಳನ್ನು ನೋಡುತ್ತಾ ಬಂದರೆ, ಬೇರೆ ಯಾವುದೇ ಉಪಭಾಷೆಯಲ್ಲಿ ಇಷ್ಟು ವೈವಿಧ್ಯಪೂರ್ಣವಾದ ಸಾಹಿತ್ಯದ ರಚನೆಗಳು ಬರುತ್ತಿರುವುದು ದಾಖಲಾಗಿಲ್ಲವೆಂಬುದು ಸ್ಪಷ್ಟ. ಇದರಲ್ಲಿ ಸೃಜನಶೀಲ ಮತ್ತು ಸೃಜನೇತರ ಕೃತಿಗಳು ಅಪಾರ ಪ್ರಮಾಣದಲ್ಲಿ ಕಂಡುಬರುತ್ತಿವೆ. ಇಲ್ಲಿ ಭಾಷಾ ಸೌಂದರ್ಯ, ಸಂಪ್ರದಾಯ, ಆಚಾರ, ವಿಚಾರಗಳು-ಗಾದೆಗಳು, ಪಡೆನುಡಿಗಳ ಬಳಕೆ, ಮಹಿಳೆಯರ ಹಾಗೂ ಮಕ್ಕಳ ಸ್ಥಾನಮಾನಗಳು ಇತ್ಯಾದಿಯಾಗಿ ಹವ್ಯಕ ಸಂಸ್ಕೃತಿಯ ವಿಭಿನ್ನ ನೆಲೆಗಳಿಗೆ ಪ್ರತಿಕ್ರಿಯೆ ನೀಡಿರುವುದು ಕಂಡುಬರುತ್ತದೆ.

ಒಟ್ಟಿನಲ್ಲಿ ಹವ್ಯಕ ಸಾಹಿತಿಗಳು ಕನ್ನಡ ಸಾಹಿತ್ಯಕ್ಕೆ ಸಂಖ್ಯೆಯಲ್ಲಿಯೂ, ಮಹತ್ತ್ವದಲ್ಲಿಯೂ ಮುಖ್ಯವಾದ ಕೊಡುಗೆಯನ್ನು ನೀಡಿದ್ದಾರೆ. ಕನ್ನಡ ಸಾಹಿತ್ಯದ ಮುಖ್ಯ ಚಳುವಳಿಗೆ ಇಲ್ಲಿನ ಸಾಹಿತಿಗಳು ನೀಡಿದ ಕೊಡುಗೆ ಅಪಾರವಾದುದು.

# ಅಧ್ಯಾಯ – ೪

## ಕಥನ ಶಾಸ್ತ್ರದ ಹಿನ್ನೆಲೆ

ಭಾಷೆಯನ್ನು ಕಲಿತ ಮನಷ್ಯನು ತನ್ನ ಸುಖದುಃಖವನ್ನು ಇತರರೊಂದಿಗೆ ಹಂಚಿಕೊಂಡು ದುಃಖವನ್ನು ಹಗುರಗೊಳಿಸುವುದೂ ಸುಖವನ್ನು ಇಮ್ಮಡಿಗೊಳಿವುದೂ ಸ್ವಾಭಾವಿಕವಾಗಿದೆ. ಆದುದರಿಂದ ತಾನು ಕೇಳಿದ್ದನ್ನೂ, ಕಂಡದ್ದನ್ನೂ, ಅನುಭವಿಸಿದ್ದನ್ನೂ ಇತರರೊಂದಿಗೆ ಹೇಳಲು ಆತನು ತವಕಿಸುತ್ತಾನೆ. ಮಾನವನ ಮೂಲಭೂತ ಪ್ರವೃತ್ತಿಯು ಕಾಲಾನುಕ್ರಮದಲ್ಲಿ ಅನೇಕ ಸಂಸ್ಕಾರಗಳಿಗೆ ಈಡಾಗಿ ಸ್ವಾರಸ್ಯಯುಕ್ತವಾಗಿ ಕತೆಯ ರೂಪವನ್ನು ಪಡೆಯುತ್ತದೆ. ಹೀಗೆ ಮಾತು ಕತೆಯಾಯಿತು, ಕತೆ ಸಾಹಿತ್ಯವಾಯಿತು. ಉಳಿದ ಮಾತುಗಳ ಜೊತೆಗೆ ತನಗೆ ಮನೋರಂಜನೆಯನ್ನು ನೀಡಿದ, ನೀತಿಯ ಪಾಠವನ್ನು ಕಲಿಸಿದ, ಧರ್ಮದ ತಿರುಳನ್ನು ಬೋಧಿಸಿದ ಕತೆಯ ಮಾತುಗಳನ್ನು ಮರೆಯುವುದು ಮಾನವನಿಗೆ ಸಾಧ್ಯವಾಗಲಿಲ್ಲ. ಆರಂಭದಲ್ಲಿ ಕಥಾಸಾಹಿತ್ಯವು ಜನಪದರ ಬಾಯಿ ಮಾತಿನಲ್ಲೇ ಉಳಿಯಬೇಕಾಗಿತ್ತು. ಲಿಪಿಯು ಉಗಮವಾದ ಅನಂತರ ಜನಪದ ಸಾಹಿತ್ಯವು ಗ್ರಂಥಸ್ಥವಾಗತೊಡಗಿತು.

ವೇದ, ಉಪನಿಷತ್ತುಗಳಲ್ಲಿ ಕಂಡುಬರುವ ಕತೆಗಳು ಭಾರತೀಯ ಕಥಾ ಪರಂಪರೆಯ ಪ್ರಾಚೀನತೆಯನ್ನು ಸೂಚಿಸುತ್ತವೆ. ಕ್ರಿ.ಪೂ. ೫೦೦೦ದಲ್ಲಿ ಜೀವಿಸಿದ್ದ ಈಜಿಪ್ಟಿನ ವಾಫಿರಿ ಎಂಬ ಚಕ್ರವರ್ತಿಯ ಕಾಲದಲ್ಲಾಗಲೇ ಸಣ್ಣ ಕಥೆಗಳು ಈಜಿಪ್ಟಿನಲ್ಲಿ ಪ್ರಚಾರವನ್ನು ಪಡೆದಿದ್ದವು ಎನ್ನಲಾಗಿದೆ. ಕ್ರಿ.ಪೂ. ೪೯೦ರ ಹೆರಡಾಟಸನ ಚರಿತ್ರೆ ಗ್ರಂಥದಲ್ಲಿ ಅನೇಕ ಸಣ್ಣ ಕತೆಗಳು ಅಡಕವಾಗಿವೆಯೆಂದೂ ತಿಳಿದುಬರುತ್ತದೆ. 'ಹಳೆಯ ಒಡಂಬಡಿಕೆ' (Old Testament) ಯಲ್ಲಿ ಬರುವ 'ರೊಸಳ ಹಾಗೂ ಶ್ಯಾಮ್‌ಸನ್'ರ ಕಥೆ 'ಹೊಸ ಒಡಂಬಡಿಕೆ' (New Testament) ಯಲ್ಲಿ ಬರುವ 'ದುಂದುಗಾರ ಮಗನು ಹಿಂತಿರುಗಿದ ಕಥೆ' ಹಾಗೂ 'ಮೇರಿ ಮಗ್ದಲಿನಾ' ಎಂಬ ಪಣ್ಯಾಂಗನೆಯ ಕಥೆಗಳಿಗೂ ಪ್ರಾಚೀನ ಕಥಾ ಸಾಹಿತ್ಯದ ಬೆಳವಣಿಗೆಯಲ್ಲಿ ಮಹತ್ತ್ವದ ಸ್ಥಾನವಿದೆ.

## ೪.೧ ಸಣ್ಣಕತೆಯ ಹುಟ್ಟು ಮತ್ತು ಲಕ್ಷಣಗಳು

'ಸಣ್ಣಕಥೆ' ಎಂಬ ಪದ ಪ್ರಯೋಗವು ಬಹಳ ಹಿಂದಿನ ಕಾಲದಿಂದಲೇ ನಡೆದುಬಂದಿದೆ. ಗದ್ಯದಲ್ಲಿ ಕಥಾ ಸಾಹಿತ್ಯವು ಬೆಳೆದು ಬಂದಾಗ ಗಾತ್ರದ ದೃಷ್ಟಿಯಿಂದ ಸಣ್ಣಗಿನ ಕಥೆಗಳನ್ನು 'ಸಣ್ಣಕಥೆ'ಗಳೆಂದು ಕರೆಯುವ ರೂಢಿಯಿತ್ತು. ಆದರೆ ಇಂದು ಸಣ್ಣಸಣ್ಣಕಥೆಗಳೆಲ್ಲಾ ಸಣ್ಣವುಗಳಲ್ಲ ಎಂದು ಎಲ್ಲರೂ ಒಪ್ಪುವರು. ಕೆಲವು ಪ್ರತ್ಯೇಕವಾದ ಲಕ್ಷಣಗಳುಳ್ಳ ಕತೆಗಳೇ ಸಣ್ಣಕಥೆಗಳಾಗುತ್ತವೆ. ಸಣ್ಣಕಥೆಯೆಲ್ಲ ಸಣ್ಣಕಥೆಗಳಲ್ಲವೆಂದು ಮೊದಲಲ್ಲಿ ವ್ಯಕ್ತವಾಗಿ ಹೇಳಿರುವವನು ಅಮೇರಿಕಾದ ಬ್ರಾಂಡರ್ ಮಾಥ್ಯೂಸ್. ೧೮೪೨ರಲ್ಲಿ ಅಮೇರಿಕಾದ ಸಣ್ಣ ಕತೆಗಾರನಾದ ಎಡ್ಗರ್ ಅಲನ್ ಪೋ ಮೊತ್ತಮೊದಲಲ್ಲಿ ಸಣ್ಣಕಥೆಯನ್ನು ನಿರೂಪಣಾತ್ಮಕ ದೃಷ್ಟಿಯಿಂದ ವಿಶ್ಲೇಷಿಸಿದ. ಹತ್ತೊಂಬತ್ತನೆಯ ಶತಮಾನಕ್ಕಾಗಲೇ ಪಾಶ್ಚಾತ್ಯ ದೇಶಗಳಲ್ಲಿ ಗದ್ಯ ಸಾಹಿತ್ಯದ ಕಾದಂಬರಿ ಪ್ರಕಾರವು ಬಹಳಷ್ಟು ಜನಪ್ರಿಯವಾಗಿತ್ತು. ಸಣ್ಣಕತೆಯು ಕಾದಂಬರಿಗಿಂತ ಗಾತ್ರದಲ್ಲೂ ಸ್ವರೂಪದಲ್ಲೂ ಸಾಕಷ್ಟು ಭಿನ್ನತೆಗಳಿರುವ ಸಾಹಿತ್ಯ ಸ್ವರೂಪವೆಂದು ಹತ್ತೊಂಬತ್ತನೆಯ ಶತಮಾನದ ಆದಿಯಲ್ಲಿ ಪ್ರಚಾರವನ್ನು ಪಡೆಯಿತು. ಸಣ್ಣಕತೆಯ ಜನಕನೆಂದು ಪ್ರಸಿದ್ಧನಾಗಿರುವ ಎಡ್ಗರ್ ಅಲನ್ ಪೋ ಈ ಹೊಸ ಸಾಹಿತ್ಯ ಪ್ರಕಾರದ ಸ್ವರೂಪದ ಲಕ್ಷಣವನ್ನು ಹೇಳುವುದರೊಂದಿಗೆ ವಿಮರ್ಶಾತ್ಮಕ ದೃಷ್ಟಿಯಿಂದ ಸಣ್ಣಕಥೆಯನ್ನು ಸಮೀಕ್ಷಿಸಿದನು.

ಔದ್ಯೋಗಿಕ ಕ್ರಾಂತಿಯು ಪಾಶ್ಚಾತ್ಯರ ಜೀವನಕ್ರಮದಲ್ಲಿ ಸಾಕಷ್ಟು ಬದಲಾವಣೆಗೆ ಕಾರಣವಾಯಿತು. ಈ ಕಾಲದಲ್ಲಿ ಜೀವನವು ತ್ವರಿತ ಗತಿಯಲ್ಲಿ ಪ್ರಗತಿಯತ್ತ ಸಾಗುತ್ತಿತ್ತು. ತೀವ್ರಗತಿಯಲ್ಲಿ ಪ್ರಗತಿಯನ್ನು ಹೊಂದುತ್ತಿರುವ ಸಮಾಜದಲ್ಲಿ ವ್ಯಕ್ತಿಯ ಸಮಯಕ್ಕೆ ಬಹಳ ಪ್ರಾಧಾನ್ಯವಿದೆ. ಹೀಗೆ ಜೀವನದೊಂದಿಗೆ ನಿಕಟವಾದ ಸಂಪರ್ಕವಿರುವ ಸಾಹಿತ್ಯದ ಮೇಲೂ ಸಮಯ ದೌರ್ಲಭ್ಯವು ಪ್ರಭಾವವನ್ನು ಬೀರುವುದು ಅನಿವಾರ್ಯವಾಯಿತು. ಆ ಕಾಲದಲ್ಲಿ ಪ್ರಚಾರದಲ್ಲಿದ್ದ ಸಾಹಿತ್ಯ ಪ್ರಕಾರವಾದ ಕಾದಂಬರಿ(Novel)ಯು ಗಾತ್ರದಲ್ಲಿ ದೀರ್ಘವಾಗಿದ್ದು ಅದನ್ನು ಓದಿ ಮುಗಿಸಲು ಹೆಚ್ಚು ಸಮಯ ಬೇಕಾಗುತ್ತದೆ. ಆದುದರಿಂದ ಗಾತ್ರದಲ್ಲಿ ಕಿರಿದಾದ ಮತ್ತು ಹೆಚ್ಚು ಪರಿಣಾಮಕಾರಿಯಾದ ಸಣ್ಣಕತೆಯ ಅಸ್ತಿತ್ವ ಸಹಜವಾದುದು.

ಇದೇ ಕಾಲದಲ್ಲಿ ಪತ್ರಿಕೆಗಳ ವಿಪುಲವಾದ ಹುಟ್ಟು ಮತ್ತು ಪ್ರಚಾರ ಸಣ್ಣಕತೆಗಳ ಬೆಳವಣಿಗೆಗೆ ಉತ್ತೇಜನವನ್ನು ನೀಡಿತು. ವೃತ್ತಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಸುದ್ದಿಗಳೊಂದಿಗೆ ಮನರಂಜನೆಯ ಉದ್ದೇಶದಿಂದ ಸಾಹಿತ್ಯಕ್ಕೂ ಸಾಕಷ್ಟು ಸ್ಥಳವನ್ನು ಬಿಡಲಾಗುತ್ತಿತ್ತು. ಆ ಜಾಗದಲ್ಲಿ ಸಣ್ಣ ಕತೆಯನ್ನು ಪ್ರಕಟಿಸಲಾಗುತ್ತಿತ್ತು. ಕಾದಂಬರಿಗಳನ್ನು ವೃತ್ತಪತ್ರಿಕೆಗಳಲ್ಲಿ ಧಾರಾವಾಹಿಯಾಗಿ ಪ್ರಕಟಿಸುವ ಮೂಲಕ ಅದರ ಒಟ್ಟಿನ ಕಲಾ ಪರಿಣಾಮಕ್ಕೆ ಧಕ್ಕೆ ಬರುತ್ತಿತ್ತು. ಸ್ವಲ್ಪ ಸ್ಥಳದಲ್ಲಿಯೇ ಸಂಪೂರ್ಣವಾಗಿ ಪ್ರಕಟಿಸಬಹುದಾದುದರಿಂದ ಸಣ್ಣಕತೆಗಳು ಹೆಚ್ಚು ಪರಿಣಾಮಕಾರಿಯಾದವು. ಒಟ್ಟಿನಲ್ಲಿ ಪತ್ರಿಕೆಗಳು ಸಣ್ಣಕತೆಯ ಬೆಳವಣಿಗೆಗೆ ನೆರವಾದಂತೆಯೇ ಸಣ್ಣಕತೆಗಳು ಪತ್ರಿಕೆಯ ಪ್ರಚಾರಕ್ಕೂ ಸಹಾಯಕವಾದುವು.

ಸಮಯ ದೌರ್ಲಭ್ಯ ಮತ್ತು ಕಾದಂಬರಿಯ ಗಾತ್ರಗಳು ಸಮಸ್ಯೆಯಾಗಿದ್ದ ಕಾಲದಲ್ಲಿ ಕಾದಂಬರಿ (Novel) ಗಿಂತ ಕೆಲವೊಂದು ಅಂಶದಲ್ಲಿ ಭಿನ್ನವಾದ "ನೀಳ್ಗತೆ" (Novelette) ಪಾಶ್ಚಾತ್ಯ ಸಾಹಿತ್ಯದಲ್ಲಿ ಪ್ರಚಾರ ಪಡೆಯತೊಡಗಿತು. ಇದು ಸಾಮಾನ್ಯ ನೂರು ಪುಟಗಳ ಮಿತಿಯನ್ನು, ಕಾದಂಬರಿಯಲ್ಲಿ ಬರುವ ಉಪಕತೆಗಳಿಂದ ಮುಕ್ತಿಯನ್ನು ಪಡೆದಿತ್ತು. ಆದರೆ ಇದರಲ್ಲಿ ವರ್ಣನೆಗಳಿಂದ ಮತ್ತು ವಿವರಣೆಗಳಿಂದ ಸಂಕ್ಷಿಪ್ತತೆಯ ಗುಣ ಕಡಿಮೆಯಾಗಿ ಕಲಾ ಪರಿಣಾಮೈಕ್ಯದ ದೃಷ್ಟಿಯಿಂದ ನೀಳ್ಗತೆ ದುರ್ಬಲವಾಯಿತು. ಇದು ಸಣ್ಣಕತೆಯ ಹುಟ್ಟಿಗೆ ಒಂದು ಪ್ರೇರಣೆಯಾಯಿತು. ಹತ್ತೊಂಬತ್ತನೆಯ ಶತಮಾನದ ಆದಿಯಲ್ಲಿ ಪಾಶ್ಚಾತ್ಯ ಸಾಹಿತ್ಯದಲ್ಲಿ ಕಂಡುಬರುವ ರೊಮ್ಯಾಂಟಿಕ್ ಚಳುವಳಿಯು ಸಾಹಿತ್ಯದಲ್ಲಿ ಪ್ರಯೋಗಶೀಲತೆಯನ್ನು ಬೆಳೆಸಿತು. ಇದು ಭಾವಗೀತೆ, ಹರಟೆ, ಪ್ರಬಂಧ ಮೊದಲಾದ ಸಾಹಿತ್ಯ ಪ್ರಕಾರಗಳ ಉದಯಕ್ಕೆ ಕಾರಣವಾದಂತೆ ಸಣ್ಣಕತೆಯ ಹುಟ್ಟಿಗೂ ಒಂದು ಕಾರಣವಾಯಿತು.

## ೪.೨ ಸಣ್ಣಕತೆಯ ಸ್ವರೂಪ ಮತ್ತು ಲಕ್ಷಣಗಳು

ಸಣ್ಣಕತೆಗೆ ಲಕ್ಷಣವನ್ನು ಹೇಳುವ ಪ್ರಯತ್ನವನ್ನು ಮೊದಲಲ್ಲಿ ಮಾಡಿದವನು ಸಣ್ಣಕತೆಯ ಜನಕನೆಂದು ಪ್ರಸಿದ್ಧನಾದ ಎಡ್ಗರ್ ಅಲನ್ ಪೋ. ಆತನು ಸಣ್ಣಕತೆಯ ಗಾತ್ರದ ಕುರಿತು "ಸಣ್ಣಕಥೆಯೆಂದರೆ, ಅರ್ಧತಾಸಿನಿಂದ ಒಂದು ಅಥವಾ ಎರಡು ತಾಸುಗಳಲ್ಲಿ ಓದಿ ಮುಗಿಸಬಹುದಾದ ಗದ್ಯಾತ್ಮಕ ಕಥಾನಕ" (ಪಿ.ವಿ. ಶಾಸ್ತ್ರಿ; ಸಾಹಿತ್ಯದ

ಪ್ರಕಾರಗಳು; ೧೯೭೩; ಪುಟ ೫) ಎಂದಿದ್ದಾನೆ. ಅವನೇ ಸಣ್ಣಕತೆಯನ್ನು 'ವೃತ್ತಪತ್ರಿಕೆಗಳ ಕೂಸು' ಎಂದು ಕರೆದಿದ್ದಾನೆ. ವೃತ್ತ ಪತ್ರಿಕೆಗಳ ಪರಿಮಿತವಾದ ಸ್ಥಳಗಳಿಗೆ ಹೊಂದಿಕೊಂಡು ಸಣ್ಣಕತೆಯ ಗಾತ್ರದಲ್ಲಿ ವ್ಯತ್ಯಾಸವಾಗುವುದೂ ಇದೆ. "ಸಣ್ಣಕತೆ ಓದುಗರಿಗೆ ಬೇಸರ ಬಂದಿತೆಂದು ಅರಿವಾಗುವ ಮೊದಲೇ ಓದಿ ಮುಗಿಸುವಷ್ಟು ಚಿಕ್ಕದಾಗಿರುವುದರಿಂದಲೇ ತನ್ನ ಜನಪ್ರಿಯತೆಯನ್ನು ಉಳಿಸಿಕೊಂಡಿದೆ" (ಪಿ.ವಿ. ಶಾಸ್ತ್ರಿ; ಸಾಹಿತ್ಯದ ಪ್ರಕಾರಗಳು; ೧೯೭೩; ಪುಟ ೫) ಎಂಬ ಶಾಸ್ತ್ರಿಯವರ ಮಾತಿನಿಂದ ಸಣ್ಣಕತೆಯ ಗಾತ್ರದ ಪ್ರಸಕ್ತಿಯನ್ನು ಅರಿಯಬಹುದು.

## ಸ್ವರೂಪ

ಸಣ್ಣಕತೆಯು ಪ್ರಪ್ರಥಮವಾಗಿ ಕತೆಯಾಗಿರಬೇಕು. ಪ್ರಾರಂಭ, ಮಧ್ಯ, ಮುಕ್ತಾಯಗಳು ಇರಲೇ ಬೇಕೆಂಬುದು ಶ್ರೇಷ್ಠ ಸಣ್ಣಕತೆಗಾರನಾದ ಸಾಮರ್‌ಸೆಟ್ ಮಾಮ್‌ನ ಅಭಿಪ್ರಾಯ. ಆದರೆ ಹೆನ್ರಿಜೇಮ್ಸ್, ಕ್ಯಾಥರೀನ್ ಮ್ಯಾನ್ಸಫೀಲ್ಡ್ ಇವರ ಪ್ರಕಾರ "ಸಂವಿಧಾನ ಮತ್ತು ಕತೆಗಳು ಸಣ್ಣಕತೆಯಲ್ಲಿ ಮುಖ್ಯವಲ್ಲ. ಮುಖ್ಯವಾದುವುಗಳೆಂದರೆ ಪಾತ್ರಗಳು ಮತ್ತು ಆವರಣ ಅಥವಾ ವಾತಾವರಣ". (ಪಿ.ವಿ. ಶಾಸ್ತ್ರಿ; ಸಾಹಿತ್ಯದ ಪ್ರಕಾರಗಳು; ೧೯೭೩; ಪುಟ ೪). ಸಣ್ಣಕತೆಯು ಗಾತ್ರದಲ್ಲಿ ಸಣ್ಣದಾಗಿರಬೇಕಾದುದರಿಂದ ಆದಷ್ಟು ಕಡಿಮೆ ಘಟನೆಗಳು ಮತ್ತು ಪಾತ್ರಗಳ ಸಹಾಯದಿಂದ ಪರಿಣಾಮಕಾರಿಯಾಗುವಂತೆ ಚಿತ್ರಿತವಾಗಬೇಕು. ಉಪಯೋಗಿಸಲ್ಪಡುವ ಪ್ರತಿಯೊಂದು ಶಬ್ದವು ಕಥಾಶಿಖರದ ಕಡೆಗೆ ಏಕೈಕ ಕಲಾ ಪರಿಣಾಮದ ಕಡೆಗೆ ಗುರಿಯನ್ನು ಹೊಂದಿರಬೇಕು ಎಂಬುದು ಹ್ಯಾಮಿಲ್ಟನ್‌ನ ಹೇಳಿಕೆ. "ನಿಜವಾದ ಸಣ್ಣಕತೆಯು ಕಥೆಯಿಂದ ಬೇರೆಯಷ್ಟೇ ಅಲ್ಲ, ಕೇವಲ ಸಣ್ಣದಾದ ಕಥೆಗಿಂತ ದೊಡ್ಡದು...... ಸಣ್ಣಕಥೆಯು ಒಂದೇ ಪಾತ್ರ. ಒಂದೇ ಘಟನೆ, ಒಂದೇ ಭಾವನೆ ಅಥವಾ ಒಂದೇ ಪ್ರಸಂಗದಿಂದ ಉದ್ಭೂತವಾದ ಅನೇಕ ಭಾವನೆಗಳನ್ನು ಕುರಿತು ಹೇಳಲ್ಪಟ್ಟಿರುತ್ತದೆ". (ಪಿ.ವಿ. ಶಾಸ್ತ್ರಿ; ಸಾಹಿತ್ಯದ ಪ್ರಕಾರಗಳು; ೧೯೭೩; ಪುಟ ೮) ಎಂದು ಮ್ಯಾಥ್ಯೂಸ್ ಅಭಿಪ್ರಾಯಪಡುತ್ತಾನೆ. "ಸಣ್ಣಕಥೆಯೆಂದರೆ ಶಕ್ಯವಿದ್ದಷ್ಟು ಕಡಿಮೆ ಪಾತ್ರಗಳ ನೆರವಿನಿಂದ, ಒಳ್ಳೇ ಪರಿಣಾಮಕಾರಿಯಾಗುವಂತೆ ತೀರ ಅಲ್ಪ ಪ್ರಸಂಗಗಳಿಂದ ಒಂದು ಸಂಗತಿಯನ್ನು ಹೇಳುವುದು" (ಪಿ.ವಿ. ಶಾಸ್ತ್ರಿ; ಸಾಹಿತ್ಯದ ಪ್ರಕಾರಗಳು; ೧೯೭೩; ಪುಟ ೫) ಎಂಬುದು

ಮಿರ್ಜಿ ಅಣ್ಣಾರಾಯರ ಅಭಿಪ್ರಾಯ. ಕತೆಯ ವಸ್ತು ಮತ್ತು ಚಿತ್ರಣ ವ್ಯಕ್ತಿ ವಿಶಿಷ್ಟವಾದುದು. ಇನ್ನೂ ಬೆಳೆಯುತ್ತಿರುವ ಸಾಹಿತ್ಯ ರೂಪವಾದುದರಿಂದ ಸಣ್ಣಕಥೆಯ ಕುರಿತು ಬಂದಿರುವ ವ್ಯಾಖ್ಯೆ ಲಕ್ಷಣಗಳು ಪೂರ್ಣವಲ್ಲ.

## ೪.೩ ಕನ್ನಡ ಸಣ್ಣಕತೆಗಳ ಉಗಮ ಮತ್ತು ವಿಕಾಸ

ಮೊದಮೊದಲು ಕತೆಗಳು ಜಾನಪದ ಪರಂಪರೆಯಲ್ಲಿ ಗ್ರಂಥಸ್ಥವಾಗದೆ ಬಾಯಿ ಮಾತಲ್ಲೇ ಉಳಿದು ಬೆಳೆದು ಬಂದುವು. ನಮ್ಮ ತಲೆತಲಾಂತರಗಳಿಂದ ಬೆಳೆದು ಬಂದಿರುವ, ಅಜ್ಜಿ ಮಕ್ಕಳಿಗೆ ಹೇಳುವ 'ಅಜ್ಜಿಕತೆಗಳು', 'ಕುರುಬರ ಕತೆಗಳು', 'ದಾಸರ ಕತೆಗಳು' ಇವೆಲ್ಲ ಜಾನಪದ ಕತೆಗಳ ಮಾದರಿಗಳು. ಬೆಟಗೇರಿ ಕೃಷ್ಣಶರ್ಮರ ಅಭಿಪ್ರಾಯದಂತೆ "ಇವುಗಳಲ್ಲಿಯ ಹಲವು ಕತೆಗಳು ಅರಳಿಕೆಯಲ್ಲಿ ಅಲ್ಲದೆ ಮೂಲ ಸ್ವರೂಪದಲ್ಲಿ ಆಧುನಿಕ ಸಣ್ಣಕಥೆಗಳ ತಂತ್ರಕ್ಕೆ, ಹೊಂದುವಂತವೇ ಇರುತ್ತವೆ. ಆದರೆ ಈ ಕತೆಗಳನ್ನು ನಿರ್ಮಿಸಿದ ಅಜ್ಞಾತ ವ್ಯಕ್ತಿಗಳಿಗೆ ಇಲ್ಲವೆ ಪರಿಸ್ಥಿತಿಗೆ ಸಣ್ಣಕಥೆಯ ಸಾಹಿತ್ಯ ತಂತ್ರದ ಪ್ರಜ್ಞೆಯೇನೂ ಇರಲಿಲ್ಲ. ಇಂದಿನವರು ಆ ಕಥಾವಸ್ತುವನ್ನು ತೆಗೆದುಕೊಂಡು ಸುಲಭವಾಗಿ ಸುಂದರವಾದ ಸಣ್ಣಕಥೆಗಳನ್ನು ಅರಳಿಸಿ ತೋರಿಸಬಹುದು" (ಮಹೀಶವಾಡಿ ಬಿ. ಕನ್ನಡ ಕಥಾಸೃಷ್ಟಿ; ೧೯೭೪; ಪುಟ ೧೯,೨೦). ಜನಪದ ಕತೆಗಳು ಗ್ರಂಥಸ್ಥವಾದಾಗ ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ ಸಾಹಿತ್ಯರೂಪ ತಾಳಿದವು. ವೇದ-ಉಪನಿಷತ್ತಿನ ಕತೆಗಳು, ಪುರಾಣದೊಳಗಿನ ಕತೆಗಳು, ಇತಿಹಾಸದೊಳಗಿನ ಕತೆಗಳು, ಪಂಚತಂತ್ರ, ಹಿತೋಪದೇಶ, ಕಥಾ ಸರಿತ್ಸಾಗರ, ಕಥಾಮೃತ, ಬುದ್ಧ ಜಾತಕ ಕತೆಗಳು, ಜೈನ ಧಾರ್ಮಿಕ ಕತೆಗಳು, ಭವಾವಳಿಗಳು ಹೀಗೆ ಅಸಂಖ್ಯಾತವಾಗಿ ಕತೆಗಳು ವಿವಿಧ ಭಾಷೆಗಳಲ್ಲಿ ಬೆಳೆದು ಬಂದವು.

ಉಪಲಬ್ಧ ಗ್ರಂಥಗಳ ಆಧಾರದ ಮೇಲೆ ಹೇಳುವುದಾದರೆ ವಡ್ಡಾರಾಧನೆಯೇ ಕನ್ನಡದ ಮೊದಲನೆಯ ಕಥಾಸಂಗ್ರಹ. ವಡ್ಡಾರಾಧನೆ (೯೫೦)ಯು ಹತ್ತೊಂಬತ್ತು ಕತೆಗಳಿರುವ ಜೈನಧಾರ್ಮಿಕ ಗ್ರಂಥ. ಇದರಲ್ಲಿನ ಪ್ರತಿಯೊಂದು ಕತೆಯು ಹಲವಾರು ಉಪಕತೆಗಳಿಂದ ಕೂಡಿ ಸಣ್ಣಕಥೆಗಳ ಸಂಕಲನದಂತಿದೆ. ಸಂಸ್ಕೃತದ 'ಮಹಾಪುರಾಣ'ದ ಆಧಾರದ ಮೇಲೆ ರಚಿತವಾದ 'ಚಾವುಂಡರಾಯ ಪುರಾಣ' (೯೭೮), ದುರ್ಗಸಿಂಹನ ಪಂಚತಂತ್ರ' (೧೦೩೧), ನಯಸೇನನ 'ಧರ್ಮಾಮೃತ' (೧೧೧೨) ಮುಂತಾದವು

ಹಳಗನ್ನಡ ಕಥಾ ಸಾಹಿತ್ಯ ಪರಂಪರೆಯಲ್ಲಿ ಮುಖ್ಯವಾದ ಗ್ರಂಥಗಳು. ಅಂದಿನ ಕತೆಗಳೆಲ್ಲ ವಸ್ತು ಪ್ರಧಾನವಾದವುಗಳು. ಇಂದು ಕಥನ ಕಲೆಗೆ ಮಹತ್ತ್ವವಿದ್ದರೆ ಅಂದು ಕತೆಗೇ ಮಹತ್ತ್ವವಿತ್ತು. ಹಿಂದಿನಂತೆ ಅಂದಿನ "ಕತೆಗಳ ಪ್ರಧಾನ ಗುರಿ ನೀತಿ, ತತ್ತ್ವಬೋಧನೆ, ಇಲ್ಲವೆ ಕೇವಲ ಮನೋರಂಜನೆಯಾಗಿತ್ತು. ಮಾನವನ ನೀತಿಯ ಪ್ರಚಾರಕ್ಕಾಗಿಯೇ, ಮತಧರ್ಮ ಪ್ರಸಾರಕ್ಕಾಗಿಯೇ ಅವು ನಿರ್ಮಿತವಾದುವು" (ಮಹೀಶವಾಡಿ ಬಿ. ಕನ್ನಡ ಕಥಾಸೃಷ್ಟಿ; ೧೯೭೪; ಪುಟ ೪೧) ಎಂಬ ಬೆಟಗೇರಿ ಕೃಷ್ಣಶರ್ಮರ ಮಾತು ಔಚಿತ್ಯಪೂರ್ಣವಾದುದು.

ಆಧುನಿಕ ಕಾಲದವರೆಗೂ ಕನ್ನಡ ಸಾಹಿತ್ಯದಲ್ಲಿ ಸ್ವತಂತ್ರವಾಗಿ ಸಣ್ಣಕತೆಯಾಗಲೀ, ಕಥಾಸಂಕಲನವಾಗಲಿ ಬಂದಿರುವುದು ಗೋಚರಿಸುವುದಿಲ್ಲ. ಬಂದವುಗಳು ಇತರ ಭಾಷೆಗಳ ಅನುವಾದವೋ ರೂಪಾಂತವೋ ಆಗಿವೆ.

### ೪.೩.೧ ಆಧುನಿಕ ಸಣ್ಣಕತೆಯ ಹುಟ್ಟು

ಇಂದು ಯಾವ ಸಾಹಿತ್ಯ ರೂಪವನ್ನು ನಾವು 'ಸಣ್ಣಕತೆ' ಎಂದು ಕತೆಯುತ್ತೇವೆಯೋ ಅದು ನಮ್ಮಲ್ಲಿಯೇ ಹುಟ್ಟಿ ಬೆಳೆದುದಲ್ಲ. ಇಂದಿನ ಸಣ್ಣಕತೆಗೆ ಹೋಲುವ ಕಥಾ ವಿಧಾನಗಳು ಮಾತ್ರ ನಮ್ಮಲ್ಲಿ ಹಿಂದೆಯೇ ಇದ್ದುವು. ಹಿಂದಿನ ಕಾಲದಲ್ಲಿ ನಮ್ಮಲ್ಲಿ ಗದ್ಯಕ್ಕಿಂತ ಪದ್ಯಕ್ಕೇ ಮಾನ್ಯತೆ ಹೆಚ್ಚಾಗಿತ್ತು. ಆದುದರಿಂದಲೇ ವೈದ್ಯ ಗ್ರಂಥವಾಗಲೀ, ವ್ಯಾಕರಣ ಗ್ರಂಥವಾಗಲೀ, ಜ್ಯೋತಿಷ್ಯ ಗ್ರಂಥವಾಗಲೀ ಪದ್ಯದಲ್ಲೇ ರಚನೆಗೊಂಡವು. ೧೯ನೆಯ ಶತಮಾನದ ಮಧ್ಯಭಾಗಕ್ಕಾಗಲೆ ಅಮೇರಿಕದ ಎಡ್ಗರ್ ಅಲನ್ ಪೋ ಸಣ್ಣಕತೆಯ ಬಗ್ಗೆ ಖಚಿತವಾದ ನಿಲುವನ್ನು ತಾಳಿದ್ದನು. ಪಾಶ್ಚಾತ್ಯ ದೇಶಗಳಲ್ಲೆಲ್ಲ ಅದು ಬೇಗನೆ ಪ್ರಚಾರ ಪಡೆಯಿತು. ಅದರಲ್ಲೂ ಫ್ರಾನ್ಸ್, ಇಂಗ್ಲೆಂಡ್, ರಶ್ಯಾ, ಜರ್ಮನಿ ಮೊದಲಾದ ದೇಶಗಳಲ್ಲಿ ಅತ್ಯಂತ ಪ್ರಖ್ಯಾತಿಯನ್ನು ಪಡೆಯಿತು. ಆ ಕಾಲಕ್ಕಾಗಲೇ ಭಾರತದಲ್ಲಿ ಆಂಗ್ಲರ ಆಡಳಿತ ಜನಜೀವನದ ಮೇಲೆ ಪ್ರಭಾವವನ್ನು ಬೀರಿತ್ತು. ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯದ ಅಭ್ಯಾಸದ ಪರಿಣಾಮವಾಗಿ ಭಾರತದಲ್ಲಿ ಪ್ರಾದೇಶಿಕ ಭಾಷೆ–ಸಾಹಿತ್ಯಗಳಲ್ಲಿ ಒಂದು ಹೊಸ ಪ್ರಯೋಗಶೀಲತೆ–ಕ್ರಾಂತಿ ತಲೆದೋರಿತು. ಆ ಕಾಲದಲ್ಲಿ ಪಾಶ್ಚಾತ್ಯರಲ್ಲಿ ಪ್ರಚಾರದಲ್ಲಿದ್ದ ಕೆಲವು ಹೊಸ ಸಾಹಿತ್ಯ ರೂಪಗಳ ಜೊತೆಗೆ 'ಸಣ್ಣಕತೆ'ಯೂ ಭಾರತೀಯ ಸಾಹಿತ್ಯದ ಮೇಲೆ ಪ್ರಭಾವ ಬೀರಿತ್ತು.

ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯದ ಅಭ್ಯಾಸ ಬಂಗಾಳಿ, ಮರಾಠಿ ಮುಂತಾದ ಭಾರತೀಯ ಸಾಹಿತ್ಯಗಳಲ್ಲಿ 'ಸಣ್ಣಕತೆ'ಗೆ ದೊರೆತ ಪ್ರಚಾರ ಮತ್ತು ಅವುಗಳ ಅನುವಾದಗಳು ಕನ್ನಡದಲ್ಲಿ ಸಣ್ಣಕತೆಯ ಹುಟ್ಟಿಗೆ ಪ್ರೇರಣೆಗಳಾದವು. ಜೀವನದಲ್ಲಿ ಯಂತ್ರಕ್ಕೆ ದೊರೆತ ಪ್ರಾಮುಖ್ಯ ಮತ್ತು ಯಾಂತ್ರಿಕ ಜೀವನ, ಅಚ್ಚು ಕೂಟಗಳ ಮತ್ತು ಪತ್ರಿಕೆಗಳ ವಿಪುಲವಾದ ಹುಟ್ಟು ಮತ್ತು ಪ್ರಚಾರ ಮುಂತಾದುವು ಸಣ್ಣಕತೆಗಳ ಬೆಳವಣಿಗೆಗೆ ಉತ್ತೇಜನವನ್ನು ನೀಡಿದವು. ಜೀವನದ ತ್ವರಿತ ಗತಿಯ ಪುರೋಗತಿಯಿಂದ ಸಮಯಕ್ಕೆ ಪ್ರಾಧಾನ್ಯತೆ ಹೆಚ್ಚುವುದರೊಂದಿಗೆ ಗಾತ್ರದ ದೃಷ್ಟಿಯಿಂದ ಚಿಕ್ಕದಾಗ ಆದರೆ ಕಡಿಮೆ ಸಮಯದಲ್ಲಿ ಹೆಚ್ಚು ಪರಿಣಾಮಕಾರಿಯಾಗಬಲ್ಲ ಸಣ್ಣಕತೆ ಜನಪ್ರಿಯವಾಯಿತು.

"ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸಣ್ಣಕತೆ ಎಂಬುದು ಇಂಗ್ಲಿಷಿನ "Short story" ಎಂಬುದಕ್ಕೆ ಪ್ರತಿಯಾಗಿ ಉಪಯೋಗಿಸುತ್ತಿರುವ ಪದ. ಈ ಸಂದರ್ಭದಲ್ಲಿ ಅದಕ್ಕೆ ಒಂದು ವಿಶಿಷ್ಟವಾದ ಅರ್ಥವಿದೆ. ಈ ಅರ್ಥದ ಪ್ರಕಾರ ಸಣ್ಣಕತೆಯೂ ಒಂದು ಕಲಾಕೃತಿ. ಅದರಲ್ಲೂ ಒಂದು ವಿಧವಾದ ಸಂಪೂರ್ಣತೆ, ಐಕ್ಯತೆ ಇರುತ್ತದೆ. ಸಣ್ಣಕತೆ ನಮಗೆ ಇಂಗ್ಲಿಷ್‌ನಿಂದ ಬಂದಿತೆಂಬುದರಲ್ಲಿ ಸಂದೇಹವಿಲ್ಲ. ಅವು ನಮ್ಮಲ್ಲಿಯೇ ಹುಟ್ಟಿ ನಮ್ಮಲ್ಲಿಯೇ ಬೆಳೆದುವು ಎಂದು ಹೇಳ ಬಯಸುವ ಕೆಲವರು ನಯಸೇನನ ಕತೆಗಳನ್ನು ಬೆರಳಿಟ್ಟು ತೋರಿಸುತ್ತಾರೆ. ಈ ಕತೆಗಳು ಚಿಕ್ಕದಾಗಿವೆ ಎಂಬರ್ಥದಲ್ಲಿ ಮಾತ್ರ ಸಣ್ಣಕತೆಗಳು ಆಧುನಿಕ ಸಾಹಿತ್ಯದ ಸಣ್ಣಕತೆಗಳಿಗೂ ಇವಕ್ಕೂ ಯಾವ ಸಾಮ್ಯವೂ ಇಲ್ಲ. ಇವೆರಡರ ರೀತಿ ಬೇರೆಬೇರೆ" (ಮಹೀಶವಾಡಿ ಬಿ.; ಕನ್ನಡ ಕಥಾಸೃಷ್ಟಿ; ೧೯೭೪; ಪುಟ ೫೦) ಎನ್ನುತ್ತಾರೆ ಜಿ. ವೆಂಕಟಸುಬ್ಬಯ್ಯನವರು. ಇದನ್ನು ಗೊರೂರು ಅವರು ಇನ್ನಷ್ಟು ಸ್ಪಷ್ಟಪಡಿಸುತ್ತ: "ಯಾವುದನ್ನು ನಾವು ಕಲೆಯ ಮುದ್ರೆಯೊಳನ್ನೊಳಗೊಂಡ ಸಣ್ಣಕತೆ (Short Story) ಎನ್ನುತ್ತೇವೆಯೋ ಅದು ಸಣ್ಣಕತೆಯ ರೂಪದಲ್ಲಿ ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ದೊರೆಯುತ್ತಿಲ್ಲ. ಸಣ್ಣಕತೆಗೆ ಕೆಲವು ಲಕ್ಷಣಗಳಿರಬೇಕೆಂದು ನಾವು ಹೇಳುತ್ತೇವೆ. ಪಂಚತಂತ್ರ, ಹಿತೋಪದೇಶ, ಬೃಹತ್ಕಥಾಮಂಜರಿ ಇವು ಆ ದೃಷ್ಟಿಯಿಂದ ಸಣ್ಣಕತೆಗಳಲ್ಲ, ಬರಿಯ ಕತೆಗಳು" (ಮಹೀಶವಾಡಿ ಬಿ.ಬಿ.; ಕನ್ನಡ ಕಥಾಸೃಷ್ಟಿ; ೧೯೭೪; ಪುಟ ೫೧) ಎಂದಿದ್ದಾರೆ. "ಕಥೆಯೆನ್ನುವುದು ಮೂಲದಲ್ಲಿ ಹೇಳುವ ಮಾತು..... ಕಥೆಯೆನ್ನುವುದು ಕಥಿತ ವಸ್ತು; ಅದರ ಮುಖ್ಯ ಲಕ್ಷಣ ಕಥನ; ಅದರ ಹಿರಿಯ ಗುಣ

ಕಥನದಲ್ಲಿ ಕೌಶಲ. ಈ ಕೌಶಲವು ಎರಡು ರೀತಿಯದ್ದಾಗಿರುತ್ತದೆ. ಒಂದು ರೀತಿ ನಿಸರ್ಗವಾದ ಕಥನದಲ್ಲಿ ಕಾಣುವುದು. ನಾಲ್ಕು ಜನ ಎಲ್ಲಿಯೋ ಒಂದು ಕಡೆ.... ಸೇರಿದಾಗ ಒಬ್ಬರು ಯಾವುದೇ ಸಂಗತಿ ನಡೆಯಿತೆಂದು ಹೇಳತೊಡಗಿದರೆ ಅಲ್ಲಿ ಕಥನ ಸಹಜವಾಗಿ ಆರಂಭವಾಗುತ್ತದೆ..... ಇನ್ನೊಂದು ಪದ್ಧತಿ ಕತೆಕಟ್ಟುವ ಪದ್ಧತಿ" (ಮಾಸ್ತಿ ವೆಂಕಟೇಶ ಅಯ್ಯಂಗಾರ್; ಪೂಜನ; ೧೯೬೨; ಪುಟ ೩೬) ಎಂಬುದಾಗಿ ಮಾಸ್ತಿಯವರು ಅಭಿಪ್ರಾಯಪಟ್ಟಿದ್ದಾರೆ. ಕನ್ನಡ ಸಣ್ಣಕತೆಯ ಹುಟ್ಟು ಮತ್ತು ಬೆಳವಣಿಗೆಯನ್ನು ಗಮನಿಸಿದಾಗ ಈ ಲೇಖಕರ ಮಾತಿನ ಸತ್ಯದ ಅರಿವಾಗುತ್ತದೆ.

### ೪.೩.೨ ಪ್ರಾರಂಭ ಕಾಲದ ಸಣ್ಣಕತೆಗಾರರು

ಕನ್ನಡ ಸಣ್ಣಕತೆಗಳು ಇಂಗ್ಲಿಷಿನ ಕೇವಲ ಅನುಕರಣೆಗಳಲ್ಲ. ಆದರೂ ಕನ್ನಡ ಸಣ್ಣಕತೆಗಳು ಬೆಳೆಯಲು ಇಂಗ್ಲಿಷ್ ಭಾಷೆ ಅನುಕೂಲತೆಯನ್ನು ಒದಗಿಸಿದೆ ಎಂಬುದರಲ್ಲಿ ಸಂದೇಹವಿಲ್ಲ. ಕಥಾವಸ್ತು ನಮ್ಮದಾದರೂ ಹೇಳುವ ರೀತಿಯನ್ನು ನಾವು ಇಂಗ್ಲಿಷ್ ಸಾಹಿತ್ಯದ ವ್ಯಾಸಂಗದಿಂದ ಕಲಿತುಕೊಂಡೆವು. ಕನ್ನಡ ಸಣ್ಣಕತೆಗಳಿಗೆ ಮೊದಲಿಗರಾದ ಪಂಜೆ ಮಂಗೇಶರಾಯರು ಇಂಗ್ಲಿಷ್ ಸಾಹಿತ್ಯದ ಅಭ್ಯಾಸ ಮಾಡಿದವರು. ಪಂಜೆಯವರ ಸಮಕಾಲೀನರಾಗಿದ್ದು ಸಣ್ಣಕತೆಗಳನ್ನು ರಚಿಸಿದವರಾದ ಕೆರೂರು ವಾಸುದೇವಾಚಾರ್ಯರೂ, ಎಂ.ಎನ್. ಕಾಮತ್ ಅವರೂ ಇಂಗ್ಲಿಷ್ ಸಾಹಿತ್ಯದಿಂದ ಪ್ರರಣೆಯನ್ನು ಹೊಂದಿದವರು. ಮುಂದೆ ಸಣ್ಣಕತೆಯ ಇತಿಹಾಸದಲ್ಲಿ ತಮ್ಮದೇ ಆದ ಪರಂಪರೆಯ ಜನಕರಾದ ಮಾಸ್ತಿ ವೆಂಕಟೇಶ ಅಯ್ಯಂಗಾರರು ಇಂಗ್ಲಿಷ್ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದವರು. ಈ ಹಿನ್ನೆಲೆಯಲ್ಲಿ ಕನ್ನಡದಲ್ಲಿ ಬಂದಿರುವ ಪ್ರಾರಂಭದ ಸಣ್ಣಕತೆಗಳನ್ನು ಗಮನಿಸಿದಾಗ ವಸ್ತು ಇಲ್ಲಿಯದಾದರೂ ಅಭಿವ್ಯಕ್ತಿಯಲ್ಲಿ ಅನುಕರಣೆಯನ್ನು ಸ್ಪಷ್ಟವಾಗಿ ಕಂಡುಕೊಳ್ಳಬಹುದು.

ಕ್ರಿ.ಶ. ೧೯೦೦ರಲ್ಲಿ ಸುವಾಸಿನಿ ಪತ್ರಿಕೆಯಲ್ಲಿ ಪಂಜೆಯವರ 'ನನ್ನ ಚಿಕ್ಕ ತಾಯಿ' ಪ್ರಕಟವಾಗುವುದರೊಂದಿಗೆ ಕನ್ನಡದಲ್ಲಿ ಸಣ್ಣಕತೆಯ ಪ್ರಾರಂಭವನ್ನು ಗುರುತಿಸಬಹುದಾಗಿದೆ. ಮುಂದೆ ಸುವಾಸಿನಿ ಪತ್ರಿಕೆಯಲ್ಲೇ ಪಂಜೆಯವರ 'ನನ್ನ ಚಿಕ್ಕ ತಂದೆ', 'ನನ್ನ ಚಿಕ್ಕ ತಂದೆಯವರ ಉಯಿಲು', 'ನನ್ನ ಹೆಂಡತಿ' ಎಂಬೀ ಕತೆಗಳು ೧೯೦೩ರ ಒಳಗಾಗಿ ಪ್ರಕಟವಾಗಿವೆ. ಈ ಕತೆಗಳೆಲ್ಲವೂ ಪಂಜೆಯವರ

ಜೀವನಾನುಭವಗಳಿಂದಲೇ ವಸ್ತುವನ್ನು ಪಡೆದಿವೆಯಲ್ಲದೆ ಒಂದಕ್ಕೊಂದು ಸಂಬಂಧವನ್ನು ಹೊಂದಿವೆ. ಇವುಗಳ ಕಥನ ತಂತ್ರವು ಆಂಗ್ಲಭಾಷೆಯ ಸಣ್ಣಕತೆಗಳಿಂದ ಪ್ರಭಾವಿತವಾಗಿವೆ. 'ಕಮಲಪುರದ ಹೊಟ್ಲಿನಲ್ಲಿ' 'ಭಾರತ ಶ್ರವಣ' ಮತ್ತು 'ವೈದ್ಯರ ಒಗ್ಗರಣೆ' ಪಂಜೆಯವರ ಇತರ ಸಾಮಾಜಿಕ ಸಣ್ಣಕತೆಗಳು. ಇವರು 'ಪೃಥುಲಾ', 'ಶೈಲಿನಿ', 'ದುರ್ಗಾವತಿ' ಮತ್ತು 'ವೀರಮತಿ' ಎಂಬ ನಾಲ್ಕು ಇತಿಹಾಸಿಕ ಕತೆಗಳನ್ನು ರಚಿಸಿದ್ದಾರೆ. "ಈ ಕತೆಗಳಲ್ಲಿ ಆಧುನಿಕ ಸಣ್ಣಕತೆಯ ಸ್ವರೂಪ ಇನ್ನೂ ಖಚಿತವಾಗಿ ಒಡಮೂಡಿಲ್ಲ. ಕೆಲವು ಹಾಸ್ಯಪೂರ್ಣ ಪ್ರಸಂಗಗಳನ್ನು ಇವುಗಳಲ್ಲಿ ನಿರೂಪಿಸಲಾಗಿದೆ. ಕೆಲವು ಸಲ ಲಲಿತ ಪ್ರಬಂಧ ಕಡೆ, ಕೆಲವು ಸಲ ವ್ಯಕ್ತಿಚಿತ್ರದ ಕಡೆ ಇವು ವಾಲುತ್ತವೆ. ಆದರೆ ಪ್ರಾಸಂಗಿಕ ವಾಸ್ತವವಾದದ ಮೂಲಕ ಪ್ರಾದೇಶಿಕ ವಾತಾವರಣವನ್ನು ನಿರ್ಮಿಸುವಲ್ಲಿ ಯಶಸ್ವಿಯಾಗಿವೆ" (ಗಿರಡ್ಡಿ ಗೋವಿಂದರಾಜ; ಸಮಗ್ರ ವಿಮರ್ಶೆ, ಸಂಪುಟ ೨; ೨೦೦೧; ಪುಟ ೧೮೫) ಎಂಬುದು ಗಿರಡ್ಡಿ ಗೋವಿಂದರಾಜರ ಅಭಿಪ್ರಾಯ. ಪಂಜೆಯುವರ ಕಥೆಗಳಲ್ಲಿ ತಿಳಿಹಾಸ್ಯದ ಸಂಭಾಷಣೆಯನ್ನೂ, ಒಂದು ಬಗೆಯ ಕುತೂಹಲವನ್ನೂ ಕಾಯ್ದುಕೊಳ್ಳುವ ಗುಣವನ್ನು ಕಾಣಬಹುದು. ಕಥೆಗಳಲ್ಲಿ ಅವರು ಬಳಸುವ ಭಾಷೆಯು ಆ ಕಾಲದ ಭಾಷಾ ಬಳಕೆಯ ವಿಧಾನದ ಪ್ರತೀಕವಾಗಿದೆ. ಪಂಜೆಯವರು ಚಾರಿತ್ರಿಕ ದೃಷ್ಟಿಯಿಂದ ಕನ್ನಡ ಕಥಾ ಸಾಹಿತ್ಯದ ಹಿನ್ನೆಲೆಯಲ್ಲಿ ಒಬ್ಬ ಪ್ರಾತಿನಿಧಿಕ ಮತ್ತು ಮಹತ್ತ್ವದ ಕಥೆಗಾರಾಗಿಯೂ ಗಮನಾರ್ಹರು.

"ಕ್ರಿ.ಶ. ೧೯೦೦ರಲ್ಲಿ ಪಂಜೆ ಮಂಗೇಶರಾಯರು (೧೮೭೪-೧೯೩೭) 'ಸುವಾಸಿನಿ' ಪತ್ರಿಕೆಯಲ್ಲಿ ಪ್ರಕಟಿಸಿದ 'ಭಾರತ ಶ್ರವಣ', 'ಕಮಲಪುರದ ಹೊಟ್ಲಿನಲ್ಲಿ', 'ನನ್ನ ಚಿಕ್ಕ ತಾಯಿ', 'ನನ್ನ ಚಿಕ್ಕ ತಂದೆಯವರ ಉಯಿಲು' ಕಥೆಗಳ ಮೂಲಕ ಆಧುನಿಕ ಸಣ್ಣಕತೆಯ ಚರಿತ್ರೆ ಪ್ರಾರಂಭವಾಯಿತೆನ್ನಬಹುದು" (ಜಿ.ಎಚ್. ನಾಯಕ (ಸಂ.); ಕನ್ನಡ ಸಣ್ಣಕಥೆಗಳು, ಪ್ರಸ್ತಾವನೆ; ೧೯೮೨; ಪುಟ ೫) ಎಂಬುದು ಜಿ.ಎಚ್. ನಾಯಕರ ಅಭಿಪ್ರಾಯ.

ಮಂಜೇಶ್ವರ ಗೋವಿಂದ ಪೈ ಅವರು ತಮ್ಮ "ಸಣ್ಣಕಥೆಗಳ ವಿಧಾತೃ" ಎಂಬ ಲೇಖನದಲ್ಲಿ "೧೯೦೦ರ ವರೆಗೆ ಕನ್ನಡದಲ್ಲಿ ಸಾಹಿತ್ಯದ ಅಂಗವೆನಿಸತಕ್ಕ ಚಿಕ್ಕ ಕಥೆಗಳಿಲ್ಲದುದರಿಂದ, ಅದೊಂದು ನೂತನತೆಯನ್ನು ಸೃಜಿಸಿ ಅದನ್ನು ನಮ್ಮ ಸಾಹಿತ್ಯಕ್ಕೆ

ಮೊತ್ತಮೊದಲು ದೊರಕಿಸಿಕೊಟ್ಟ ಪಂಜೆಯವರೇ ಕನ್ನಡ ಕಥೆಗಳ ವಿಧಾತೃರೆಂಬ ಸ್ವಯಂವ್ಯಕ್ತವಾದ ಸತ್ಯಕ್ಕೆ ಬೇರೊಂದು ಸತ್ಯಾಪನವು ಬೇಕೆಂದಿಲ್ಲ" (ಎಂ. ಗೋವಿಂದ ಪೈ; ಕನ್ನಡದ ಮೊರೆ; ೧೯೭೫; ಪುಟ ೧೧೮) ಎಂದು ತಿಳಿಸಿದ್ದಾರೆ.

ಆದುದರಿಂದ ಐತಿಹಾಸಿಕವಾಗಿ ಪಂಜೆ ಮಂಗೇಶರಾಯರು ಕನ್ನಡದ ಮೊದಲ ಕತೆಗಾರರಾಗಿದ್ದಾರೆ. ಕನ್ನಡದ ಸಣ್ಣಕಥೆಗಳಿಗೆ ಮೊದಲು ಸಾಹಿತ್ಯಕ ರೂಪುಕೊಟ್ಟ ಯಶಸ್ಸು ಪಂಜೆಯವರದಾಗಿದೆ. ಆದರೆ ಪ್ರಾರಂಭದ ಹಂತದಲ್ಲಿ ಪತ್ರಿಕೆಗಳಲ್ಲಿಯೇ ಪ್ರಕಟವಾದ ಅವರ ಸಣ್ಣಕತೆಗಳು ಒಂದು ಪರಂಪರೆಯನ್ನು ಸೃಷ್ಟಿಸುವ ಶಕ್ತಿ ಹೊಂದಿರಲಿಲ್ಲ. ಮಾಸ್ತಿಯವರು ಬರೆದ ಕಥೆಗಳೂ ಮೊದಲು ಪತ್ರಿಕೆಗಳಲ್ಲಿ ಪ್ರಕಟವಾಗಿ ಅನಂತರ ೧೯೨೦ರಲ್ಲಿ 'ಕೆಲವು ಸಣ್ಣಕಥೆಗಳು' ಎಂಬ ಹೆಸರಿನ ಪುಸ್ತಕವಾಗಿ ಪ್ರಕಟವಾಗಿವೆ.

"ಚಾರಿತ್ರಿಕವಾಗಿ ನೋಡಿದರೆ ಕನ್ನಡದಲ್ಲಿ ಸಣ್ಣಕತೆಗಳನ್ನು ಬರೆದವರಲ್ಲಿ ಮಾಸ್ತಿಯವರೇ ಮೊದಲಿಗರೆನ್ನಲಾಗದಿದ್ದರೂ ಅವರು ಕನ್ನಡದ ಮೊದಲ ಮಹತ್ತ್ವದ ಸಣ್ಣಕಥೆಗಾರ". (ಜಿ.ಎಚ್. ನಾಯಕ (ಸಂ.); ಕನ್ನಡ ಸಣ್ಣಕಥೆಗಳು, ಪ್ರಸ್ತಾವನೆ; ೧೯೭೮; ಪುಟ ೫) ಎಂಬುದು ಜಿ.ಎಚ್. ನಾಯಕರ ಅಭಿಪ್ರಾಯ. ಆದುದರಿಂದ ಪಂಜೆಯವರು ಮೊದಲ ಸಣ್ಣಕಥೆಗಾರರಾದರೆ ಮಾಸ್ತಿಯವರು ಮೊದಲ ಮಹತ್ತ್ವದ ಸಣ್ಣಕಥೆಗಾರರಾಗಿದ್ದಾರೆ. ಮಾಸ್ತಿಯವರ "ಕೆಲವು ಸಣ್ಣಕಥೆಗಳು" ಸಂಕಲನ ಕನ್ನಡದ ಮೊದಲ ಸಣ್ಣಕಥೆಗಳ ಸಂಕಲನವಾಗಿದೆ.

ಪಂಜೆಯವರ ಅನಂತರ ಕಂಡುಬರುವ ಪ್ರಮುಖ ಸಣ್ಣಕಥೆಗಾರರು ಕೆರೂರು ವಾಸುದೇವಾಚಾರ್ಯರು (೧೮೬೬–೧೯೨೧). ಅವರು ತಾವು ಬರೆದ ಕಥೆಗಳನ್ನು ತಾವೇ ಸಂಪಾದಕರಾಗಿದ್ದ 'ಸಚಿತ್ರ ಭಾರತ'ದಲ್ಲಿ ಪ್ರಕಟಿಸುತ್ತಿದ್ದರು. ೧೯೧೩ರಲ್ಲಿ ಕಥಾರಚನೆ ಪ್ರಾರಂಭಿಸಿದ ಅವರು ೧೯೧೭ರವರೆಗೆ ಕಥೆಗಳನ್ನು ರಚಿಸಿ ಪ್ರಕಟಿಸಿದ್ದಾರೆ. ಕೆರೂರರು ನಾಲ್ಕು ವರ್ಷಗಳ ಅವಧಿಯಲ್ಲಿ ಮೂವತ್ತೈದು ಕಥೆಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ತೊಳೆದ ಮುತ್ತು', 'ಪ್ರೇಮ ವಿಜಯ', 'ಬೆಳಗಿದ ದೀಪಗಳು', 'ಪ್ರಕೃತಿ ಬಲ', 'ಮಲ್ಲೇಶಿಯ ನಲ್ಲೆಯರು' ಎಂಬ ಕತೆಗಳು ಗಮನಾರ್ಹವಾಗಿವೆ. ಇವುಗಳು ತಂತ್ರದ ದೃಷ್ಟಿಯಿಂದ ಆಧುನಿಕ ಕಥೆಗಳಿಗಿಂತ ಸ್ವಲ್ಪ ಭಿನ್ನವಾಗಿವೆ. ಅಲ್ಲದೆ ಅವುಗಳಲ್ಲಿ ನಾಟಕೀಯ ಆರಂಭವಾಗಲಿ, ಅನಿರೀಕ್ಷಿತ ಮುಕ್ತಾಯವಾಗಲಿ ಇಲ್ಲ. "ಕೆರೂರವರ ಸಣ್ಣಕಥೆಯ ತಂತ್ರ

ಮರಾಠಿಯಲ್ಲಿಯ 'ಸಂಪೂರ್ಣ ಕತೆ'ಯ ತಂತ್ರದ ಅನುಕರಣವಾಗಿದೆ. ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಿಂದ ಇಪ್ಪತ್ತನೆಯ ಶತಮಾನದ ಪ್ರಾರಂಭದವರೆಗೆ ಇಂಗ್ಲಿಷ್ ಸಾಹಿತ್ಯದಲ್ಲಿ ಇಂಥ ಕತೆಗಳನ್ನು ಕಾಣಬಹುದು. ಅನಿರೀಕ್ಷಿತವಾದ ಪ್ರಾರಂಭ ಹಾಗೂ ಮುಗಿತಾಯಗಳಿಲ್ಲದೆ ಒಂದು ಕತೆ ಸಂಪೂರ್ಣವಾಗಿ ಮೈತುಂಬ ಬೆಳೆದು ಬರುವುದೇ ಇದರ ತಂತ್ರವಾಗಿದೆ" (ಕೆ.ಡಿ. ಕುರ್ತಕೋಟಿ; ಯಗಧರ್ಮ ಮತ್ತು ಸಾಹಿತ್ಯದರ್ಶನ; ೧೯೮೩; ಪುಟ ೧೯೨) ಎಂಬುದು ಕುರ್ತಕೋಟಿಯವರ ಅಭಿಪ್ರಾಯ. ಕೆರೂರವರು ತಮ್ಮ ಕತೆಗಳಲ್ಲಿ ಸಾಮಾಜಿಕ ಜೀವನದ ಒಳಿತು ಕೆಡುಕುಗಳನ್ನು ಚಿತ್ರಿಸಿದ್ದಾರೆ.

ಮಾಸ್ತಿಯವರು ಬರೆಯಲಾರಂಭಿಸಿದ ದಿನಗಳಲ್ಲಿಯೇ ಎಂ.ಎನ್. ಕಾಮತರೂ (೧೮೮೩–೧೯೪೦) ಈ ಪ್ರಕಾರದಲ್ಲಿ ಕೃತಿ ರಚನೆಗೆ ತೊಡಗಿದರು. ೧೯೧೩–೧೯೧೪ರ ಅನಂತರ 'ಸ್ವದೇಶಾಭಿಮಾನಿ'ಯಂತಹ ಪತ್ರಿಕೆಗಳಲ್ಲಿ ಅವರ ಕತೆಗಳು ಕಂಡುಬರುತ್ತವೆ. ೧೯೧೩ ರಿಂದ ೧೯೩೫ರ ವರೆಗೆ ಕತೆಗಳನ್ನು ಬರೆಯುತ್ತಿದ್ದ ಅವರ ಕಥೆಗಳನ್ನು ಲೀಲಾ ಭಟ್ ಅವರು 'ಎಂ. ಎನ್. ಕಾಮತ್‌ರ ಕೃತಿಗಳು' ಎಂಬ ಸಂಪುಟದಲ್ಲಿ ಸಂಪಾದಿಸಿದ್ದಾರೆ. ಎಂ. ಎನ್. ಕಾಮತ್‌ರ 'ಹತ್ತರೊಡನೆ ಹನ್ನೊಂದು' ಕಥಾ ಸಂಕಲನ ೧೯೩೫ರಲ್ಲಿ ಪ್ರಕಟವಾಯಿತು. 'ಅಂದಿನ ಆವೂರು' (೧೯೪೧) ಕಾಮತರ ಕಥಾಸಂಕಲನ. ಕಾಮತರ ಕತೆಗಳಲ್ಲಿ ಸಮಾಜ ಸುಧಾರಣೆಯ ತತ್ತ್ವಗಳು ಅಡಕವಾಗಿವೆ. ಅವರ ಕತೆಗಳಲ್ಲಿ ಹಾಸ್ಯವು ಪ್ರಧಾನ ಅಂಶವಾಗಿದೆ. ಸಂಗತಿಯೊಂದನ್ನು ಹರಟೆಯ ರೂಪದಲ್ಲಿ ಹೆಣೆಯುತ್ತಾ ಹೋಗುವುದು ಕಾಮತರ ವೈಶಿಷ್ಟ್ಯವಾಗಿದೆ.

ಪಂಜೆ, ಕಾಮತ್ ಹಾಗೂ ಕೆರೂರರಲ್ಲಿ ಸಣ್ಣಕಥೆ ತನ್ನ ಪ್ರಾರಂಭಿಕ ಹಂತವನ್ನು ಮುಗಿಸಿತು. ಮಾಸ್ತಿಯವರಲ್ಲಿ ಪ್ರಬುದ್ಧವಾಯಿತು. ಕನ್ನಡ ಸಾಹಿತ್ಯದಲ್ಲಿ ಮಾಸ್ತಿ (೧೮೯೧–೧೯೮೬)ಯವರನ್ನು 'ಸಣ್ಣಕಥೆಗಳ ಜನಕ'ರೆಂದೇ ಕರೆಯಲಾಗುತ್ತಿದೆ. ಕನ್ನಡ ಸಣ್ಣಕಥೆಯ ಇತಿಹಾಸದಲ್ಲಿ ಅತಿ ದೊಡ್ಡ ಹೆಸರು ಮಾಸ್ತಿಯವರದು. ಅವರ ಮೊದಲ ಕತೆ ೧೯೧೦ರಲ್ಲಿ ಪ್ರಕಟವಾಯಿತು ಹಾಗೂ ೧೯೮೪ರವರೆಗೆ ಅವರ ಹದಿನೈದು ಕಥಾಸಂಗ್ರಹಗಳು ಪ್ರಕಾಶಿತವಾದವು. ಕಾವ್ಯ, ನಾಟಕ, ಕಾದಂಬರಿ, ವಿಮರ್ಶೆಗಳಲ್ಲಿಯೂ ಅವರ ಸಾಧನೆ ಗಣನೀಯವಾಗಿತ್ತು. ಆದರೆ ಅವರ ಬರವಣಿಗೆಯ ಪ್ರಮುಖ ಮಾಧ್ಯಮ

ಸಣ್ಣಕಥೆ. ಅವರು 'ಮೊಸರಿನ ಮಂಗಮ್ಮ', 'ರಂಗಪ್ಪನ ದೀಪಾವಳಿ', 'ಉಗ್ರಪ್ಪನ ಉಗಾದಿ', 'ವೆಂಕಟಿಗನ ಹೆಂಡತಿ', 'ಒಂದು ಹಳೆಯ ಕಥೆ' ಮುಂತಾದ ನೂರಾರುಕಥೆಗಳನ್ನು ಬರೆದಿದ್ದಾರೆ. ಇವರ ವಸ್ತುವಿನ ಆಯ್ಕೆ, ತಿಳಿಹಾಸ್ಯ, ಸರಳ ಶೈಲಿ, ಭಾಷೆಯ ಮೊನಚು, ಪರಂಪರೆ ಮತ್ತು ಆಧುನಿಕತೆಯ ಮುಖಾಮುಖಿಯ ಹಿನ್ನೆಲೆಯಲ್ಲಿ ಸಮಸ್ಯೆಯನ್ನು ಎತ್ತುವ ರೀತಿ ಹೀಗೆ ಹಲವಾರು ಮಹತ್ತ್ವದ ಗುಣಗಳಿಂದ ಅವರ ಕಥೆಗಳ ಸ್ವರೂಪವು ಮುಂದಿನ ಕಥಾಲೋಕಕ್ಕೆ ಮಾರ್ಗದರ್ಶಕವಾದವು.

ಮಾಸ್ತಿಯವರ ಪರಂಪರೆಯ ಹಿನ್ನಲೆಯಲ್ಲಿ ಬಂದ ಆನಂದ (ಅಜ್ಜಂಪುರ ಸೀತಾರಾಮ); ಅಶ್ವತ್ಥ (ಕೂಡವಳ್ಳಿ ಅಶ್ವತ್ಥ ನಾರಾಯಣ ರಾವ್), ಎ.ಆರ್. ಕೃಷ್ಣ ಶಾಸ್ತ್ರಿ, ಕುವೆಂಪು, ಬೇಂದ್ರೆ, ಸೇಡಿಯಾಪು ಕೃಷ್ಣ ಭಟ್ಟ, ಕಡೆಂಗೋಡ್ಲು ಶಂಕರ ಭಟ್ಟ, ಬಾಗಲೋಡಿ ದೇವರಾಯ, ಕೊಡಗಿನ ಗೌರಮ್ಮ, ದೇವಾಂಗನಾ ಶಾಸ್ತ್ರಿ ಮೊದಲಾದ ಶ್ರೇಷ್ಠ ಕಥೆಗಾರರು ಇಲ್ಲಿ ಗಮನಾರ್ಹರಾಗಿದ್ದಾರೆ. ಅವರ ಕತೆಗಳಲ್ಲಿ ವಾಸ್ತವ ಬದುಕು, ಕುಟುಂಬ, ಪ್ರೀತಿ ಪ್ರೇಮ, ಪ್ರಕೃತಿ ಪ್ರೇಮ, ಪರಂಪರೆ ಮತ್ತು ಆಧುನಿಕತೆಯ ಮುಖಾಮುಖಿಯ ಸಂಘರ್ಷ, ಸಂಪ್ರದಾಯ, ಸಾಮಾಜಿಕ ಕಳಕಳಿ, ಸಾಮಾನ್ಯ ಮನುಷ್ಯನ ಚಿತ್ರಣ, ಸ್ತ್ರೀ ಸ್ವಾತಂತ್ರ್ಯ ಮೊದಲಾದ ಅಂಶಗಳು ಕಂಡುಬರುತ್ತವೆ.

### ೪.೩.೩ ಆಧುನಿಕ ಕಾಲದ ಸಣ್ಣಕತೆಗಾರರು

ಆಧುನಿಕ ಕನ್ನಡ ಸಣ್ಣಕತೆಯಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತ ಬಂಡಾಯ ಸಂವೇದನೆಗಳು ಪ್ರಮುಖ ಧಾರೆಗಳಾಗಿವೆ. ನವೋದಯ ಸಾಹಿತ್ಯದಂತೆ ಪ್ರಗತಿಶೀಲ ಸಾಹಿತ್ಯವು ಕೂಡ ಪಶ್ಚಿಮ ಮತ್ತು ದೇಸೀಯ ತಾತ್ತ್ವಿಕ ಸಂವೇದನೆಯ ಹಿನ್ನೆಲೆಯಲ್ಲಿ ರೂಪಿತವಾದ ಒಂದು ಸಾಹಿತ್ಯ ಪಂಥವಾಗಿದೆ. ಮಾರ್ಕ್ಸ್‌ವಾದ, ಗಾಂಧೀವಾದ, ವಚನಕಾರರ ಸಾಮಾಜಿಕ ಬದ್ಧತೆ, ನವೋದಯದ ಮಾನವೀಯತೆ, ವಾಸ್ತವ ಪ್ರಜ್ಞೆ ಹಾಗೂ ಮಾರ್ಕ್ಸ್‌ವಾದದ ತಾತ್ತ್ವಿಕ ಚಿಂತನೆಯ ಬೆಳಕಿನಲ್ಲಿ ಮೂಡಿದ ಒಂದು ಪ್ರಮುಖ ಎಡಪಂಥೀಯ ಸಾಹಿತ್ಯ ಚಳುವಳಿಯಾಗಿ ಗಮನಾರ್ಹತೆ ಪಡೆದುಕೊಂಡಿದೆ. ಪ್ರಗತಿಶೀಲ ಕಥೆಗಾರರಾದ ಅ.ನ.ಕೃಷ್ಣರಾಯ, ನಿರಂಜನ, ಬಸವರಾಜ ಕಟ್ಟೀಮನಿ, ಚದುರಂಗ ಮುಂತಾದವರು ತಮ್ಮ ಕತೆಗಳಲ್ಲಿ ಸಾಮಾಜಿಕ ನ್ಯಾಯ, ಸಮಾನತೆ, ಜಾತಿಭೇದ, ಸ್ತ್ರೀ ಶೋಷಣೆ, ಶ್ರೀಮಂತ–ಬಡವ, ಮಾಲಿಕ–

ಕಾರ್ಮಿಕರ ನಡುವಿನ ಬಿರುಕು, ಶೋಷಣೆ, ಅನಾಚಾರಗಳನ್ನು ಪ್ರಶ್ನಿಸುವ ಮತ್ತು ಸೃಜನಾತ್ಮಕ ಸ್ತರದಲ್ಲಿ ಬಿಡಿಸಿ ತೋರಿಸುವ ದಿಟ್ಟ ಪ್ರಯತ್ನಗಳನ್ನು ಮಾಡಿದರು.

ಅ.ನ.ಕೃಷ್ಣರಾಯರು (೧೯೦೮-೧೯೭೧) ಈ ಗುಂಪಿನಲ್ಲಿ ಮುಖ್ಯರು. ಅ.ನ.ಕೃ. ಕಾದಂಬರಿಯನ್ನು ತಮ್ಮ ಪ್ರಮುಖ ಸೃಜನಶೀಲ ಮಾಧ್ಯಮವಾಗಿ ಮಾಡಿಕೊಂಡರೂ ಜೊತೆಜೊತೆಯಲ್ಲೇ ಸಣ್ಣಕತೆಗಳನ್ನು ಬರೆದರು. ೧೯೩೦ರಲ್ಲಿ 'ಮಿಂಚು' ಎಂಬ ಅವರ ಕಥಾಸಂಗ್ರಹ ಪ್ರಕಟವಾಗಿದೆ. ಹಲವು ಕತೆಗಳನ್ನು ಬರೆದಿರುವ ಅ.ನ.ಕೃ. ಅವರಲ್ಲಿ ಸಾಮಾಜಿಕ ವಿಷಮತೆ, ರಾಜಕೀಯ ವ್ಯಕ್ತಿಗಳಿಂದಾಗುವ ಅನ್ಯಾಯ, ದುರ್ಬಲರ, ದಲಿತರ ಶೋಷಣೆ-ಇವು ವಸ್ತುಗಳಾಗಿವೆ. ಇವರ ಕಾದಂಬರಿಗಳಲ್ಲಿರುವಂತೆ ಇಲ್ಲಿಯೂ ಸಂಭಾಷಣೆಯ ಕೌಶಲ ಎದ್ದು ಕಾಣುವ ಗುಣವಾಗಿದೆ. ಅ.ನ.ಕೃ. ಅವರಂತೆ ತ.ರಾ. ಸುಬ್ಬರಾಯರು (೧೯೨೦-೧೯೮೪) ಕಾದಂಬರಿಗಳನ್ನು ತಮ್ಮ ಪ್ರಮುಖ ಸೃಜನಶೀಲ ಮಾಧ್ಯಮವನ್ನಾಗಿ ಮಾಡಿಕೊಂಡರು. ತ.ರಾ.ಸು. 'ರೂಪಸಿ', 'ತೊಟ್ಟಿಲು ತೂಗಿತು', 'ಗಿರಿಮಲ್ಲಿಗೆಯ ನಂದನದಲ್ಲಿ' ಮತ್ತು 'ಇದೇ ನಿಜವಾದ ಸಂಪತ್ತು' ಎಂಬ ನಾಲ್ಕು ಕಥಾಸಂಕಲನಗಳನ್ನು ಪ್ರಕಟಿಸಿದ್ದಾರೆ. ಅವರ '೦-೦=೦' ಎಂಬ ಕಥೆ ವಸ್ತು ಮತ್ತು ತಂತ್ರದ ದೃಷ್ಟಿಯಿಂದ ಕನ್ನಡ ಸಣ್ಣಕತೆಯ ಸಂದರ್ಭದಲ್ಲಿ ಪ್ರಮುಖವಾದದ್ದಾಗಿದೆ. ಇದು ವಸ್ತುವಿನ ದೃಷ್ಟಿಯಿಂದ ಅಲ್ಲಿಯವರೆಗೆ ಬಂದ ಕಥೆಗಳಿಗಿಂತ ತುಂಬ ಭಿನ್ನವಾಗಿದೆ.

ಚದುರಂಗ (ಎಂ.ಸುಬ್ರಹ್ಮಣ್ಯರಾಜೇಅರಸು)ರನ್ನು ಪ್ರಗತಿಶೀಲ ಕಥೆಗಾರರ ಗುಂಪಿನವರೆಂದು ಗುರುತಿಸಬಹುದಾದರೂ ಉಳಿದ ಕಥೆಗಾರರಿಗಿಂತ ಭಿನ್ನವಾದ ರಚನೆಯನ್ನು ಅವರಲ್ಲಿ ಕಾಣುತ್ತೇವೆ. 'ಸ್ವಪ್ನ ಸುಂದರಿ', 'ಶವದಮನೆ', 'ಮೊನಿನ ಹೆಜ್ಜೆ', 'ಬಂಗಾರದ ಗೆಜ್ಜೆ' ಮುಂತಾದ ಸಂಕಲನಗಳ ಕಥೆಗಳಲ್ಲಿ ಅನ್ಯಾಯ, ಅಸಮಾನತೆಗಳನ್ನು ತಮ್ಮ ವಸ್ತುವಾಗಿಸಿದರೂ ಅದನ್ನು ನಿರ್ವಹಿಸುವಲ್ಲಿ ಉಳಿದ ಪ್ರಗತಿಶೀಲ ಕಥೆಗಾರರಲ್ಲಿ ಕಾಣದ ಸ್ವಚ್ಛತೆ ಇವರಲ್ಲಿ ಕಾಣುತ್ತೇವೆ. ಪ್ರಗತಿಶೀಲತೆಯನ್ನು ಹೆಚ್ಚಿನ ಮಟ್ಟಿನಲ್ಲಿ ಮೈಗೂಡಿಸಿಕೊಂಡು ಹೆಚ್ಚಿನ ಉದ್ವಿಗ್ನತೆಯಿಂದ ವಸ್ತುವನ್ನು ಗ್ರಹಿಸುವ, ಅಭಿವ್ಯಕ್ತಿಸುವ ಕಥೆಗಾರರು ಬಸವರಾಜ ಕಟ್ಟೀಮನಿ. ಸ್ವಾತಂತ್ರ್ಯ ಚಳವಳಿ, ಸಾಮಾಜಿಕ ಅನ್ಯಾಯ, ರಾಜಕೀಯ ವಿಷಮತೆಗಳನ್ನು ಕಟ್ಟೀಮನಿ ತಮ್ಮ ಕಥೆಗಳಲ್ಲಿ ಚಿತ್ರಿಸುತ್ತಾರೆ. 'ಗಿರಿಜಾ ಕಂಡ

ಸಿನಿಮಾ', 'ಬೂಟ್ ಪಾಲಿಷ್', 'ರಕ್ತಧ್ವಜ', 'ನೀಲಗಂಗಾ'- ಇವು ಇವರ ಉತ್ತಮ ಕಥೆಗಳಲ್ಲಿ ಹಲವು.

ಈ ಗುಂಪಿನಲ್ಲಿ ಪ್ರಮುಖರಾದ ಮತ್ತೊಬ್ಬ ಕಥೆಗಾರ ನಿರಂಜನ (ಕುಳಕುಂದ ಶಿವರಾಯ)ರ ಕಥೆಗಳಲ್ಲಿ ಉಳಿದ ಪ್ರಗತಿಶೀಲ ಬರಹಗಾರರಿಗಿಂತ ಹೆಚ್ಚಿನ ಮಟ್ಟಿನ ವೈಚಾರಿಕತೆಯನ್ನು ಕಾಣುತ್ತೇವೆ. ನಿರಂಜನರು ಪರಿಣಾಮಕಾರಿಯಾಗಿ ಕಥೆ ಹೇಳುವ ಕಲೆ ಸಾಧಿಸಿಕೊಂಡಿದ್ದಾರೆ. ಸಮಸ್ಯೆಯ ಇಕ್ಕೆಲಗಳನ್ನೂ ನಿರಂಜನರು ಗ್ರಹಿಸುತ್ತಾರೆ. ಇವರದು ಹರಿತವಾದ ಶೈಲಿ. 'ಕೊನೆಯ ಗಿರಾಕಿ' ಇವರ ಅತ್ಯುತ್ತಮ ಪ್ರಾತಿನಿಧಿಕ ಕಥೆ. ಹೆಣ್ಣನ್ನು ಭೋಗದ ವಸ್ತುವಾಗಿ, ಅಸಹ್ಯವಾಗಿ, ಕ್ರೂರವಾಗಿ ಬಳಸಲೆತ್ನಸುವ ಜಗತ್ತಿನ ರುದ್ರ ವಾಸ್ತವಿಕತೆ ಇದರಲ್ಲಿ ಮೂಡಿಬಂದಿದೆ. ಕೋ. ಚೆನ್ನಬಸಪ್ಪನವರು ಹಳ್ಳಿಯ ಜೀವನವನ್ನು ಚೆನ್ನಾಗಿ ಅರಿತವರು. ಇವರದು ಶಕ್ತಿಪೂರ್ಣ ಶೈಲಿ. 'ನಮ್ಮೂರಿನ ದೀಪ', 'ಉಂಗುರದ ಉರುಳು' ಇವರ ಉತ್ತಮ ಕಥೆಗಳು. ಎಸ್. ಅನಂತನಾರಾಯಣ, ದ.ಬಾ. ಕುಲಕರ್ಣಿ, ಮಿರ್ಜಿ ಅಣ್ಣಾರಾಯ, ಬೆಸಗರಹಳ್ಳಿ ರಾಮಣ್ಣ, ಪ.ಸು. ಭಟ್ಟ, ಟಿ.ಕೆ. ರಾಮರಾವ್ ಮೊದಲಾದವರು ಪ್ರಗತಿಶೀಲ ಮಾರ್ಗದಲ್ಲಿ ಒಳ್ಳೆಯ ಕಥೆಗಳನ್ನು ಬರೆದರು. ಗ್ರಾಮ ಜೀವನದ ವಿವಿಧ ಮುಖಗಳ ಚಿತ್ರಣ ಇವರ ಕಥೆಗಳಲ್ಲಿ ಜೀವಂತವಾಗಿ ಮೂಡಿಬಂದಿದೆ. ಓದುಗರ ಸಾಮಾಜಿಕ ಪ್ರಜ್ಞೆಯನ್ನು ಎಚ್ಚರಿಸಿ, ಸಮಾಜದಲ್ಲಿ ತುಳಿತಕ್ಕೆ ಸಿಕ್ಕವರ ಪಾಡನ್ನು ಓದುಗರ ಕಣ್ಣಿಗೆ ಅಂತಃಕರಣಕ್ಕೆ ಮುಟ್ಟಿಸಿದ ಸಾಧನೆ ಪ್ರಗತಿಶೀಲರದು.

ಕನ್ನಡದಲ್ಲಿ ನವ್ಯ ಸಾಹಿತ್ಯಮಾರ್ಗ ಹುಟ್ಟಿದ್ದು ಸ್ವಾತಂತ್ರ್ಯಾನಂತರದ ಕಾಲದಲ್ಲಿ. ಸ್ವಾತಂತ್ರ್ಯ ಬಂದ ನಂತರವೂ ದೇಶದ ದಾರಿದ್ರ್ಯ, ಅಜ್ಞಾನ, ಕಷ್ಟ ಪರಂಪರೆ ತಪ್ಪಲಿಲ್ಲ. ಹೊಸ ಮೌಲ್ಯಗಳ ಅನ್ವೇಷಣೆ ಅನಿವಾರ್ಯವಾಯಿತು. ನವ್ಯ ಮಾರ್ಗದವರು ನವೋದಯದವರ ಆದರ್ಶ, ಪ್ರಗತಿಶೀಲರ ಆವೇಶ ಇವುಗಳ ಬಗೆಗೆ ಹೆಚ್ಚಿನ ಅನುಮಾನದಿಂದ ನೋಡುವ ದೃಷ್ಟಿಯನ್ನು ಬೆಳೆಸಿಕೊಂಡಂತೆ ತೋರುತ್ತದೆ. ಆದ್ದರಿಂದ ಭಾವನಾಮಯತೆಗಿಂತ ಚಿಂತನಶೀಲತೆಯ ಮೇಲೆ ನವ್ಯರು ಹೆಚ್ಚಿನ ಒತ್ತು ನೀಡುತ್ತಾರೆ. ನವೋದಯ ಮತ್ತು ಪ್ರಗತಿಶೀಲ ಮಾರ್ಗದವರು ಹೆಚ್ಚಾಗಿ ಸಾಮೂಹಿಕ ದನಿಗೆ ತಮ್ಮ ದನಿಯನ್ನು ಕೂಡಿಸುವ ಮನೋಭಾವ ಉಳ್ಳವರಾಗಿದ್ದಾರೆ. ನವ್ಯರು ವ್ಯಕ್ತಿ ವಿಶಿಷ್ಟ ಅನುಭವದ ಸಂದರ್ಭದಲ್ಲಿ ಸಮಷ್ಟಿ ಅನುಭವದ ಗತಿ, ದನಿಗಳನ್ನು ಗುರುತಿಸುವ

ಮನೋಭಾವ ತಳೆದದ್ದನ್ನು ಕಾಣುತ್ತೇವೆ. ಮನಸ್ಸಿನ ಅಥವಾ ಅಂತರಂಗದ ದ್ವಂದ್ವ, ತೊಳಲಾಟ, ಅನಿಶ್ಚಯತೆ, ಅಸಹಾಯಕತೆ ಮಂತಾದವುಗಳನ್ನು ಪರಿಣಾಮಕಾರಿಯಾಗಿ ಅಭಿವ್ಯಕ್ತಿಸಲು ಪ್ರಜ್ಞಾ ಪ್ರವಾಹ ತಂತ್ರವನ್ನು ನವ್ಯರು ಅಳವಡಿಸಿಕೊಂಡರು. ಸ್ವಾತಂತ್ರ್ಯಾನಂತರ ಅದುವರೆಗೆ ಗೌಣವಾಗಿದ್ದ ವ್ಯಕ್ತಿ ವಿಶಿಷ್ಟ ಅಗತ್ಯಗಳು ಸೂಕ್ಷ್ಮ ಸಂವೇದನೆಯುಳ್ಳವರಿಗೆ ಪ್ರಮುಖವಾಗಿ ಕಂಡವು. ಇದರಿಂದ ವ್ಯಕ್ತಿ ಮುಖ್ಯವಾದ ವಿಶಿಷ್ಟ ಸ್ಥಿತಿಯು ಮಹತ್ತ್ವ ಪಡೆಯುವಂತಾಯಿತು. ಅದರ ಫಲವಾಗಿ ನವ್ಯಮಾರ್ಗ ಜನಿಸಿತು.

ನವ್ಯಕಥೆಗಳನ್ನು ಬರೆದ ರಾಮಚಂದ್ರಶರ್ಮರಲ್ಲಿ ನವ್ಯದ ಧೋರಣೆ ಸಾಕಷ್ಟು ಖಚಿತವಾಗಿ ಮೊದಲಬಾರಿಗೆ ಮೂಡಿ ಬಂದಿದೆ. ಪ್ರಗತಿಶೀಲರ ಕಥೆಗಳಲ್ಲಿ ಕಾಣುವ ಸಾಮೂಹಿಕ ಅಸಮಾನತೆಗಳ ಬಗೆಗಿನ ರೊಚ್ಚಿಗೆ ಬದಲಾಗಿ ಶರ್ಮರ ಕಥೆಗಳಲ್ಲಿ ಮನುಷ್ಯನ ಮನಸ್ಸಿನ ತುಮುಲಗಳು ಕಾಣಿಸಿಕೊಂಡಿವೆ. ಇವರು ‘ಮಂದಾರ ಕುಸುಮ’ (೧೯೫೩), ‘ಏಳನೆಯ ಜೀವ’ (೧೯೫೫) ಹಾಗೂ ‘ಬೆಳಗಾಯಿತು’ ಕಥಾಸಂಕಲಗಳನ್ನು ರಚಿಸಿದ್ದಾರೆ. ನವ್ಯ ಕಥೆಗಾರರಲ್ಲಿ ಪ್ರಮುಖರಾದವರು ಯು.ಆರ್. ಅನಂತಮೂರ್ತಿ. ‘ಎಂದೆಂದೂ ಮುಗಿಯದ ಕಥೆ’ (೧೯೫೫) ಇವರ ಪ್ರಥಮ ಕಥಾಸಂಕಲನ. ಅನಂತರದಲ್ಲಿ ‘ಪ್ರಶ್ನೆ’, ‘ಮೌನಿ’ ಹಾಗೂ ‘ಆಕಾಶ ಮತ್ತು ಬೆಕ್ಕು’ ಎಂಬ ಸಂಗ್ರಹಗಳನ್ನು ಹೊರತಂದಿದ್ದಾರೆ, ಮೊದಲ ಸಂಗ್ರಹದಲ್ಲಿ ನವ್ಯದ ಪ್ರಾಯೋಗಿಕ ಪ್ರಯತ್ನವನ್ನು ಕಾಣಿಸಿದ ಅನಂತಮೂರ್ತಿ ಅವರು ಮುಂದಿನ ಸಂಗ್ರಹಗಳಲ್ಲಿ ತುಂಬ ಮಹತ್ತ್ವದ ಕಥೆಗಾರರಾಗಿ ಬೆಳೆದಿರುವುದನ್ನು ಕಾಣುತ್ತೇವೆ. ‘ಪ್ರಶ್ನೆ’ ಸಂಕಲನದಲ್ಲಿ ಮುಖ್ಯವಾಗಿ ಬ್ರಾಹ್ಮಣ ಸಮಾಜದ ಕೌಟುಂಬಿಕ ಪರಿಸರದ ಜೀವನ ಚಿತ್ರಣವಿದೆ. ‘ಆಕಾಶ ಮತ್ತು ಬೆಕ್ಕು’ ಸಂಕಲನದ ಕಥೆಗಳಲ್ಲಿ ಅನಂತಮೂರ್ತಿಯವರು ಹಳ್ಳಿಯ ಬ್ರಾಹ್ಮಣ ಪರಿಸರ ಬಿಟ್ಟು ನಗರಜೀವನದ ಅಸ್ಪಷ್ಟತೆಯ ನಡುವೆ ಇರುವ ವ್ಯಕ್ತಿಯ ಬದುಕನ್ನು ಕಥಾವಸ್ತುವನ್ನಾಗಿ ಮಾಡಿಕೊಂಡಿದ್ದಾರೆ.

ಯಶವಂತ ಚಿತ್ತಾಲರ ಕಥೆಗಳು ಕಲಾತ್ಮಕವಾಗಿ ಹೆಚ್ಚು ಪರಿಪೂರ್ಣವಾಗಿವೆ. ಅವರ ಕಥೆಗಳಿಗೆ ಉತ್ತರಕನ್ನಡದ ಹನೇಹಳ್ಳಿ ಹಾಗೂ ಬೊಂಬಾಯಿ ಪರಿಸರಗಳು ಹಿನ್ನಲೆಗಳಾಗಿವೆ. ಸಾವು ಈ ಕಥೆಗಾರರನ್ನು ತೀವ್ರವಾಗಿ ಕಾಡುವ ವಸ್ತುವಾಗಿದೆ. ಅವರ ‘ಸಂದರ್ಶನ’, ‘ಅಬೋಲಿನ’ ಮತ್ತು ‘ಆಟ’ ಸಂಗ್ರಹಗಳಲ್ಲಿನ ಹಲವು ಕಥೆಗಳಲ್ಲಿ ಈ

ಅಂಶವನ್ನು ಗುರುತಿಸಬಹುದಾಗಿದೆ. ಚಿತ್ತಾಲರ 'ಕತೆಯಾದಳು ಹುಡುಗಿ'ಯಲ್ಲಿ ಹೆಚ್ಚಿನ ಮಟ್ಟದ ಚಿಂತನಶೀಲತೆಯಲ್ಲಿ ಅನುಭವಗಳನ್ನು ಪರಿಶೋಧಿಸುವುದು ಕಾಣುತ್ತದೆ. ನಗರಜೀವನದ ಬದುಕನ್ನು, ಮುಖ್ಯವಾಗಿ ಬೊಂಬಾಯಿ ನಗರದ ಬದುಕನ್ನು ಕೇಂದ್ರವನ್ನಾಗಿಸಿಕೊಂಡು ತಮ್ಮ ಕಥೆಗಳನ್ನು ರಚಿಸಿರುವ ಶಾಂತಿನಾಥದೇಸಾಯಿ ಅವರು ನವ್ಯಮಾರ್ಗದ ಮುಖ್ಯ ಕಥೆಗಾರರಲ್ಲಿ ಒಬ್ಬರಾಗಿದ್ದಾರೆ. ೧೯೫೮ರಲ್ಲಿ 'ಮಂಜುಗಡ್ಡೆ' ಎಂಬ ಸಂಗ್ರಹವನ್ನು ಪ್ರಕಟಿಸಿದ ಅನಂತರ ಮೂರು ಕಥಾ ಸಂಗ್ರಹಗಳನ್ನು ಹೊರತಂದಿರುವ ದೇಸಾಯಿಯವರು 'ದಂಡೆ' (೧೯೭೩) ಸಂಕಲನದಲ್ಲಿ ಉತ್ತಮವಾದ ಕಥೆಗಳನ್ನು ನೀಡಿದ್ದಾರೆ.

ಕಿರಿಯ ವಯಸ್ಸಿನಲ್ಲಿ ನಿಧನರಾದ ಕೆ. ಸದಾಶಿವ (೧೯೩೩-೧೯೭೭) ಕಲಾತ್ಮಕವಾಗಿ ಯಶಸ್ವಿಯಾದ ಕಥೆಗಳನ್ನು ನೀಡಿದ್ದಾರೆ. ಸದಾಶಿವ ಅವರ ಕಥೆಗಳು 'ನಲ್ಲಿಯಲ್ಲಿ ನೀರು ಬಂದಿತು', 'ಅಪರಿಚಿತರು' ಎಂಬ ಎರಡು ಸಂಕಲಗಳಲ್ಲಿ ಪ್ರಕಟವಾಗಿವೆ. 'ಕೆರೆಯ ನೀರನ್ನು ಕೆರೆಗೆ ಚೆಲ್ಲಿ' (೧೯೬೩) ಸಂಕಲನದ ಅನಂತರ ಎರಡು ಕಥಾಸಂಕಲನಗಳನ್ನು ಪ್ರಕಟಿಸಿರುವ ಪಿ. ಲಂಕೇಶ ಅವರು ನವ್ಯ ಕಥೆಗಾರರಲ್ಲಿ ಪ್ರಮುಖರು. ಲಂಕೇಶರ ಕಥೆಗಳಲ್ಲಿ ಮನುಷ್ಯನ ಸಣ್ಣತನ, ದುಷ್ಟ ನಡವಳಿಕೆಗಳನ್ನು ತೆರೆದು ತೋರಿಸುವ ಉದ್ದೇಶವಿದೆ. ಲಂಕೇಶರ 'ಉಮಾಪತಿಯ ಸ್ಕಾಲರ್‌ಷಿಪ್ ಯಾತ್ರೆ' ಮತ್ತು 'ಮಾರಲಾಗದ ನೆಲ' ಯಶಸ್ವಿ ಕಥೆಗಳು. ಅವರ ಹಿಂದಿನ ಕಥೆಗಳಲ್ಲಿ ವರ್ತಮಾನವೇ ಕಂಡಿದ್ದರೆ, ಇಲ್ಲಿ ಭೂತ-ವರ್ತಮಾನಗಳು ಬೆಸೆದುಕೊಂಡಿವೆ.

ನವ್ಯರ ಮಾರ್ಗದಲ್ಲಿ ಬಂದು ಅವರಿಂದ ಸ್ವಲ್ಪಮಟ್ಟಿಗೆ ಭಿನ್ನವಾಗಿ ಕಥೆ ರಚಿಸುತ್ತಿರುವ ಪೂರ್ಣಚಂದ್ರ ತೇಜಸ್ವಿ ಅವರು 'ಹುಲಿಯೂರಿನ ಸರಹದ್ದು', 'ಅಬಚೂರಿನ ಪೋಸ್ಟಾಫೀಸು' ಎಂಬ ಎರಡು ಸಂಕಲಗಳನ್ನು ಪ್ರಕಟಿಸಿದ್ದಾರೆ. ತಮ್ಮ ಕಥೆಗಳ ತಂತ್ರಗಳನ್ನು ನವ್ಯದ ರೀತಿಯಲ್ಲೇ ರೂಪಿಸಿಕೊಂಡರೂ ನವ್ಯರಿಗಿಂತ ಭಿನ್ನ ಜಾಡಿನ ಅನ್ವೇಷಣೆಯಲ್ಲಿ ತೊಡಗಿದ್ದಾರೆ. ಸಾಮಾಜಿಕ ದೃಷ್ಟಿಕೋನದಿಂದ ಬದುಕನ್ನು ನೋಡಿದರೂ ಪ್ರಗತಿಶೀಲರ ಆವೇಗ, ಆವೇಶಗಳು ತೇಜಸ್ವಿ ಅವರಲ್ಲಿಲ್ಲ. ಅನುಭವದ ಪದರು ಪದರುಗಳನ್ನು ಪ್ರಜ್ಞಾವಂತ ಸೂಕ್ಷ್ಮತೆಯಲ್ಲಿ ಕಾಣುವ ಸ್ಪಷ್ಟವಾದ ಬರವಣಿಗೆ ಇವರದಾಗಿದೆ. ಅವರ 'ಕುಬಿ ಮತ್ತು ಇಯಾಲ', ಮತ್ತು 'ಅವನತಿ' ಕಥೆಗಳಲ್ಲಿ ಈ

ಅಂಶವನ್ನು ಗುರುತಿಸಬಹುದು. ಈ ತಲೆಮಾರಿನವರಾದ ಸಮತೀಂದ್ರ ನಾಡಿಗ, ಟಿ.ಜಿ. ರಾಘವ, ಗಿರಡ್ಡಿ ಗೋವಿಂದರಾಜ ಹಾಗೂ ಅವರಿಗಿಂತ ಸ್ವಲ್ಪ ಹಿರಿಯ ತಲೆಮಾರಿನವರಾದ ಕ.ವೆಂ. ರಾಜಗೋಪಾಲ ಹಾಗೂ ವಿ.ಜಿ. ಭಟ್ಟ ಅವರೂ ಉತ್ತಮ ಮಟ್ಟದ ಕಥೆಗಳನ್ನು ರಚಿಸಿದ್ದಾರೆ.

ನವ್ಯ ತಲೆಮಾರಿನಲ್ಲಿ ಕಿರಿಯರಾದ ಜಿ.ಎಸ್. ಸದಾಶಿವ, ಶ್ರೀಕೃಷ್ಣ ಆಲನಹಳ್ಳಿ, ವೀಣಾ ಎಲಬುರ್ಗಿ, ರಾಘವೇಂದ್ರ ಖಾಸನೀಸ, ಸುಬ್ರಾಯ ಚೊಕ್ಕಾಡಿ, ರಾಮಚಂದ್ರದೇವ, ಕೆ.ವಿ. ತಿರುಮಲೇಶ, ಸೂ. ರಮಾಕಾಂತ ಮೊದಲಾದವರು ಸಣ್ಣಕತೆಗಳನ್ನು ಬರೆದಿದ್ದಾರೆ. ಕಾವ್ಯವನ್ನು ಪ್ರಮುಖ ಅಭಿವ್ಯಕ್ತಿ ಮಾಧ್ಯಮವಾಗಿ ಮಾಡಿಕೊಂಡಿರುವ ಎ.ಕೆ. ರಾಮಾನುಜನ್ ಅವರೂ ಈ ಪ್ರಕಾರದಲ್ಲಿ ಪ್ರಯೋಗ ನಡೆಸಿದ್ದಾರೆ.

೧೯೭೦ರ ದಶಕದಲ್ಲಿ ದಲಿತ–ಬಂಡಾಯ ಸಾಹಿತ್ಯ ಪಂಥವು ಉದಯವಾಯಿತು. ಸಾಂಸ್ಕೃತಿಕವಾಗಿ ಮತ್ತು ಶೈಕ್ಷಣಿಕವಾಗಿ ಅಕ್ಷರದ ಮೂಲಕ ಅಭಿವ್ಯಕ್ತಿಸಲು ತೊಡಗಿದ ಅವಮಾನಿತ ಅಕ್ಷರಸ್ಥ ಸಮುದಾಯವೊಂದು ತಮ್ಮ ಅಭಿವ್ಯಕ್ತಿಯ ಮಾಧ್ಯಮದಲ್ಲಿ ತಮ್ಮ ಕೇರಿಯ ಪ್ರದೇಶದ ಭಾಷೆಯನ್ನು ಉಪಯೋಗಿಸಿಕೊಂಡು ತಮ್ಮ ಸಹಜ ಅನುಭವಗಳನ್ನು ದಾಖಲಿಸಿತೊಡಗಿದಾಗ ಒಂದು ಜನಾಂಗೀಯ ಸಾಹಿತ್ಯ ಸೃಷ್ಟಿಯಾಯಿತು. ಇದೇ ವೇಳೆಗೆ ಮಹಾರಾಷ್ಟ್ರದಲ್ಲಿ ರೂಪುಗೊಂಡ 'ದಲಿತ್ ಪ್ಯಾಂಥರ್ಸ್' ಚಳುವಳಿ ಕರ್ನಾಟಕದ ಮೇಲೂ ಪ್ರಭಾವ ಬೀರಿತ್ತು. ಹೀಗಾಗಿ ದಲಿತ ಸಾಹಿತ್ಯವೆಂಬ ಹೊಸ ಮಾರ್ಗದ ಸೃಷ್ಟಿಗೆ ಪ್ರಯತ್ನಗಳು ನಡೆದವು. ಈ ಮಾರ್ಗಕ್ಕೆ ಶೂದ್ರ ಸಾಹಿತ್ಯವಾದಿಗಳು ಬೆಂಬಲ ಸೂಚಿಸಿದರು. ಪ್ರಾರಂಭದಲ್ಲಿ ಬ್ರಾಹ್ಮಣರಿಂದಲೇ ಶೋಷಣೆಯಾಗುತ್ತಿದೆ ಎಂದು ವಾದವನ್ನು ಆರಂಭಿಸಿದ ದಲಿತ ಸಾಹಿತಿಗಳು ಬರಬರುತ್ತಾ ಸಮಾಜದ ಇತರ ಸವರ್ಣೀಯ ವರ್ಗಗಳವರನ್ನೂ 'ಶೋಷಕರು' ಎಂದು ಗುರುತಿಸಿದರು. ಹೀಗಾಗಿ 'ಶೂದ್ರಸಾಹಿತ್ಯ' ವಾದಿಗಳು ದಲಿತರಿಂದ ದೂರವಾಗುವಂತಾಯಿತು. 'ದಲಿತ ಸಾಹಿತ್ಯ' ಎಂಬ ವಾದವನ್ನು ಮಂಡಿಸಿದ ಕೆಲವರು ಅದರ ಪ್ರಯೋಗಗಳನ್ನು ಪ್ರಮುಖವಾಗಿ ಕಾವ್ಯದಲ್ಲಿ ನಡೆಸಿದರು. ಇವರು ಏಕೋ ಕಥಾ ಸಾಹಿತ್ಯದೆಡೆಗೆ ಅಷ್ಟಾಗಿ ತಮ್ಮ ಮನಸ್ಸು ನೀಡಲಿಲ್ಲ.

ಆದರೆ 'ದಲಿತ ಸಾಹಿತ್ಯ' ಎಂಬ ವಾದ ಪ್ರಾರಂಭವಾಗುವ ಮುನ್ನಿನ ಕಾಲದಲ್ಲೇ ಕಥೆಗಳನ್ನು ರಚಿಸಿದ ದೇವನೂರು ಮಹಾದೇವ ಅವರನ್ನು ದಲಿತ ಸಾಹಿತಿ ಎಂದು ಗುರುತಿಸುವ ಪ್ರಯತ್ನಗಳು ನಡೆದವು. ೧೯೭೨ರ ಅನಂತರದ ಕಾಲದಲ್ಲಿ ತಮ್ಮ ಕಥೆಗಳನ್ನು ಪ್ರಕಟಿಸುತ್ತ ಬಂದಿರುವ ದೇವನೂರರು 'ದ್ಯಾವನೂರು' (೧೯೭೩) ಎಂಬ ಕಥಾ ಸಂಕಲವನ್ನು ಪ್ರಕಟಿಸಿದ್ದಾರೆ. ಹೊಸಗನ್ನಡ ಸಾಹಿತ್ಯದಲ್ಲೇ ವಿಶಿಷ್ಟವಾದ ಭಾಷಾ ಬಳಕೆಯನ್ನು ಇವರು ಮಾಡಿದ್ದಾರೆ. ಸಾಮಾಜಿಕವಾಗಿ ಶೋಷಿತರಾದ ಜನರ ಜೀವನ ಚಿತ್ರವನ್ನು ದೇವನೂರರು ನಿರುದ್ವೇಗದ ಬರವಣಿಗೆಯಲ್ಲಿ ನೀಡುತ್ತಾರೆ. ಬರಗೂರು ರಾಮಚಂದ್ರಪ್ಪ, ಕಾಳೇಗೌಡ ನಾಗವಾರ ಹಾಗೂ ಬೆಸಗರಹಳ್ಳಿ ರಾಮಣ್ಣ ಅವರು ನವ್ಯರಿಗಿಂತ ಭಿನ್ನವಾದ ಕಥೆಗಳನ್ನು ರಚಿಸಿದ್ದಾರೆ. ಇವರ ಕಥೆಗಳು ಸಾಮಾಜಿಕ ಪ್ರಜ್ಞೆಯ ಅಭಿವ್ಯಕ್ತಿಯನ್ನು ಮುಖ್ಯವಾಗಿ ಉದ್ದೇಶದಲ್ಲಿಟ್ಟುಕೊಂಡ ಬರವಣಿಗೆಗಳಾಗಿವೆ. ರಾಮಚಂದ್ರಪ್ಪನವರ ಕಥೆಗಳಲ್ಲಿ ಶೋಷಣೆಯ ವಿರುದ್ಧ ಪ್ರತಿಭಟನೆಯ ದನಿಯಿದೆ. ಕುಂ. ವೀರಭದ್ರಪ್ಪ, ಮೊಗಳ್ಳಿ ಗಣೇಶ, ಬೊಳುವಾರು ಮಹಮ್ಮದ್ ಕುಂಞ ಮುಂತಾದ ದಲಿತ–ಬಂಡಾಯ ಕತೆಗಾರರಲ್ಲಿ ಸಾಮಾಜಿಕ ಅನುಭವದ ಅಧಿಕೃತತೆ ದಾಖಲಾಗಿರುವುದನ್ನು ಗುರುತಿಸಬಹುದು. ದಲಿತ – ಬಂಡಾಯ ಕಥೆಗಳಲ್ಲಿ ಪ್ರಧಾನವಾಗಿ ಮೂಕವೇದನೆಗೆ ಮಾತುಕೊಡುವುದು, ಯಾವುದೇ ಶೋಷಣೆ ಇರಲಿ ಅದರ ವಿರುದ್ಧ ಪ್ರಶ್ನಿಸುವುದು ಮುಖ್ಯ ಉದ್ದೇಶವಾಗಿದೆ.

ಈ ಶತಮಾನದ ಆರಂಭದಿಂದ ಈವರೆಗೂ ಕಥೆ ಲೇಖಕಿಯರ ಪ್ರಿಯವಾದ ಅಭಿವ್ಯಕ್ತಿ ಪ್ರಕಾರವಾಗಿ ಬೆಳೆದು ಬಂದಿದೆ. ಸಾಹಿತ್ಯಲೋಕದಲ್ಲಿ ಮಹಿಳೆಯರ ಪ್ರವೇಶ ನವೋದಯ ಕಾಲದಿಂದ ಹೆಚ್ಚುತ್ತಾ ಹೋಯಿತು. ನವೋದಯದ ತಿರುಮಲಾಂಬಾ, ಸರಸ್ವತೀಬಾಯಿ ರಾಜವಾಡೆ ಮುಂತಾದ ಲೇಖಕಿಯರಿಂದ ತೊಡಗಿ ದೇವಾಂಗನಾ ಶಾಸ್ತ್ರಿ, ಕೊಡಗಿನ ಗೌರಮ್ಮ, ತ್ರಿವೇಣಿ ಮತ್ತು ಇಂದಿನ ವೀಣಾ ಶಾಂತೇಶ್ವರ, ವೈದೇಹಿ, ಸಾರಾ ಅಬೂಬಕ್ಕರ್, ನೇಮಿಚಂದ್ರ, ಗಂಗಾ ಪಾದೇಕಲ್, ಎ.ಪಿ. ಮಾಲತಿ ಮುಂತಾದ ಕಥೆಗಾರ್ತಿಯರವರೆಗೂ ಈ ಸಣ್ಣಕಥೆಯ ಪ್ರಾಕಾರ ಬೆಳೆದು ಬಂದಿದೆ. ಇವರು ಬಾಲ್ಯವಿವಾಹ, ಅಸಮ ವಿವಾಹ, ವಿಧವಾ ವಿವಾಹ, ವರದಕ್ಷಿಣೆ ಪಿಡುಗು ಮೊದಲಾದ ವಸ್ತುಗಳನ್ನು ತಮ್ಮ ಕಥೆಗಳಲ್ಲಿ ಬಳಸಿಕೊಂಡಿದ್ದಾರೆ. ಮಹಿಳೆಯರ ಅನೇಕ ಕಥೆಗಳಲ್ಲಿ

ಹೆಣ್ಣು ತನಗೆ ಗಂಡಸಿನಿಂದ ಆಗುತ್ತಿರುವ ಅನ್ಯಾಯ, ಶೋಷಣೆಯ ವಿರುದ್ಧ ಸೌಮ್ಯವಾಗಿ, ಅನೇಕ ಸಲ ತೀವ್ರವಾಗಿ ಬಂಡಾಯ ಏಳುವುದನ್ನು ಕಾಣಬಹುದು.

ಹೀಗೆ ತನ್ನದೇ ಆದ ಸ್ವರೂಪವನ್ನೊಳಗೊಂಡ ಆಧುನಿಕ ಕನ್ನಡ ಕಥಾ ಸಾಹಿತ್ಯವನ್ನು ಆಧುನಿಕ ಸಂವೇದನೆಯ ಹಿನ್ನೆಲೆಯಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತಬಂಡಾಯ ಮುಂತಾದ ಒಲವುಗಳಿಗೆ ಒಳಗಾಗಿಸಿದ ಕಥೆಗಾರರ ಸೂಕ್ಷ್ಮ ಪರಿಚಯವನ್ನು ಇಲ್ಲಿ ಮಾಡಲಾಗಿದೆ.

## ೪.೪ ಹವ್ಯಕ ಬರಹಗಾರರ ಸಣ್ಣಕತೆಗಳ ಪ್ರೇರಣೆ ಮತ್ತು ಧೋರಣೆ

ಕನ್ನಡ ಸಣ್ಣಕತೆಗಳ ಹುಟ್ಟು ಮತ್ತು ಬೆಳವಣಿಗೆ ಕುರಿತು ಈವರೆಗೆ ಅಧ್ಯಯನ ಮಾಡಿದ ಅನಂತರ ಅವುಗಳ ಜೊತೆಜೊತೆಗೆ ಹವ್ಯಕ ಬರಹಗಾರರ ಕತೆಗಳ ಪ್ರೇರಣೆಗಳ ಅಧ್ಯಯನಕ್ಕೆ ತೊಡಗಬಹುದು.

ಆರಂಭದ ಕತೆಗಾರರಾದ ಕಡೆಂಗೋಡ್ಲು, ಸೇಡಿಯಾಪು, ಸುಬ್ರಾಯನ್, ಜಿ. ಶಂಕರ ಭಟ್ಟ ಮೊದಲಾದವರು ಸಾಮಾಜಿಕ ಕತೆಗಳಿಗೆ ಹೆಚ್ಚಿನ ಮಹತ್ತ್ವವನ್ನು ಕೊಟ್ಟರು. ಪ್ರೌಢಶಾಲೆಯಲ್ಲಿದ್ದಾಗಲೇ ಕಡೆಂಗೋಡ್ಲು ಶಂಕರ ಭಟ್ಟರ ಮೇಲೆ ಭಾರತೀಯ ಸ್ವಾತಂತ್ರ್ಯ ಚಳುವಳಿಯು ಅದರಲ್ಲೂ ಗಾಂಧೀಜಿಯ ವಿಚಾರ ಚಿಂತನೆಗಳು ಗಾಢ ಪರಿಣಾಮವನ್ನುಂಟು ಮಾಡಿದ್ದವು. ಸ್ವಾತಂತ್ರ್ಯಾಭಿಲಾಷೆ, ಗಾಂಧೀಜಿಯವರ ಸತ್ಯಾಗ್ರಹ ಸಂದೇಶ ಅವರ ಮನ ಕಲಕಿದವು. ಸ್ವಾತಂತ್ರ್ಯ ಪೂರ್ವದ ಕಥಾಸಾಹಿತ್ಯದ ಮುಖ್ಯ ಕೇಂದ್ರ ಬಿಂದು ಮನುಷ್ಯ. ಮನುಷ್ಯನೇ ಆ ಕಾಲದ ಲೇಖಕರಿಗೆ ಅನ್ವೇಷಣೆಯ ಸಾಧನ ಮತ್ತು ಗುರಿಯಾಗಿದ್ದಿತು. ಇದರ ಪರಿಣಾಮವಾಗಿಯೇ ಕಡೆಂಗೋಡ್ಲು, ಸೇಡಿಯಾಪು ಮುಂತಾದವರ ಕಥಾಸಾಹಿತ್ಯ ಸೃಷ್ಟಿಯಾಯಿತು. ಹಳ್ಳಿಯ ಬದುಕಿನ ವಿವಿಧ ನಂಬಿಕೆ, ಆಚರಣೆ ಮುಂತಾದ ವಸ್ತುಗಳನ್ನು ತಮ್ಮ ಕಥೆಗಳಿಗೆ ಇವರು ಆಕರವನ್ನಾಗಿ ಮಾಡಿಕೊಂಡಿದ್ದಾರೆ. ನವೋದಯ ಕಾಲದ ಹವ್ಯಕ ಕತೆಗಾರರು ತಮ್ಮ ಕತೆಗಳಲ್ಲಿ ಬಡತನ ಮತ್ತು ಹಸಿವಿನ ಸಮಸ್ಯೆಯನ್ನೇ ತಮ್ಮ ಮೂಲನೆಲೆಯನ್ನಾಗಿ ಮಾಡಿಕೊಂಡಿದ್ದಾರೆ. ಹವ್ಯಕ ಬರಹಗಾರರ ಕತೆಗಳಲ್ಲಿ ಸಮಾಜದ ಹುಳುಕುಗಳ ಬಗ್ಗೆ ಪ್ರಜ್ಞಾಪೂರ್ವಕವಾಗುವ ಗುಣ, ಕತೆಯ ತಂತ್ರಗಳ ಬಗ್ಗೆ ಹೆಚ್ಚು ಎಚ್ಚರ, ಮಾನವ

ನಿರ್ಮಿತ ಕೊಳಕುಗಳ ಬಗ್ಗೆ ಬೆಳಕು ಚೆಲ್ಲಿ ಜೀವನಕ್ಕೆ ಘನತೆ ತರಬೇಕೆನ್ನುವ ಕಾಳಜಿ ಇವುಗಳೆಲ್ಲಾ ಇಲ್ಲಿವೆ.

ಪ್ರಗತಿಶೀಲ ಕಾಲಘಟ್ಟದಲ್ಲಿ ಕತೆಗಳನ್ನು ರಚಿಸಿದ ಭಾರತೀಸುತರು ಸೊಗಸಾಗಿ, ಸರಳವಾಗಿ, ಸರಾಗವಾಗಿ ಕತೆಗಳನ್ನು ಹೇಳಬಲ್ಲರು. ಅವರ ಸಾಮಾಜಿಕ ಕಳಕಳಿ ಕತೆಯ ಆಪ್ತತೆಯನ್ನು ಹೆಚ್ಚಿಸಲು ಸಹಾಯಕವಾಗುತ್ತದಾದರೆ ಹೆಚ್ಚಿನ ಓದುಗರಿಗೆ ಅಪರಿಚಿತವೆಸುವ 'ವಿಶಿಷ್ಟ ಪ್ರಾದೇಶಿಕತೆ'ಯು ಕುತೂಹಲ ಆಶ್ಚರ್ಯವನ್ನು ಅಧಿಕಗೊಳಿಸಲು ನೆರವಾಗುತ್ತದೆ. ಭಾರತೀಸುತರ ಕತೆಗಳಲ್ಲಿ ಪ್ರಗತಿಶೀಲ ಮನೋಭಾವ ಕಂಡುಬರುತ್ತದೆ. ಸಾಮಾಜಿಕ ಜೀವನದಿಂದ ಹೊಮ್ಮಿದ ಸಮಸ್ಯೆಗಳತ್ತ ಭಾರತೀಸುತರು ಮಾನವೀಯ ದೃಷ್ಟಿಕೋನದಿಂದ ನೋಡುತ್ತಾರೆ. ಯರ್ಮುಂಜ ರಾಮಚಂದ್ರರ ಮೇಲೆ ಹಳ್ಳಿಯ ಬದುಕು ಬಹಳ ಪ್ರಭಾವವನ್ನು ಬೀರಿರುವುದರಲ್ಲಿ ಸಂಶಯವಿಲ್ಲ. ಏನಿದ್ದರೂ ತಮ್ಮ ಸಂಕ್ಷಿಪ್ತ ಜೀವಿತಾವಧಿಯಲ್ಲಿನ ಸ್ವಾತಂತ್ರ್ಯ ಚಳುವಳಿ, ಸ್ವಾತಂತ್ರ್ಯ ಪ್ರಾಪ್ತಿ, ದೇಶ ವಿಭಜನೆ, ಗಾಂಧಿ ಹತ್ಯೆ, ಜಾತೀಯ, ಮತೀಯ ವಿದ್ವೇಷ ಇತ್ಯಾದಿ ದೇಶದ ಪ್ರಮುಖ ಆಗುಹೋಗುಗಳಿಗೆಲ್ಲ ಅವರು ಸಾಕ್ಷಿಯಾಗಿದ್ದರು. ಓದಿನಿಂದ ಮೈಗೂಡಿಸಿಕೊಂಡಿದ್ದ ನವೋದಯ ಸಾಹಿತ್ಯ ಪ್ರಜ್ಞೆ, ಚರ್ಚೆಗಳಿಂದ ಪರಿಚಿತವಾದ ಪ್ರಗತಿಶೀಲ ವಿಚಾರಧಾರೆ ಜೊತೆಗೆ ತಮ್ಮಲ್ಲೇ ಸುಪ್ತವಾಗಿ ಗರಿಕೆದರಿಕೊಳ್ಳುತ್ತಿದ್ದ ನವ್ಯತೆಯ ಅರಿವು-ಇವುಗಳಿಗೆಲ್ಲ ರಾಮಚಂದ್ರರು ತಮ್ಮನ್ನು ತೆರೆದಿಟ್ಟುಕೊಂಡಿದ್ದರು. ಮಾತ್ರವಲ್ಲದೆ ಪ್ರಪಂಚದ ನಾನಾ ಭಾಷೆಗಳ ಶ್ರೇಷ್ಠ ಸಣ್ಣಕತೆಗಾರರ ಕೃತಿಗಳನ್ನು ಓದಿದ್ದರು. ಮನುಷ್ಯನ ಅಂತರಂಗದ ಪ್ರಪಂಚ ಮತ್ತು ಸುತ್ತಮುತ್ತಲಿನ ಬದುಕನ್ನು ಒಂದಾಗಿ ಬೆಸೆಯುವ ಪ್ರಯತ್ನವನ್ನು ರಾಮಚಂದ್ರರ ಹೆಚ್ಚಿನ ಕತೆಗಳಲ್ಲಿ ಗುರುತಿಸಬಹುದು.

ಸುಬ್ರಾಯ ಚೊಕ್ಕಾಡಿಯವರ 'ಬೇರುಗಳು' ನವ್ಯ ಚಳುವಳಿಯ ಸಕಲ ಚಿತ್ರಗಳನ್ನು ಪ್ರಕಟಿಸುವಂತಿದೆ. ಪರಕೀಯ ಪ್ರಜ್ಞೆ, ಅಸ್ವಸ್ಥತೆ, ಸಾಮಾಜಿಕ ಸಂದರ್ಭಗಳಲ್ಲಿ ಬಿರುಕು, ಏಕಾಂಗಿತನ, ತಮ್ಮನ್ನೇ ತಾವು ಗೇಲಿ ಮಾಡಿಕೊಳ್ಳುವುದು, ಸಾಮಾಜಿಕ ವ್ಯವಸ್ಥೆಯ ಬಗ್ಗೆ ಅಪನಂಬಿಕೆ, ವಿಫಲ ಪ್ರೇಮ, ಕಾಡುವ ಕಾಮ ಇತ್ಯಾದಿ ಭಾವನೆಗಳು ವಿವಿಧ ಅನುಭವ ಘಟನೆ, ಪ್ರಸಂಗಗಳನ್ನು ಆಶ್ರಯಿಸಿಕೊಂಡು ಮತ್ತೆ ಮತ್ತೆ ಪರೀಕ್ಷೆಗೆ ಒಳಪಡಿಸುವುದು ಬಹುತೇಕ ನವ್ಯ ಕತೆಗಳ ಮುಖ್ಯ ಶೋಧನಾ ಮಾರ್ಗವಾಗಿದೆ.

ಪಾಶ್ಚಾತ್ಯ ಸಾಹಿತ್ಯದಲ್ಲಿ ಕಾಣಿಸಿಕೊಂಡ ಅಸ್ತಿತ್ವವಾದದ ಪ್ರಭಾವ ಇವರ ಕತೆಗಳಲ್ಲಿ ಕಂಡುಬರುತ್ತದೆ.

ತಿರುಮಲೇಶರ ಕತೆಗಳು ನವ್ಯ ಚಳುವಳಿಯ ದಿನಗಳಿಂದ ತೊಡಗಿ ದಲಿತ ಚಳವಳಿಯ ತೀವ್ರ ದಿನಗಳಲ್ಲಿ ಸಂಭವಿಸಿದವು. ತನ್ನ ಸಮಕಾಲೀನ ಸಾಹಿತ್ಯ ಚಳುವಳಿಗಳ ಮನೋಧರ್ಮಕ್ಕಿಂತ ದೂರವಾಗಿ, ಜೊತೆಗೆ ಕನ್ನಡ ನಾಡಿನಿಂದ ದೂರದ ಹೈದರಾಬಾದಲ್ಲಿ ಇದ್ದು ಅವರ ಕತೆಗಳು ರೂಪುಗೊಂಡವು. ನಿರಾಳತೆ, ಸರಳತೆ, ನಿರ್ಭಾವುಕತೆ, ನಿಗೂಢತೆ, ವಿನೋದ ಮತ್ತು ವಿಷಾದಗಳೆಂಬ ಕಥಿಸುವಿಕೆಯ ಆರು ಗುಣಗಳು ತಿರುಮಲೇಶರ ಕತೆಗಳಲ್ಲಿ ಕಂಡುಬರುತ್ತವೆ. ಐವತ್ತರ ದಶಕದಲ್ಲಿ ನವ್ಯ ಕತೆಗಾರರು ದುಷ್ಟ ಸಾಮಾಜಿಕ ವ್ಯವಸ್ಥೆಯನ್ನು ಚಿತ್ರಿಸುವುದರ ಜೊತೆಗೇ ಆರೋಗ್ಯಕಾರಿ ಸಮಾಜ ನಿರ್ಮಾಣಕ್ಕಾಗಿ ಸಾಮಾಜಿಕ ಬದಲಾವಣೆಯ ಕಡೆಗೂ ಲಕ್ಷ್ಯ ಸೆಳೆದರು. ಈ ಅಂಶವನ್ನು ಹವ್ಯಕ ಬರಹಗಾರರಾದ ಸುಬ್ರಾಯ ಚೊಕ್ಕಾಡಿ, ತಿರುಮಲೇಶ್, ಮಹಾಬಲಮೂರ್ತಿ ಕೊಡ್ಲೆಕೆರೆ ಮುಂತಾದವರು ತಮ್ಮ ಕತೆಗಳಲ್ಲಿ ಚಿತ್ರಿಸಿದರು. ಬ್ರಾಹ್ಮಣ ಕೌಟುಂಬಿಕ ಜೀವನದ ಹಳ್ಳಿಯ ಪರಿಸರದಿಂದ ಹಿಡಿದು ಆಧುನಿಕ ಎನ್ನಬಹುದಾದ ವೈಚಾರಿಕ ನಾಯಕರನ್ನು ಸೃಷ್ಟಿಸುವವರೆಗೆ ಹವ್ಯಕ ನವ್ಯ ಕತೆಗಾರರ ಬರವಣಿಗೆಯ ವಿಸ್ತಾರ ಇದೆ. ಪರೀಕ್ಷೆಗೆ, ವಿಡಂಬನೆಗೆ, ಶೋಧನೆಗೆ ಒಳಪಡಿಸುವ ಪ್ರಧಾನ ಮನೋಧರ್ಮ ಈ ಕಥೆಗಾರರಲ್ಲಿ ಕಂಡು ಬರುತ್ತದೆ.

ಉತ್ತಮ ಪುರುಷದಿಂದ ಆರಂಭವಾಗುವ ಕತೆಗಳ ನಿರೂಪಣೆ ಹಾಗೂ ಓದುಗರನ್ನು ಕತೆಯಲ್ಲಿ ತುಂಬಿಕೊಂಡು ಹೇಳುವ ತಂತ್ರ ಒಂದು ಪ್ರಧಾನ ಧಾರೆಯಾಗಿ ಹವ್ಯಕರ ಕತೆಗಳಲ್ಲಿ ಹರಿದು ಬಂದಿದೆ. ಘಟನೆ, ಪ್ರಸಂಗ, ವ್ಯಕ್ತಿಚಿತ್ರ, ಸಂವಾದ ಇಂಥವೆಲ್ಲವುಗಳ ಸ್ವರೂಪ ಒಂದನ್ನು ಇನ್ನೊಂದರಿಂದ ಪ್ರತ್ಯೇಕಿಸಲಾಗದಂತೆ ಬೆಸೆದುಕೊಂಡಿವೆ. ಯಕ್ಷಗಾನ ಮತ್ತು ತಾಳಮದ್ದಳೆಯ ಅರ್ಥಗಾರಿಕೆಗಳ ಶೈಲಿ ಕತೆಗಳಲ್ಲಿ ಕಂಡುಬರುತ್ತವೆ.

ಹವ್ಯಕ ಕತೆಗಾರ್ತಿಯಾದ ದೇವಾಂಗನಾ ಶಾಸ್ತ್ರಿಯವರಿಗೆ ದೇಶವಿದೇಶಗಳ ಪ್ರಸಿದ್ಧ ಕತೆಗಾರರ ಕತೆಗಳನ್ನು ಬಾಲ್ಯದಲ್ಲಿಯೇ ಓದುವ ಅವಕಾಶಗಳು ಲಭ್ಯವಾಗಿತ್ತು. ಬಂಗಾಲಿ ಭಾಷೆಯ ಅಂದಿನ ಸುಪ್ರಸಿದ್ಧ ಲೇಖಕರ ಕತೆ-ಕಾದಂಬರಿಗಳನ್ನು, ಆಂಗ್ಲ ಲೇಖಕರ ಮತ್ತು ರಷ್ಯಾ ದೇಶದ ಕತೆಗಾರರ ಕತೆಗಳನ್ನು ದೇವಾಂಗನಾ ಓದಿದ್ದಂತೆ

ತೋರುತ್ತದೆ. ಇಂಗ್ಲಿಷ್ ಭಾಷೆಯಲ್ಲಿ ಆಗಿನ ಕಾಲಕ್ಕೆ ಸಿಕ್ಕ ಮಿವರ್ಶೆಯ ಬಗ್ಗೆಯೂ ಸಹ ಅವರಿಗೆ ಅರಿವು ಇತ್ತು. ಹಾಗೂ ಆ ಕಾಲದ ಹಲವು ನವೋದಯ ಲೇಖಕರು ಸ್ತ್ರೀ ಸಂಬಂಧಿತ ವಸ್ತು ವಿಷಯಗಳಿಗೆ ಸ್ಪಂದಿಸಿ ಬರೆಯುತ್ತಿದ್ದುದರಿಂದ ಅವುಗಳ ನಿರಂತರ ಓದು ಸಹ ಅವರನ್ನು ಈ ದಿಸೆಯಲ್ಲಿ ಪ್ರೇರೇಪಿಸಿದೆ. ದೇವಾಂಗನಾ ಶಾಸ್ತ್ರಿಯವರು ಸ್ತ್ರೀಪರ ಕಾಳಜಿಯನ್ನು, ಪ್ರಗತಿಪರ ಸಂವೇದನಾ ಶೀಲತೆಯನ್ನು ವೈಚಾರಿಕತೆ, ನಿರ್ಭೀತ ಪ್ರವೃತ್ತಿಯನ್ನು ಮೈಗೂಡಿಸಿಕೊಂಡಿದ್ದರು. ಬಹುಪತ್ನಿತ್ವ, ಕೇಶಮುಂಡನ, ವೈಧವ್ಯದ ಕ್ರೂರ ಆಚರಣೆಗಳ ಹೆಸರಿನಲ್ಲಿ ಕುಟುಂಬದ ಹಿರಿಯರಿಂದಲೇ ಮಹಿಳೆಯರ ಮೇಲೆ ನಡೆಯುತ್ತಿದ್ದ ಅತ್ಯಾಚಾರ, ಅನ್ಯಾಯಗಳ ವಿರುದ್ಧ ತಮ್ಮ ಬರವಣಿಗೆಯ ಮೂಲಕ ಪ್ರತಿಭಟನೆಯನ್ನು ವ್ಯಕ್ತಪಡಿಸಿದರು. ೧೯೪೦ರ ದಶಕದ ಲೇಖಕಿಯಾದ ಕೊಡಗಿನ ಗೌರಮ್ಮ ಅಕ್ಷರಜ್ಞಾನದ ಹಿನ್ನಲೆಯನ್ನು ಹೊಂದಿದ್ದ ಮೇಲುಜಾತಿಯ ಮಧ್ಯಮ ವರ್ಗದ ಕುಟುಂಬಗಳ ಪರಿಸರದಿಂದ ಬಂದವರಾಗಿದ್ದಾರೆ. ಹೀಗಾಗಿ ಅವರ ಕೌಟುಂಬಿಕ ಪರಿಸರ, ಅಲ್ಲಿನ ಉಸಿರುಕಟ್ಟಿಸುವ ವಾತಾವರಣ, ಅದೇ ಚೌಕಟ್ಟಿನಲ್ಲಿ ಕಂಡುಬರುವ ಉಲ್ಲಾಸದ ವಿವರಗಳು ಅವರ ಬಹುಪಾಲು ಕತೆಗಳಲ್ಲಿ ತೀವ್ರವಾಗಿ ಕಾಣಿಸಿಕೊಳ್ಳುತ್ತವೆ. ಗೌರಮ್ಮನವರು ಪಾಶ್ಚಾತ್ಯ ಸಾಹಿತ್ಯದಲ್ಲಿ ಆಸಕ್ತಿ ಹೊಂದಿ ಜಗತ್ತಿನ ಶ್ರೇಷ್ಠ ಕಥೆಗಳನ್ನು ಅಭ್ಯಸಿಸಿದ್ದರು. ಅವರು ಸ್ವಾತಂತ್ರ್ಯ ಚಳುವಳಿಯಲ್ಲಿ ತೀವ್ರವಾದ ಆಸಕ್ತಿಯನ್ನು ಹೊಂದಿದ್ದರು. ಖಾದಿಬಟ್ಟೆ ತೊಡುತ್ತಿದ್ದರು. ಮಹಾತ್ಮಾ ಗಾಂಧೀಜಿಯವರ ಅನುಯಾಯಿಯಾಗಿದ್ದ ಅವರು ತಮ್ಮ ಇಪ್ಪತ್ತೊಂದನೆಯ ವಯಸ್ಸಿನಲ್ಲಿ ಆಶ್ಚರ್ಯಕರವಾಗಿ ಗಾಂಧೀಜಿಯವರ ಮನಸ್ಸನ್ನು ಸೂರೆಗೊಂಡಿದ್ದು ಹೆಮ್ಮೆ ಪಡುವ ಸಂಗತಿಯಾಗಿ ದಾಖಲಾಗಿವೆ. ಸಂಪ್ರದಾಯಸ್ಥ ಸಮಾಜವೊಂದರಲ್ಲಿರುವ ವಿಧವಾ ಸಮಸ್ಯೆ, ಹದಿಹರೆಯದವರ ಪ್ರೇಮ, ಕೌಟುಂಬಿಕ ಪ್ರೀತಿ, ಅಲ್ಲಿನ ಮಾನವೀಯ ಸಂಬಂಧಗಳು, ಶಿಕ್ಷಣ, ವರದಕ್ಷಿಣೆ, ಜೀವನ ಪ್ರೀತಿ, ಜಾತಿ ಸಂಘರ್ಷ ಮುಂತಾದ ಹಲವು ವಿಚಾರಗಳು ಗೌರಮ್ಮನವರ ಕಥೆಗಳ ಆವರಣದಲ್ಲಿ ಸುಂದರವಾಗಿ ಚಿತ್ರಣಗೊಂಡಿವೆ. ಅಪಾರವಾದ ಜೀವನ ಪ್ರೀತಿಯನ್ನು ಒಳಗೊಂಡಿರುವ ಇವರ ಕಥೆಗಳು ಎಂಥದ್ದೇ ಸಂದರ್ಭದಲ್ಲೂ ನಿರಾಶವಾದದ ಕೂಪಕ್ಕೆ ಬೀಳುವುದಿಲ್ಲ. ಇಲ್ಲಿನ ಪಾತ್ರಗಳು ಯಾವುದೇ ಹಂತದಲ್ಲೂ ದ್ವೇಷ, ಅಸೂಯೆಗಳನ್ನು ವ್ಯಕ್ತಪಡಿಸದೇ ಅಪರಿಮಿತವಾದ

ಜೀವನೋತ್ಸಾಹದಿಂದ ತುಳುಕುತ್ತವೆ. ಸಹಜವಾಗಿ ಮಹಿಳೆಯೇ ಇವರ ಎಲ್ಲ ಕಥೆಗಳ ಕೇಂದ್ರ ಕಾಳಜಿಯಾಗಿ ರೂಪುಗೊಂಡಿದ್ದಾಳೆ.

೧೯೭೦ರ ನಂತರ ಬರೆಯತೊಡಗಿದ ಹವ್ಯಕ ಲೇಖಕಿಯರು ಒಂದಲ್ಲೊಂದು ರೀತಿಯಿಂದ ಸ್ತ್ರೀಮುಕ್ತಿ ಚಳುವಳಿಗಳಿಂದ ಪ್ರಭಾವಿತರಾದರು. ಇವರು ಬರೆಯುತ್ತಿರುವ ವೇಳೆಗೆ ಸಮಾಜದಲ್ಲಿಯೂ ಸಾಕಷ್ಟು ಸ್ಥಿತ್ಯಂತರಗಳಾಗಿದ್ದವು. ಮಹಿಳೆಗೆ ಇಂದು ಶಿಕ್ಷಣದ ಎಲ್ಲ ಪ್ರಕಾರಗಳೂ ಲಭ್ಯವಿದೆ. ಹೀಗಾಗಿ ಅವಳ ಅನುಭವ ಹಿಂದೆ ಎಂದೂ ಇಲ್ಲದ ವ್ಯಾಪ್ತಿ, ವೈವಿಧ್ಯಗಳನ್ನು ಹೊಂದಿವೆ. ಗಂಗಾ ಪಾದೇಕಲ್, ಜಯಾ ಯಾಜಿ ಶಿರಾಲಿಯವರಂಥ ಹೊಸ ತಲೆಮಾರಿನ ಲೇಖಕಿಯರಿಗೆ ತಮ್ಮ ಪರಿಸರದ ಸಾಂಸ್ಕೃತಿಕ ಮತ್ತು ಚಾರಿತ್ರಿಕ ಸ್ವರೂಪದ ಅರಿವಿರುವುದರಿಂದ ಅವರು ಬರೆಯುತ್ತಿರುವ ಕತೆಗಳು ಮೊದಲಿನವರ ಕತೆಗಳಿಗಿಂತ ಭಿನ್ನವಾಗಿವೆ. ಇವರು ವ್ಯವಸ್ಥೆಯ ವಿರುದ್ಧ ದನಿ ಎತ್ತುವ ಮತ್ತು ಪ್ರತಿಭಟನೆಗಳನ್ನು ಕೃತಿಗಿಳಿಸುವ ಕೆಲಸವನ್ನು ಮಾಡಿದರು. ವೈದಿಕ ವ್ಯವಸ್ಥೆಯು ವಿಧವೆಯರ ಮೇಲೆ ಹೇರಿದ ಪುನರ್ವಿವಾಹ ನಿಷೇಧ, ವೈಧವ್ಯದ ನಿಷ್ಠುರತೆ, ಕೇಶಮುಂಡನ ಇತ್ಯಾದಿ ಅಮಾನುಷ ನೀತಿ ನಿಯಮಗಳಿಂದ ಸ್ತ್ರೀಯರ ಅಸ್ತಿತ್ವ ಮತ್ತು ಆತ್ಮಾಭಿಮಾನವನ್ನು ಅತಂತ್ರವಾಗಿಸುವ ಸಾಮಾಜಿಕ ಕ್ರೌರ್ಯ ಮತ್ತು ವಿಧವೆಯರ ದುರ್ಗತಿಯನ್ನು ತಮ್ಮ ಬರಹಗಳ ಮೂಲಕ ಸಮಾಜದ ಮುಂದಿಟ್ಟಿದ್ದಾರೆ. ಮಹಿಳೆಯರನ್ನು ಮನುಷ್ಯರಾಗಿ ಪರಿಗಣಿಸಬೇಕಾದ ಮಾನವೀಯ ಸಮಾಜದ ಆಶಯವನ್ನು ತಮ್ಮ ಬರವಣಿಗೆಯ ಮೂಲಕ ಪ್ರತಿಪಾದಿಸಿದ್ದಾರೆ. ಗಂಗಾ ಪಾದೇಕಲ್, ಜಯಾ ಯಾಜಿ ಶಿರಾಲಿ, ಸವಿತಾ ಭಟ್. ಅಡ್ವಾಯಿ ಮೊದಲಾದ ಕತೆಗಾರ್ತಿಯರು ಗ್ರಾಮೀಣ ಬದುಕಿನ ವಿವಿಧ ಮುಖಗಳನ್ನು ಸಮರ್ಥವಾಗಿ ಚಿತ್ರಿಸಿದ್ದಾರೆ.

# ಅಧ್ಯಾಯ – ೫

## ಹವ್ಯಕ ನವೋದಯ ಕತೆಗಾರರು (೧೯೨೦ ರಿಂದ ೧೯೪೦ರ ವರೆಗೆ)

ವಸಾಹತುಶಾಹಿ ಆಡಳಿತದ ವಿರುದ್ಧ ನಡೆದ ಸ್ವಾತಂತ್ರ್ಯ ಹೋರಾಟ ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಹಲವು ಬದಲಾವಣೆಗೆ ಕಾರಣವಾಗಿದೆ. ಭಾರತೀಯ ಬರಹಗಾರರಿಗೆ ಸ್ವಾತಂತ್ರ್ಯ ಹೋರಾಟ ಸಾಹಿತ್ಯ ರಚನೆಯ ಸಂದರ್ಭದಲ್ಲಿ ಸಾಕಷ್ಟು ಪ್ರೇರಣೆ ನೀಡಿದೆ ಎಂಬಲ್ಲಿ ಎರಡು ಮಾತಿಲ್ಲ. ಕನ್ನಡದ ಸಂದರ್ಭದಲ್ಲಿ ಆರಂಭವಾದ ನವೋದಯ ಸಾಹಿತ್ಯದಲ್ಲಿ ಈ ಹೋರಾಟ ಸಾಕಷ್ಟು ಪ್ರಚೋದನೆ ನೀಡಿದೆ. ಪಾಶ್ಚಾತ್ಯ ಶಿಕ್ಷಣ, ಸಾಹಿತ್ಯ, ಸಂಸ್ಕೃತಿ ಮತ್ತು ರಾಜಕೀಯದ ಪ್ರಭಾವ ಕನ್ನಡ ನವೋದಯ ಸಾಹಿತ್ಯದ ಹಿನ್ನೆಲೆಯಲ್ಲಿ ಪರಿಣಾಮಕಾರಿಯಾಗಿ ಕೆಲಸ ಮಾಡಿದೆ. ನವೋದಯದ ಉತ್ಪನ್ನವಾಗಿ ಕನ್ನಡದಲ್ಲಿ ಕಾಣಿಸಿಕೊಂಡ ಭಾವಗೀತೆ, ಕಾದಂಬರಿ, ಸಣ್ಣಕತೆ, ಪ್ರಬಂಧ ಮುಂತಾದ ಸಾಹಿತ್ಯದ ಪ್ರಕಾರಗಳು ಕನ್ನಡದಲ್ಲಿ ಸಾಕಷ್ಟು ವೈವಿಧ್ಯವನ್ನು ತಂದವು. ಅದರಲ್ಲಿಯೂ ಗದ್ಯಸಾಹಿತ್ಯ ಸಾಕಷ್ಟು ಸಮೃದ್ಧವಾಗಿ ಬೆಳೆಯಿತು.

ನವೋದಯದ ಆರಂಭದ ಹಂತದಲ್ಲಿ ಗದ್ಯದ ಬರವಣಿಗೆಯಲ್ಲಿ ಪಂಜೆ ಮಂಗೇಶರಾಯರು, ಮಾಸ್ತಿ ವೆಂಕಟೇಶ ಅಯ್ಯಂಗಾರರು, ಆನಂದ, ಆನಂದಕಂದ, ಕೃಷ್ಣಕುಮಾರ ಕಲ್ಲೂರ, ಭಾರತೀಪ್ರಿಯ, ಶ್ರೀಮತಿ ಕೊಡಗಿನ ಗೌರಮ್ಮ ಇವರೇ ಮೊದಲಾದವರು ತಮ್ಮನ್ನು ತೊಡಗಿಸಿಕೊಂಡಿದ್ದರು. ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಅಂತೆಯೇ ನಾಡು–ನುಡಿ, ಸಂಸ್ಕೃತಿಗಳ ಮೇಲಿನ ಮೋಹ, ಅಭಿಮಾನಿಗಳೇ ಆ ಕಾಲದ ಆದರ್ಶಗಳಾದವು. ಸ್ವಾತಂತ್ರ್ಯ ದೊರೆತ ನಂತರವೂ ಅಂದರೆ ೧೯೪೭ರ ನಂತರವೂ ಕೆಲಕಾಲದವರೆಗೆ ನವೋದಯ ಸಂಪ್ರದಾಯದ ಗದ್ಯ ಸಾಹಿತ್ಯವೇ ಮುಂದುವರಿಯಿತೆಂದು ಹೇಳಬಹುದು. ಕಾದಂಬರಿ ಜನಪ್ರಿಯ ಮಾಧ್ಯಮವಾಗುವವರೆಗೂ ಸಣ್ಣಕತೆಯೇ ಅತ್ಯಂತ ಪ್ರಭಾವೀ ಸಾಹಿತ್ಯ ಪ್ರಕಾರವಾಗಿತ್ತು.

ಪಂಜೆಯವರು ಕನ್ನಡ ನವೋದಯದ ಆರಂಭ ಲೇಖಕರಲ್ಲಿ ಒಬ್ಬರು. ತಮ್ಮ ಬರವಣಿಗೆಯ ಮುಖಾಂತರ ಹೊಸ ಪ್ರಯೋಗ ನಡೆಸಿದವರಲ್ಲಿ ಹಿರಿಯರು. ಪಂಜೆಯವರ ಒಟ್ಟು ಹದಿಮೂರು ಕತೆಗಳಲ್ಲಿ ಒಂಬತ್ತು ಸಾಮಾಜಿಕ, ನಾಲ್ಕು ಚಾರಿತ್ರಿಕ

ಕಥೆಗಳಾಗಿವೆ. ಪಂಜೆಯವರ 'ಕಮಲಪುರದ ಹೊಟ್ಲಿನಲ್ಲಿ' 'ನನ್ನ ಚಿಕ್ಕ ತಂದೆಯವರ ಉಯಿಲ್', 'ನನ್ನ ಚಿಕ್ಕಪ್ಪ', 'ನನ್ನ ಚಿಕ್ಕ ತಾಯಿ' ಮುಂತಾದ ಕಥೆಗಳಲ್ಲಿ ಬರುವ ಆತ್ಮ ನಿರೂಪಣೆ ಹಾಗೂ ಹಾಸ್ಯ ಹೆಚ್ಚು ಸಂಕೀರ್ಣವಾದುದು.

ಸಣ್ಣಕತೆಯ ಸ್ವರೂಪಕ್ಕೆ ಒಂದು ಘನತೆಯನ್ನು ತಂದುಕೊಟ್ಟವರು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು. ಅವರ ಪ್ರಥಮ ಕಥಾಸಂಗ್ರಹ 'ಕೆಲವು ಸಣ್ಣಕತೆಗಳು' ಕನ್ನಡದ ಕಥಾಸೃಷ್ಟಿಗೆ ಹೊಸ ಆಯಾಮವೊಂದನ್ನು ತಂದುಕೊಟ್ಟಿತೆಂದು ಹೇಳಬಹುದು. ಅಂದಿನ ವಾಸ್ತವ ಬದುಕು ಕತೆಯ ವಸ್ತುವಾಗಿ ಸರಸ ದಾಂಪತ್ಯದ ವಿವಿಧ ಮುಖಗಳನ್ನು ಅವರು ಚಿತ್ರಿಸಿದ್ದು ವಿಶೇಷವಾಗಿದೆ.

'ರಂಗಪ್ಪನ ದೀಪಾವಳಿ', 'ಮೇಷ್ಟ್ರರ ಹೆಂಡತಿ', 'ವೆಂಕಟಶಾಮಿಯ ಪ್ರಣಯ' ಮುಂತಾದ ಕತೆಗಳು ಅಂದಿನ ಸಾಮಾಜಿಕ, ಕೌಟುಂಬಿಕ ಪರಿಸರದಲ್ಲಿ ಮೂಡಿಬಂದಿವೆ. ಸುಮಾರು ಆರು ದಶಕಗಳ ಕಾಲ ಕತೆಗಳನ್ನು ಬರೆದ ಮಾಸ್ತಿಯವರು ಮುಂದಿನವರಿಗೆ ಒಂದು ರಾಜಮಾರ್ಗವನ್ನು ನಿರ್ಮಿಸಿಕೊಟ್ಟರು. ಅವರ ಕತೆಗಳಲ್ಲಿ ಭಾರತೀಯ ಪರಂಪರೆ, ಭಾರತೀಯ ಆದರ್ಶಗಳಿರುವಂತೆ ಅಂತಃಕರಣ ತುಂಬಿದ ಗಂಭೀರ ಚಿಂತನೆಗಳೂ ಇದ್ದವು. ವಿನೋದ ವಿಡಂಬನೆಗಳೂ ಇದ್ದವು.

ಆಧುನಿಕ ಕನ್ನಡ ಸಣ್ಣಕಥಾ ಸಾಹಿತ್ಯದ ನಿರ್ಮಾಣಕ್ಕಾಗಿ ಉತ್ತರ ಕರ್ನಾಟಕದಲ್ಲಿ ಶ್ರಮಿಸಿದ ಆರಂಭಿಕ ಕಥೆಗಾರರಲ್ಲಿ ಕೆರೂರ ವಾಸುದೇವಾಚಾರ್ಯರು ಒಬ್ಬರು. ಇವರ ಕಥಾ ಪ್ರಪಂಚ ಕಾಲ್ಪನಿಕ, ಐತಿಹಾಸಿಕ, ಚಾರಿತ್ರಿಕ, ಪತ್ತೇದಾರಿ ಹೀಗೆ ವಿವಿಧ ವರ್ಗದ ಕತೆಗಳಿಂದ ಕೂಡಿದೆ. ಕೆರೂರರ ಕಥೆಗಳಲ್ಲಿ ಆ ಕಾಲದ ಸುಧಾರಣಾವಾದದ ಪ್ರಭಾವವು ದಟ್ಟವಾಗಿದೆ. ವಿಧವಾ ವಿವಾಹ, ಸ್ತ್ರೀ ಶಿಕ್ಷಣ, ಸ್ತ್ರೀ ಪುರುಷರ ಸಮಾನತೆ, ಪ್ರೇಮ ವಿವಾಹ ಮುಂತಾದ ವಿಷಯಗಳಲ್ಲಿ ಕೆರೂರು ಆಧುನಿಕತೆಯ ಪರವಾಗಿದ್ದಾರೆ. ಹೊಸಗನ್ನಡ ಆರುಣೋದಯದ ಕಾಲದಲ್ಲಿ ಕೆರೂರರಷ್ಟೇ ಸಮರ್ಥವಾಗಿ ಸಣ್ಣಕತೆಗಳನ್ನು ಬರೆದವರು ದಕ್ಷಿಣ ಕನ್ನಡ ಜಿಲ್ಲೆಯ ಎಂ.ಎನ್.ಕಾಮತರು. 'ಕದ್ದವರು ಯಾರು?', 'ಆಮಗು', 'ಬೊಗ್ಗು ಮಹಾಶಯನು' 'ವೈದ್ಯರಾಜ ಧನ್ವಂತರಿ' ಇವು ಇವರ ಕೆಲವು ಪ್ರಮುಖ ಕಥೆಗಳು. ಇವೆಲ್ಲಾ ಮಂಗಳೂರಿನ ಸುತ್ತಮುತ್ತಲ ಪರಿಸರವನ್ನು ಬಣ್ಣಿಸುತ್ತವೆ. ಕಾಮತರ ಕಥೆಗಳಲ್ಲಿ ಹೆಣ್ಣಿನ ನೋವು, ಹಳ್ಳಿಗರ ಮೂಢನಂಬಿಕೆ, ಪ್ರೇತಗಳ ನಂಬಿಕೆ,

ಅಜ್ಞಾನ ಮುಂತಾದ ವಿಚಾರಗಳ ಚಿತ್ರಣವಿದೆ. ಉತ್ತರ ಕರ್ನಾಟಕದ ಹಳ್ಳಿಯ ಸಂಸ್ಕೃತಿ ಮತ್ತು ಐತಿಹ್ಯ ದಂತಕಥೆಗಳಿಗೆ ಸಂಬಂಧಿಸಿದಂತೆ ಕಥೆಗಳನ್ನು ಬರೆದವರಲ್ಲಿ ಬೆಟಗೇರಿ ಕೃಷ್ಣಶರ್ಮ(ಆನಂದಕಂದ) ಅವರು ಮುಖ್ಯರು. ಇವರ 'ಮಾತನಾಡುವ ಕಲ್ಲು', 'ಬಡತನದ ಬಾಳು', 'ಜೋಗತಿ ಕಲ್ಲು' ಮುಂತಾದ ಕಥೆಗಳು ಪ್ರಧಾನವಾಗಿ ಸಾಮಾಜಿಕ ಪ್ರತಿಕ್ರಿಯೆಯನ್ನು ಪ್ರಕಟಿಸುತ್ತವೆ. 'ಬೇಡರ ಜಾನಪ್ಪ' ಮತ್ತು 'ಮಾಲ್ಕಿ ಹಕ್ಕು' ಕಥೆಗಳು ಬಡವ ಬಲ್ಲಿದರ ನಡುವಿನ ಸೂಕ್ಷ್ಮತೆಗಳನ್ನು ವಿಶಿಷ್ಟವಾಗಿ ನಿರೂಪಿಸುತ್ತವೆ. ನವೋದಯ ಕಥೆಗಾರರಲ್ಲಿ ಗೋರೂರ ರಾಮಸ್ವಾಮಿ ಅಯ್ಯಂಗಾರ್, ಜೀ.ಶಂ.ಪರಮಶಿವಯ್ಯ, ಆನಂದ(ಅಜ್ಜಂಪುರ ಸೀತಾರಾಮ) ಮುಂತಾದವರು ಬರೆದ ಕಥೆಗಳ ಚೌಕಟ್ಟು ಕೌಟುಂಬಿಕ ಪರಿಸರವೇ ಆಗಿದೆ.

ಇದೇ ಕಾಲಘಟ್ಟದಲ್ಲಿ ಕಡೆಂಗೋಡ್ಲು ಶಂಕರ ಭಟ್ಟ, ಸೇಡಿಯಾಪು ಕೃಷ್ಣಭಟ್ಟ. ಎಂ. ಸುಬ್ರಾಯನ್, ರಾ.ಮೊ.ವಿಶ್ವಾಮಿತ್ರ, ಕೈಂತಜೆ ಗೋವಿಂದ ಭಟ್ಟ, ಜಿ.ಟಿ.ನಾರಾಯಣ ರಾವ್, ಮಡಿಯಾಲ ನಾರಾಯಣ ಭಟ್, ಕಂಜರ್ಪಣಿ ತಿಮ್ಮಪ್ಪಯ್ಯ, ಪ.ಸು.ಭಟ್ಟ ಮುಂತಾದ ಹವ್ಯಕರು ಕತೆಗಳನ್ನು ಬರೆದು ಈ ಪ್ರಕಾರದಲ್ಲಿ ಹೊಸ ಹೆಜ್ಜೆಗಳನ್ನು ಇಟ್ಟರು. ಹವ್ಯಕರು ಬರೆದ ಕತೆಗಳು ಸಾಮಾನ್ಯವಾಗಿ ಮಧ್ಯಮವರ್ಗದ ಜೀವನವನ್ನು ಚಿತ್ರಿಸುತ್ತವೆ. ಸಾಮಾಜಿಕ ಏರು-ಪೇರುಗಳನ್ನು ಹವ್ಯಕ ಕತೆಗಾರರು ಗುರುತಿಸಿದ್ದರೂ ಕೌಟುಂಬಿಕ ಪರಿಸರವೇ ಅವರ ಕತೆಗಳಲ್ಲಿ ಕಂಡುಬರುವ ಪ್ರಮುಖ ಅಂಶವಾಗಿದೆ.

### ೫.೧ ಸಾಮಾಜಿಕ ಕಳಕಳಿ-ಪರಿವರ್ತನೆಯ ಸ್ಥಿತಿ

ನವೋದಯ ಕಾಲದಲ್ಲಿ ಸಣ್ಣಕತೆಗಳನ್ನು ಬರೆಯುತ್ತಿದ್ದ ಕಡೆಂಗೋಡ್ಲು, ಸೇಡಿಯಾಪು ಮುಂತಾದ ಹವ್ಯಕರು ತಮ್ಮ ಕತೆಗಳ ಮೂಲಕ ತಮ್ಮ ಕಾಲದ ಸಾಮಾಜಿಕ ಜೀವನದ ಒಳಿತು-ಕೆಡುಕುಗಳಿಗೆ ಸ್ಪಂದಿಸಿದ್ದಾರೆ. ಬಡತನ, ಗ್ರಾಮೀಣ ಜೀವನದ ಚಿತ್ರಗಳು, ಕೆಳಸ್ತರದ ಬದುಕು ಇವನ್ನೆಲ್ಲ ಈ ಮಾಧ್ಯಮದಲ್ಲಿ ಹಿಡಿಯಲು ಕಥೆಗಾರರು ಯತ್ನಿಸಿದ್ದಾರೆ. ಆ ದಿನಗಳಲ್ಲಿ ಪ್ರಚಲಿತದಲ್ಲಿದ್ದ ರಾಷ್ಟ್ರೀಯ ಚಳವಳಿ, ಗಾಂಧೀಜಿಯವರ ವಿಚಾರಧಾರೆ, ಅಸ್ಪೃಶ್ಯತಾ ನಿವಾರಣೆ, ಜಾತಿ ಪದ್ಧತಿಯ ವಿರುದ್ಧ ಹೋರಾಟ ಇತ್ಯಾದಿ ಅಂಶಗಳು ಇಲ್ಲಿನ ಕತೆಗಳಲ್ಲಿ ಕಂಡು ಬರುವುದನ್ನು ಗುರುತಿಸಬಹುದಾಗಿದೆ.

ಎಂ. ಸುಬ್ರಾಯನ್ ಅವರ 'ಸುಬ್ಬ ಕಳ್ಳನಾಗಲು ಕಾರಣವೇನು?', 'ಇನ್ನೆಂದೂ ___. ಇಲ್ಲ', 'ಎಣಿಕೆ', 'ಈ ಹುಚ್ಚು', 'ಕೊಗ್ಗ', ಕೈತಂಜೆ ಗೋವಿಂದ ಭಟ್ ಅವರ 'ಪತ್ರೊಡೆ' ಮತ್ತು ಮಡಿಯಾಲ ನಾರಾಯಣ ಭಟ್ ಅವರ 'ದೀನಾದಾಸರು ಸೋತರು' ಕತೆಗಳಲ್ಲಿ ಬಡತನದ ಮತ್ತು ಹಸಿವಿನ ಭಿನ್ನಮುಖಗಳ ಚಿತ್ರಣವಿದೆ. ಬಡತನ ಮತ್ತು ಹಸಿವಿನ ಸಮಸ್ಯೆಯನ್ನೆ ತನ್ನ ಮೂಲ ನೆಲೆಯಾಗಿ ಮಾಡಿಕೊಂಡ ಇಲ್ಲಿಯ ಕತೆಗಳು ಅಪರಾಧ, ಜೀವನ ಕ್ರಮ ಹಾಗೂ ಬದುಕಿನ ಮೌಲ್ಯಗಳನ್ನು ಬಿಟ್ಟು ತೀರ್ಮಾನಿಸಿಲಾಗದು ಎಂಬ ನಂಬಿಕೆ ಇದೆ. ಸುಬ್ರಾಯನ್ ಅವರ 'ಸುಬ್ಬ ಕಳ್ಳನಾಗಲು ಕಾರಣವೇನು?' ಎಂಬ ಶೀರ್ಷಿಕೆಯೇ ಇದನ್ನು ಸ್ಪಷ್ಟವಾಗಿ ಹೇಳುತ್ತದೆ. ಅನನಾಸು ಕದ್ದ ಸುಬ್ಬ ಶಿಕ್ಷೆಗೊಳಗಾದ ಮತ್ತೆ ಅನನಾಸಿನ ಯಜಮಾನನಿಗೆ, ಸುಬ್ಬನ ಒಡನಾಡಿ-ಆದರ್ಶಧಾರೀ ಸಮಾಜವಾದಿ ಕೇಳುವ ಈ ಮೂಲಭೂತ ಪ್ರಶ್ನೆಯು ಕರ್ತವ್ಯ ಪ್ರಜ್ಞೆಯ ಘೋಷಣೆಯೂ ಹೌದು. ಹಸಿವಿನಿಂದಾಗಿ ಮಾವಿನಹಣ್ಣು ಮತ್ತು ಅನನಾಸು ಕದ್ದ ಸುಬ್ಬ ಸಮಾಜವಾದಿಯ ಪ್ರಭಾವದಿಂದಾಗಿ ಬದುಕುವ ದಾರಿಯನ್ನು ಕಂಡುಕೊಳ್ಳುತ್ತಾನೆ "ನನ್ನಲ್ಲಿರುವ ಮಂದಿಗಳಾರೂ ಕಳ್ಳರಲ್ಲ ಅವರಿಗೆ ಕಳುವ ವಿಚಾರವು ಒದಗುವುದಿಲ್ಲ. ಎಲ್ಲರೂ ಏಕ ಕುಟುಂಬಿಗಳಂತೆ ದುಡಿಯುತಿದ್ದು ಹೊಂದಿದ ಬೆಳೆಯಿಂದ ಸುಖ ಪಡೆಯುವುವು. ಸುಬ್ಬನೂ ಅವನ ಕುಟುಂಬವೂ ಸುಖದಿಂದಿದೆ, ಚೋರ ವರ್ತನೆಯು ಅವನಲ್ಲಿ ಇಂದಿಲ್ಲ. ಅಂದಿನ ವರ್ತನೆ ಹಾಗೇಕಾಯಿತೋ? ಕಳ್ಳನಾಗಲು ಕಾರಣವೇನೊ?" (ಎಮ್.ಸುಬ್ರಾಯನ್; ಕುಟ್ಟಿದೊಣ್ಣೆ; ೧೯೫೨; ಪುಟ ೫) ಎಂಬ ಮಾತುಗಳಲ್ಲಿ ಕತೆಗಾರರ ಸಾಮಾಜಿಕ ಕಳಕಳಿ ಕಂಡುಬರುತ್ತದೆ. ಹಸಿವಿನಿಂದ ಕಳ್ಳತನ ಮಾಡಿದರೂ ಮುಂದೆ ಪರಿವರ್ತನೆಗೊಂಡು ಸಮಾಜದಲ್ಲಿ ಬದುಕಲು ಸುಬ್ಬನಿಗೆ ಅವಕಾಶ ಮಾಡಿಕೊಡುವಲ್ಲಿ ಕತೆಗಾರರ ಕಾಳಜಿ ವ್ಯಕ್ತವಾಗಿದೆ.

ಎಮ್. ಸುಬ್ರಾಯನ್ ಅವರ 'ಇನ್ನೊಂದೂ ___.. ಇಲ್ಲ' ಕತೆಯಲ್ಲಿ ನಾಯಿ ಮೋತಿಯನ್ನು ಹಸಿವಿನಿಂದ ಮೀಯಿಸಲಾಗದ ಹುಡುಗ ಕೃಷ್ಣನ ಚಿತ್ರಣವಿದೆ. ಶ್ರೀಮಂತನಾದ ಸುಂದರನಲ್ಲಿ ಕೃಷ್ಣನು ಹೇಳುವ ಮಾತುಗಳು: "ಬೆಳಗ್ಗೆ ಬಂದೆನು, ಹಾಸಿಗೆಯೆಲ್ಲಾ ಮಡಚಿದೆನು. ಸ್ವಲ್ಪ ತಲೆಸುತ್ತುವಂತಾಯಿತು. ನಿನ್ನೆಯೇ ಉಣಲಿಲ್ಲ. ಬೆಳಗ್ಗಿನ ಗಂಜಿಯೂ ಮನೆಯಲ್ಲಿ ಆಗಿಲ್ಲ. ನಿನ್ನೆಯ ಸಂಬಳ ಸಿಕ್ಕಲಿಲ್ಲ. ಒಂದು ಪಾಪು ಅಕ್ಕಿ ತರಲೂ ಗತಿ ಇಲ್ಲದಂತಾಯಿತು." (ಎಮ್.ಸುಬ್ರಾಯನ್ ; ಕುಟ್ಟಿದೊಣ್ಣೆ; ೧೯೫೨;

ಪುಟ ೧೫) ಹಸಿವಿನ ಚಿತ್ರಣವನ್ನು ನೀಡುತ್ತವೆ. ಪುಸ್ತಕ ತೆಗೆಯಲು ಹಣವಿಲ್ಲದ ಹುಡುಗನ ಅಪ್ಪ ಹಾವು ಕಚ್ಚಿ ಸತ್ತಾಗ ಬಡತನವಿದ್ದರೂ ತಾಯಿಯ ಬಳೆಯನ್ನು ಮಾರಿಸಿ ಆಡಂಬರದ ತೊಡಿಗೆಯನ್ನು ಮಾಡಿಸಿಕೊಂಡ ಕಮಲೆಗೆ ತನ್ನ ತಪ್ಪಿನ ಅರಿವಾಗುವುದು,(ಈ ಹುಚ್ಚು). "ನಾನೆಂದೂ ದುರ್ವ್ಯಯಕ್ಕೆ ಹಟವನ್ನು ತೊಡೆನು" (ಎಮ್. ಸುಬ್ರಾಯನ್: ಕುಟ್ಟಿದೊಣ್ಣೆ; ೧೯೫೨; ಪುಟ ೨೫) ಎಂಬ ಕಮಲೆಯ ಮಾತಿನಲ್ಲಿ ತಪ್ಪಿನ ಅರಿವಾಗಿದೆ. ಸುಬ್ರಾಯನ್ ಅವರ 'ಕೊಗ್ಗ' ಕತೆಯಲ್ಲಿ ಧಣಿಗಾಗಿ ಕಾಲು ಕಳೆದುಕೊಂಡ ಕೊಗ್ಗ ತಿರುಪೆ ಎತ್ತುವ ಸಂದರ್ಭದಲ್ಲಿ ಕೋಳಿಮರಿಯನ್ನು ಕದಿಯುವ ಪ್ರಯತ್ನ ಮಾಡಿ ಪೋಲೀಸರ ಬಂಧನಕ್ಕೊಳಗಾಗುವಲ್ಲಿ ಹಸಿವಿನ ತೀವ್ರತೆ ಮುಖ್ಯವಾಗಿದೆ.

ಕೈಂತಜೆ ಗೋವಿಂದ ಭಟ್ ಅವರ 'ಪತ್ರೊಡೆ' ಕತೆಯು ಅದೇ ಹೆಸರಿನ ತಿಂಡಿಯನ್ನು ಕಥಾವಸ್ತುವನ್ನಾಗಿಸಿಕೊಂಡ ಬಡತನದ ಚಿತ್ರಣವನ್ನು ನೀಡುತ್ತದೆ. ಪತ್ರೊಡೆ ತಿನ್ನಬೇಕೆಂಬ ಆಸೆಯನ್ನು ಪ್ರಕಟಿಸಿದಾಗ ಚುಕುಣಿ ಮಕ್ಕಳೊಂದಿಗೆ ಹೇಳುವ "ನೀವು ತುಂಬ ಹುಲ್ಲು ಕೀಳಬೇಕು. ತುಂಬ ದುಡ್ಡು ತರಬೇಕು______ ಆಮೇಲೆ ಮಾಡುವ" (ಕೈಂತಜೆ ಗೋವಿಂದ ಭಟ್; ಕಾಳಿಗೆ ಕಾಣಿಕೆ; ಪುಟ ೧೫) ಎಂಬ ಮಾತು ಮಕ್ಕಳಲ್ಲಿ ಪತ್ರೊಡೆ ತಿನ್ನಬೇಕೆಂಬ ಆಸೆಯನ್ನು ಜೀವಂತವಾಗಿಸುತ್ತದೆ. ಚುಕುಣಿ ಮತ್ತು ಅವಳ ಮಕ್ಕಳು ಪತ್ರೊಡೆಗಾಗಿ ನಡೆಸುವ ತಯಾರಿ, ಕೊನೆಗೆ ರೇಷನ್ ಇನ್ಸ್‌ಪೆಕ್ಟರ್ ಚುಕುಣಿ ಕೈಯಿಂದ ಅಕ್ಕಿಯನ್ನು ಕಸಿದುಕೊಳ್ಳುವುದು, ಪತ್ರೊಡೆ ವಿಷಯದಲ್ಲಿ ಬೀರನಿಗೆ ಮತ್ತು ಚಂದುವಿಗೆ ನಡೆಯುವ ಜಗಳ ಮುಂತಾದ ದೃಶ್ಯಗಳು ಮನಸ್ಸಿಗೆ ನಾಟುವಂತಿದೆ.

ಮಡಿಯಾಲ ನಾರಾಯಣ ಭಟ್ ಅವರ 'ದೀನಾದಾಸರು ಸೋತರು' ಕತೆಯಲ್ಲಿ ಶಾಲಾ ಬಾಲಕನಾದ ದಿನೇಶ ಬಡತನದಿಂದಾಗಿ ಮಧ್ಯಾಹ್ನ ಊಟ ಮಾಡುತ್ತಿರಲಿಲ್ಲ. ಮುಖ್ಯೋಪಾಧ್ಯಾಯರಾದ ದೀನಾದಾಸರು ಎಲ್ಲಾ ವಿದ್ಯಾರ್ಥಿಗಳೂ ಮಧ್ಯಾಹ್ನ ಊಟ ಇಲ್ಲವೇ ತಿಂಡಿ ತರಲೇಬೇಕು ಅದಿಲ್ಲವಾದರೆ ಸ್ಕೂಲಿಗೇನೇ ಬರಬಾರದು ಎಂದು ವಿದ್ಯಾರ್ಥಿಗಳಿಗೆ ನೋಟೀಸು ಕೊಟ್ಟಿದ್ದರು. ಆದರೆ ಬಡತನದಿಂದಾಗಿ ದಿನೇಶ ಮಧ್ಯಾಹ್ನ ಊಟ ಮಾಡುತ್ತಿರಲಿಲ್ಲ. ಕೊನೆಗೆ ಮುಖ್ಯೋಪಾಧ್ಯಾಯರಿಗೆ ದಿನೇಶನ ಮನೆಯ ಬಡತನದ ವಿಚಾರ ತಿಳಿದುಬರುತ್ತದೆ. ಕೊನೆಯಲ್ಲಿ ದೀನಾದಾಸರು ದಿನೇಶನ ಅಜ್ಜನಿಗೆ

ವೃದ್ಧಾಪ್ಯವೇತನ ಕೊಡಿಸುವ ಭರವಸೆಯನ್ನು ನೀಡಿದರು. ಆಗ ದಿನೇಶ " ಅಜ್ಜನಿಗೆ ವೇತನ ಬಂದು, ಮಧ್ಯಾಹ್ನ ಊಟ ಪ್ರಾರಂಭಿಸಿದ ಮೇಲೆ ನಾನು ಬರುತ್ತೇನೆ ಸಾರ್ ____.. ಅಷ್ಟರ ತನಕ ಬೇಡ, ಸಾರ್, ದಮ್ಮಯ್ಯ" (ಮಡಿಯಾಲ ನಾರಾಯಣ ಭಟ್; ಪೂರ್ಣಿಮಾ; ೧೯೭೮; ಪುಟ ೨೩೬) ಎಂಬ ಬಾಲಕ ದಿನೇಶನ ಮಾತಿನಲ್ಲಿ ಬಡತನದ ತೀವ್ರತೆ ಕಂಡುಬರುತ್ತದೆ.

ಹೀಗೆ ಮೇಲಿನ ಎಲ್ಲಾ ಕತೆಗಳೂ ಹಸಿವು ಮತ್ತು ಬಡತನ ವ್ಯಕ್ತಿಗಳನ್ನು ಯಾವ ರೀತಿ ಅಪರಾಧಿಗಳನ್ನಾಗಿ ಹಾಗೂ ಅಸಹಾಯಕರನ್ನಾಗಿ ಮಾಡುತ್ತವೆ ಎಂಬ ಚಿತ್ರಣವನ್ನು ನೀಡುತ್ತವೆ. ನವೋದಯ ಪರಂಪರೆಯ ಎಲ್ಲಾ ಕತೆಗಾರರು ಒಂದಲ್ಲ ಒಂದು ರೀತಿಯಲ್ಲಿ ತಮ್ಮ ಹೆಚ್ಚಿನ ಕತೆಗಳಿಗೆ ಬಡತನದ ವಿವಿಧ ಮುಖಗಳನ್ನು ವಸ್ತುವಾಗಿಸಿರುವುದು ಕಂಡುಬರುತ್ತದೆ.

ಜಿ.ಶಂಕರ ಭಟ್ಟರ 'ಕೆಣಕಿದ ಕೆಂಡ', ಕೈಂತಜೆ ಗೋವಿಂದ ಭಟ್ಟರ 'ಮನೆಯ ಮರ್ಯಾದೆ', ಕಡೆಂಗೋಡ್ಲು ಶಂಕರ ಭಟ್ಟರ 'ಅದ್ದಿಟ್ಟು' ಮತ್ತು 'ದೊಡ್ಡಣ್ಣ',ಜಿ.ಟಿ.ನಾರಾಯಣ ರಾವ್ ಅವರ 'ನ್ಯಾಯ ಪರಿಪಾಲನೆ' ಕತೆಗಳಲ್ಲಿ ಶೋಷಣೆಯ ವಿವಿಧ ಮುಖಗಳನ್ನು ಗುರುತಿಸಬಹುದು. ಆಫ್ರಿಕಾದ ಪಿಗ್ಮಿಗಳ ಬಗ್ಗೆ ತರಗತಿಯಲ್ಲಿ ದೊರೆತ ತಿಳುವಳಿಕೆ ಕುಳ್ಳ ಅಚ್ಚುತನ ಪಾಲಿಗೆ ಶಾಲೆಯಲ್ಲಿ ಮುಗಿಯದ ಕೀಟಲೆಯಾದುದರಿಂದ ಅವನಲ್ಲಿ ಕಳ್ಳತನ ಪ್ರತಿಕ್ರಿಯಾತ್ಮಕವಾಗಿ ಬಂದು ಅವನ ಜೀವನ ಛಿದ್ರವಾಯಿತೆನ್ನುವ ಕತೆ ಜಿ. ಶಂಕರ ಭಟ್ಟರು ಬರೆದ 'ಕೆಣಕಿದ ಕೆಂಡ'. ಇಲ್ಲಿ ದೈಹಿಕ ಅಸಹಾಯಕತೆಯಿರುವ ಒಬ್ಬ ವ್ಯಕ್ತಿಯನ್ನು ಸಮಾಜ ಹೇಗೆ ಕಳ್ಳನನ್ನಾಗಿ ಮಾಡುತ್ತದೆ ಎಂಬುದನ್ನು ಕತೆಗಾರರು ವಿಶ್ಲೇಷಿಸಿದ್ದಾರೆ. ಕೈಂತಜೆ ಗೋವಿಂದ ಭಟ್ಟರ 'ಮನೆಯ ಮರ್ಯಾದೆ' ಕತೆಯಲ್ಲಿ ಮದಾಂಧ ಪರಮತೀಯ ರಾಜನೊಬ್ಬನು ಬ್ರಾಹ್ಮಣ ಹುಡುಗಿಯಾದ ರಾಧೆಯ ಸೌಂದರ್ಯಕ್ಕೆ ಮರುಳಾಗಿ ಅವಳನ್ನು ಮದುವೆಯಾಗಲು ಬಯಸಿದಾಗ ಅವಳ ಹೆತ್ತವರು ಅವಳನ್ನು ಸಮಾಧಿ ಮಾಡಿ "ಮನೆಯ ಮರ್ಯಾದೆ ಉಳಿಯಿತು" (ಕೈಂತಜೆ ಗೋವಿಂದ ಭಟ್ಟ; ಕಾಳಿಗೆ ಕಾಣಿಕೆ; ಪುಟ ೪೧)ಎಂದು ಭಾವಿಸುತ್ತಾರೆ. ಪ್ರಭುತ್ವವನ್ನು ಎದುರಿಸಲಾರದೆ ಮನೆಯ ಮರ್ಯಾದೆಯನ್ನು ಕಾಪಾಡುವುದಕ್ಕಾಗಿ ಮಗಳನ್ನೇ ಬಲಿ ಕೊಡುವ ಬ್ರಾಹ್ಮಣ

ದಂಪತಿಗಳ ವರ್ತನೆಯು ಆ ಕಾಲದ ಸಾಮಾಜಿಕ ವ್ಯವಸ್ಥೆಯನ್ನು ಧ್ವನಿಸುತ್ತದೆ. ಈ ಕತೆಯಲ್ಲಿ ಶೋಷಣೆಯನ್ನು ಎದುರಿಸಲಾರದ ಅಸಹಾಯಕ ಚಿತ್ರಣವಿದೆ.

ಕಡೆಂಗೋಡ್ಲು ಶಂಕರ ಭಟ್ಟರ 'ದೊಡ್ಡಣ್ಣ' ಎಂಬುದು ಮಲತಾಯಿಯ ಕ್ರೂರತೆಗೆ ಬಲಿಯಾದ ನಿರಪರಾಧಿ ಮಲಮಗನೊಬ್ಬನ ಹೃದಯ ವಿದ್ರಾವಕ ಕತೆ. ಮಲಮಗನಿಗೆ ವಿಷ ತಿನ್ನಿಸಿ ಕೊಂದ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ತನ್ನ ಸ್ವಂತ ಮಗನನ್ನೇ ಕಳೆದುಕೊಳ್ಳುವಲ್ಲಿ ಕತೆ ಕೊನೆಯಾಗುತ್ತದೆ. ಮಗುವಿನ ದೃಷ್ಟಿಯಿಂದ ಕತೆಯ ಘಟನೆಗಳಿಗೆ ಇಲ್ಲಿ ಒತ್ತು ಬೀಳುವುದರಿಂದ, ಎಳೆಯ ಮನೋಹರನ ಬದುಕಿಗೆ ಅವನ ದೊಡ್ಡಣ್ಣ ಶ್ಯಾಮ ಎಂಥ ಜೀವಾಳವಾದ ನಂಟು ಆಗಿದ್ದ ಎಂಬುದು ಕತೆಯುದ್ದಕ್ಕೂ ವ್ಯಕ್ತವಾಗುತ್ತದೆ. ಮನೋಹರನ ದೃಷ್ಟಿಯಲ್ಲಿ ದೊಡ್ಡಣ್ಣ ಏನಾಗಿದ್ದ, ಹೇಗೆ ಅವನ ಬಾಳನ್ನು ತುಂಬಿದ್ದ ಎಂಬುದು ಕತೆಯ ಪ್ರಾರಂಭದಲ್ಲೇ ಕಂಡು ಬರುತ್ತದೆ. ಮನೋಹರನ ಬದುಕು ಏನಾಯಿತು ಎಂಬುದೇ ಕತೆಯಲ್ಲಿ ಮುಖ್ಯವಾದ ಅಂಶವಾಗಿದೆ. ಕತೆಯು ಮಲತಾಯಿ-ಮಲಮಗರ ದೌರ್ಜನ್ಯವನ್ನು ಹೇಳುವುದಕ್ಕಿಂತ, ಸವತಿ ಮಕ್ಕಳಾದ ಅಣ್ಣ-ತಮ್ಮಂದಿರ ನಡುವಣ ಪ್ರೇಮ ಭಾಂದವ್ಯವನ್ನು ಬಣ್ಣಿಸುತ್ತದೆ. ವಾತ್ಸಲ್ಯ, ಎಳೆಯರ ಪ್ರೀತಿ, ಮಲತಾಯಿ ಮಾತ್ಸರ್ಯ, ಭೀಮರಾಯರ ಅಸಹಾಯಕತೆಗಳು ಕತೆಯಲ್ಲಿ ಸ್ಪಷ್ಟವಾಗಿ ಬಿಚ್ಚಿಕೊಂಡಿವೆ. ಕೌಟುಂಬಿಕ ವೈಪರೀತ್ಯಗಳ ನೈಜ ಚಿತ್ರಣವನ್ನು ಕೊಡುವುದು ಕತೆಗಾರರ ಉದ್ದೇಶ. ಅದರೊಂದಿಗೆ ಸಮಾಜದ ನ್ಯಾಯಾನ್ಯಾಯಗಳ ಪ್ರಶ್ನೆ ಜೀವಂತವಾಗಿದೆ. "ಕನ್ನಡ ಸಣ್ಣ ಕಥೆಯ ಯುಗದ ಪ್ರಾರಂಭದಲ್ಲೇ ನೀತಿ ಬೋಧಕ ಮಾತ್ರ ಆಗಬಹುದಾಗಿದ್ದ ಕಥೆ ಮಗುವಿನ ಅನುಭವದ ನಿರೂಪಣೆಯಾಯಿತು ಎಂದು ಇದು ಗಮನಾರ್ಹ ಕಥೆಯಾಗಿದೆ." (ಎ.ವಿ.ನಾವಡ (ಸಂ.); ವಾಙ್ಮಯ ತಪಸ್ವಿ; ೧೯೭೭; ಪುಟ ೨೫೮) ಎಂಬುದು ಪ್ರೊ. ಎಲ್.ಎಸ್.ಶೇಷಗಿರಿರಾಯರ ಅಭಿಪ್ರಾಯ.

ಕಡೆಂಗೋಡ್ಲು ಶಂಕರ ಭಟ್ಟರ 'ಅದ್ದಿಟ್ಟು' ಗಯ್ಯಾಳಿ ಅಕ್ಕನ ಮಾತಿಗೆ ಕಿವಿಯೊಡ್ಡಿ, ನಿರಪರಾಧಿನಿಯಾದ ಬಸುರಿ ಪತ್ನಿಯನ್ನು ನಿಷ್ಕಾರುಣವಾಗಿ ಹೊಡೆದು ಗೋಳಾಡಿಸಿ ಕೊಂದ ಭಂಡನೊಬ್ಬನ ಕ್ರೂರ ಕರ್ಮದ ಕತೆ. ಪಾರ್ತಮ್ಮನ ಮಗಳು ಶಾರದೆಯನ್ನು ಚಿಕ್ಕ ವಯಸ್ಸಿನಲ್ಲೆ ಪುರೋಹಿತ ನಾರಾಯಣ ಶಾಸ್ತ್ರಿಗೆ ಮದುವೆ ಮಾಡಿರುತ್ತಾರೆ. ಹಾಗೆ ಮಾಡಿದುದು ಕೋಗಿಲೆ ಮರಿಯನ್ನು ಕಾಗೆಗಳ ವಂಶಕ್ಕೆ ಧಾರೆಯೆರದು ಕೊಟ್ಟಂತಾಗಿದೆ.

ಬದುಕಿನಲ್ಲಿ ಒಂದು ದಿನ ನೆಮ್ಮದಿಯನ್ನು ಶಾರದೆ ಕಂಡಿರುವುದಿಲ್ಲ. ಅತ್ತಿಗೆ ರುದ್ರಮ್ಮನ ಅಂಕೆಯಲ್ಲಿರುವ ನಾರಾಯಣ ಹೆಂಡತಿಯನ್ನು ಹಿಂಸಿಸುತ್ತಲೇ ಇರುತ್ತಾನೆ. ಒಮ್ಮೆ ಬಸುರಿ ಶಾರದೆ ಅದ್ದಿಟ್ಟು ಎಂಬ ಭಕ್ಷ್ಯವನ್ನು ತಿನ್ನ ಬಯಸಿ ಅದನ್ನು ತಯಾರಿಸುವುದರಲ್ಲಿದ್ದಾಗ ರುದ್ರಮ್ಮ ಅದೇ ನೆವದಿಂದ ಶಾರದೆಯ ತಾಯಿಯ ಇದಿರಿಗೇ ನಂಜು ಕಾರುತ್ತಾಳೆ. ಅಷ್ಟರಲ್ಲಿ ನಾರಾಯಣ ಧಾವಿಸಿ ಬಂದು ಹೆಂಡತಿಯನ್ನು ಅಮಾನವೀಯವಾಗಿ ಹೊಡೆದು, ಒದೆದು ಕೆಡುವುತ್ತಾನೆ. ಆಗಲೆ ಪ್ರಸವವೇದನೆ ತೊಡಗಿ ಶಾರದೆ ಅಸು ನೀಗುತ್ತಾಳೆ.

ವೈದಿಕ ಸಂಸ್ಕೃತಿ, ಸಂಪ್ರದಾಯಗಳ ಸೂಕ್ಷ್ಮಗಳನ್ನು ದಾಖಲಿಸುವ ಗುಣ 'ಅದ್ದಿಟ್ಟು' ಕತೆಗಿದೆ. ಕಜ್ಜಾಯ ಬೇಯಿಸಿ ಕೊನೆಗೆ ಉಳಿಯುವ ಹಿಟ್ಟುಗಳಿಂದ ಮಾಡುವ ಭಕ್ಷ್ಯ 'ಅದ್ದಿಟ್ಟು'. ಶಾರದೆಯ ಬದುಕಾದರೂ ಎಲ್ಲ ಭಾವ, ಎಲ್ಲ ಸುಖ, ಎಲ್ಲ ಆಸೆಗಳ ಮಿಕ್ಕಿ ಹೋದ ಹಿಟ್ಟಿನಿಂದ ಮಾಡಿದ ಬದುಕೇ ಆಗಿದೆ. 'ಅದ್ದು', 'ಹಿಟ್ಟು' ಎಂಬ ಮಾತು ಕೂಡ ಶಾರದೆಯ ಬದುಕು ನೋವಿನ ಹೊಂಡದಲ್ಲಿ ಅದ್ದಿ ಹೋದುದನ್ನು ಗಂಡ–ನಾದಿನಿಯರ ಕೈಗೆ ಸಿಲುಕಿ ಆಕೆ ಹಿಟ್ಟಾಗಿ ಹೋದುದನ್ನು ಸೂಚಿಸುತ್ತದೆ.

ಸಮಾಜದ ಅನ್ಯಾಯಗಳ ವಿರುದ್ಧ ಸಿಡಿದೇಳುವ ಗುಣ ಈ ಕಥೆಯಲ್ಲಿ ಕಂಡುಬರುತ್ತದೆ. ಸ್ತ್ರಿಯರಿಗೆ ಸ್ವಾತಂತ್ರ್ಯವಿಲ್ಲವೆಂಬ ಸಂಪ್ರದಾಯಕ್ಕೆ ಶರಣಾಗಿ, ಹೆಣ್ಣು ಕೇವಲ ಗಂಡಿನ ಜೀತದಾಳೆಂಬ ಅಭಿಪ್ರಾಯವನ್ನು ನಿರಾಕರಿಸಿ, ಅವಳೂ ಮನುಷ್ಯ ಜೀವಿ ಎಂಬ ತತ್ತ್ವದ ಪ್ರತಿಪಾದನೆ ಈ ಕತೆಯ ಉದ್ದೇಶಗಳಲ್ಲೊಂದು. "ಹೆಣ್ಣಾಗಿ ಹುಟ್ಟುವುದು ಕಷ್ಟ, ಪಾರ್ವತಮ್ಮ, ಕೈ ಹಿಡಿದ ಗಂಡ ಒಳ್ಳೆಯವನಾದರೆ ಆಯಿತು, ಇಲ್ಲವಾದರೆ ನೋಡು ಅಗಸನ ಕತ್ತೆಗಿಂತಲೂ ಕಡೆ ಅಕೆಯ ಅವಸ್ಥೆ"___ (ಪಾದೆಕಲ್ಲು ವಿಷ್ಣು ಭಟ್ಟ ಮತ್ತು ಇತರರು (ಸಂ.); ಕಡೆಂಗೋಡ್ಲು ಶಂಕರ ಭಟ್ಟ ಸಮಗ್ರ ಕಥಾಸಂಪುಟ; ೨೦೦೪; ಪಟ ೩೨) ಎಂಬ ತುಂಗಮ್ಮನ ಮಾತಿನಲ್ಲಿ ಕತೆಯ ಆಶಯವಿದೆ. ಮಗಳ ನೋವಿನ ಕತೆಯನ್ನು ಹೆಣ್ಣು ಹೆತ್ತ ತಾಯಿಯ ಬಾಯಿಯಿಂದಲೇ ಹೇಳಿಸಿದ್ದಾರೆ. ಹೆಣ್ಣಿನ ಕಣ್ಣೀರ ಬಾಳಿನ ಬಗೆಗೆ ಅನುಕಂಪವನ್ನು ಬೇಡುವ ಈ ಕತೆ ಶಂಕರ ಭಟ್ಟರ ಉತ್ತಮ ಕತೆಗಳಲ್ಲಿ ಒಂದು. ಕೈ ಹಿಡಿದ ಗಂಡ ನಾರಾಯಣನ ಪಾಶವೀ ಮನೋಭಾವದಿಂದ, ತುಂಬು ಗರ್ಭಿಣಿಯಾಗಿದ್ದಾಗ ಹೊಡೆತ ತಿಂದು ಹೆತ್ತಬ್ಬೆಯ ಕಣ್ಣೆದುರೇ ಪ್ರಾಣ ಬಿಡುವ

ಶಾರದೆಯ ದುರಂತವನ್ನು ಕಡೆಂಗೋಡ್ಲು ಶಂಕರ ಭಟ್ಟರು ಅನುಕಂಪಕ್ಕಿಂತ ಹೆಚ್ಚು ಆಧುನಿಕರೂ ತಮ್ಮ ಕೌಟುಂಬಿಕ ಸಾಮರಸ್ಯದ ಬಗೆಗೆ ಮತ್ತೆ ಮತ್ತೆ ಚಿಂತಿಸುವಂತೆ ಮಾಡಿದ್ದಾರೆ. "ನಾಲ್ಕೈದು ದಶಕಗಳ ಹಿಂದೆಯೆ ಮೂಡಿಬಂದ ಈ ಬರಹಗಳಲ್ಲಿನ ಆಧುನಿಕ ದೃಷ್ಟಿಕೋನ, ಸಾರ್ವಕಾಲಿಕ ಆಕರ್ಷಣೆ ಲೇಖಕರ ಸ್ಪಂದನ ಪೂರಿತ ಸಾಹಿತ್ಯಿಕ ಜೀವನದ ಫಲಿತಾಂಶ" (ಉದ್ಯಾವರ ಮಾಧವ ಆಚಾರ್ಯ; ಸಾಹಿತ್ಯ ಸ್ಪಂದನ; ೨೦೦೧; ಪುಟ ೩೪) ಎಂಬುದು ಉದ್ಯಾವರ ಮಾಧವ ಆಚಾರ್ಯರ ಅಭಿಪ್ರಾಯ.

ಜಿ.ಟಿ. ನಾರಾಯಣ ರಾವ್ ಅವರು ಬರೆದ 'ನ್ಯಾಯ ಪರಿಪಾಲನೆ' ಕತೆಯಲ್ಲಿ ಶೋಷಣೆಗೆ ಒಳಗಾದ ಅಕ್ಕಬ್ಬೆಗೆ ಕೊಡಗಿನ ರಾಜ ಲಿಂಗರಾಜನು ನ್ಯಾಯ ಒದಗಿಸಿದ ಪ್ರಸಂಗದ ಚಿತ್ರಣವಿದೆ. ಕೊಡಗಿನ ರಾಜ ಲಿಂಗರಾಜನು ದಕ್ಷಿಣ ಕನ್ನಡ ಜಿಲ್ಲೆಯ ಸಾಮಂತರಾಜ್ಯವನ್ನು ಶತ್ರುರಹಿತವನ್ನಾಗಿ ಮಾಡಲು ಕುಟ್ಟಪ್ಪನನ್ನು ದಕ್ಷಿಣ ಕನ್ನಡ ಜಿಲ್ಲೆಯ ನಾಯಕನ್ನಾಗಿ ನೇಮಿಸಿದನು. ಅದೇ ಸಂದರ್ಭದಲ್ಲಿ ಉಗ್ಗಪ್ಪ ಶೆಟ್ಟಿ ಎಂಬವನು ರಾಜದ್ರೋಹದ ಪತ್ರಗಳನ್ನು ಬರೆದಿದ್ದಾನೆ ಎಂಬ ಕಾರಣದಿಂದ ಅವನನ್ನು ಬಂಧಿಸಿ ಕಾರಾಗೃಹದಲ್ಲಿ ಇರಿಸಿದನು. ನ್ಯಾಯ ಕೇಳಲು ಬಂದ ಉಗ್ಗಪ್ಪ ಶೆಟ್ಟಿಯ ಪತ್ನಿಗೆ ನಿನ್ನ ಶೀಲವನ್ನು ಒಪ್ಪಿಸಿದರೆ ಗಂಡನನ್ನು ಬಿಡುಗಡೆ ಮಾಡುವುದಾಗಿ ಹೇಳುತ್ತಾನೆ. ಆದರೆ ಅವಳು ತನ್ನ ಶೀಲವನ್ನು ಒಪ್ಪಿಸುವ ಹೊತ್ತಿಗೆ ಜೈಲಿನಲ್ಲಿ ಉಗ್ಗಪ್ಪ ಶೆಟ್ಟಿಯ ಕೊಲೆಯಾಗಿರುತ್ತದೆ. ಇದರಿಂದ ನೊಂದ ಅಕ್ಕಬ್ಬೆ ಕೊಡಗಿನ ರಾಜ ಲಿಂಗರಾಜನಲ್ಲಿ ನ್ಯಾಯವನ್ನು ಬೇಡುತ್ತಾಳೆ. ಅಕ್ಕಬ್ಬೆಯ ಅಹವಾಲನ್ನು ವಿಚಾರಿಸಿದ ರಾಜ ಕುಟ್ಟಪ್ಪನನ್ನು ಬರಮಾಡಿ, ವಿಚಾರಿಸಿ ಮಹಿಳೆಗಾದ ಅನ್ಯಾಯಕ್ಕೆ ಪರಿಹಾರ ರೂಪವಾಗಿ ಅಕ್ಕಬ್ಬೆಯೊಂದಿಗೆ ಕುಟ್ಟಪ್ಪನ ವಿವಾಹವನ್ನು ನೆರವೇರಿಸುತ್ತಾನೆ. ಅದೇ ಸಂದರ್ಭದಲ್ಲಿ "ಇಂದಿನಿಂದ ನಿನ್ನ ಅಮಳೈಶ್ವರ್ಯಕ್ಕೂ ನಿನ್ನ ಸ್ಥಿರಚರ ಸೊತ್ತುಗಳಿಗೂ ಇವಳೇ ಉತ್ತರಾಧಿಕಾರಿಣಿ" (ಜಿ.ಟಿ.ನಾರಾಯಣರಾವ್; ಕೊಡಗಿನ ಸುಮಗಳು; ೧೯೯೩; ಪುಟ ೧೨೭) ಎಂಬುದಾಗಿ ಹೇಳಿದ ಅರಸನ ಪತ್ರಕ್ಕೆ ಕುಟ್ಟಪ್ಪನ ಸಹಿಯನ್ನು ಹಾಕಿಸುತ್ತಾನೆ. ಕೊನೆಯಲ್ಲಿ ಕುಟ್ಟಪ್ಪನನ್ನು ಕೊಲ್ಲುವಂತೆ ಸೇವಕರಿಗೆ ಆಜ್ಞಾಪಿಸುತ್ತಾನೆ. ಹೀಗೆ ಶೋಷಣೆಗೆ ಒಳಗಾದ ಮಹಿಳೆಗೆ ನ್ಯಾಯವನ್ನು ಒದಗಿಸುವ ರಾಜನ ಚಿತ್ರಣವನ್ನು ನೀಡುವ ಮೂಲಕ ಲೇಖಕರು ಆ ಕಾಲದಲ್ಲಿ ನಡೆಯುತ್ತಿದ್ದ ಅನ್ಯಾಯಗಳ ಮೇಲೆ ಬೆಳಕು ಚೆಲ್ಲಿದ್ದಾರೆ.

ಕಡೆಂಗೋಡ್ಲು ಶಂಕರ ಭಟ್ಟರ 'ಒಂದುನಾಟಕ' ಮತ್ತು 'ಹಣೆಯಲ್ಲಿ ಬರೆದುದು' ಸ್ತ್ರೀ ಸ್ವಾತಂತ್ರ್ಯ, ಸ್ತ್ರೀ ವಿದ್ಯಾಭ್ಯಾಸಗಳಿಗೆ ಸಮಾಜದಲ್ಲಿ ಮನ್ನಣೆ ದೊರೆಯಲು ಆರಂಭವಾಗುತ್ತಿದ್ದ ಕಾಲದ ಕತೆಗಳಾಗಿವೆ. ಶ್ರೀಮಂತಿಕೆಯ ನೆಂಟಸ್ತಿಕೆಯನ್ನು ಬಯಸುವ ತಂದೆ, ಅದನ್ನೊಲ್ಲದೆ, ತಂದೆಯೊಂದಿಗೆ ಹಿತಸಂಬಂಧವಿಲ್ಲದ ವ್ಯಕ್ತಿಯ ಮಗನೊಂದಿಗೆ ಸಲುಗೆ ಬೆಳೆಸಿ ಕಾಲೇಜಿನ ನಾಟಕದಲ್ಲಿ ಪಾತ್ರವಹಿಸುವ ಹೆಣ್ಣು, ತಂದೆ-ಮಗಳ ಮನಸ್ತಾಪ, ಕಾಲೇಜಿನ ಪ್ರಿನ್ಸಿಪಾಲರ ಮಧ್ಯಸ್ಥಿಕೆ, ಕೊನೆಗೆ ಮಗಳ ಮನಸ್ಸಿನ ಇಚ್ಛೆಯಂತೆ ಅವಳ ಇನಿಯನೊಂದಿಗೆ ವಿವಾಹ ಇದು ಕಡೆಂಗೋಡ್ಲು ಶಂಕರ ಭಟ್ಟರು ಬರೆದ 'ಒಂದು ನಾಟಕ' ಕತೆಯ ವಸ್ತು.

ಜನಾರ್ದನಯ್ಯ ಮಗಳನ್ನು ಕಾಲೇಜಿಗೆ ಕಳುಹಿಸುವಷ್ಟು ಮುಂದುವರಿಯವನು. ಆದರೆ ಮಗಳು ಪುರುಷನೊಂದಿಗೆ ನಾಟಕದಲ್ಲಿ ಭಾಗವಹಿಸುವುದಕ್ಕೆ ಅವನ ಒಪ್ಪಿಗೆಯಿಲ್ಲ. ಶಾಲಾ ನಾಟಕಾಭಿನಯದ ದಿನವೇ ಮಗಳು ಪ್ರಭಾವತಿಯ ವಧೂಪರೀಕ್ಷೆಗೆ ಶ್ರೀಮಂತರು ಬರುವುದೆಂದು ಗೊತ್ತಿದ್ದರೂ ತಂದೆಯ ಒಪ್ಪಿಗೆಯಿಲ್ಲದೆಯೇ ಪ್ರಭಾವತಿ ನಾಟಕದಲ್ಲಿ ಭಾಗವಹಿಸಿದಳು. ಕೊನೆಗೆ ನಾಟಕದಲ್ಲಿ ನಾಯಕ ಪಾತ್ರ ಮಾಡಿದವನು ಪರಪುರುಷನಲ್ಲ; ದೂರದ ಸಂಬಂಧಿ ಪ್ರಭಾಕರನೆಂದು ಜನಾರ್ದನಯ್ಯನಿಗೆ ತಿಳಿದಾಗ ಪ್ರಭಾಕರ ಪ್ರಭಾವತಿಯರ ವಿವಾಹಕ್ಕೆ ಆತ ಒಪ್ಪುತ್ತಾನೆ. ೧೯೩೫ರಲ್ಲಿ ರಚಿತವಾದ ಈ ಕಥೆ ಆ ಕಾಲದ ಸಾಮಾಜಿಕ ಸ್ಥಿತಿಗತಿಗಳ ದೃಷ್ಟಿಯಿಂದ ಗಮನ ಸೆಳೆಯುತ್ತದೆ. "ಪುರುಷರೊಡನೆ ಸೇರಿ ನಟಿಸುವುದು ಸಮಾಜನೀತಿಗೆ ವಿರುದ್ಧ! (ಪಾದೇಕಲ್ಲು ವಿಷ್ಣುಭಟ್ಟ ಮತ್ತು ಇತರರು (ಸಂ.) ಕಡೆಂಗೋಡ್ಲು ಶಂಕರಭಟ್ಟ ಸಮಗ್ರ ಕಥಾಸಂಪುಟ; ೨೦೦೪; ಪುಟ ೧೯೬) ಎಂಬುದಾಗಿ ಪ್ರಭಾವತಿಯ ತಂದೆ ಜನಾರ್ದನಯ್ಯ ಹೇಳುವ ಮಾತಿನಲ್ಲಿ ಆ ಕಾಲದ ಸಾಮಾಜಿಕ ವ್ಯವಸ್ಥೆ ವ್ಯಕ್ತವಾಗುತ್ತದೆ. ರಂಗಭೂಮಿಯಲ್ಲಿ ಹೆಣ್ಣಿಗೆ ಸಿಗುತ್ತಿದ್ದ ಸ್ಥಾನಮಾನದ ಬಗ್ಗೆ ಸೂಚನೆಯಿದೆ.

ಭಟ್ಟರ 'ಹಣೆಯಲ್ಲಿ ಬರೆದುದು' ತುಂಟ ವೆಂಕಟರಮಣ ಕತೆ ಬರೆದು ನಿಶ್ಚಯವಾಗಿದ್ದ ವಿವಾಹ ಸಂಬಂಧವನ್ನು ಮುರಿದು ಮತ್ತೆ ಯಾವುದೋ ರೀತಿಯಲ್ಲಿ ಊರಿನ ಗಣ್ಯರೊಬ್ಬರ ನೆರವಿನಿಂದ ಅದೇ ಹುಡುಗಿಯನ್ನು ಮದ್ರಾಸಿನಲ್ಲಿ ಮದುವೆಯಾಗುವ ಕಥೆಯಾಗಿದೆ. 'ವಿಧಿ' ಅಥವಾ 'ಹಣೆಯಲ್ಲಿ ಬರೆದುದು' ಎಂಬುದಕ್ಕೆ

ನಮ್ಮ ಪರಂಪರೆಯಲ್ಲಿ ವಿಶಿಷ್ಟ ಅರ್ಥವಿದೆ. ಗ್ರಹಿಸಿದ್ದು ಏನೇ ಆದರೂ ಹಣೆಯಲ್ಲಿ ಬರೆದುದು ತಪ್ಪುವುದಿಲ್ಲವೆಂಬುದಕ್ಕೆ ಉದಾಹರಣೆಯಾಗಿ ಈ ಕಥೆ ರಚಿತವಾಗಿದೆ. ಆಧುನಿಕತೆಯ ಪ್ರಭಾವದಿಂದ ಹೊಸ ಸಾಹಿತ್ಯವನ್ನು ಓದಿದ್ದರಿಂದಲೇ ಸ್ತ್ರೀಯರಿಗೆ ಸ್ವತಂತ್ರ ಚಿಂತನೆಗೆ ಅವಕಾಶಗಳಾದುವುವೆಂಬುದನ್ನು ಕತೆ ನಿರೂಪಿಸುತ್ತದೆ. ವಿದ್ಯಾವಂತಳಾದ ಹುಡುಗಿಯ ಒಪ್ಪಿಗೆಯಿಲ್ಲದೆ ತಂದೆ-ತಾಯಿ ಮದುವೆ ನಿಶ್ಚಯ ಮಾಡಬಾರದು ಎಂಬ ಅಂಶ ಈ ಕತೆಯಲ್ಲಿ ವ್ಯಕ್ತವಾಗಿದೆ. ಹೆಣ್ಣು ಅಭಿಪ್ರಾಯವನ್ನು ಕೇಳಿ ಮದುವೆ ಮಾಡುವ ಪದ್ಧತಿ ಹಿಂದೆ ಇದ್ದಿರಲಿಲ್ಲ. ಆದರೆ ನಿಧಾನವಾಗಿ ಆಕೆಯ ಮನಸ್ಸೊಪ್ಪಿದ ವರನನ್ನೆ ಮದುವೆಯಾಗುವ ವಿಷಯದಲ್ಲಿ ಸಮಾಜದ ಅಭಿಪ್ರಾಯ ರೂಪಿತವಾಗತೊಡಗಿತು. ಈ ಸಾಮಾಜಿಕ ಪರಿವರ್ತನೆಯನ್ನು ಕಡೆಂಗೋಡ್ಲು ಅವರು ತಮ್ಮ ಕತೆಯ ಮೂಲಕ ಅಭಿವ್ಯಕ್ತ ಪಡಿಸಿದ್ದಾರೆ.

ಕಡೆಂಗೋಡ್ಲು ಶಂಕರ ಭಟ್ಟರ 'ದುಡಿಯುವ ಮಕ್ಕಳು' ಸಮಕಾಲದ ಸಾಮಾಜಿಕ ಮೌಲ್ಯಗಳನ್ನು ಒಳಗೊಂಡಿರುವ ಕತೆ. ಒಕ್ಕಲು ಸೋಮಪ್ಪ ಮತ್ತು ಅವನ ದನಿ ತಿಮ್ಮಣ್ಣ ನಾಯಕರ ನಡುವಣ ಘರ್ಷಣೆ ಈ ಕಥೆಯ ವಸ್ತು. ಆಸ್ತಿ ಅಂತಸ್ತುಗಳ ದಬ್ಬಾಳಿಕೆ ಒಂದು ಎಳೆಯ ಜೀವವನ್ನು ಹೇಗೆ ಬಲಿ ತೆಗೆದುಕೊಂಡಿತು ಎಂಬುದರ ಚಿತ್ರಣವಿಲ್ಲಿದೆ. ಆಧುನಿಕತೆ ಸಾಮಾಜಿಕ ಬದುಕನ್ನು ಪ್ರವೇಶಿಸಿದಾಗ ಜಮೀನ್ದಾರಿ ಪದ್ಧತಿಯಲ್ಲಾದ ಸ್ಥಿತ್ಯಂತರಗಳ ಹಿನ್ನೆಲೆಯಿಂದ ರಚಿತವಾದ ಕಥೆಯಿದು. ಒಕ್ಕಲು ಸೋಮಪ್ಪ ತನ್ನ ಮಗನನ್ನು ವಿದ್ಯಾವಂತನನ್ನಾಗಿ ಮಾಡಬೇಕೆಂದು ಯತ್ನಿಸಿದರೂ ಧನಿಯ ಮಗನ ಮಿಥ್ಯಾಪವಾದದ ಕಾರಣದಿಂದ ಅಧ್ಯಾಪಕರಾದ ಶೀನಪ್ಪಯ್ಯನವರ ಶಿಕ್ಷೆಯೇ ಕಾರಣವಾಗಿ ಮಗನು ಮೃತನಾಗುವುದು ಇಲ್ಲಿನ ಕಥಾವಸ್ತು.

ಒಕ್ಕಲಾದವನಿಗೆ ಒಂದು ಕಾಲದಲ್ಲಿ ಸ್ವತಂತ್ರ ಅಸ್ತಿತ್ವ ಇದೆಯೆಂಬ ಕಲ್ಪನೆ ಕೂಡ ಧನಿಗಳಾದವರಿಗೆ ಈ ದೇಶದಲ್ಲಿ ಇದ್ದಿಲ್ಲ. ಭೂಮಸೂದೆ ಕಾನೂನು ಜಾರಿಗೆ ಬರುವ ಮೊದಲಿನ ಕಾಲದ ಜಾತಿ ವ್ಯವಸ್ಥೆ ಇನ್ನೂ ಗಟ್ಟಿಯಾಗಿ ಬೇರೂರಿದ್ದ ಕಾಲ ಘಟ್ಟದಲ್ಲಿ ಧನಿ ಒಕ್ಕಲು ನಡುವಣ ವರ್ಗಭೇದ ಎಂತಹ ವಾತಾವರಣವನ್ನು ಸೃಷ್ಟಿಸಬಹುದೆನ್ನುವುದಕ್ಕೆ ಈ ಕಥೆ ಉದಾಹರಣೆಯಾಗಿದೆ. ಅಕ್ಷರ ಕಲಿಕೆ ಶೋಷಿತರ ಜೀವನದಲ್ಲಿ ತರಬಹುದಾದ ಅರಿವು, ಹೊಸತನ, ಆತ್ಮವಿಶ್ವಾಸಗಳನ್ನು ಕೂಡ ಕತೆ

ಸೂಚಿಸಿದೆ. ವಿದ್ಯಾಭ್ಯಾಸವು ತರುವ ಸ್ವಾತಂತ್ರ್ಯದ ಕಲ್ಪನೆ, ಸ್ವಾಭಿಮಾನದ ಉನ್ನತಿ ಇವೆಲ್ಲವೂ ಜಮೀನ್ದಾರಿ ಪದ್ಧತಿಯ ವಿರುದ್ಧ ಸೋಲುತ್ತದೆ.

ಧನಿ ತಿಮ್ಮಣ್ಣ ನಾಯಕರು ತಮ್ಮ ಅಂತಸ್ತನ್ನು ಮೆರೆಸುವುದಕ್ಕಾಗಿ ಕಟ್ಟಿಸಿದ ಶಾಲೆಯಲ್ಲಿ ಅವರ ಮಗನೇ ಅಪಮಾನಿತನಾಗಬೇಕಾಯಿತು. ಒಕ್ಕಲು ಮಗನೂ ಕಲಿಯುವಂತಾಯಿತು. ಇದಕ್ಕೆ ಪ್ರತೀಕಾರರೂಪದ ಶಿಕ್ಷೆಯಾಗಿ ಒಕ್ಕಲು ಮಗ ಲಿಂಗಪ್ಪ ಬಲಿಯಾದ. ಮೌಲ್ಯಬೋಧಕರಾದ ಉಪಾಧ್ಯಾಯರೇ ಒಂದು ಮುಗ್ಧ ಜೀವದ ಬಲಿಗೆ ಹೇಗೆ ಕಾರಣರಾಗುತ್ತಾರೆ ಎಂಬುದು ಈ ಕತೆಯಲ್ಲಿ ಧ್ವನಿತವಾಗಿದೆ. "ಶೋಷಿತರ ಬದುಕು ಎಂದೂ ಮಣ್ಣಡಿಯಲ್ಲೇ ಎಂಬುದನ್ನು ಭಟ್ಟರು ಸಾಂಕೇತಿಕವಾಗಿ ಚಿತ್ರಿಸಿದ್ದಾರೆ" (ಎನ್.ಎಸ್.ತಾರಾನಾಥ; ಸಮರಸ; ೧೯೯೨; ಪುಟ ೯೨)ಎಂಬುದು ಎನ್.ಎಸ್. ತಾರಾನಾಥರ ಅಭಿಪ್ರಾಯ.

"ಬಾಳೂರು ಗ್ರಾಮದಲ್ಲಿ ಮೊತ್ತ ಮೊದಲಾಗಿ ಚಿಕ್ಕ ಪ್ರಾಥಮಿಕ ಶಾಲೆಯೊಂದನ್ನು ತೆರೆಯಬೇಕೆಂದು ಸರಕಾರದ ಅಪ್ಪಣೆ ಹೊರಟಾಗ ಒಕ್ಕಲು ಸೋಮನ ಮುಖದಲ್ಲಿ ಮೂಡಿಬಂದ ನಗುವನ್ನು ಯಾರೂ ಕಂಡಿರಲಾರರು. ನಗುವ ಅಧಿಕಾರ ಆ ಮುಖಕ್ಕೆ ಎಲ್ಲಿಯದು" (ಪಾದೆಕಲ್ಲು ವಿಷ್ಣುಭಟ್ಟ ಮತ್ತು ಇತರರು(ಸಂ.); ಕಡೆಂಗೋಡ್ಲು ಶಂಕರಭಟ್ಟ ಸಮಗ್ರ ಕಥಾ ಸಂಪುಟ; ೨೦೦೪; ಪುಟ ೨೪೭)ಎಂಬ ಕಥೆಯ ಪ್ರಾರಂಭದ ಸಾಲುಗಳು ಸೋಮಪ್ಪನ ಅಸಹಾಯಕತೆಯನ್ನು ಚಿತ್ರಿಸುತ್ತದೆ. ಕೊನೆಗೆ ಧನಿಯ ಮಗನಿಂದಾಗಿ ಒಕ್ಕಲು ಮಗ ಲಿಂಗಪ್ಪ ಸಾವನ್ನಪ್ಪಿ ಸೋಮಪ್ಪನ ಎದೆಯ ಕನಸು ಪುಡಿಯಾದಾಗಲೂ, ಇದೆಲ್ಲ ಪ್ರಪಂಚದಲ್ಲಿ ಇರುವುದೆ ನಾಳೆ ಕೆಲಸಕ್ಕೆ ಬಾ ಎಂದು ದನಿ ಕರೆದಾಗ ಆ ದುಡಿಮೆಯ ಜೀವಿಯಿಂದ ಬಂದ ಉತ್ತರ "ಹೌದು ಧನಿ! ನಾಳೆಯೇ ಬರುತ್ತೇನೆ; ಸಸಿಗಳನ್ನು ಮಾತ್ರವಲ್ಲ, ಈ ಹಳೆಯ ಮರವನ್ನು – ಈ ಸೋಮಪ್ಪನ ಶರೀರವನ್ನು ನಿಮ್ಮ ನೆಲದಲ್ಲಿಯೇ ನೆಟ್ಟು ಬಿಡುತ್ತೇನೆ ಒಡೆಯಾ" (ಪಾದೆಕಲ್ಲು ವಿಷ್ಣುಭಟ್ಟ ಮತ್ತು ಇತರರು (ಸಂ.); ಕಡೆಂಗೋಡ್ಲು ಶಂಕರಭಟ್ಟ ಸಮಗ್ರ ಕಥಾಸಂಪುಟ; ೨೦೦೪; ೨೮೪). 'ದುಡಿಯುವ ಮಕ್ಕಳು' ಎಂಬ ಕಥಾ ಶೀರ್ಷಿಕೆಯಲ್ಲಿರುವ ವ್ಯಂಗ್ಯಾರ್ಥ, ಸಸಿಯನ್ನು ತಮ್ಮ ತೋಟದಲ್ಲಿ ನೆಡು ಎಂದು ಹೇಳುವ ಮೂಲಕ ಶ್ರಮ ಜೀವಗಳ ದುಡಿಮೆ, ಧನಿಗಳ ದೌರ್ಜನ್ಯವನ್ನು ಭಟ್ಟರು ಚೆನ್ನಾಗಿ ನಿರೂಪಿಸಿದ್ದಾರೆ.

ಕಡೆಂಗೋಡ್ಲು ಶಂಕರ ಭಟ್ಟರ 'ಚೂರಿಯ ಕತೆ' ಹಿಂದೂ ಮುಸ್ಲಿಮರ ಸಂಘರ್ಷವನ್ನು ಕೇಂದ್ರವಾಗಿಟ್ಟುಕೊಂಡು ರಚಿತವಾದ ಕತೆ. ಸಾಮಾಜಿಕ ಸಮಸ್ಯೆಗಳು, ರಾಜಕೀಯ ಗೊಂದಲಗಳು, ಮಾನವೀಯ ಸಂಬಂಧಗಳನ್ನು ಹೇಗೆ ಅನಿರೀಕ್ಷಿತವಾಗಿ ತಿರುವು ಮುರುವು ಮಾಡಬಹುದು ಎಂಬುದನ್ನು ಕತೆ ಸೂಚಿಸುತ್ತದೆ. ಮುಂಬಯಿಯ ಹಡಗುಕಟ್ಟೆಯ ಪ್ರದೇಶದಲ್ಲಿ ಬಾಂಬುಸ್ಫೋಟವಾದುದು ೧೯೪೪ರಲ್ಲಿ. ಹಿಂದೂ ಮುಸ್ಲಿಂರೊಡನೆ ದ್ವೇಷದ ಬೆಂಕಿ ಹೊತ್ತಿಸಿದ ಬ್ರಿಟಿಷ್ ರಾಜಕಾರಣಿಗಳ ಕುಟಿಲನೀತಿ, ಹಳ್ಳಿಯಲ್ಲಿ ಅಣ್ಣತಮ್ಮಂದಿರಂತೆ ಒಡನಾಡುತ್ತಿದ್ದ ಅನ್ಯಧರ್ಮೀಯರಿಬ್ಬರನ್ನು ಹೇಗೆ ದಿಕ್ಕು ತಪ್ಪಿಸಿತು ಎಂಬುದನ್ನು 'ಚೂರಿಯ ಕತೆ' ಮಾರ್ಮಿಕವಾಗಿ ಚಿತ್ರಿಸುತ್ತದೆ.

"ಸಾಹಿತ್ಯವನ್ನು ದೇಶದ ಜೀವನದ ಕಥೆ ಎಂದು ಹೇಳುವುದುಂಟು. ಆ ದೃಷ್ಟಿಯಲ್ಲಿ 'ಚೂರಿಯ ಕಥೆ' ನಮ್ಮ ದೇಶದ ಜೀವನದ ಕಥೆ. ಈ ದೇಶವನ್ನು ಘಟನಾತ್ಮಕವಾಗಿ Secular State ಎಂಬುದಾಗಿ ಘೋಷಿಸುವ ಪೂರ್ವದಲ್ಲೇ ಶಂಕರ ಭಟ್ಟರು 'ಚೂರಿಯ ಕಥೆ'ಯ ಮೂಲಕ ಆ ತತ್ತ್ವವನ್ನು ಬಿತ್ತರಿಸಿದ್ದಾರೆ. ಆದ್ದರಿಂದಲೇ ಈ ಕಥೆಗೆ ಒಂದು ಚಾರಿತ್ರಿಕ ಮಹತ್ತ್ವವಿದೆ." (ಎ.ವಿ.ನಾವಡ (ಸಂ.); ವಾಙ್ಮಯ ತಪಸ್ವಿ; ೧೯೭೭; ಪುಟ ೨೭೧) ಎಂಬುದಾಗಿ ರಾಮಚಂದ್ರ ಉಚ್ಚಿಲರು ಅಭಿಪ್ರಾಯಪಟ್ಟಿದ್ದಾರೆ.

ಕತೆಯಲ್ಲಿ ಬರುವ ಪಾರ್ತಿ ಪಾತುಮ್ಮರ ಪುತ್ರ ಪ್ರೇಮ, ಅಬ್ದುಲ್ಲ ರಾಮಣ್ಣರ ಅಕೃತಕ ಸ್ನೇಹ, ಮುಂಬಯಿಯ ಗದ್ದಲದ ಯಾಂತ್ರಿಕ ಬದುಕು, ಬ್ರಿಟಿಷ್ ರಾಜಕಾರಣಿಗಳು ಬಿತ್ತಿದ ಹಿಂದೂ ಮುಸ್ಲಿಂ ದ್ವೇಷ ಬೆಳೆದ ಬಗೆ ಇಲ್ಲಿದೆ. ಒಬ್ಬರಿಂದ ಒಬ್ಬರು, ಬೇರಾದ, ದೂರಾದ ಜೀವಿಗಳು ಹಳೆಯ ಸ್ನೇಹ-ಪ್ರೀತಿಗಳ ಬಗ್ಗೆ ಹೇಗೆ ತುಡಿಯುತ್ತವೆ ಎಂಬುದನ್ನು ಕತೆಯುದ್ದಕ್ಕೂ ಕಾಣಬಹುದು. ಮಾನವೀಯ ಸಂಬಂಧಗಳಲ್ಲಿ ಧರ್ಮ ಅಸಂಗತವೆಂಬುದನ್ನು ಕತೆಗಾರರು ಚಿತ್ರಿಸಿದ್ದಾರೆ.

"ಇಂದಿಗೂ ನಮ್ಮ ನಾಗರಿಕತೆಗೆ ಸವಾಲಾಗಿರುವ ಮತ, ಧರ್ಮ, ಜಾತಿ ವೈಷಮ್ಯಗಳ ಚೂರಿ ಅಥವಾ ಹಿಂಸೆ ಮಾನವೀಯ ಸಂಬಂಧಗಳನ್ನು ಕೊಚ್ಚಿ ಹಾಕುವ ದುರಂತದ ವಸ್ತು ಚಿಂತನೆಗೆ ಎಡೆಮಾಡಿಕೊಡುವ ಕಥೆ ಕಡೆಂಗೋಡ್ಲು ಅವರ ಚೂರಿಯ ಕಥೆ. ಇದರಲ್ಲೂ ಮತೀಯ ಗಲಭೆಯ ಮಾಧ್ಯಮದ ಮೂಲಕ ಜೀವಂತಿಕೆಯಿಂದ ತುಡಿಯಬೇಕಾದ ಪಾತುಮ್ಮ ಹೆಣವಾಗುವುದು, ರಾಮಣ್ಣ ನಿಷ್ಕ್ರಿಯನಾಗುವುದು, ಆದರೆ

ನಿರ್ಜೀವ ಚೂರಿ ವಿಕೃತ ಜೀವ ತಾಳುವುದು ಕಡೆಂಗೋಡ್ಲು ಅವರ ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆಗೆ ಒಂದು ಸಾಕ್ಷಿ" (ಉದ್ಯಾವರ ಮಾಧವ ಆಚಾರ್ಯ; ಸಾಹಿತ್ಯ ಸ್ಪಂದನ; ೨೦೦೧; ಪುಟ ೩೪) ಎಂಬುದು ಉದ್ಯಾವರ ಮಾಧವ ಆಚಾರ್ಯರ ಅಭಿಪ್ರಾಯ.

ನವೋದಯ ಕವಿಗಳಂತೆ ಸುಧಾರಣಾವಾದದ ಕಾಲದ ಹವ್ಯಕ ಕತೆಗಾರರಾದ ಎಮ್. ಸುಬ್ರಾಯನ್ 'ಕುಟ್ಟಿದೊಣ್ಣೆ', ಜಿ.ಟಿ.ನಾರಾಯಣ ರಾವ್ 'ಸುಬ್ಬಪ್ಪನ ದಯೆ' ಕತೆಗಳು ಗಾಂಧೀಜಿಯವರ ಸಂದೇಶದಿಂದ ಪ್ರೇರಿತರಾಗಿ ಅಸ್ಪೃಶ್ಯತಾ ನಿವಾರಣೆಯ ಕುರಿತ ಬರಹಗಳಾಗಿವೆ. ಎಮ್. ಸುಬ್ರಾಯನ್ ಬರೆದ 'ಕುಟ್ಟಿದೊಣ್ಣೆ' ತುಳು ಸಂಸ್ಕೃತಿಯ ಆಟ ಕುಟ್ಟಿದೊಣ್ಣೆಯನ್ನು ಬಳಸಿ ಶೀನ ಮತ್ತು ಚನಿಯರ ನಡುವಿನ ಜಾತೀಯ ಬಿರುಕು ಮಾಯವಾಗುವುದನ್ನು ಹೇಳುತ್ತದೆ. ಬಾಲ್ಯದಲ್ಲಿ ಆಡುವಾಗ ಇಲ್ಲದ ಜಾತೀಯತೆ ಬೆಳೆದಾಗ ಬಂದರೂ, ಚನಿಯ ಆಟದಲ್ಲಿ ಮಗ್ನನಾದಂತೆ ಆ ಮಾನಸಿಕ ಆತಂಕ ಕಳೆದುಕೊಳ್ಳುತ್ತಾನೆ. ಬೀಳುವ ಚೆನ್ನನನ್ನು ಆಧರಿಸುವ ಮೇಲ್ಜಾತಿ ಶೀನ, ಅವನ ಆದರ್ಶಕ್ಕಾಗಿ ಕತೆಯಲ್ಲಿ ಹೊಗಳಿಕೆಗೊಳಗಾಗುತ್ತಾನೆ. ಎರಡನೆಯ ಮಹಾಯುದ್ಧ ಕಾಲದ ಆಹಾರ ಅಭಾವದ ಸ್ಥಿತಿಗಳು, ಜಾತೀಯತೆ ಮೀರಬೇಕೆನ್ನುವ ಗಾಂಧೀ ಧೋರಣೆಗಳು ಕತೆಯ ಆಳದಲ್ಲಿವೆ. ಜಿ.ಟಿ.ನಾರಾಯಣ ರಾವ್ ಬರೆದ 'ಸುಬ್ಬಪ್ಪನ ದಯೆ' ಕತೆಯಲ್ಲಿ ಕೆಳಜಾತಿಯ ಸುಬ್ಬಪ್ಪ ಕೊಯಂಬುತ್ತೂರಿಗೆ ಹೋಗಿ ನಾಗಸ್ವರವನ್ನು ಕಲಿತ ಚಿತ್ರಣವಿದೆ. ಬಾಲ್ಯದಿಂದಲೇ ವಾಲಗ ನುಡಿಸುವುದರಲ್ಲಿ ಆಸಕ್ತನಾದ ಸುಬ್ಬಪ್ಪ ಸುಬ್ರಹ್ಮಣ್ಯ ಜಾತ್ರೆಯ ಸಂದರ್ಭದಲ್ಲಿ ಕೊಯಂಬುತ್ತೂರಿನವರ ನಾಗಸ್ವರವನನು ಕೇಳಿ ಅದಕ್ಕೆ ಮಾರುಹೋಗಿ ಅವರೊಂದಿಗೆ ಅವರ ಊರಿಗೆ ಹೋಗಿ, ಗುರುಗಳ ಸೇವೆ ಮಾಡಿಕೊಂಡು ನಾಗಸ್ವರ ಕಲಿಯುತ್ತಾನೆ. ಕೊನೆಗೆ ಗುರುಗಳನ್ನು ಮೀರಿದ ಶಿಷ್ಯ ಎಂಬ ಪ್ರಶಂಸೆಗೆ ಪಾತ್ರನಾಗುತ್ತಾನೆ. "ಹೀಗೆ ಐದಾರು ವರ್ಷಗಳು ಸಲ್ಲುವಾಗ ಸುಬ್ಬನು– ನಾಗಸ್ವರ ಸುಬ್ರಹ್ಮಣ್ಯ ಪಿಳ್ಳೆ – ಗುರುವಿನ ವಿದ್ಯೆ, ಪಾಂಡಿತ್ಯಗಳನ್ನು ಸಂಪೂರ್ಣ ಸಂಪಾದಿಸಿ, ತನ್ನ ಪ್ರತಿಭೆಯನ್ನು ಅವಕ್ಕೆ ಎರಕ ಹೊಯ್ದನು. (ಜಿ.ಟಿ.ನಾರಾಯಣ ರಾವ್; ಕೊಡಗಿನ ಸುಮಗಳು; ೧೯೯೩; ಪುಟ೧೮) ಎಂಬ ಮಾತಿನಲ್ಲಿ ಕೆಳಜಾತಿಯ ಸುಬ್ಬಪ್ಪನ ಸಾಧನೆಯ ವಿವರಗಳಿವೆ. ಹೀಗೆ ಸುಬ್ರಾಯನ್ (ಕುಟ್ಟಿದೊಣ್ಣೆ), ಜಿ.ಟಿ.ನಾರಾಯಣರಾವ್ (ಸುಬ್ಬಪ್ಪನ ದಯೆ) ಅವರು

ಅಸ್ಪೃಶ್ಯರನ್ನು ಸಮಾನ ಮಾನವ ಧರ್ಮದಿಂದ ನಡೆಸಿಕೊಳ್ಳಬೇಕಾದ ಅಗತ್ಯವನ್ನು ತಮ್ಮ ಕತೆಗಳಲ್ಲಿ ತೋರಿಸಿದ್ದಾರೆ.

ಸೇಡಿಯಾಪು ಕೃಷ್ಣಭಟ್ಟರು ಬಾಲ್ಯದಲ್ಲಿ ಕೇಳಿದ್ದ ಒಂದು ಪಾಡ್ದನದ ಕತೆಯನ್ನು ಆಧಾರವಾಗಿಟ್ಟುಕೊಂಡು 'ಚೆನ್ನೆಮಣೆ' ಕತೆಯನ್ನು ರಚಿಸಿದ್ದಾರೆ. ಪಾಡ್ದನದ ಕತೆಗೆ ಲೇಖಕರು ತಮ್ಮ ಸಾಮಾಜಿಕ ಸಂದರ್ಭವನ್ನು ಮುಖಾಮುಖಿ ಆಗಿಸಿರುವುದರಿಂದ ಕತೆಗೆ ಅರ್ಥ ಗಹನತೆ ಒದಗಿದೆ ಮತ್ತು ಸಂಕೀರ್ಣತೆ ಬಂದಿದೆ. ಲೇಖಕರು ತಮ್ಮ ಅಣ್ಣನ ಮಗಳೊಂದಿಗೆ ಚೆನ್ನೆ ಆಡುತ್ತಿದ್ದಾಗ ನೆರೆಮನೆಯ ಗೋವಿಂದ ಭಟ್ಟರು ಅಲ್ಲಿಗೆ ಬರುತ್ತಾರೆ. ಚೆನ್ನೆ ಆಡಬಾರದೆಂದು ಬುದ್ಧಿವಾದ ಹೇಳಿ ತಾವು ಕೇಳಿದ್ದ ಒಂದು ದುರಂತ ಕತೆಯನ್ನು ಹೇಳುತ್ತಾರೆ. ರಾಜ ಮನೆತನದ ಚಂದಯ್ಯ ಬಲ್ಲಾಳ ಹೆಂಡತಿಯ ಕಣ್ತಪ್ಪಿಸಿ ಕಾಯಿಗಳನ್ನು ಅದಲು ಬದಲು ಮಾಡಿಟ್ಟ. ಅದು ತಿಳಿದು ನೀಲಮ್ಮ ಸಿಟ್ಟಾಗಿ ತವರು ಮನೆಗೆ ಹೊರಟು ಹೋದಳು. ಅವಳ ಅಣ್ಣ ದಂಡು ಕಟ್ಟಿಕೊಂಡು ಬಂದು ಚಂದಯ್ಯ ಬಲ್ಲಾಳನನ್ನು ಕೊಂದು ಚೆನ್ನಮಣೆ ಕೊಂಡೊಯ್ದು ತಂಗಿಗೆ ಕೊಟ್ಟ. ವಿಧವೆಯಾದ ನೀಲಮ್ಮ ಚೆನ್ನಮಣೆಯೊಂದಿಗೆ ಮೂರು ವರ್ಷ ಕಳೆದು ಸತ್ತಳು. ಅನಂತರ ಅವಳ ಆತ್ಮ ದಿನಕ್ಕೊಮ್ಮೆ ಬಂದು ಆ ಚೆನ್ನೆಮಣೆಯ ಕಾಯಿಗಳನ್ನು ಚಲಿಸುತ್ತಿತ್ತು. ಅವಳ ವಂಶಸ್ಥನಾದ ಅಂಗಡಿಯ ಮುದುಕ ಆ ಕಾರಣಿಕದ ಚೆನ್ನಮಣೆಯನ್ನು ಭಕ್ತಿಯಿಂದ ಪೂಜಿಸಿಕೊಂಡು ಬಂದಿದ್ದ.

ಚೆನ್ನೆಮಣೆ ಜನಪ್ರಿಯವಾದ ಆಟವಾದರೂ ಸೋದರ ಸಂಬಂಧಿಗಳಾಗಲೀ, ದಂಪತಿಗಳಾಗಲೀ ಈ ಆಟವನ್ನು ಆಡುವುದು ವಿಹಿತವಲ್ಲ ಎಂಬ ನಂಬಿಕೆ ಬೆಳೆದು ಬಂದಿದೆ. ಈ ನಂಬಿಕೆಯನ್ನು ಅವಲಂಬಿಸಿ ಚೆನ್ನೆಮಣೆಯ ಕಥೆ ಸಾಗಿದೆ. ನೀಲಯ್ಯ ಬಲ್ಲಾಳ್ತಿ–ಚಂದಯ್ಯ ಬಲ್ಲಾಳರಂತಹ ದಂಪತಿಗಳು ಚೆನ್ನೆಯಾಟ ಆಡಿ ದುರಂತವನ್ನು ತಂದುಕೊಂಡರು ಎಂಬುದು ಕತೆಯ ಮೂಲಭಿತ್ತಿ. "ನೋಡಿ ಮಾಸ್ತರರೇ, ಈ ಚೆನ್ನೆಯೆಂಬುದು ಎಂಥವರನ್ನು ಹೇಗೆ ಮಾಡಿಬಿಟ್ಟಿತು! ಅದಕ್ಕೆ ನೋಡಿ ಈ ಆಟ ಬೇಡವೆಂದು ನಾನು ಹೇಳಿದ್ದು" (ಸೇಡಿಯಾಪು ಕೃಷ್ಣಭಟ್ಟ; ಪಳಮೆಗಳು; ೧೯೫೫; ಪುಟ ೨೧) ಎಂದು ಮಾಸ್ತರರೂ ಅವರಣ್ಣನ ಮಗಳು ಲಲಿತೆಯೂ ಚೆನ್ನೆಯಾಡುವಾಗ ಬಂದ ಗೋವಿಂದ ಭಟ್ಟರು ಹೇಳುವ ಮಾತಿನಲ್ಲಿ ಚೆನ್ನೆಯಾಟದ ಅಮಂಗಳತ್ವದ ಬಗೆಗೆ

ಭಟ್ಟರ ನಿಚ್ಚಳವಾದ ಅಭಿಪ್ರಾಯ ವ್ಯಕ್ತವಾಗುತ್ತದೆ. " ರಕ್ತ ಚಂದನದ ಮಣಿಯಲ್ಲಿ ಆನೆದಂತವನ್ನು ಕೊರೆದು ಕೂರಿಸಿದ ಚಿತ್ರಾವಳಿ; ಚೆನ್ನೆಗುಳಿಗಳ ಒಳಭಾಗಕ್ಕೆ ತೆತ್ತಿಸಿದ ಮುತ್ತಿನ ಚಿಪ್ಪಿನ ಹಾಸುಗಾರಿಕೆ. ಕೆಂಪು ಹವಳದ ಗುಂಡುಗುಂಡಾದ ಚೆನ್ನೆಕಾಯಿಗಳು. ಮಣೆಯ ಮೂಲೆಗಳಲ್ಲಿ ಚಿನ್ನದ ಹೊದಿಕೆಯ ಕೀರ್ತಿಮುಖ; ಕಾಲುಗಳಿಗೆ ಬೆಳ್ಳಿಯ ಮುಚ್ಚಿಗೆ. " (ಸೇಡಿಯಾಪು ಕೃಷ್ಣ ಭಟ್ಟ; ಪಳಮೆಗಳು; ೧೯೫೫; ಪುಟ ೧೯). ಇಂತಹ ವೈಭವಗಳಿಂದ ಕೂಡಿದ 'ಚೆನ್ನಮಣೆ' ಪಾಳೆಗಾರರ ಕೋಟೆ ಕೊತ್ತಲಗಳ ವೈಭವ ಹಾಗೂ ದುರಂತಗಳ ಪ್ರತೀಕವಾಗಿ ನಿಲ್ಲುತ್ತದೆ. 'ಚೆನ್ನೆಮಣೆ'ಯಲ್ಲಿ ಮಾನವ ಸ್ವಭಾವಗಳಾದ ಪ್ರತಿಷ್ಠೆ, ರಾಗ, ದ್ವೇಷ, ಮಿತಿಮೀರಿದ ಸ್ವಾಭಿಮಾನ ಇತ್ಯಾದಿ ಸೂಕ್ಷ್ಮಗಳು ಸಮರ್ಥವಾಗಿ ಚಿತ್ರಣಗೊಂಡಿವೆ.

ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಬರುವ ಹವ್ಯಕ ಕತೆಗಾರರು ತಮ್ಮ ಮೂಲಭೂತ ಸಂವೇದನೆಯ ಅಭಿವ್ಯಕ್ತಿಗಾಗಿ ಕಥೆಗಳನ್ನು ಬರೆದರು. ನವೋದಯದ ಪ್ರೇರಣೆ ಪ್ರಭಾವಕ್ಕೆ ಒಳಗಾಗಿಯೂ ತಮ್ಮತನವನ್ನು ಉಳಿಸಿಕೊಂಡಿದ್ದಾರೆ. ನವೋದಯದ ಆಶಯಗಳಿಗೆ ಸೀಮಿತಗೊಳ್ಳದೆ ಸಮಕಾಲೀನ ಬದುಕಿನ ಸಮಸ್ಯೆಗಳಿಗೆ ಸ್ಪಂದಿಸುವುದರ ಮೂಲಕ ನವೋದಯವನ್ನು ಮೀರಿ ಮುನ್ನಡೆದಿದ್ದಾರೆ. ಹೀಗಾಗಿ ಸಾಮಾಜಿಕ ಕಥೆಗಳಲ್ಲಿ ನಾಯಕ–ನಾಯಕಿ ಪ್ರಧಾನತೆಯಾಗಲೀ, ಪ್ರೇಮಕಾಮವಾಗಲೀ, ಬ್ರಾಹ್ಮಣ ಶೂದ್ರತ್ವ ಸಂಘರ್ಷವಾಗಲೀ, ವೈಯಕ್ತಿಕ ಅನ್ವೇಷಣೆಯಾಗಲೀ ಯಾವುದೇ ವೈರುಧ್ಯವಾಗಲೀ ತಾನೇ ತಾನಾಗಿ ವಿಜೃಂಭಿಸಿಲ್ಲ. ಒಂದು ಬಗೆಯ ಚಿಕಿತ್ಸಕ ದೃಷ್ಟಿ, ವಿಶ್ಲೇಷಣೆಯ ಮನೋಧರ್ಮ, ಬರಹಗಾರರಲ್ಲಿ ಕಾಣಿಸಿಕೊಂಡು ಅದೇ ಸಾಹಿತ್ಯ ಸೃಷ್ಟಿಯ ಪ್ರಮುಖ ಆಶಯವಾದದ್ದನ್ನು ಈ ಕತೆಗಳು ಹೇಳುತ್ತವೆ. ಈ ಸಮಾಜದ ಒಳಗೇ ಏಳುತ್ತಿದ್ದ ಬದಲಾವಣೆಯ ಅಲೆಗಳನ್ನೂ, ನುಡಿಗಳನ್ನೂ ಕೂಡಾ ಈ ಕತೆಗಳು ದಾಖಲಿಸಿರುವುದು ಬಹಳ ಮುಖ್ಯವಾದ ಅಂಶವಾಗಿದೆ. ಸಮಾಜದ ಪ್ರತಿಬಿಂಬ ನೀಡುವುದರ ಜೊತೆಗೆ ಸಮಾಜದ ಕುಂದುಕೊರತೆಗಳನ್ನು ಎತ್ತಿತೋರುವ ಮತ್ತು ಸಮಾಜವನ್ನು ತಿದ್ದುವ ಹಾಗೂ ಎಚ್ಚರಿಸುವ ಕೆಲಸವನ್ನು ಹವ್ಯಕ ಕತೆಗಾರರು ಸಾಹಿತ್ಯದ ಮೂಲಕ ಮಾಡಲೆತ್ನಿಸಿದರು ಎಂಬುದು ಗಮನ ಸೆಳೆಯುವ ಅಂಶವಾಗಿದೆ.

## ೫.೨ ಆಧುನಿಕ ಶಿಕ್ಷಣಕ್ಕೆ ಪ್ರತಿಕ್ರಿಯೆ

ಶಿಕ್ಷಣ ಮನುಷ್ಯನ ಅರಿವನ್ನು ವಿಸ್ತರಿಸುತ್ತದೆ. ವ್ಯಕ್ತಿತ್ವದ ವಿಕಾಸಕ್ಕೆ ಕಾರಣವಾಗಬಲ್ಲದು. ಶಿಕ್ಷಣವನ್ನು ಪಡೆದ ವ್ಯಕ್ತಿಯ ಸ್ಥಾನಮಾನಗಳು ಗಣನೀಯ ರೀತಿಯಲ್ಲಿ ಪಲ್ಲಟಗೊಳ್ಳುತ್ತವೆ. ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ವರ್ಣ ವ್ಯವಸ್ಥೆಯು ಒಂದೊಂದು ಬಗೆಯ ಶಿಕ್ಷಣವನ್ನು ಒಂದೊಂದು ವರ್ಣಗಳಿಗೆ ನಿಗದಿ ಮಾಡಿತ್ತು. ಅದರಲ್ಲಿ ಮೊದಲ ವರ್ಣದವರಿಗೆ ಮಾತ್ರ ಅಕ್ಷರ ಅಭ್ಯಾಸ ಕಡ್ಡಾಯವಾಗಿತ್ತು. ಆದರೆ ೧೮೩೫ರಲ್ಲಿ ಮೆಕಾಲೆ ಶಿಫಾರಸುಗಳನ್ನು ಅನುಸರಿಸಿ ಇಂಗ್ಲಿಷ್ ಶಿಕ್ಷಣ ಜಾರಿಗೆ ಬರುವುದರೊಂದಿಗೆ ಇಡೀ ವ್ಯವಸ್ಥೆಯಲ್ಲಿ ಮಹತ್ತ್ವಪೂರ್ಣ ಬದಲಾವಣೆ ಸಂಭವಿಸಿತು. ಸಮಾಜದಲ್ಲಿ ಕೆಲವರಿಗೆ ಮಾತ್ರ ಸೀಮಿತವಾಗಿದ್ದ ಶಿಕ್ಷಣ ಎಲ್ಲರಿಗೂ ತೆರೆದುಕೊಂಡಿತು. ಇದು ಇಡಿಯಾಗಿ ಸಾಮಾಜಿಕ ರಚನೆಯಲ್ಲಿ ಬದಲಾವಣೆಯನ್ನು ತಂದಿತು.

ಇಂಗ್ಲಿಷ್ ವಿದ್ಯಾಭ್ಯಾಸ ದೇಶೀಯ ನೆಲೆಯಲ್ಲಿ ಬಲವಾಗಿ ಬೇರೂರುತ್ತಿದ್ದಂತೆ, ಜನರ ಜೀವನ ಕ್ರಮದಲ್ಲಿ ಸಾಕಷ್ಟು ಮಾರ್ಪಾಡುಗಳಾದವು. ಈ ಬಗೆಯ ವಿದ್ಯಾಭ್ಯಾಸಕ್ಕೆ ಸಮಾಜದಲ್ಲಿ ಮಿಶ್ರ ಪ್ರತಿಕ್ರಿಯೆ ಕಂಡು ಬಂತು. ಹೊಸ ಶಿಕ್ಷಣ ಪದ್ಧತಿಯನ್ನು ಆಹ್ವಾನಿಸುತ್ತ, ಅನುಮಾನಿಸುವ, ತಿರಸ್ಕರಿಸುವ ಮನೋಧರ್ಮ ಭಾರತೀಯ ಸಮುದಾಯಯದಲ್ಲಿ ಕಂಡುಬಂತು. ಇಂತಹ ಪರಿಸ್ಥಿತಿಯ ನಡುವೆಯೂ ಕೆಲವರು ಇಂಗ್ಲಿಷ್ ಶಿಕ್ಷಣವನ್ನು ಕಲಿತರು. ಇದು ದೇಶೀಯ ಜನರಲ್ಲಿ ಗುಮಾಸ್ತರು ಎಂಬ ಹೊಸ ವರ್ಗದ ಸೃಷ್ಟಿಗೆ ಕಾರಣವಾಯಿತು. ಅದು ಬ್ರಿಟಿಷ್ ಆಡಳಿತ ವ್ಯವಸ್ಥೆ ತನ್ನ ಅನುಕೂಲಕ್ಕಾಗಿ ಕೈಗೊಂಡ ಕ್ರಮ ಎಂಬುದನ್ನು ಗುರುತಿಸುತ್ತ, ಇಂಥ ಗುಮಾಸ್ತಗಿರಿಯ ನಿಷ್ಕ್ರಿಯತೆಯನ್ನು ಎತ್ತಿತೋರಿಸುವ ಕತೆಗಳು ಬಂದಿವೆ. ಪರ ಮತ್ತು ವಿರೋಧದ ಪ್ರತಿಕ್ರಿಯೆ ಮೂಡಿದಂತೆಯೇ ಆಧುನಿಕ ವಿದ್ಯಾಭ್ಯಾಸ ತನ್ನದೇ ಆದ ಒಳಿತು ಮತ್ತು ಹಾನಿಕರ ಪರಿಣಾಮವನ್ನೂ ಬೀರತೊಡಗಿತು ಎಂಬುದನ್ನು ಸಮಾಜದ ಬೇರೆ ಬೇರೆ ವರ್ಗಗಳ ಜನರು ಗುರುತಿಸತೊಡಗಿದರು. ಹವ್ಯಕ ಕತೆಗಾರರಾದ ಕಂಜರ್ಪಣೆ ತಿಮ್ಮಪ್ಪಯ್ಯ 'ಪತಿದೇವರು', ಜಿ.ಟಿ.ನಾರಾಯಣ ರಾವ್ 'ಮುನಿದು ಪೊಡವಿ ನುಂಗುವಡೆ' ಮತ್ತು ಚಿಂತಾಮಣಿ ಕೊಡ್ಲೆಕೆರೆ 'ಸ್ಥಿತ್ಯಂತರ' ಕತೆಗಳಲ್ಲಿ ಆಧುನಿಕ ಇಂಗ್ಲೀಷ್ ಶಿಕ್ಷಣಕ್ಕೆ ಭಿನ್ನಭಿನ್ನ ಪ್ರತಿಕ್ರಿಯೆಗಳು ವ್ಯಕ್ತವಾಗಿರುವುದನ್ನು ನೋಡಬಹುದು.

ಕಂಜರ್ಪಣೆ ತಿಮ್ಮಪ್ಪಯ್ಯನವರು ಬರೆದ 'ಪತಿದೇವರು' ಕತೆಯಲ್ಲಿ ನಿರೂಪಕಿ ವೈದಿಕ ಮನೆತನದಲ್ಲಿ ಜನಿಸಿದರೂ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಪಡೆದ ವಿವರಗಳಿವೆ. "ತಂದೆಯವರು ಬರೇ ಗೊಡ್ಡು ವೈದಿಕರಲ್ಲ. ವ್ಯವಹಾರ ಜ್ಞಾನವನ್ನು ತಿಳಿದವರು. ಅವರಿಗೆ ಇಂಗ್ಲಿಷ್ ವಿದ್ಯೆಯ ಮೇಲೆ ಒಳ್ಳೆಯ ಅಭಿಮಾನವಿತ್ತು. ಅಂತೆಯೇ ನನ್ನನ್ನು ಹತ್ತಿರದ ಶಾಲೆಗೆ ಸೇರಿಸಿದ್ದರು." (ಕಂಜರ್ಪಣೆ ತಿಮ್ಮಪ್ಪಯ್ಯ; ಗುರುವನ ಶೋಕ ಮತ್ತು ಇತರ ಕತೆಗಳು; ೧೯೮೨; ಪುಟ ೬೯). ಮುಂದೆ ನಿರೂಪಕಿಯ ವಿವಾಹವು ವೈದಿಕ ವೃತ್ತಿಯ ರಾಮಶಾಸ್ತ್ರಿಗಳ ಪುತ್ರನೊಡನೆ ನಡೆಯುತ್ತದೆ. ಅವನೂ ಕೂಡ ಇಂಟರ್ ಮೀಡಿಯೆಟ್ ಕಲಿತಿದ್ದನು. "ನಮ್ಮ ಜಾತಿಯಲ್ಲಿ ಈಗ ಇಂಗ್ಲಿಷ್ ವಿದ್ಯೆಯನ್ನು ಕಲಿತವರು ವಿರಳವೆನ್ನಬಹುದು". (ಕಂಜರ್ಪಣಿ ತಿಮ್ಮಪ್ಪಯ್ಯ; ಗುರುವನಶೋಕ ಮತ್ತು ಇತರ ಕತೆಗಳು; ೧೯೮೨; ಪುಟ ೭೦). ಹೀಗೆ ಆ ಕಾಲದಲ್ಲಿ ಆಧುನಿಕ ಶಿಕ್ಷಣ ಪದ್ಧತಿಯಾದ ಇಂಗ್ಲಿಷ್ ಶಿಕ್ಷಣವನ್ನು ಸಂಪ್ರದಾಯ ಮನೆತನದ ಹವ್ಯಕರೂ ಪಡೆದಿದ್ದರು. ಸಾಂಪ್ರದಾಯಿಕ ವೈದಿಕ ವೃತ್ತಿಯನ್ನು ನಿರಾಕರಿಸಿ ಈ ಸಮುದಾಯ ಆಧುನಿಕ ಶಿಕ್ಷಣದ ಕಡೆಗೆ ಹೊರಳುತ್ತಿರುವ ಸೂಚನೆ ಇಲ್ಲಿದೆ. ಹೀಗೆ ಶಿಕ್ಷಣವನ್ನು ಪಡೆದ ಮೊದಲ ತಲೆಮಾರು ಸಾಮಾಜಿಕ ಮೌಢ್ಯಗಳನ್ನು ತಿರಸ್ಕರಿಸುವಲ್ಲಿ ಮಹತ್ತ್ವದ ಪಾತ್ರವಹಿಸುವುದನ್ನು ನೋಡಬಹುದು. ಕೆಲವರು ಈ ಶಿಕ್ಷಣವನ್ನು ಸರಿಯಾದ ಕ್ರಮದಲ್ಲಿ ಸ್ವೀಕರಿಸದೆ ಅಧಃಪತನ ಹೊಂದಿದ ಚಿತ್ರಗಳೂ ಸಾಹಿತ್ಯದಲ್ಲಿ ದೊರೆಯುತ್ತವೆ.

ಜಿ.ಟಿ.ನಾರಾಯಣ ರಾವ್ ರವರ 'ಮುನಿದು ಪೊಡವಿ ನುಂಗುವಡೆ' ಕತೆಯಲ್ಲಿ ಆಂಗ್ಲ ವಿದ್ಯಾಭ್ಯಾಸವನ್ನು ಮಾಡಲು ಹೋದ ಪೂವಯ್ಯನು ಕಲಿಯದೇ ಹಾಳಾದ ಸನ್ನಿವೇಶದ ಚಿತ್ರಣವಿದೆ. ಕೊಡಗು ರಾಜರಿಂದ ಪೂವಯ್ಯನು ಅಗ್ನಿಕುಂಡವೆಂಬ ಪ್ರದೇಶವನ್ನು ಉಂಬಳಿಯಾಗಿ ಪಡೆದು, ಅದನ್ನು ಕೃಷಿಭೂಮಿಯಾಗಿ ಸಮೃದ್ಧಗೊಳಿಸುತ್ತಾನೆ. ಮುಂದೆ ಪೂವಯ್ಯನ ನಾಲ್ಕನೆಯ ತಲೆಮಾರಿನವನಾದ ಗಣಪತಿಯು ಅಗ್ನಿಕುಂಡವನ್ನು ನೋಡಿಕೊಳ್ಳುತ್ತಿರುತ್ತಾನೆ. ಅದೇ ಸಂದರ್ಭದಲ್ಲಿ ನವಸಂಸ್ಕೃತಿಯ ಪ್ರತೀಕವಾದ ಆಂಗ್ಲ ವಿದ್ಯಾಭ್ಯಾಸ ಕೊಡಗಿನಲ್ಲಿಯೂ ಆರಂಭವಾಯಿತು. "ಫರಂಗಿಯವರ ಜರ್ಜು, ಪೋಷಾಕು, ದೌಲತ್ ಇವನ್ನೆಲ್ಲ ನೋಡಿ ಗಣಪತಿಗೆ ತನ್ನ ಮಗನಿಗೂ ಆ ವಿದ್ಯಾಭ್ಯಾಸ ಕೊಡಿಸಬೇಕೆಂದು ಆಸೆಯಾಯಿತು. ಹೀಗಾಗಿ ಮಡಿಕೇರಿಯಲ್ಲಿ ಮರಿಧನಿಗೆ ಒಂದು ಚಿಕ್ಕ ಬಂಗ್ಲೆಯನ್ನು ಕಟ್ಟಿಸಿಕೊಟ್ಟು ಅಲ್ಲಿ ಊಟ

ವಸತಿಗೆ ಏರ್ಪಾಡು ಮಾಡಿಸಿ ಶಾಲೆಗೆ ಕಳುಹಿಸಲು ಪ್ರಾರಂಭಿಸಿದನು" (ಜಿ.ಟಿ.ನಾರಾಯಣ ರಾವ್; ಕೊಡಗಿನ ಸುಮಗಳು; ೧೯೯೩; ಪುಟ ೪೧). ಆಂಗ್ಲ ವಿದ್ಯಾಭ್ಯಾಸದ ಮೋಹಕ್ಕೆ ಒಳಗಾದ ಗಣಪತಿಯು ತನ್ನ ಮಗನಾದ ಪೂವಯ್ಯನನ್ನು ಇಂಗ್ಲಿಷ್ ಶಾಲೆಗೆ ದಾಖಲಿಸಿದನು. ಆದರೆ "ಮರಿಧನಿಯು ಮಾತ್ರ ಆಂಗ್ಲ ವಿದ್ಯೆಗಿಂತಲೂ ಅದರ ದುರ್ಗಂಧವನ್ನು ಹೆಚ್ಚು ಸೇವಿಸುತ್ತಿದದಂತೆ ತೋರಿತು" (ಜಿ.ಟಿ.ನಾರಾಯಣ ರಾವ್; ಕೊಡಗಿನ ಸುಮಗಳು; ೧೯೯೨; ಪಟ ೪೨) ಎಂಬ ಮಾತಿನಲ್ಲಿ ಆಧುನಿಕ ಶಿಕ್ಷಣದ ಕುಂದುಕೊರತೆಗಳ ಚಿತ್ರಣವಿದೆ. ಮುಂದೆ ತನ್ನ ತಂದೆಯ ನಿಧನಾನಂತರ ಆಂಗ್ಲಭಾಷಾ ಪಾರಂಗತನಾಗಲು ಬೆಂಗಳೂರಿಗೆ ಹೋದರೂ ಅಲ್ಲಿಯೂ ವಿದ್ಯಾಭ್ಯಾಸವನ್ನು ಪೂರ್ತಿಗೊಳಿಸಲಾಗಲಿಲ್ಲ. ಹೀಗೆ ವಿದೇಶಿಯ ಭಾಷೆ ಹಾಗೂ ಶಿಕ್ಷಣದ ಕ್ರಮವನ್ನು ಸ್ವೀಕರಿಸುವಲ್ಲಿ ಆದ ಗೊಂದಲಗಳನ್ನು ಕತೆಗಾರರು ಗುರುತಿಸಿದ್ದಾರೆ.

ಚಿಂತಾಮಣಿ ಕೊಡ್ಲೆಕೆರೆಯವರ 'ಸ್ಥಿತ್ಯಂತರ', ಕತೆಯಲ್ಲಿ ಗಣಪಜ್ಜನು ಇಂಗ್ಲಿಷ್ ಶಿಕ್ಷಣ ಕ್ರಮವನ್ನು ಹೀಯಾಳಿಸುವ ಅಂಶ ಕಂಡುಬರುತ್ತದೆ. ವಿದ್ಯಾರ್ಥಿಗಳು ಇಂಗ್ಲಿಷ್ ಪಾಠ ಓದುತ್ತಿರುವ ಸಂದರ್ಭದಲ್ಲಿ. "ಓಹೋ ನೀವು ಈಗ ಐದನೇ ಕ್ಲಾಸಿನ ವಿದ್ಯಾರ್ಥಿಗಳು. ಭಲೇ ಭಲೇ, ಹಾಗಾದರೆ ನಿಮಗೆ ಈ ಹಾಡು ಗೊತ್ತೋ? ಎಂದು ನಮ್ಮನ್ನು ಅಣಕಿಸಿ 'ಟ್ವಿಂಕಲ್ ಟ್ವಿಂಕಲ್ ಲಿಟಲ್ ಸ್ಟಾರ್' ಹೇಳಿಯಾನು. ಇಡೀ ಪದ್ಯ ಹೇಳುತ್ತಿದ್ದಾನೆ ಎಂಬ ಭಾವನೆ ಮೂಡೀತು. ಗಣಪಜ್ಜನ ಅಭಿನಯ ನೋಡಿದರೆ ಜಪ್ಪಯ್ಯ ಎಂದರೂ ಆ ಪದ್ಯದ ಕೊನೆಯ ಸಾಲು ಅವನಿಗೆ ನೆನಪಾಗದು ಅದಕ್ಕೆ ಅವನೇ ಕನ್ನಡದಲ್ಲಿ ಒಂದು ಸಾಲನ್ನು ಸೇರಿಸುವನು: 'ಮಾವಿನಹಣ್ಣಿ ಕೊಯ್ ಕೊಯ್ ಕೊಯ್!' ಅವನ ಭಾವಭಂಗಿ ನೆನೆದರೆ ಇಡೀ ಶಿಕ್ಷಣ ಕ್ರಮವನ್ನು ಅವನು ಹೀಯಾಳಿಸುತ್ತಿದ್ದನೆ? ಅನಿಸುತ್ತದೆ" (ಚಿಂತಾಮಣಿ ಕೊಡ್ಲೆಕರೆ; ಬಭ್ರುವಾಹನ ಎಂಬ ಇರುವೆ; ೧೯೯೯; ಪುಟ ೬೬) ಎಂಬ ಲೇಖಕರ ಮಾತಿನಲ್ಲಿ ಈ ಶಿಕ್ಷಣ ಪದ್ಧತಿಯ ವಿಡಂಬನೆಯಿದೆ.

ಒಟ್ಟಿನಲ್ಲಿ ಹವ್ಯಕರು ಬರೆದ ಕತೆಗಳಲ್ಲಿ ಆಧುನೀಕರಣಕ್ಕೆ ಆ ಕಾಲದ ಸಮಾಜದ ಪ್ರತಿಕ್ರಿಯೆ ವಿಭಿನ್ನ ರೀತಿಗಳಲ್ಲಿ ವ್ಯಕ್ತವಾಗಿದೆ. ಹೊಸ ಸವಲತ್ತುಗಳು ಬದುಕಿಗೆ ಹೆಚ್ಚು ಅನುಕೂಲಕರವಾಗಿದ್ದಾಗ ಹೆಚ್ಚಿನ ಸಂಘರ್ಷವಿಲ್ಲದೆ ಅವನ್ನು ಸ್ವೀಕರಿಸಿದ

ಮನಃಸ್ಥಿತಿಯನ್ನು ಕೊಡುವ ಕತೆಗಳು ದೊರೆಯುತ್ತದೆ. ಅಂತೆಯೇ ಅದನ್ನು ವಿರೋಧಿಸುವ, ವ್ಯಂಗ್ಯವಾಡುವ ಕತೆಗಳೂ ಕಂಡುಬರುತ್ತವೆ.

## ೫.೩ ವಿಧವಾ ಸಮಸ್ಯೆಯ ನಿರೂಪಣೆ

ವೈಧವ್ಯದ ಆಚರಣೆ ಹಿಂದೂ ಧರ್ಮದಲ್ಲಿ ಮಹಿಳೆಯ ಬಾಳಿನ ದುರಂತಗಳಲ್ಲಿ ಒಂದು. ಅದು ಆಕೆಯನ್ನು ಜೀವಂತ ಸುಡುವುದಕ್ಕೆ ಸಮಾನವಾಗಿದೆ. ಹೆಣ್ಣಿ ಬಾಲ್ಯ, ಯೌವನ ಮತ್ತು ವೃದ್ಧಾಪ್ಯಗಳಲ್ಲಿ ಕ್ರಮವಾಗಿ ತಂದೆ, ಗಂಡ ಹಾಗೂ ಮಗನ ರಕ್ಷಣೆಯಲ್ಲೇ ಇರಬೇಕೆಂದು ಶಾಸ್ತ್ರಕಾರರು ವಿಧಿಸುವ ಮೂಲಕ ಹಿಂದೂ ಧರ್ಮದಲ್ಲಿ ಹೆಣ್ಣಿಗೆ ಪರಾವಲಂಬಿ ಸ್ಥಿತಿಯನ್ನು ರೂಪಿಸಿದ್ದರು. ಅದು 'ನಾರಿಧರ್ಮ', 'ಸತೀಧರ್ಮ' ಎಂಬ ಹೆಸರಿನಲ್ಲಿ ವ್ಯವಸ್ಥಿತವಾಗಿ, ಆಕೆಯ ಮೇಲೆ ಬೌದ್ಧಿಕ ಹಿಡಿತವನ್ನು ಇರಿಸಿಕೊಂಡಿದೆ. ಹೀಗಾಗಿ ವೈಧವ್ಯದ ಸಂದರ್ಭದಲ್ಲಿ ಆಕೆಯ ಎಲ್ಲ ಹಕ್ಕುಗಳನ್ನು ಕಿತ್ತುಕೊಂಡು ಆಕೆಯನ್ನು ಇನ್ನಷ್ಟು ಅನಾಕರ್ಷಗೊಳಿಸುವ ಮತ್ತು ಅತಂತ್ರಗೊಳಿಸುವ ಕ್ರಿಯೆಯು ಮುಂದುವರಿದುಕೊಂಡು ಬಂದಿದೆ. ಕಾಲಾಂತರದಲ್ಲಿ ಮತ್ತೆ ಅದು ಆಧುನಿಕ ಯುವ ಪೀಳಿಗೆಯ ಚಿಂತನ ಕ್ರಮದಿಂದ ಒಡೆದು ಕಾಣುವಂತಾದುದು ಗಮನಾರ್ಹ. ಆದರೆ ಇದೇ ಸಂದರ್ಭದಲ್ಲಿ ಈ ಬಗೆಯ ಅನಿಷ್ಟ ಪದ್ಧತಿಯನ್ನು ವಿರೋಧಿಸುವ ಆಧುನಿಕ ಮನೋಧರ್ಮದವರು ಇದ್ದುದು ಗಮನಾರ್ಹವಾಗಿದೆ. ವಿಧವೆಯರನ್ನು ಸಮಾಜದಲ್ಲಿ ಹೀನಾಯವಾಗಿ ಕಾಣಿಸುವುದು ಒಂದು ಪರಿಯಾದರೆ, ಆಕೆಯನ್ನು ವಿರೂಪಗೊಳಿಸುವ ಕ್ರಿಯೆ ಇನ್ನೊಂದು ಬಗೆಯದು. ಬಳೆ ಒಡೆದು, ಕುಂಕುಮ ಅಳಿಸಿ, ಒಳ್ಳೆಯ ಉಡುಪು, ಹೂವನ್ನು ಧರಿಸಲು ನಿಷೇಧಿಸುವುದಲ್ಲದೆ, ಕೇಶ ಮುಂಡನವನ್ನು ಮಾಡಿ, ಅನ್ಯರಿರಲಿ ತನ್ನನ್ನೇ ತಾನು ನೋಡಿಕೊಳ್ಳಲು ಅಸಾಧ್ಯವಾಗಿಸುವಂತೆ ಮಾಡುವ ಧಾರ್ಮಿಕ ಆಚರಣೆಗಳು ವಿಧವೆಯ ಬದುಕನ್ನು ಅತಂತ್ರಗೊಳಿಸಿದ ಚಿತ್ರಗಳು ಕತೆಗಳಲ್ಲಿ ಸಿಗುತ್ತವೆ. ನಂಬಿಕೆ ಮತ್ತು ಆಚರಣೆಗಳೆರಡೂ ವಿಧವೆಯ ವ್ಯಕ್ತಿತ್ವವನ್ನು ಕಮರಿಸಿ ಬಿಡುತ್ತವೆ. ತನ್ಮೂಲಕ ಕೌಟುಂಬಿಕ ಬದುಕಿನಲ್ಲಿ ಮಾನಸಿಕ ಹಿಂಸೆಯನ್ನು ತಾಳಲಾರದ ಸ್ಥಿತಿಯ ಚಿತ್ರಣವನ್ನು ನವೋದಯ ಕತೆಗಾರರ ಕತೆಗಳು ನೀಡುತ್ತವೆ.

ಹವ್ಯಕ ಕತೆಗಾರರಾದ ಪ.ಸು.ಭಟ್ಟ 'ಕರಿಯಭಾಯೆ' ಮತ್ತು ಪ.ರಾಮಕೃಷ್ಣ ಶಾಸ್ತ್ರಿ 'ಕಲ್ಲುಕರಗಿತು' ಕತೆಗಳಲ್ಲಿ ವಿಧವೆಯರ ಅಸಹಾಯಕ ಸ್ಥಿತಿಯನ್ನು ಚಿತ್ರಿಸಿದ್ದಾರೆ.

ಪ.ಸು.ಭಟ್ಟರು ಬರೆದ 'ಕರಿಯ ಛಾಯೆ' ಕತೆಯು ಗೌರಿ ಎಂಬ ಮುಗ್ಧ ವಿಧವೆ ಹೆಂಗಸು ಹೇಗೆ ಸಮಾಜದ ಕ್ರೂರ ಮುಷ್ಟಿಗೆ ಸಿಲುಕಿ ನಲುಗುತ್ತಾಳೆ ಎಂಬ ವಿವರಗಳನ್ನು ನೀಡುತ್ತದೆ. ಬಾಲ್ಯದಲ್ಲಿಯೇ ವೈಧವ್ಯಕ್ಕೆ ಗುರಿಯಾದ ಗೌರಿ ಅಣ್ಣನ ಮನೆಯಲ್ಲಿ ಆಶ್ರಯವನ್ನು ಪಡೆಯುತ್ತಾಳೆ. ಒಂದು ಸಂದರ್ಭದಲ್ಲಿ ಗೋವಿಂದ ಭಾಗವತರ ಜೊತೆ ಗೋಕರ್ಣಕ್ಕೆ ತೆರಳಿದಾಗ ಅವರು ಅವಳನ್ನು ಬಲಾತ್ಕಾರ ಮಾಡಿದ ಪರಿಣಾಮ ಗೌರಿ ಗರ್ಭವತಿಯಾಗುತ್ತಾಳೆ. ಇದರಿಂದ ಗೌರಿಯ ಮೇಲೆ ಬಸುರಿಯಾದ ವಿಧವೆ ಎಂಬ ಅಪವಾದ ಬರುತ್ತದೆ. ಸಾಮಾಜಿಕ ಕಟ್ಟಳೆಗೆ ಒಳಗಾದ ಗೌರಿ ಮಠದಲ್ಲಿ ಐದು ವರ್ಷಗಳ ಕಾಲ ನರಕಯಾತನೆಯನ್ನು ಅನುಭವಿಸುತ್ತಾಳೆ. ಮಠದಿಂದ ಬಿಡುಗಡೆ ಬಯಸಿದ ಗೌರಿ "ಪಾರು ಪತ್ಯೆಗಾರರೇ, ನಿಮ್ಮ ದಮ್ಮಯ್ಯ ಹೇಗಾದರೂ ಈ ನರಕದಿಂದ ಪಾರು ಮಾಡಿ ಅದಕ್ಕೆ ನೀವು ಏನು ಹೇಳಿದರೂ ತಯಾರು" (ಪ.ಸು.ಭಟ್ಟ; ಹಕ್ಕಿನ ಹೋರಾಟ; ೧೯೪೪; ಪುಟ ೧೭) ಎಂಬುದಾಗಿ ಅವರಲ್ಲಿ ಬೇಡಿಕೊಳ್ಳುತ್ತಾಳೆ. ಇದೇ ಅವಕಾಶವನ್ನು ಉಪಯೋಗಿಸಿಕೊಂಡ ಪಾರುಪತ್ಯೆಗಾರರು ಅಸಹಾಯಕ ಗೌರಿಯನ್ನು ತಮ್ಮ ಕಾಮತೃಷೆಗಾಗಿ ಬಳಸಿಕೊಳ್ಳುತ್ತಾರೆ. "ವಿಧವೆ ಬಸುರಿಯಾದರೆ, ಸ್ವಾಮಿಗಳು ಹೇಳಿದಷ್ಟು ವರುಷ ಮನೆಯವರಾರ ಸಂಪರ್ಕವೂ ಇಲ್ಲದೆ ಮಠದಲ್ಲಿ ದುಡಿಯಬೇಕು. ಅಂದರೆ ಅನಂತರ ಅವಳು ಶುದ್ಧಳಾದಂತೆ, ಆದರೆ ಗಂಡಸಿಗೆ ಹಾಗಲ್ಲ. ಸ್ವಾಮಿಗಳವರ ಪಾದತೀರ್ಥ ಕುಡಿದುಬಿಟ್ಟರೆ ಪರಿಶುದ್ಧನಾದ" (ಪ.ಸು.ಭಟ್ಟ; ಹಕ್ಕಿನ ಹೋರಾಟ; ೧೯೪೪; ಪಟ ೧೩). ಮೇಲಿನ ಮಾತಿನಲ್ಲಿ ಐವತ್ತರ ದಶಕದಲ್ಲಿ ಹವ್ಯಕ ಸಮಾಜ ವಿಧವೆಯನ್ನು ನಡೆಸಿಕೊಳ್ಳುತ್ತಿದ್ದ ಚಿತ್ರವಿದೆ, ಹಾಗೆಯೇ ಮಠಗಳ ಸೋಗಲಾಡಿತನವೂ ದಾಖಲಾಗಿದೆ. "ಅದೇ ಧರ್ಮದ ಹೆಸರಿನಲ್ಲಿ ಸುರಿಸಬೇಕು ರಕ್ತವನ್ನು. ಮಠದಲ್ಲಿ ದುಡಿಸಿ ರಕ್ತವನ್ನೇ ಕರಗಿಸುತ್ತಿದ್ದಾರೆ. ಧರ್ಮ! ಧರ್ಮದ ಹೆಸರಿನಲ್ಲಿ ಎಂತಹ ಅನ್ಯಾಯ ನಡೆಯುತ್ತಿದೆ! ಧರ್ಮಕ್ಕೆ ತನ್ನಂತ ನಿರ್ಜೀವಿ ಹೆಂಗಸಿನ ರಕ್ತಬೇಕೇ ಧರ್ಮಕ್ಕಾಗಿ ಸಾಯಬೇಕೆ? ಧರ್ಮ, ದೇವರು ಎಲ್ಲ ಭಾವನೆ, ಕೇವಲ ಸ್ವಾರ್ಥಕ್ಕಾಗಿ ಇಂದಿದರ ಉಪಯೋಗ, ಧರ್ಮದ ಗೋರಿಯಾಗುತ್ತಿದೆ" (ಪ.ಸು.ಭಟ್ಟ; ಹಕ್ಕಿನ ಹೋರಾಟ; ೧೯೯೮; ಪುಟ೧೯) ಎಂಬ ಗೌರಿಯ ಮಾತುಗಳಲ್ಲಿ ಧರ್ಮದ ವಿಡಂಬನೆಯ ಜೊತೆಗೆ, ಸಮಾಜವನ್ನು ಎದುರಿಸಲಾರದೆ, ಮನಸ್ಸಿನಲ್ಲೇ ಆಕ್ರೋಶವನ್ನು ವ್ಯಕ್ತಪಡಿಸುವ ಚಿತ್ರಣವಿದೆ.

ಪ. ರಾಮಕೃಷ್ಣ ಶಾಸ್ತ್ರಿಯವರ 'ಕಲ್ಲು ಕರಗಿತು' ಕತೆಯಲ್ಲಿ ವಿಧವೆಯಾದ ನಿರೂಪಕನ ಅಕ್ಕನ ಅಸಹಾಯಕ ಸ್ಥಿತಿಯ ಚಿತ್ರಣವಿದೆ. ಉಪಾಧ್ಯಾಯನಾಗಿದ್ದ ನಿರೂಪಕನ ಭಾವ ತೀರಿಹೋದಾಗ ವಿಧವೆಯಾದ ಅಕ್ಕನನ್ನು ತನ್ನ ಮನೆಗೆ ಕರೆತರುತ್ತಾನೆ. ದಿನಕಳೆದಂತೆ ಅಕ್ಕನ ಮಗ ರಘುವಿನ ತುಂಟಾಟವನ್ನು ಸಹಿಸಲಾರದ ನಿರೂಪಕ ಅವನನ್ನು ಶಿಕ್ಷಿಸುತ್ತಾನೆ. ಇದರಿಂದ ಬೇಸರಗೊಂಡ ಅಕ್ಕ ತನ್ನ ಮಗನೊಂದಿಗೆ ಮನೆ ಬಿಟ್ಟು ತೆರಳುತ್ತಾಳೆ. "ಆ ವೇದನಾಪೂರ್ಣ ನೀಲಿ ಕಣ್ಣಿಗಳು ನನ್ನನ್ನು ನೋಡಿ 'ನಾವು ನಿರ್ಗತಿಕರು' ಎಂದು ಸಾರಿದುವು" (ಪ.ರಾಮಕೃಷ್ಣ ಶಾಸ್ತ್ರಿ; ಬದುಕು; ೧೯೮೨; ಪುಟ ೧೦) ಎಂಬ ಮಾತಿನಲ್ಲಿ ವಿಧವಾ ಸಮಸ್ಯೆಗೆ ಬಂಧುಬಳಗದವರು ರಕ್ಷಣೆ ನೀಡದಿದ್ದರೆ ಸಂಭವಿಸಬಹುದಾದ ವಿಪತ್ತಿನ ಸೂಚನೆಯಿದೆ.

ಹವ್ಯಕ ಮಹಿಳಾ ಕತೆಗಾರ್ತಿಯರಾದ ಕೊಡಗಿನ ಗೌರಮ್ಮ, ದೇವಾಂಗನಾ ಶಾಸ್ತ್ರಿ, ಲೀಲಾ ಮಣ್ಣಾಲ, ಮನೋರಮಾ ಎಂ.ಭಟ್. ಗಂಗಾ ಪಾದೇಕಲ್ ಮುಂತಾದವರು ತಮ್ಮ ಸಮಾಜದಲ್ಲಿ ಬೇರು ಬಿಟ್ಟಿರುವ ವೈಧವ್ಯದ ಸಮಸ್ಯೆ ಮತ್ತು ಅವರು ಅನುಭವಿಸುವ ಅಪಮಾನ–ದುರ್ಗತಿಗಳ ಚಿತ್ರವನ್ನು ವಾಸ್ತವದ ಹಿನ್ನೆಲೆಯಲ್ಲಿ ಚಿತ್ರಿಸಿದ್ದಾರೆ. ಸ್ತ್ರೀ ಸಮಸ್ಯೆಯ ಬಗೆಗೆ ಲೇಖಕಿಯರ ಸಂವೇದನೆಯನ್ನು ಪ್ರತ್ಯೇಕವಾಗಿ ವಿವರಿಸಿದೆ. ಹವ್ಯಕರು ಬರೆದ ವಿಧವಾ ಸಮಸ್ಯೆಗೆ ಸಂಬಂಧಿಸಿದ ಕತೆಗಳಲ್ಲಿ ಮುಖ್ಯವಾಗಿ ಆಕೆ ವೈಧವ್ಯದಿಂದಾಗಿ ಎದುರಿಸುವ ದೈಹಿಕ ಮತ್ತು ಮಾನಸಿಕ ಸಮಸ್ಯೆಗಳನ್ನು ವಿಶ್ಲೇಷಿಸಿದ್ದಾರೆ.

ಉತ್ತರ ಕನ್ನಡದ ಸಾಮಾಜಿಕ ಪರಿಸರದಲ್ಲಿ ವಿಧವಾ ಸಮಸ್ಯೆಯ ಬಗೆಗೆ ತೀವ್ರ ಸ್ವರೂಪದ ಪ್ರತಿಭಟನೆ, ಪ್ರತಿಕ್ರಿಯೆಗಳು ಕಂಡು ಬಂದಿವೆ. ೧೯೨೦–೧೯೩೦ರ ಸಮಯದಲ್ಲಿ ಉತ್ತರ ಕನ್ನಡದ ಪರಿಸರದಲ್ಲಿ ಅಂಕದಾಸ ಗಣಪತಿ ಭಟ್ಟ ಮತ್ತು ಮಾಂಕಾಳಮ್ಮ ಮಾಡಿದ ಹೋರಾಟ ಗಣನೀಯವಾದುದು. ವಿಧುರ– ವಿಧವೆಯನ್ನು ಮದುವೆಯಾಗುವುದರ ಮೂಲಕ ಸಂಪ್ರದಾಯಸ್ಥ ವ್ಯವಸ್ಥೆಯ ಒಳಗೆ ತಲ್ಲಣಗಳನ್ನು ಸೃಷ್ಟಿಸಿದ ಘಟನೆಯಿದು. ಇದು ನಾಟಕ (ಅರಣ್ಯರೋದನ), ಕಾದಂಬರಿ ಪ್ರಕಾರಗಳಲ್ಲಿ ಈ ಪ್ರತಿಭಟನೆಯ ಎಳೆಗಳು ಸೂಕ್ಷ್ಮವಾಗಿ ಕಾಣಿಸಿಕೊಂಡಿದ್ದು ಸಣ್ಣಕತೆಗಳಲ್ಲಿ ಇದು ಅಷ್ಟಾಗಿ ಕಾಣಿಸದೇ ಇರುವುದು ಕುತೂಹಲದ ಸಂಗತಿ.

# ಅಧ್ಯಾಯ – ೬

## ಹವ್ಯಕ ಪ್ರಗತಿಶೀಲ ಕತೆಗಾರರು (೧೯೪೦ ರಿಂದ ೧೯೫೦ರ ವರೆಗೆ)

ಪ್ರಗತಿಶೀಲ ಸಾಹಿತ್ಯವೆಂದರೆ ಪ್ರಗತಿಯೇ ಗುಣವಾಗಿರುವ ಸಾಹಿತ್ಯ ಎಂದರ್ಥ. ಈ ಸಾಹಿತ್ಯದ ಸ್ವರೂಪ ಸಾಮಾಜಿಕವಾದದ್ದು. 'ಪ್ರಗತಿ' ಎಂದರೆ ಇರುವ ಸ್ಥಿತಿಯನ್ನು ತೊರೆಯುವುದಲ್ಲ. ಅದರ ಬದಲು ಇರುವ ಸ್ಥಿತಿಯನ್ನು ಸುಂದರಗೊಳಿಸುವುದು, ಹೀಗೆ ಸುಂದರಗೊಳಿಸಲು ಕ್ರಿಯಾಶೀಲತೆಯ ಅಗತ್ಯವಿದೆ. ನಿಜವಾಗಿ ಪ್ರಗತಿಶೀಲತೆಯು ಸಮಾಜಾಭಿಮುಖತೆಯನ್ನು ಒಳಗೊಂಡಿರುವುದು ಈ ಅರ್ಥದಲ್ಲಿ ಹಾಗೂ ಹಳೆಯ ಮತ್ತು ಹೊಸದರ ನಡುವಿನ ಸಂಘರ್ಷದಲ್ಲಿ ಪ್ರಗತಿಯ ಪರಿಕಲ್ಪನೆಯು ಸಾಧ್ಯವಾಗುತ್ತದೆ.

ಮಾರ್ಕ್ಸ್‌ವಾದದ ಹಿನ್ನೆಲೆಯಲ್ಲಿ ಕಾಣಿಸಿ ಬಂದ 'ಪ್ರಗತಿಶೀಲತೆ' ಕನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಂಡ ಮೊದಲ ವಾದವೆನ್ನಬಹುದು. ಮಾರ್ಕ್ಸ್, ಲೆನಿನ್ನರ ವೈಚಾರಿಕ ಚಿಂತನೆಗಳು ರಶಿಯಾದ ಸಾಹಿತ್ಯದಲ್ಲಿ ಸಾಕಷ್ಟು ಬದಲಾವಣೆಯನ್ನು ತಂದಿತು. ನಂತರದ ದಿನಗಳಲ್ಲಿ, ಈ ಚಿಂತನೆಗಳು 'ಮುಲ್ಕರಾಜ್ ಆನಂದ', 'ಕೆ.ಅಬ್ಬಾಸ್' ರಂಥವರ ಮೂಲಕ ಭಾರತೀಯ ಸಾಹಿತ್ಯ ಲೋಕವನ್ನು ಪ್ರವೇಶಿಸಿತು. ಅದು ಮೊಟ್ಟ ಮೊದಲು ಹಿಂದಿ ಸಾಹಿತ್ಯದಲ್ಲಿ ಪ್ರಗತಿವಾದಕ್ಕೆ ಎಡೆಕೊಟ್ಟಿತು. ಅಲ್ಲಿಂದ ಉಳಿದ ಸಾಹಿತ್ಯಗಳಿಗೂ ಹರಿದು ಬಂದಿತು. ೧೯೩೬ರಲ್ಲಿ ಪ್ರಗತಿಶೀಲ ಲೇಖಕರ ಸಂಘ ಸ್ಥಾಪನೆಯಾಯಿತು. ಇದೇ ಸಮಯದಲ್ಲಿ ಪ್ಯಾರಿಸ್ನಲ್ಲಿ (World Congress Of Writers for the Defence Of Culture ) ನಡೆಯಿತು.

ಮಾಕ್ಸಿಂ ಗಾರ್ಕಿ, ರೋಮೆರೋಲಾ, ಹೆನ್ರಿ ಬಾರ್ಬುಸೆ ಮುಂತಾದ ಪ್ರಸಿದ್ಧ ಸಾಹಿತಿಗಳು ಭಾಗವಹಿಸಿದ ಈ ಸಮಾವೇಶವು ಪ್ರಪಂಚದ ಸಾಂಸ್ಕೃತಿಕ ಇತಿಹಾಸದಲ್ಲೇ ಕ್ರಾಂತಿಕಾರಕ ಬದಲಾವಣೆಯನ್ನು ತಂದಿತು. ಈ ಸಮಾವೇಶವು ಕನ್ನಡ ಪ್ರಗತಿಶೀಲ ಸಾಹಿತಿಗಳಿಗೆ ಸ್ಫೂರ್ತಿ ತಂದಿತು. ಇದನ್ನು ಕುರಿತು ನಿರಂಜನ ಅವರು "ಭಾರತದ ವಿವಿಧ ಭಾಷೆಗಳಿಗೂ ಹರಡಿ, ಗುರಿ ಧ್ಯೇಯಗಳು ಕೃತಿಯಲ್ಲಿ ಕಂಡು ಬಂದಾಗ ಮಾತ್ರ, ಪ್ರಗತಿಶೀಲ ಲೇಖಕರ ಚಳುವಳಿಯೊಂದು ಪ್ರಭಾವಶಾಲಿಯಾದ ಶಕ್ತಿಯಾಗುವುದೆಂದು

ನಾವು ಮನಗಂಡೆವು" ( ರಾಘವೇಂದ್ರರಾವ್ ಎಚ್.ಎಸ್; ಪ್ರಗತಿಶೀಲತೆ; ೧೯೯೦; ಪುಟ ೪೮) ಎಂದಿದ್ದಾರೆ. ಹೀಗೆ ನಲ್ವತ್ತರ ದಶಕದಲ್ಲಿ ಊಳಿಗಮಾನ್ಯದಿಂದ ಬಂಡವಾಳಶಾಹಿಗಳೆಡೆಗೆ, ವಸಾಹತುಶಾಹಿಯಿಂದ ಪ್ರಜಾತಾಂತ್ರಿಕ ಸ್ವಾತಂತ್ರ್ಯದ ಕಡೆಗೆ ಹೊರಳಿದ ಪುರುಷ ಪ್ರಧಾನ ವ್ಯವಸ್ಥೆಯ ಗರ್ಭದಿಂದ ಪ್ರಗತಿಶೀಲ ಸಾಹಿತ್ಯ ಚಳುವಳಿ ಹುಟ್ಟಿತು. ವಸಾಹತುಶಾಹಿಯ ವಿರುದ್ಧವಾಗಿ ಕ್ರಿಯಾಶೀಲವಾಗಿದ್ದ ಗಾಂಧಿ, ಮತ್ತಿತರ ನೇತೃತ್ವದ ಹೋರಾಟಗಳು ಸ್ಥಳೀಯ ನೆಲೆಗಳಲ್ಲಿ ಅಲ್ಲಲ್ಲಿ ಕ್ರಿಯಾತತ್ವರವಾಗಿದ್ದ ರೈತಾಪಿ ಮತ್ತು ಕಾರ್ಮಿಕರ ಹೋರಾಟಗಳು ಪ್ರಗತಿಶೀಲ ಸಾಹಿತ್ಯಕ್ಕೆ ಮೂಲ ಪ್ರೇರಣೆ ನೀಡಿದ್ದವು.

ಪ್ರಗತಿಶೀಲ ಸಾಹಿತ್ಯ ಮಾರ್ಕ್ಸ್‌ವಾದಕ್ಕೆ ಬದ್ಧವಾಗಿ ನವೋದಯದ ಅತೀ ಉದಾತ್ತೀಕರಣ, ಆದರ್ಶವಾದ ಮುಂತಾದ ಧೋರಣೆಗಳನ್ನು ವಿರೋಧಿಸುತ್ತಲೇ ಹುಟ್ಟಿದ ಸಾಹಿತ್ಯ. ಸಮಾಜದ ಬದಲಾವಣೆಯೇ ಇದರ ಗುರಿ. ೧೯೪೨ರಲ್ಲಿ ಮುಂಬೈನಲ್ಲಿ ನಡೆದ ಪ್ರಗತಿಶೀಲ ಬರಹಗಾರರ ಸಮ್ಮೇಳನ; ಮತ್ತು ಅದೇ ವರ್ಷ ಶಿವಮೊಗ್ಗದಲ್ಲಿ ನಡೆದ ಸಮ್ಮೇಳನದಲ್ಲಿ ಪ್ರಗತಿಶೀಲ ಸಾಹಿತ್ಯದ ಧ್ಯೇಯ ಧೋರಣೆಗಳು ಸ್ಪಷ್ಟವಾಗಿ ರೂಪುಗೊಂಡವು.

ಕನ್ನಡ ನವೋದಯ ಸಾಹಿತ್ಯದ ವಿರುದ್ಧ ತೀವ್ರ ಅಸಹನೆಯನ್ನು ವ್ಯಕ್ತಪಡಿಸುತ್ತಾ ಕನ್ನಡದಲ್ಲಿ ಪ್ರಗತಿಶೀಲ ಕಥೆಗಳು ರಚನೆಯಾದವು. ಪ್ರಗತಿಶೀಲ ಲೇಖಕರು ಅ.ನ.ಕೃಷ್ಣರಾಯರ ಮುಂದಾಳುತನದಲ್ಲಿ ೧೯೪೩ರಲ್ಲಿ 'ಪ್ರಗತಿಶೀಲ ಲೇಖಕರ ಸಂಘ'ವನ್ನು ಸ್ಥಾಪಿಸಿಕೊಂಡು ಕತೆಗಳನ್ನು ಬರೆಯತೊಡಗಿದರು. ತೀವ್ರವಾಗುತ್ತಿದ್ದಂತಹ ರಾಜಕೀಯ ವಿಚಾರಧಾರೆಗಳು, ಆಂದೋಲನಗಳು, ಇವುಗಳಿಗೆ ಪತ್ರಿಕೆಗಳಲ್ಲಿ ಕೊಡಲಾದ ನಿರಂತರ ಪ್ರಚಾರ, ರಶಿಯನ್, ಹಿಂದಿ ಕತೆಗಳ ಅನುವಾದ ಇತ್ಯಾದಿಗಳಿಂದ ಕನ್ನಡದಲ್ಲೂ ಪ್ರಗತಿಶೀಲತೆ ಹುಟ್ಟಿಕೊಂಡಿತು. ಎಡಪಂಥೀಯ ವಿಚಾರ, ಧೋರಣೆಗಳಿಂದ ಆಕರ್ಷಿತರಾದ ಈ ಬರಹಗಾರರು ನವೋದಯ ಸಾಹಿತ್ಯ ಸಂಪ್ರದಾಯದ ಅರ್ಥಹೀನವೆನ್ನಿಸಿದ ಆದರ್ಶಪ್ರಿಯತೆ, ಭಾವಲೋಲುಪತೆಗಳ ವಿರುದ್ಧ ದನಿಯೆತ್ತಿದರು. ಇವರು ದೀನದಲಿತರ, ಕಾರ್ಮಿಕರ, ಕೂಲಿಗಾರರ – ಒಟ್ಟಾರೆ ಶ್ರಮಿಕವರ್ಗದ ಪರವಾದ ಆಶಯಗಳನ್ನು ಪ್ರತಿನಿಧಿಸಿ ಬರೆದರು. ಜೀವನಾನುಭವಕ್ಕಿಂತ ಬದುಕಿನ ದೃಷ್ಟಿಕೋನವೇ ಇವರಿಗೆ ಮುಖ್ಯವೆನಿಸಿತು. "ಹೊಸ ಕತೆಗಳು ಹಳೆಯ ಕತೆಗಳಿಗಿಂತ ಹೆಚ್ಚು ವೇಗವನ್ನು

ಪಡೆದುವು; ಸಂಭಾಷಣೆ ಹೆಚ್ಚು ಚುರುಕಾಯಿತು; ಮುಗಿತಾಯ ಹೆಚ್ಚು ಅನಿರೀಕ್ಷಿತವಾಯಿತು ಮತ್ತು ಕತೆಗಳ ಒಳ ಮೈಯಾಗಿ ಪಾತ್ರ ಸೃಷ್ಟಿಯ ಮನೋಲೋಕವಾಗಿ ಒಂದು ಅತೃಪ್ತ ವಾತಾವರಣ ಹಬ್ಬಿಕೊಂಡಿತು. ಮುಖ್ಯವಾಗಿ ಕತೆಗಳೆಲ್ಲ ಸಮಸ್ಯೆಗಳ ಚರ್ಚೆ, ಪರಿಹಾರಗಳಿಗೆ ತೊಡಗಿದವು. ಪ್ರತಿಯೊಂದು ಹೊಸ ಕತೆಯಲ್ಲಿಯೂ ಒಂದು ಸಮಸ್ಯೆ ಚಿಗುರಲಾರಂಭಿಸಿತು." (ಕೆ.ಡಿ.ಕುರ್ತಕೋಟಿ; ಯುಗಧರ್ಮ ಮತ್ತು ಸಾಹಿತ್ಯದರ್ಶನ; ೧೯೮೩; ಪುಟ ೨೨೩) ಎಂಬುದಾಗಿ ಕೀರ್ತಿನಾಥ ಕುರ್ತಕೋಟಿ ಅಭಿಪ್ರಾಯಪಟ್ಟಿದ್ದಾರೆ. ಆ ಕಾಲಘಟ್ಟದ ಕತೆಗಾರರು ಸಾಮಾಜಿಕ ಶೋಷಣೆ, ಧಾರ್ಮಿಕ ಕಂದಾಚಾರಗಳು, ಆರ್ಥಿಕ ಅಸಮತೋಲನ, ವೇಶ್ಯಾಸಮಸ್ಯೆ, ಅನೈತಿಕ ಬದುಕುಗಳೇ ವಸ್ತುಗಳುಳ್ಳ ಕತೆಗಳನ್ನು ಬರೆದರು. ಜೀವನದ ಕರಾಳ ಮುಖಗಳನ್ನು ಚಿತ್ರಿಸುವ ಧೈರ್ಯವನ್ನು ತೋರಿದರೂ, ಇವರು ಪ್ರತಿಪಾದಿಸಿದ ವಾಸ್ತವತೆ ಬದುಕಿನ ಬಾಹ್ಯ ವಿವರಗಳಿಗೆ ಸೀಮಿತವಾಯಿತು.

೧೯೪೩ರಿಂದ ಮುಂದಿನ ಆರೇಳು ವರ್ಷಗಳ ಅವಧಿಯನ್ನು ಪ್ರಗತಿಶೀಲ ಸಾಹಿತ್ಯದ ಕಾಲವೆಂದು ಗುರುತಿಸಲಾಗುತ್ತಿದ್ದರೂ ತ.ರಾಸು, ನಿರಂಜನ, ಚದುರಂಗರ ಅತ್ಯುತ್ತಮ ಮತ್ತು ಪ್ರಾತಿನಿಧಿಕ ಕತೆಗಳು ಪ್ರಕಟವಾದದ್ದು ೧೯೫೦ರ ನಂತರದಲ್ಲಿಯೇ. ಪ್ರಗತಿಶೀಲ ಚಳವಳಿಯ ಬೌದ್ಧಿಕ ನೇತೃತ್ವ ವಹಿಸಿದ ಅ.ನ.ಕೃ. ಅವರು ತಮ್ಮ ಸಣ್ಣಕತೆಗಳ ಮೂಲಕ ಹೊಸ ವಿಚಾರವನ್ನು ರೂಪಿಸತೊಡಗಿದರು. ಅ.ನ.ಕೃ. ಅವರು ವೇಶ್ಯಾಸಮಸ್ಯೆ, ಕೋಮು ಘರ್ಷಣೆ, ಹಸಿವು ಮತ್ತು ಶೋಷಣೆಗಳಂತಹ ವಸ್ತುಗಳನ್ನು ತಮ್ಮ ಕಥೆಗಳ ವಸ್ತುವಾಗಿ ಸ್ವೀಕರಿಸಿ ದಿಟ್ಟವಾಗಿ ಬರೆಯತೊಡಗಿದರು. ಬಸವರಾಜ ಕಟ್ಟೀಮನಿಯವರು ಸಾಮಾಜಿಕ ನ್ಯಾಯ ಮತ್ತು ಸಾಮಾಜಿಕ ಶೋಷಣೆಯ ಪ್ರತಿಪಾದನೆಯನ್ನು ತಮ್ಮ ಕತೆಗಳ ಮೂಲಕ ಮಂಡಿಸಿದರು. ಈ ಘಟ್ಟದಲ್ಲಿ ಬಂದ ಕೊರಡ್ಕಲ್ ಶ್ರೀನಿವಾಸರಾಯ, ತ.ರಾ.ಸು, ನಿರಂಜನ ಕೋ.ಚೆನ್ನಬಸಪ್ಪ, ವ್ಯಾಸರಾಯ ಬಲ್ಲಾಳ, ಅನುಪಮಾ ನಿರಂಜನ, ಚದುರಂಗ, ಮುಂತಾದ ಕಥೆಗಾರರು ಸಾಮಾಜಿಕ ಅಸಮಾನತೆ, ಶೋಷಣೆಗಳ ವಿರುದ್ಧ ದನಿ ಎತ್ತಿದರು. "ಅಲ್ಲದೆ ಓದುಗರ ಸಾಮಾಜಿಕ ಪ್ರಜ್ಞೆಯನ್ನು ಎಚ್ಚರಿಸಿ ಸಮಾಜದಲ್ಲಿ ತುಳಿತಕ್ಕೆ ಸಿಕ್ಕವರ ಪಾಡನ್ನು ಓದುಗರ ಕಣ್ಣಿಗೆ ಅಂತಃಕರಣಕ್ಕೆ ಮುಟ್ಟಿಸಿದ ಸಾಧನೆ ಪ್ರಗತಿಶೀಲರದು" (ಎಲ್.ಎಸ್.ಶೇಷಗಿರಿರಾವ್; ಹೊಸಗನ್ನಡ ಸಾಹಿತ್ಯ; ೧೯೮೮; ಪುಟ ೨೨೩, ೨೨೪) ಎಂಬ ಎಲ್.ಎಸ್ ಶೇಷಗಿರಿರಾಯರ ಅಭಿಪ್ರಾಯ ಸಾಧುವಾದುದಾಗಿದೆ.

ಎಲ್ಲ ಪ್ರಗತಿಶೀಲ ಕತೆಗಾರರಂತೆ ಹವ್ಯಕ ಕತೆಗಾರರಾದ ಭಾರತೀಸುತ, ಪ.ಸು.ಭಟ್ಟ, ವಿ.ತಿ.ಶೀಗೇಹಳ್ಳಿ, ಕಂಜರ್ಪಣೆ ತಿಮ್ಮಪ್ಪಯ್ಯ, ಶ್ರೀಕೃಷ್ಣ ಚೊಕ್ಕಾಡಿ, ಹೆಚ್.ಜಿ.ಸೀತಾರಾಂ, ಪ.ರಾಮಕೃಷ್ಣ ಶಾಸ್ತ್ರಿ ಮುಂತಾದವರಲ್ಲಿ ಪ್ರಗತಿಶೀಲ ಚಳುವಳಿಯ ಪ್ರಭಾವ ಕಾಣುತ್ತದೆ. ಗಂಡು ಹೆಣ್ಣಿನ ಸಂಬಂಧ, ವೇಶ್ಯಾ ಸಮಸ್ಯೆ ಹಾಗೂ ಸಾಮಾಜಿಕ ಶೋಷಣೆಯ ಕುರಿತು ಇವರು ಬರೆದರು. ಒಂದು ಸಾಮಾಜಿಕ ಸಂದರ್ಭದಲ್ಲಿ ಅನ್ಯಾಯಕ್ಕೆ ಈಡಾಗುವ ಮನುಷ್ಯ ಜೀವದ ಬಗೆಗೆ ಮರುಗುವ ಸಾತ್ವಿಕ ಅಂಶಗಳು ಇವರ ಬರವಣಿಗೆಯಲ್ಲಿ ಕಾಣುತ್ತದೆ.

### ೬.೧ ಶೋಷಣೆಯ ಬಗೆಗೆ ಹವ್ಯಕ ಕತೆಗಾರರ ನಿಲುವುಗಳು

ಸಾಮಾಜಿಕ ಅಸಮಾನತೆ, ಶೋಷಣೆಗಳ ವಿರುದ್ಧ ದನಿ ಎತ್ತಿ ಬರೆಯುತ್ತಿದ್ದ ಪ್ರಗತಿಶೀಲ ಕತೆಗಾರರ ಕಾಲದಲ್ಲೇ ಭಾರತೀಸುತ, ಪ.ಸು.ಭಟ್ಟ, ವಿ.ತಿ.ಶೀಗೇಹಳ್ಳಿ ಮೊದಲಾದ ಹವ್ಯಕರು ಸಾಮಾಜಿಕ ಶೋಷಣೆ, ಸ್ತ್ರೀಶೋಷಣೆಯ ಕುರಿತು ಕತೆಗಳನ್ನು ಬರೆದರು. ಭಾರತೀಸುತರ 'ಹಲ್ಲು ಕಳಚಿದ ಹಾವು', ಕಂಜರ್ಪಣೆ ತಿಮ್ಮಪ್ಪನವರ 'ಸಹಾಯಕ ಸಂಘ!' ಕತೆಗಳಲ್ಲಿ ತಾಮಸವನ್ನು ಸಾತ್ವಿಕದಿಂದ ಗೆಲ್ಲುವ ಪ್ರತಿಭಟನೆಯನ್ನು ಗಮನಿಸಬಹುದು. ಪ.ಸುಭಟ್ಟರು ಬರೆದ 'ಕಣ್ಣೀರು–ಕೂಳು!' ಕತೆಯಲ್ಲಿ ಬಂಡವಾಳಶಾಹಿ ಮತ್ತು ಜಮೀನ್ದಾರಿ ಪದ್ಧತಿಯ ವಿರುದ್ಧ ಸಿಡಿದು ನಿಲ್ಲುವ ಚಿತ್ರಣವಿದೆ.

ಭಾರತೀಸುತರ 'ಹಲ್ಲು ಕಳಚಿದ ಹಾವು' ಕತೆಯಲ್ಲಿ ಬೆಟ್ಟಪ್ಪನ ಪೂಜೆ–ಜಪಾನುಷ್ಠಾನಗಳಲ್ಲಿ ನಿರತರಾದ ಅಯ್ಯನವರು ಮಾದಪ್ಪನ ಶೋಷಣೆಗೆ ಒಳಗಾಗುವ ಸನ್ನಿವೇಶವಿದೆ. ಸದಾಶಿವಯ್ಯನವರು ಮಂತ್ರ, ಜ್ಯೋತಿಷ್ಯ ಮತ್ತು ವೈದ್ಯಕೀಯ ಚಿಕಿತ್ಸೆಗಳಲ್ಲಿ ಪ್ರಖ್ಯಾತರಾಗಿದ್ದರು. ವಿಷ ಚಿಕಿತ್ಸೆಯಲ್ಲಿ ಅವರದು ಎತ್ತಿದ ಕೈ. ಸದಾಶಿವಯ್ಯನವರು ಬೆಟ್ಟದ ಮೇಲಿರುವ ಈಶ್ವರ ದೇವಾಲಯದಲ್ಲಿ ಅರ್ಚಕರಾಗಿದ್ದರು. ಅಯ್ಯನವರ ಆಸ್ತಿಯ ಬಳಿ ಇದ್ದ ಮಾದಪ್ಪ ದುಷ್ಟನಾಗಿ ಸಾಧುವಾಗಿದ್ದ ಅಯ್ಯನವರಿಗೆ ಅನೇಕ ಕಿರುಕುಳಗಳನ್ನು ಕೊಡುತ್ತಿದ್ದ. ಕೊನೆಗೆ ಮಾದಪ್ಪನ ಮಗ ಮಾಚಯ್ಯನಿಗೆ ಹಾವು ಕಡಿದಾಗ ಅಯ್ಯನವರು ಅವನನ್ನು ಬದುಕಿಸಿ ಔದಾರ್ಯವನ್ನು ತೋರುತ್ತಾರೆ. ಇದರಿಂದಾಗಿ ಮಾದಪ್ಪನಿಗೆ ತನ್ನ ತಪ್ಪಿನ ಅರಿವಾಗುತ್ತದೆ. ಮಾದಪ್ಪನ ಮಗನಿಗೆ ಹಾವು ಕಚ್ಚಿ ಆತ ಸಾಯಲು ಬಿದ್ದಾಗ ಅವನು ಚೇತರಿಸಿಕೊಳ್ಳುವಂತೆ ಮಂತ್ರ ಪ್ರಯೋಗ

ಮಾಡಿದ ಅಯ್ಯನವರು ಬೆಟ್ಟಪ್ಪನಲ್ಲಿ ಹೇಳುವ ಮಾತುಗಳು ಹೀಗಿವೆ: "ಈ ಬುದ್ಧಿಗೇಡಿ ಅರಿವಿಲ್ಲದೆ ನಿನ್ನ ಮುಂದೆ ದೂರಿದಾಗ ನೀನು ಸ್ವಲ್ಪ ಆಲೋಚಿಸಬೇಡವೇ? ಸೇಡು ತೀರಿಸಿಕೊಳ್ಳಲೆಂದು ನೀನು ಸುಬ್ಬಪ್ಪನನ್ನು ಕಳುಹಿಸಿಬಿಡುವದೇ"? (ಭಾರತೀಸುತ; ಕರೆಗೆ ಓಗೊಟ್ಟ ಕಾರ್ಡೀಲಿಯಾ!; ೧೯೬೭; ಪುಟ ೪೯). ಮಾದಪ್ಪನ ಮಗನಿಗೆ ಬಂದ ವಿಪತ್ತಿಗೆ ತಾನೇ ಕಾರಣವೆಂದು ಪಶ್ಚಾತ್ತಾಪ ಪಟ್ಟು, ಮಾಚಯ್ಯನನ್ನು ಬದುಕಿಸುವ ಮೂಲಕ ದುಷ್ಟನಾದ ಮಾದಪ್ಪನನ್ನು ಕ್ಷಮಿಸಿ ತಮ್ಮ ಸಾತ್ವಿಕತೆಯನ್ನು ಪ್ರದರ್ಶಿಸುತ್ತಾರೆ. ಅಯ್ಯನವರ ಅಹಿಂಸಾಮಯ ಜೀವನ ದರ್ಶನದಲ್ಲಿ ಪಾಪಕ್ಕೆ ಪ್ರಾಯಶ್ಚಿತ್ತ, ಪಾಪಿಗೆ ಕ್ಷಮೆಯಿಂದಲೇ ಮನಃಪಲ್ಲಟ, ತಾಮಸವನ್ನು ಸಾತ್ವಿಕದಿಂದ ಗೆಲ್ಲಬಹುದು ಎಂಬುದು ಕತೆಗಾರರ ನಿಲುವಾಗಿದೆ.

ಕಂಜರ್ಪಣೆ ತಿಮ್ಮಪ್ಪಯ್ಯನವರ 'ಸಹಾಯಕ ಸಂಘ!' ಕತೆಯಲ್ಲಿ ನಿರುದ್ಯೋಗಿ ಯುವಕ ಮೋಹನ ಉದ್ಯೋಗ ದೊರಕದೆ ಹತಾಶನಾಗಿ ಆತ್ಮಹತ್ಯೆ ಕೈಗೊಳ್ಳುತ್ತಾನೆ. ಬಿ.ಎ. ಪದವೀಧರನಾದ ಮೋಹನನಿಗೆ 'ಸಹಾಯಕ ಸಂಘ'ದಲ್ಲಿ ಗುಮಾಸ್ತೆಯ ಕೆಲಸ ಖಾಲಿಯಿದೆಯೆಂದು ತಿಳಿದು ಸಂದರ್ಶನಕ್ಕೆ ಹೋಗುತ್ತಾನೆ. ಗುಮಾಸ್ತನ ಕೈ ತಪ್ಪಿನಿಂದಾಗಿ ಮೋಹನನಿಗೆ ಸಂದರ್ಶನಕ್ಕೆ ಬರಲು ಪತ್ರ ದೊರಕುತ್ತದೆ. ಆದರೆ ಸಂದರ್ಶನಕ್ಕೆ ಹಾಜರಾದ ಮೋಹನನ್ನು ಅಚ್ಚುತರಾಯರು ಬೈದು ಆಫೀಸಿನಿಂದ ಹೊರಹಾಕುತ್ತಾರೆ. ಇದರಿಂದ ಭ್ರಮನಿರಸನಗೊಂಡ ನಿರುದ್ಯೋಗಿ ಮೋಹನ ಆತ್ಮಹತ್ಯೆ ಮಾಡುತ್ತಾನೆ. ಮರುದಿನ 'ಸಹಾಯಕ ಸಂಘ'ದ ಅವ್ಯವಹಾರಗಳ ಜೊತೆಗೆ ಮೋಹನನ ಆತ್ಮಹತ್ಯೆಗೆ ಕಾರಣಗಳನ್ನೊಳಗೊಂಡ ವರದಿಯು 'ದೀನಬಂಧು' ದೈನಿಕ ಪತ್ರಿಕೆಯಲ್ಲಿ ಈ ಕೆಳಗಿನಂತೆ ಪ್ರಕಟವಾಗುತ್ತದೆ: "ಸಹಾಯಕ ಸಂಘ"ವು ತನ್ನ ಉದ್ದೇಶವೇನೆಂಬುದನ್ನು ಸಂಪೂರ್ಣವಾಗಿ ಮರೆತಂತೆ ಕಾಣುತ್ತದೆ. ಸಂಘದ ಒಬ್ಬ ಕ್ಲಾರ್ಕ್‌ನ ಕೆಲಸವು, ಹಾಯಾಗಿ ಗೃಹದಲ್ಲಿ ಕುಳಿತಿದ್ದ ಅಧ್ಯಕ್ಷರ ಆಪ್ತ ಬಂಧುವಿಗೆ ಸಿಕ್ಕಿತಂತೆ! ಹಿಂದಿನ ಎರಡು ವರ್ಷಗಳಲ್ಲಿಯೂ ಸಂಘದ ಸಂಚಾಲಕರು ತನ್ನ ಜನಗಳನ್ನೆ ಕೆಲಸಕ್ಕೆ ನಿಯೋಗಿಸಿಕೊಂಡಿರುವರೆಂದು ಈಗ ತಿಳಿದು ಬಂದಿದೆ. ಇದು 'ಸಹಾಯಕ ಸಂಘವೇ? ಅಲ್ಲ ಸ್ವಾರ್ಥದ ಸಂಘ! ಮೊನ್ನಿನ ಅಧ್ಯಕ್ಷರ ಮುಗುಳು ನಗು ನೂರಾರು ನಿರುದ್ಯೋಗಿಗಳನ್ನು ವಂಚಿಸಿ ಹತಾಶರನ್ನಾಗಿ ಮಾಡಿತು! ಅಜಾಗರೂಕತೆ ಗುಮಾಸ್ತನ (ಲೆಕ್ಕಣಿಕೆಯರು) ಕೈ ತಪ್ಪು ಮೋಹನನಿಗೆ ಆಸೆಯಲ್ಲ– ನಿರಾಸೆಯನ್ನುಂಟು ಮಾಡಿತು!

ರಾಯರ ಕಠೋರ ಮಾತುಗಳು ಬಡ ಮೋಹನನ ಆತ್ಮಹತ್ಯೆಗೆ ಕಾರಣವಾಯಿತು! ಮಹಾಜನರು ಅದೇನು ಕಣ್ಣಿಮುಚ್ಚಿ ಕುಳಿತುಕೊಂಡಿರುವರೇ? ಈಗಲಾದರೂ ಕಣ್ಣಿಬಿಟ್ಟು ಇತ್ತಕಡೆ ಗಮನಿಸ ಬಾರದೇ"?; (ಕಂಜರ್ಪಣೆ ತಿಮ್ಮಪ್ಪಯ್ಯ: ಗುರುವನ ಶೋಕ ಮತ್ತು ಇತರ ಕತೆಗಳು; ೧೯೮೨; ಪುಟ ೩೩). ಹೀಗೆ ನಿರುದ್ಯೋಗಿ ಯುವಕ ಅಮೃತರಾಯರ ಸ್ವಜನ ಪಕ್ಷಪಾತಕ್ಕೆ ಒಳಗಾಗಿ ಆತ್ಮಹತ್ಯೆ ಮಾಡಿಕೊಂಡಾಗ 'ದೀನಬಂಧು' ಪತ್ರಿಕೆ 'ಸಹಾಯಕ ಸಂಘ'ದ ಚಟುವಟಿಕೆಗಳನ್ನು ಬಹಿರಂಗಗೊಳಿಸುವ ಮೂಲಕ ಕತೆಗಾರರು ಶೋಷಣೆಯ ವಿರುದ್ಧ ಪ್ರತಿಭಟನೆಯನ್ನು ಪತ್ರಿಕೆಯ ವರದಿಯ ಮುಖಾಂತರ ನಿರೂಪಿಸಿದ್ದಾರೆ. ಸಮಾಜದಲ್ಲಿ ನಡೆಯುತ್ತಿರುವ ಶೋಷಣೆಗೆ ಪತ್ರಿಕೆಗಳ ಮೂಲಕ ಪ್ರತಿಭಟನೆಯನ್ನು ವ್ಯಕ್ತಪಡಿಸಿದ ಕತೆಗಾರರ ನಿಲುವು ಇಲ್ಲಿ ವಿಶಿಷ್ಟವಾಗಿದೆ.

ಬಡವರ ಶೋಷಣೆಯ ವಿರುದ್ಧ ಉಗ್ರವಾಗಿ ಪ್ರತಿಭಟಿಸುವ ನಿಲುವನ್ನು ಪ.ಸು.ಭಟ್ಟರು ಬರೆದ 'ಕಣ್ಣೀರು–ಕೂಳು!' ಕತೆಯಲ್ಲಿ ಗುರುತಿಸಬಹುದು. ರಂಗಣ್ಣ ಶಾನುಭಾಗರು ತನ್ನ ಅಳಿಯ ಕೃಷ್ಣಸ್ವಾಮಿಗೆ ೩೦ ಚೀಲ ಅಕ್ಕಿ ಕೊಡಬೇಕಾಗಿತ್ತು. ಆದರೆ ಅವರ ಬಳಿ ೨೮ ಚೀಲ ಅಕ್ಕಿ ಮಾತ್ರ ಇತ್ತು. ಇನ್ನೆರಡು ಚೀಲ ಅಕ್ಕಿಗಾಗಿ ಅವರು ಒಕ್ಕಲು ಕೆಂಚೇಗೌಡನನ್ನು ಪೀಡಿಸುತ್ತಾರೆ. ಆದರೆ ಕೆಂಚೇಗೌಡನಲ್ಲಿ ಒಂದೇ ಒಂದು ಮಾನಿಗೆ ಅಕ್ಕಿ ಇರುತ್ತದೆ. ಆದರೂ ಶಾನಭಾಗರು ಅಕ್ಕಿಗಾಗಿ ಕೆಂಚೇಗೌಡನನ್ನು ಒತ್ತಾಯಿಸಿದಾಗ ಅವನು ತನ್ನ ಸ್ನೇಹಿತನ ಗಾಡಿಯಲ್ಲಿ ತನ್ನ ಮಗಳ ಮನೆಗೆ ಸಾಗಿಸಲು ಪ್ರಯತ್ನಿಸುತ್ತಾನೆ. ಅದೇ ಸಂದರ್ಭದಲ್ಲಿ ಆ ಗಾಡಿಯಲ್ಲಿ ಪ್ರಯಾಣಿಸಿದ ಶಾನಭಾಗರು ಅಕ್ಕಿಯ ವಿಚಾರವನ್ನು ತಿಳಿದು, ಕೆಂಚೇಗೌಡನನ್ನು ಕರೆಸಿ ಶಿಕ್ಷಿಸುತ್ತಾರೆ. ಶಿಕ್ಷೆಗೆ ಒಳಗಾದ ಕೆಂಚೇಗೌಡ ಆಸ್ಪತ್ರೆಗೆ ದಾಖಲಾದ ಸಂದರ್ಭದಲ್ಲಿ ಡಾಕ್ಟರರ ಸ್ನೇಹಿತನಾದ ಕೃಷ್ಣಸ್ವಾಮಿ(ಶಾನಭಾಗರ ಅಳಿಯ) ಕೆಂಚೇಗೌಡನಿಗಾದ ಶೋಷಣೆಯನ್ನು ತಿಳಿದು ಆಕ್ರೋಶಗೊಂಡು 'ಅಳಿಯನ ಅಮಾವಾಸ್ಯೆ'ಯ ದಿನ ಮಾವನಾದ ಶಾನಭಾಗರು ಬಡವನ ರಕ್ತಹೀರಿ ತನಗೆ ಕೊಡುವ ಅಕ್ಕಿ ಬೇಡವೆಂದು ಪ್ರತಿಭಟಿಸುತ್ತಾನೆ. "ಅವರು ಒಂದು ಕಲ್ಲಿನ ಮೂರ್ತಿಯಂತೆ ನಿಶ್ಚಲವಾಗಿ ನಿಂತಿದ್ದರು ಕರುಣೆಯೆನ್ನುವುದು ಅವರ ಹೃದಯದಲ್ಲಿರಲಿಲ್ಲ. ಸ್ವಾರ್ಥತೆಯ ಮಬ್ಬಿನಲ್ಲಿ ನ್ಯಾಯಾನ್ಯಾಯಗಳು ಅವರ ಲಕ್ಷ್ಯಕ್ಕೆ ಬರುತ್ತಿದ್ದಿಲ್ಲ" (ಪ.ಸು.ಭಟ್ಟ; ಹಕ್ಕಿನ ಹೋರಾಟ; ೧೯೪೮; ಪುಟ ೪೫) ಎಂಬ ಮಾತಿನಲ್ಲಿ ಬಡವರನ್ನು ಶೋಷಿಸುವ ಶಾನಭಾಗರ ಕ್ರೌರ್ಯದ ಚಿತ್ರಣವಿದೆ. "ನನಗೆಲ್ಲ ಗೊತ್ತಿದೆ ಕೆಂಚೇಗೌಡನಂತಹ

ಸಾವಿರಾರು ಜನರ ರಕ್ತ ಹೀರಿದವರು. ನೀವು ನಿಮ್ಮ ಕೈಯಿಂದ ಕೊಡುವ ಅಕ್ಕಿ ನನಗೆ ಬೇಡ ನನಗದರಲ್ಲಿ ಕಾಣಿವುದು ಬಡವರ ರಕ್ತಮಾಂಸ!" (ಪ.ಸು ಭಟ್ಟ; ಹಕ್ಕಿನ ಹೋರಾಟ;೧೯೪೮; ಪುಟ ೫೨) ಎಂಬ ಕೃಷ್ಣ ಮೂರ್ತಿಯ ಮಾತುಗಳಲ್ಲಿ ತನ್ನ ಮಾವನಾದ ಶಾನಭಾಗರ ವರ್ತನೆಯನ್ನು ಪ್ರತಿಬಟಿಸುವ ನಿಲುವು ಕಂಡುಬರುತ್ತದೆ. ಪೂರ್ವದಲ್ಲಿ ಇದ್ದ ಧನಿ–ಒಕ್ಕಲು ಭೂ ಮಸೂದೆಯ ಸಂಬಂಧದಲ್ಲಿ ಕತೆಯ ಒಕ್ಕಲಿನ ಪರವಾಗಿಯೇ ನಿಲ್ಲುತ್ತದೆ. 'ಕಣ್ಣೀರ ಕೂಳು'– ಯಾಕೆಂದರೆ ಆಗ ಅದು ಅಕ್ಕಿ ಸಾಗಾಟಕ್ಕೆ ನಿರ್ಬಂಧವಿದ್ದ ಆಹಾರ ಅಭಾವದ ಕಾಲ. ಸಹಾನುಭೂತಿ ಮತ್ತು ಭಾವಾವೇಶಗಳಿಂದ ಮಂಡಿತವಾಗುವ ಕತೆ ಸಮಸ್ಯಾ ಬೀಜವಾಗಿ ಹೇಳುವ ಆಹಾರ ಸಂಗ್ರಹ ನಿರ್ಬಂಧ ನಲುವತ್ತು-ಐವತ್ತರ ದಶಕದ ದ.ಕ.ಜಿಲ್ಲೆಯ ಕತೆ, ಕಾದಂಬರಿಗಳಲ್ಲಿ ಹಲವೆಡೆ ಬಂದಿದೆ.

ವಿ.ತಿ.ಶೀಗೇಹಳ್ಳಿಯವರು ಬರೆದ 'ಹರಿದ ಸೆರಗು!' ಕತೆಯಲ್ಲಿ ಶೋಷಣೆಗೆ ಒಳಗಾದ ಶಾಂತಿ ಸಮಾಜವನ್ನು ಎದುರಿಸಿ ಬದುಕುವ ದಿಟ್ಟತನದ ಚಿತ್ರಣವಿದೆ. ಶ್ರೀಕೃಷ್ಣ ಚೊಕ್ಕಾಡಿಯವರ 'ತ್ಯಕ್ತೆ' ಮತ್ತು ಎಮ್. ಸುಬ್ರಾಯನ್ ರವರ 'ಬೇಡಿಕೆ' ಕತೆಗಳಲ್ಲಿ ಸ್ತ್ರೀಪರ ಆಶಯ ಕಂಡುಬರುತ್ತದೆ. ವಿ.ತಿ.ಶೀಗೇಹಳ್ಳಿಯವರ 'ಹರಿದ ಸೆರಗು!' ಕತೆಯಲ್ಲಿ ಸಣ್ಣಿ ಮಾಸ್ತರರು ಸುಳ್ಳುಹೇಳಿ ಶಾನುಭೋಗರ ಮಗಳಾದ ಶಾಂತಿಯನ್ನು ತಮ್ಮ ಮಗನಾದ ರಂಗಾಣಿಗೆ ವಿವಾಹ ಮಾಡಿಸುತ್ತಾರೆ. ಗಂಡನ ಮನೆಯಲ್ಲಿ ಮಾವನಿಗೆ ಶಾಂತಿಯ ಮೇಲೆ ಮನಸ್ಸಾಗಿ ಅವಳನ್ನು ಹಾಳು ಮಾಡಲು ಪ್ರಯತ್ನಿಸುತ್ತಾನೆ. ಸೊಸೆ ತನಗೆ ಒಲಿಯದಿದ್ದಾಗ ಅವಳ ಮೇಲೆ ವ್ಯಭಿಚಾರದ ಆರೋಪ ಹೊರಿಸಿ ಅವಳನ್ನು ಮನೆಯಿಂದ ಹೊರಹಾಕುತ್ತಾನೆ. ಕೆಲಕಾಲದ ಬಳಿಕ ವಿಧವೆಯಾದ ಶಾಂತಿಯನ್ನು ಮಾವನಾದ ಶಾನಭೋಗರು ಪುನರ್ವಿವಾಹಕ್ಕೆ ಒತ್ತಾಯಿಸಿದರೂ ಶಾಂತಿ ತನ್ನ ದಿಟ್ಟ ನಿರ್ಧಾರವನ್ನು ಪ್ರಕಟಿಸುತ್ತಾಳೆ: "ಏನೇ ಆಗ್ಲಿ! ಎನ್ಗೆ ಕೂಳಿಗಿಲ್ದಿದ್ರೆ ಅಡ್ಡೀ ಇಲ್ಲೆ. ಕೈಲಪ್ಪುಲೀವರೀಗೆ ದುಡ್ಕಂಡ್ ತಿಂತಿಬಿಡು .." (ವಿ.ತಿ.ಶೀಗೇಹಳ್ಳಿ; ಹರಿದ ಸೆರಗು: ೧೯೪೭; ಪುಟ ೯೪). ಮೇಲಿನ ಕತೆಯಲ್ಲಿ ಕಂಡುಬರುವ ವ್ಯವಸ್ಥೆಯ ಕ್ರೌರ್ಯ, ಸ್ತ್ರೀಯರ ಅಸಹಾಯಕತೆಗಳನ್ನು ಕತೆಗಾರರು ಮಾನವೀಯ ದೃಷ್ಟಿಕೋನದಿಂದ ನೋಡಿದ್ದಾರೆ.

ಶ್ರೀಕೃಷ್ಣ ಚೊಕ್ಕಾಡಿ ಬರೆದ 'ತ್ಯಕ್ತೆ' ಕತೆಯು ಶೋಷಣೆಗೆ ಒಳಗಾದ ರಾಧೆಯ ಬಗೆಗೆ ಕಥಾನಾಯಕ ಕೃಷ್ಣ ಸಾಂತ್ವನದ ನುಡಿಗಳನ್ನು ಹೇಳುವ ಮೂಲಕ ಕತೆಗಾರರು ಶೋಷಿತರ ಬಗೆಗೆ ತಮ್ಮ ಸಹಾನುಭೂತಿಯನ್ನು ವ್ಯಕ್ತಪಡಿಸಿದ್ದಾರೆ. ನಿರೂಪಕರ ಅತ್ತಿಗೆಯ ಮನೆಯ ನೆರೆಯವಳಾದ ರಾಧೆ ಮನೆಯ ಕೆಲಸದವನೊಂದಿಗೆ ಓಡಿ ಹೋಗಿ, ಅವನಿಂದ ಗರ್ಭವತಿಯಾಗಿ ಅನಾಥಳಾಗುತ್ತಾಳೆ. ತಂದೆ ಮನೆಯಿಂದ ತಿರಸ್ಕೃತಗೊಂಡ ರಾಧೆ ಡಾಕ್ಟರ್ ಗಿರಿಜಮ್ಮನವರ ಸಹಾಯದಿಂದ ನರ್ಸ್ ತರಬೇತಿಯನ್ನು ಪಡೆದು ಅವರ ಚಿಕಿತ್ಸಾಲಯದಲ್ಲಿಯೇ ಕೆಲಸಕ್ಕೆ ಸೇರುತ್ತಾಳೆ. ನಿರೂಪಕರ ತಾಯಿ ಡಾಕ್ಟರ್ ಗಿರಿಜಮ್ಮನವರ ಆಸ್ಪತ್ರೆಗೆ ದಾಖಲಾದಾಗ ರಾಧಾಳನ್ನು ಭೇಟಿ ಮಾಡಿದ ಅವರು ಅವಳ ಪೂರ್ಣ ವೃತ್ತಾಂತವನ್ನು ತಿಳಿದುಕೊಳ್ಳುತ್ತಾರೆ. "ಬರುತ್ತೇನೆ ರಾಧೆ. ನಿನ್ನನ್ನು ಅಪಾರ್ಥ ಮಾಡಿಕೊಳ್ಳದೆ, ನಿನ್ನ ಬಗ್ಗೆ ಸದಾಭಿಪ್ರಾಯವನ್ನು ಹೊಂದಿರುವವನೂ ಒಬ್ಬನಿದ್ದಾನೆ ಎಂಬುದನ್ನು ಮರೆಯಬೇಡ" (ಶ್ರೀಕೃಷ್ಣ ಚೊಕ್ಕಾಡಿ; ನಿರೀಕ್ಷೆ; ೧೯೭೪; ಪುಟ ೪೬). ಕತೆಯಲ್ಲಿನ ನಿರೂಪಕರ ಕೊನೆಯ ಮಾತಿನಲ್ಲಿ ಸಾಮಾಜಿಕವಾಗಿ ಶೋಷಣೆಗೆ ಒಳಗಾದ ರಾಧೆಯ ಬಗೆಗೆ ಲೇಖಕರಿಗಿರುವ ಕಾಳಜಿ ವ್ಯಕ್ತವಾಗುತ್ತದೆ.

'ಸುಧ' ನಿಂದ ಬಸಿರಾದ ಯುವತಿ ತನ್ನ ಮಗುವನ್ನು ಅವನಿಗೂ ಅವನ ಪತ್ನಿ ಗೌರಿಗೂ ಕೊಟ್ಟು ಹೋಗುವ ಎಮ್. ಸುಬ್ರಾಯನ್ ಅವರ 'ಬೇಡಿಕೆ' ಕತೆಯಲ್ಲಿ ಸ್ತ್ರೀ ಪರ ಆಶಯ ಕಂಡುಬರುತ್ತದೆ.

ಒಟ್ಟಿನಲ್ಲಿ ಸಮಕಾಲೀನ ಪ್ರಗತಿಶೀಲ ಸಾಹಿತ್ಯದ ಆಶಯಗಳಿಂದ ಪ್ರಭಾವಿತರಾದ ಹವ್ಯಕ ಬರಹಗಾರರು ಶೋಷಣೆ, ಸಾಮಾಜಿಕ ಅನ್ಯಾಯಗಳ ವಿರುದ್ಧ ತಮ್ಮ ಅಸಹನೆಯನ್ನು ಸಾಹಿತ್ಯದ ಮೂಲಕ ವ್ಯಕ್ತಪಡಿಸಿರುವುದು ಗಮನಾರ್ಹ ಅಂಶ.

## ೬.೨ ಗಂಡು ಹೆಣ್ಣಿನ ಸಂಬಂಧ

ಪ್ರಗತಿಶೀಲ ಚಳುವಳಿಯ ಕಾಲದಲ್ಲಿ ಗಂಡು ಹೆಣ್ಣಿನ ಸಂಬಂಧದ ಕುರಿತು ಹಲವಾರು ಕತೆಗಳನ್ನು ಬರೆದಿದ್ದಾರೆ. 'ಹಿಂದಿರುಗಿ ಬಂದವನು', 'ಸುಗಂಧ ಸೂಸಿತು' ಮುಂತಾದ ಕತೆಗಳಲ್ಲಿ ಸ್ವಭಾವತಃ ಆದರ್ಶವಾದಿಗಳಾದ ಪಾಟೀಲ ಪುಟ್ಟಪ್ಪನವರು ಸಾಮಾನ್ಯವಾಗಿ ಪ್ರೇಮದ ವಿಜಯವನ್ನೇ ಸಾರುತ್ತಾರೆ. ಎಲ್ಲ ಪ್ರಗತಿಶೀಲ ಲೇಖಕರಂತೆ

ಭಾರತೀಸುತ, ಹೆಚ್.ಜಿ.ಸೀತಾರಾಂ. ಮಹಾಬಲಮೂರ್ತಿ ಕೊಡ್ಲೆಕೆರೆ, ಕಡೆಂಗೋಡ್ಲು ಶಂಕರ ಭಟ್ಟ, ಪ.ರಾಮಕೃಷ್ಣ ಶಾಸ್ತ್ರಿ, ಪಡಾರು ಮಹಾಬಲೇಶ್ವರ ಭಟ್ಟ, ಸುಬ್ರಾಯ ಬಿದ್ರೆಮನೆ ಮುಂತಾದ ಹವ್ಯಕ ಬರಹಗಾರರು ಗಂಡು ಹೆಣ್ಣಿನ ಸಂಬಂಧವನ್ನು ತಮ್ಮ ಕತೆಗಳಿಗೆ ವಸ್ತುವನ್ನಾಗಿ ಆಯ್ದುಕೊಂಡಿದ್ದಾರೆ.

ಭಾರತೀಸುತರ 'ಚಿಂಬ ಹಿಡಿದ ಮೀನು' 'ಕೊಳುಂಬನ ಉರಾಟೆ', 'ತಿಮ್ಮುಡುವಿನ ಹುಲಿ ಬೇಟೆ', ಮಹಾಬಲ ಮೂರ್ತಿ ಕೊಡ್ಲೆಕೆರೆಯವರ 'ವೈಶಂಪಾಯನತೀರ', ಪ.ರಾಮಕೃಷ್ಣ ಶಾಸ್ತ್ರಿಯವರ 'ಒಂದು ದಿನ ತಡೆದಿದ್ದರೆ.......!' ಪಡಾರು ಮಹಾಬಲೇಶ್ವರ ಭಟ್ಟರ 'ಮಾರಿಬಲೆ ಬೀಸಿತ್ತು' ಕತೆಗಳಲ್ಲಿ ಗಂಡು ಹೆಣ್ಣಿನ ಸಂಬಂಧ ಮದುವೆಯಲ್ಲಿ ಪರಿಯವಸಾನವಾಗುತ್ತದೆ. ಅಲ್ಲದೆ ಇವರ ಕತೆಗಳಲ್ಲಿ ಗಂಡು–ಹೆಣ್ಣು–ಗಂಡು ಈ ತ್ರಿಕೋನ ಪಾತ್ರ ಸೃಷ್ಟಿಯೇ ಪ್ರಾಧಾನ್ಯ ಪಡೆದು ಈ ಪಾತ್ರಗಳ ಮಾನಸಿಕ ಘರ್ಷಣೆಗಳೇ ಕಥೆಯ ಮೈಯಾಗುವುದು ಸಾಮಾನ್ಯ ಅಂಶ.

ಭಾರತೀಸುತರ 'ಚಿಂಬ ಹಿಡಿದ ಮೀನು' ಕತೆಯಲ್ಲಿ ಮುದಿವಯಸ್ಸಿನ ಚಡೆಯ ಮೊರವನ ಕೈ ಹಿಡಿದ ಎಳೆಯ ಹರೆಯದ ಪಣಿಯ ಹೆಣ್ಣು ಮಾಚಿ. ಏಡಿಯನ್ನು ಹಿಡಿಯಲು ಹೋದ ಇವಳ ಕೈಯನ್ನು ಕಚ್ಚಿ ಹಿಡಿದ ಏಡಿಯನ್ನು ಬಿಡಿಸಲು ಬಂದ ಇಪ್ಪತ್ತೊಂದರ ಹರೆಯದ ಚಿಂಬ ಅವಳನ್ನು ಗಂಡನಾದ ಮೊರವನ ಹಿಡಿತದಿಂದಲೂ ಬಿಡಿಸಬಯಸುತ್ತಾನೆ. ತುಂಬು ಹೊಳೆಯನ್ನು ದಾಟಿ ಮೊಲದ ಮಾಂಸಕ್ಕೆಂದು ಹೋದ ಚಿಂಬ ಕಿರುಬನ ದಾಳಿಗೆ ಒಳಗಾಗಿ ಹಂಗಾರೆ ಮುಳ್ಳಿನ ಮರವೇರಿ ಆಕ್ರಂದಿಸುವುದನ್ನು ಕೇಳಿದ ಮಾಚಿ ಹೊಳೆ ಈಜಿ ಬಂದು ಈಟಿಯಿಂದ ಕಿರುಬನನ್ನು ಕೊಂದು ಚಿಂಬನನ್ನು ಕಾಪಾಡಿ ತಾನು ಅವನ ವಶವಾಗುತ್ತಾಳೆ. ಕಿರುಬನನ್ನು ಕೊಲ್ಲುವ ಸಾಂಕೇತಿಕ ಕ್ರಿಯೆಯ ಮೂಲಕ ಮಾಚಿ ತನ್ನ ಮುದಿ ಗಂಡನ ಸಂಬಂಧವನ್ನು ಕಡಿದುಕೊಳ್ಳುವ ಚಿತ್ರ ಮೂಡಿಬಂದಿದೆ. "ನಾನು ಮೊಲ ಹಿಡಿಯಲಿಲ್ಲ; ನೆಲದ ಮೇಲೆ ಗಾಳ ಹಾಕಿದೆ. ಮೀನೊಂದನ್ನು ಹಿಡಿದೆ! 'ನೆಲದ ಮೇಲೆ ಮೀನು!' ಮಾಚಿ ಚಿಂಬನ ನುಡಿಯ ಗೂಡಾರ್ಥವನ್ನು ತಿಳಿಯದೆ ಕಣ್ಣರಳಿಸಿದಳು. 'ಹೌದು ನೆಲದ ಮೇಲಿನ ಮೀನು ಇಗೋ, ಅದನ್ನು ಹಿಡಿದು ನನ್ನ ಎದೆಯ ಮಡುವಲ್ಲಿ ತುಂಬಿಸಿದೆ; ಅದೀಗ ಅಲ್ಲಿ ಈಜುತ್ತಿದೆ!"

(ಭಾರತೀಸುತ; ಚಿಂಬ ಹಿಡಿದ ಮೀನು; ೧೯೬೧; ಪುಟ ೧೯) ಎಂಬ ಚಿಂಬನ ಮಾತಿನಲ್ಲಿ ಮಾಚಿಯೆಂಬ ಮೀನನ್ನು ಹಿಡಿದ ಸಾಂಕೇತಿಕ ಅರ್ಥ ಕಂಡುಬರುತ್ತದೆ.

'ಕೊಳುಂಬನ ಉರಾಟಿ' ಕತೆಯಲ್ಲಿ ಭಾರತೀಸುತರು ಕನ್ಯಾತೆರ ಕೊಡಲಾಗದೆ ಇನ್ನೂ ಅವಿವಾಹಿತನಾಗಿ ಉಳಿದಿರುವ ಕೊಳುಂಬನಿಗೆ ನೆರೆಯ ಮಾದನ ಮೇಲೆ ಅಸೂಯೆ, ಮಾದನ ಹೆಂಡತಿ ನಂಜಿಯ ಮೇಲೆ ಕಣ್ಣು. ಅವಳ ಬೆನ್ನು ಹತ್ತಿ, ಕಂಡಲ್ಲಿ ಉಪಚರಿಸಿ, ಗೆಣಸು ಅಗೆದು ಕೊಡುತ್ತಾನೆ. ಕೊಳುಂಬ ಒಡ್ಡಿದ ಬಲೆಗೆ ಮೊಲವೊಂದು ಸಿಕ್ಕಿ ಬೀಳುತ್ತದೆ. ಮೊಲದ ಮಾಂಸದ ಪಾಲನ್ನು ಕೊಂಡೊಯ್ದ ನಂಜಿಗೂ ಮಾದನಿಗೂ, ಮಾದನಿಗೂ ಕೊಳುಂಬನಿಗೂ ಜಗಳ ಏರ್ಪಡುತ್ತದೆ. ಇರುಳು ಮಾದನ ಅಟ್ಟಳಿಗೆಗೆ ಆನೆ ದಾಳಿ ಮಾಡಿ ಮಾದ ಸಾವಿಗೀಡಾಗುತ್ತಾನೆ. ಕೊನೆಗೆ ನಂಜಿ ಕೊಳುಂಬನ ಉರಾಟಿಯಾಗಿ ಅವನ ಬೇಟೆಗೆ ಬಿದ್ದ ಮೊಲವಾಗುತ್ತಾಳೆ.

'ಚಿಂಬ ಹಿಡಿದ ಮೀನು', 'ಕೊಳುಂಬನ ಉರಾಟಿ' ಮತ್ತು 'ತಿಮ್ಮುಡುವಿನ ಹುಲಿ ಬೇಟೆ' ಕತೆಗಳಲ್ಲಿ ಗಂಡು ಹೆಣ್ಣಿನ ಸಂಬಂಧ ಮದುವೆಯಲ್ಲಿ ಪರಿಯವಸಾನವಾಗುತ್ತದೆ. ಇಷ್ಟೇ ಅಲ್ಲದೆ ಮೀನು ಹಿಡಿಯುವಿಕೆ, ಮೊಲದ ಬೇಟೆ, ಹುಲಿಯ ಬೇಟೆ ಇತ್ಯಾದಿ ರೂಪಕಗಳ ಮೂಲಕವಾಗಿ ಒಬ್ಬನನ್ನು ಕೂಡಿದ ಹೆಣ್ಣೆ ಅಥವಾ ಗಂಡು ಮತ್ತೊಬ್ಬಳನ್ನು ಅಥವಾ ಮತ್ತೊಬ್ಬನನ್ನು ಆಶಿಸಿ ಪಡೆಯುವ ಕ್ರಿಯೆಯನ್ನು ಸಾಮಾನ್ಯವಾಗಿ ಭಾರತೀಸುತರ ಕತೆಗಳಲ್ಲಿ ಕಾಣಬಹುದು. ಅಲ್ಲದೆ ಇವರ ಕತೆಗಳಲ್ಲಿ ಗಂಡು-ಹೆಣ್ಣೆ-ಗಂಡು ಈ ತ್ರಿಕೋನ ಪಾತ್ರ ಸೃಷ್ಟಿಯೇ ಪ್ರಮುಖತೆ ಪಡೆದು ಈ ಪಾತ್ರಗಳ ಮಾನಸಿಕ ಘರ್ಷಣೆಗಳೇ ಕಥೆಯ ಪ್ರಮುಖ ಅಂಶವಾಗಿ ಕಂಡುಬರುತ್ತದೆ.

ಪ.ರಾಮಕೃಷ್ಣ ಶಾಸ್ತ್ರಿಯವರ 'ಒಂದು ದಿನ ತಡೆದಿದ್ದರೆ____! ಕತೆಯಲ್ಲಿ ಧನದಾಹಕ್ಕೆ ಒಳಗಾದ ಚಂದುವಿನ ಗಂಡ ಘಟ್ಟಕ್ಕೆ ಹೋದವನು ಮೂರು ವರ್ಷಗಳವರೆಗೆ ಬಾರದಿದ್ದಾಗ ಪುಟ್ಟಯ್ಯನ ಸೆಳತಕ್ಕೆ ಒಳಗಾಗುತ್ತಾಳೆ. ಕೊನೆಗೆ ತನ್ನ ಗಂಡ ಸನ್ಯಾಸಿ ವೇಷದಲ್ಲಿ ಬಂದಾಗ ಪಶ್ಚಾತ್ತಾಪದಿಂದ ಕಣ್ಣೀರು ಸುರಿಸುತ್ತಾಳೆ. ಈ ಸಂದರ್ಭದಲ್ಲಿ ಒಂದೆಡೆ ಪುಟ್ಟಯ್ಯನ ಆಕರ್ಷಣೆ ಮತ್ತೊಂದೆಡೆ ಸನ್ಯಾಸಿ ವೇಷದಲ್ಲಿ ಬಂದಿರುವ ಗಂಡನ ಕಾರಣದಿಂದ ಅವಳು ಅನುಭವಿಸುವ ಮಾನಸಿಕ ತುಮುಲವನ್ನು ಕತೆಗಾರರು ವಿವರಿಸಿದ್ದಾರೆ: "ಅವಳಿಗೆ ಗಂಡನ ಮೋರೆ ನೋಡುವಾಗ ಏಕೋ

ಸಂಕೋಚವಾಗುತ್ತಿತ್ತು. 'ಥೂ, ನಾನು ಒಂದೇ ಒಂದು ದಿನ ಕಾದಿದ್ದರೆ?' ಎಂದು ಅವಳ ಅಂತರ್ಯ ಒಂದೇ ಸಮನೆ ಆಕೆಯನ್ನು ಚುಚ್ಚುತ್ತಿತ್ತು. ಅದರಿಂದಾಗಿ ಆಕೆ ಬಿಕ್ಕಿ ಬಿಕ್ಕಿ ಅತ್ತು ಬಿಟ್ಟಳು" (ಪ.ರಾಮಕೃಷ್ಣ ಶಾಸ್ತ್ರಿ; ಬದುಕು;೧೯೮೩; ಪುಟ ೨೪). ಅನಿವಾರ್ಯವಾಗಿ ಪರಪುರುಷನ ಸಹವಾಸ ಮಾಡಿದ ಹೆಣ್ಣು ಕೊನೆಯಲ್ಲಿ ಪಶ್ಚಾತ್ತಾಪ ಪಡುವಂತೆ ಚಿತ್ರಿಸುವ ಮೂಲಕ ಹೆಣ್ಣಿನ ಕುರಿತು ಸಹಾನುಭೂತಿಯನ್ನು ತೋರಿದ್ದಾರೆ. ಪಡಾರು ಮಹಾಭಲೇಶ್ವರ ಭಟ್ಟರ 'ಮಾರಿಬಲೆ ಬೀಸಿತ್ತು' ಕತೆಯಲ್ಲಿ ಚೆನ್ನಪ್ಪ ಮಾರಿ ಬಲೆಯ ನೆಪದಲ್ಲಿ ಮುತ್ತುವಿನ ಗಂಡನನ್ನು ಕೊಂದ ಚಿತ್ರಣವಿದೆ. ಚೆನ್ನಪ್ಪನು ಮುತ್ತುವನ್ನು ಪಡೆಯಬೇಕೆಂಬ ಉದ್ದೇಶದಿಂದ ಅವಳ ಗಂಡನನ್ನು ಮಾರಿಬಲೆ ಹಾಕುವುದಕ್ಕೆ ಪ್ರೇರೇಪಿಸಿ ಕರೆದುಕೊಂಡು ಹೋಗಿ ಕೊಲ್ಲುವ ಸಾಹಸವನ್ನು ಮಾಡುತ್ತಾನೆ. ಮುತ್ತುವಿನ ಕತೆ ಕೇಳಿದ ಸೇಸಜ್ಜಿಯ ಮಾತುಗಳಲ್ಲಿ "ಅವನು ನಿನ್ನ ಗಂಡನನ್ನು ಕೊಂದು ಬಿಟ್ಟನೆ? ಅಬ್ಬಾ ಅವನು ಬೀಸಿದ ಮಾರಿಬಲೆಯೇ!" (ಪಡಾರು ಮಹಾಬಲೇಶ್ವರ ಭಟ್ಟ; ಮಾರಿಬಲೆ ಬೀಸಿತ್ತು; ೧೯೮೪; ಪುಟ ೧೩) ಎಂಬ ವಿಚಾರ ತಿಳಿದುಬರುತ್ತದೆ. ಹೆಣ್ಣನ್ನು ಪಡೆಯುವುದಕ್ಕಾಗಿ ಅವಳ ಗಂಡನನ್ನೇ ಹತ್ಯೆ ಮಾಡುವ ಮೂಲಕ ಹೆಣ್ಣಿಗೆ ನಮ್ಮ ಸಮಾಜದಲ್ಲಿ ಆಗಿರುವ ಅನ್ಯಾಯವನ್ನು ತಿಳಿಸಿದ್ದಾರೆ.

ಮಹಾಬಲಮೂರ್ತಿ ಕೊಡ್ಲೆಕೆರೆಯವರ 'ವೈಶಂಪಾಯನ ತೀರ' ಕತೆಯು ಗಂಡುಹೆಣ್ಣಿನ ಸಂಬಂಧದ ದುರಂತ ಚಿತ್ರಣವನ್ನು ನೀಡುತ್ತದೆ. ಯಕ್ಷಗಾನ ವೇಷಧಾರಿಗಳಾದ ಕೃಷ್ಣಭಟ್ಟ ಮತ್ತು ವೆಂಕಪ್ಪಹೆಗಡೆಯವರು ರಂಗಸ್ಥಳದಲ್ಲಿ ಯಾವಾಗಲೂ ಭೀಮ ಮತ್ತು ಕೌರವನ ಪಾತ್ರವನ್ನು ಮಾಡುತ್ತಿದ್ದರು. ಒಂದು ದಿನ ತನ್ನ ಪತ್ನಿಯು ವೆಂಕಪ್ಪಹೆಗಡೆಯ ಜೊತೆಗಿರುವುದನ್ನು ನೋಡಿದ ಕೃಷ್ಣಭಟ್ಟರು ಮನೆಬಿಟ್ಟು ಹೋಗುತ್ತಾರೆ. ಮುಂದೆ ಹದಿನೈದು ವರ್ಷಗಳ ಬಳಿಕ ಅವರು ಊರಿಗೆ ಬಂದಾಗ ಅವರ ಪತ್ನಿ ಕಲ್ಯಾಣಿ ಹುಚ್ಚಿಯಾಗಿರುವ ವಿಚಾರ ತಿಳಿದು ಬರುತ್ತದೆ. ತನ್ನ ಪತ್ನಿಯನ್ನು ಚೆನ್ನಾಗಿ ನೋಡಿಕೊಳ್ಳದ ಆಕ್ರೋಶವನ್ನು ತನ್ನ ಸ್ನೇಹಿತನ ಮಗನಾದ ಧನಂಜಯನಿಗೆ ವಿವರಿಸುವ ಸಂದರ್ಭದಲ್ಲಿ "ಆದರೆ ಆ ಹೆಣ್ಣನ್ನು ಹೀಗೆ ಹುಚ್ಚಳಾದ, ಮೈಕೈ ಸೊರಗಿ, ಕೂದಲೆಲ್ಲ ಕೆದರಿ ಊರಿಡೀ ಅಲೆಯಲು ಬಿಟ್ಟ ಅವನನ್ನು ನೆನಸಿ ರಕ್ತ ಒಂದೇ ಸಮನೆ ಕುದಿಯಲಾರಂಭಿಸಿತು. ಅವನು ಮನಸ್ಸಿಟ್ಟು ಅವಳನ್ನು ಚೆನ್ನಾಗಿಡಬಹುದಿತ್ತು." (ಮಹಾಬಲಮೂರ್ತಿ ಕೊಡ್ಲೆಕೆರೆ; ಯಕ್ಷಸೃಷ್ಟಿ; ೧೯೯೪; ಪುಟ ೩೭) ಎಂಬುದಾಗಿ

ಹೇಳುತ್ತಾನೆ. ವೆಂಕಪ್ಪಹೆಗಡೆಯೇ ತನ್ನ ಪತ್ನಿಯಾದ ಕಲ್ಯಾಣಿಯ ಹುಚ್ಚಿಗೆ ಕಾರಣ ಎಂಬುದನ್ನು ತಿಳಿದ ಕೃಷ್ಣಭಟ್ಟರು 'ಗದಾಯುದ್ಧ' ಯಕ್ಷಗಾನ ಬಯಲಾಟ ನಡೆಯುವ ಸಮದರ್ಭದಲ್ಲಿ ಭೀಮ ಪಾತ್ರಧಾರಿಯಾಗಿ ಆವೇಶಕ್ಕೆ ಒಳಗಾಗಿ ಕೌರವ ಪಾತ್ರಧಾರಿ ವೆಂಕಪ್ಪಹೆಗಡೆಯ ಕೊಲೆಗೆ ಕಾರಣನಾಗುತ್ತಾನೆ. ಹೀಗೆ ಗಂಡುಹೆಣ್ಣಿನ ಅನೈತಿಕ ಸಂಬಂಧ ಕೊಲೆಯೊಂದಿಗೆ ಮುಕ್ತಾಯವಾಗುತ್ತದೆ.

ಸುಬ್ರಾಯ ಬಿದ್ರೆಮನೆಯವರ 'ನಿರ್ದೋಷಿ' ಕತೆಯಲ್ಲಿ ಪರಿಸ್ಥಿತಿಯ ಇಕ್ಕಟ್ಟಿಗೆ ಸಿಲುಕಿ ಅಪರಾಧಿಯಾಗಿ ತೋರುವ ಪ್ರತಿಭಾವಂತ ಯುವಕ ವಿದ್ಯಾಧರನ ಚಿತ್ರಣವಿದೆ. ವರದಳ್ಳಿಯ ವಿದ್ಯಾಧರ ವಿದ್ಯಾರ್ಜನೆಯಲ್ಲಿ ಮುಂದಿದ್ದ ಕಾರಣ ಅವನ ದೊಡ್ಡಪ್ಪನ ಮಗಳು ಚೈತ್ರಳಿಗೆ ಟ್ಯೂಷನ್ ಪಾಠ ಹೇಳಿ ಕೊಡುತ್ತಿದ್ದ. ಆದರೆ ಚೈತ್ರಳು ವಿದ್ಯಾಧರನ ಸಹಪಾಠಿ ಅಜೇಯನ ಪ್ರೇಮಪಾಶಕ್ಕೆ ಬಲಿಯಾಗಿ ಗರ್ಭವತಿಯಾಗುತ್ತಾಳೆ. ಕೊನೆಗೆ ಅಜೇಯನು ಹಣಬಲದಿಂದ ವಿದ್ಯಾಧರನೇ ಅಪರಾಧಿ ಎಂದು ಪಂಚಾಯ್ತಿಕಟ್ಟೆಯಲ್ಲಿ ತೀರ್ಮಾನವಾಗುವಂತೆ ಮಾಡುತ್ತಾನೆ. ದುಡ್ಡಿನದರ್ಪದ ಅಮಲುಂಡವರ ನಡುವೆ ವಿದ್ಯಾಧರ ನಿರಪರಾದಿತ್ವ ಸಾಬೀತು ಪಡಿಸಿಕೊಳ್ಳುವಲ್ಲಿ ವಿಫಲನಾಗಿದ್ದ. ಕೊನೆಗೆ ಹೊರಿಸಿದ ಅಪರಾಧಕ್ಕೆ ನೀತಿ ನಿಯತ್ತಿನ ವಿದ್ಯಾಧರ ಹೆದರಿ ಈ ಸಮಾಜವನ್ನೇ ತೊರೆದು ಹೋಗುತ್ತಾನೆ. "ಕೊನೆಗೆ ಮರ್ಯಾದೆಗೆ ಹೆದರಿ ಕರುಳು ಸಂಬಂಧದ ಬಂಧು-ಬಾಂಧವರು, ಕರುಳು ಕುಡಿಯ ಸಂಬಂಧದ ವರದಳ್ಳಿಯ ಎಲ್ಲವನ್ನೂ ಎಲ್ಲರನ್ನೂ ದುಃಖದಿಂದ ಅಷ್ಟೇ ರೋಷದಿಂದ, ಎದ್ದು ಎದುರಿಸಲಾಗದ ಅಸಹಾಯಕತೆಯಿಂದ ತೊರೆದು ಅಮಾವಾಸ್ಯೆಯ ಕತ್ತಲಲ್ಲಿ ಕರಗಿಹೋದ ! ಮತ್ತೆಂದು ಆತ ಊರಿಗೆ ಮುಖ ತೋರಿಸಲಿಲ್ಲ!!" (ಸುಬ್ರಾಯ ಬಿದ್ರೆಮನೆ; ಬೇಲಿ; ೧೯೯೬; ಪುಟ ೨೭) ಎಂಬ ಕತೆಗಾರರ ಮಾತಿನಲ್ಲಿ ಗಂಡುಹೆಣ್ಣಿನ ಸಂಬಂಧ ಅಮಾಯಕ ಯುವಕನ ಬದುಕನ್ನು ದುರಂತಕ್ಕೆ ಗುರಿ ಮಾಡಿದಂತೆ ಕಂಡು ಬರುತ್ತದೆ. ಬದುಕಿ ಬಾಳಬೇಕಾಗಿದ್ದ ಯುವಕ ಶ್ರೀಮಂತರ ಕಪಿಮುಷ್ಠಿಗೆ ಸಿಲುಕಿ ದುರಂತಕ್ಕೀಡಾದ ಬಗೆಯನ್ನು ಸುಬ್ರಾಯ ಬಿದ್ರೆಮನೆಯವರು ವಸ್ತುನಿಷ್ಠವಾಗಿಯೇ ಚಿತ್ರಿಸಿದ್ದಾರೆ.

ಹೆಚ್.ಜಿ.ಸೀತಾರಾಂ ಅವರು ಬರೆದ 'ಸನ್ಯಾಸಿ' ಕತೆಯಲ್ಲಿ ಸುಮಿ ಮೋಹನರಲ್ಲಿ ಪರಸ್ಪರ ಮೊಳೆತ ಲೌಕಿಕ ಕಾಮವಾಸನೆ, ಅಲೌಕಿಕ ಸೋದರ ಪ್ರೇಮವಾಗಿ

ಪರಿವರ್ತನೆಗೊಂಡು, ಮೋಹನ ಸನ್ಯಾಸಿಯಾಗುವ ವಿವರಗಳಿವೆ. ಮೋಹನ ಸನ್ಯಾಸಿಯಾಗಲು ಅವನ ಬಡತನವೇ ಕಾರಣ ಎಂಬ ಆಶಯವನ್ನು ಕತೆಗಾರರು ಹೇಳುವ ಮೂಲಕ ಸಮಾಜದ ಅಸಮಾನತೆಯ ವಿರುದ್ಧ ದನಿ ಎತ್ತಿರುವುದು ಕಂಡುಬರುತ್ತದೆ.

ಕಡೆಂಗೋಡ್ಲು ಶಂಕರ ಭಟ್ಟರ 'ನನ್ನ ಪತ್ರ' ಲಲಿತವಾದ ಒಂದು ಕತೆ. ಗಂಡ-ಹೆಂಡಿರ ನಡುವಣ ಮಧುರವಾದ ದಾಂಪತ್ಯ ಜೀವನದಲ್ಲಿ ಪತ್ರಗಳ ಅದಲು-ಬದಲು ಉಂಟುಮಾಡುವ ಸನ್ನಿವೇಶವನ್ನು ಕತೆ ಬಿಂಬಿಸುತ್ತದೆ. ಹೆಂಡತಿಗೆ ಬರೆದ ಪತ್ರ ಕೈ ತಪ್ಪಿನಿಂದ ಹೆಂಡತಿಯ ಹೆರಿಗೆ ಮಾಡಿಸಿದ ಲೇಡಿ ಡಾಕ್ಟರಳ ಕೈ ಸೇರಿ, ಅಲ್ಲಿಂದ ನಿಜವಾದ ವಿಳಾಸದಾರಳನ್ನು ಸೇರುವಲ್ಲಿವರೆಗಿನ ಸಂದೇಹ, ಸಮಸ್ಯೆಗಳನ್ನು ಹಂತ ಹಂತವಾಗಿ ಚಿತ್ರಿಸಲಾಗಿದೆ. ಗಂಡ-ಹೆಂಡಿರ ನಡುವಣ ಹುಸಿಕೋಪ, ಪತ್ನಿಯ ಬಗ್ಗೆ ಗಂಡತೋರುವ ಪ್ರೇಮ ಮಾಧುರ್ಯ ಕತೆಯಲ್ಲಿ ಚೆನ್ನಾಗಿ ಚಿತ್ರಿಸಲ್ಪಟ್ಟಿದೆ. ಪತ್ನಿಯ ಪ್ರಫುಲ್ಲ ಮುಖವನ್ನು ಹಾರೈಸಿದ್ದ ಗಂಡ ಆಕೆಯ ಉರಿಮೊಗವನ್ನೂ ಮೂಕ ಕಠೋರತೆಯನ್ನೂ ಎದುರಿಸಬೇಕಾದ ಪ್ರಸಂಗವು ಸ್ವಾರಸ್ಯಪೂರ್ಣವಾಗಿ ನಿರೂಪಿತವಾಗಿದೆ.

ಹವ್ಯಕ ಕತೆಗಾರರು ಪ್ರಗತಿಶೀಲ ಕಾಲಘಟ್ಟದಲ್ಲಿ ಗಂಡು-ಹೆಣ್ಣಿನ ಸಂಬಂಧದ ಕುರಿತು ಬರೆದ ಕತೆಗಳಲ್ಲಿ ಗಂಡು-ಹೆಣ್ಣಿಗಳ ಸಂಬಂಧ ಮದುವೆಯಲ್ಲಿ ಮುಕ್ತಾಯಗೊಳ್ಳುತ್ತದೆ. ಆದರೆ ಕೆಲವು ಕತೆಗಳಲ್ಲಿ ಬರುವ ಅನೈತಿಕ ಸಂಬಂಧ ದುರಂತಕ್ಕೆ ಕಾರಣವಾಗುವುದನ್ನು ಗಮನಿಸಬಹುದು.

### ೬.೩ ವೇಶ್ಯೆ- ವೇಶ್ಯಾ ಜೀವನ

ಮಹಿಳೆಯರ ಸಮಸ್ಯೆಗಳು ಏಕಮುಖವಾಗಿಲ್ಲ; ಅದಕ್ಕೆ ಭಾರತೀಯ ಸಮಾಜದಲ್ಲಿ ಹಲವು ಮುಖಗಳಿವೆ. ಬಾಲ್ಯ ವಿವಾಹ, ಕೇಶಮುಂಡನ, ವರದಕ್ಷಿಣೆ, ವಿಧವಾ ಸಮಸ್ಯೆ ಮುಂತಾದವುಗಳೇ ವೇಶ್ಯಾ ಸಮಸ್ಯೆಯ ಹುಟ್ಟಿಗೆ ಕಾರಣ ಎಂಬ ಅಂಶವು ಗೋಚರವಾಗುತ್ತದೆ. ವೈಯುಕ್ತಿಕ ನೆಲೆಯಲ್ಲಿ ಅಸಹಾಯಕರಾಗಿಯೋ, ಅನಾಥರಾಗಿಯೋ, ಬಡತನದ ಹಿಂಸೆ ತಾಳದೆಯೋ, ಮೋಸಕ್ಕೆ ಒಳಗಾಗಿಯೋ ಒಮ್ಮೆ ಅನೈತಿಕ ಸಂಬಂಧ ಹೊಂದಿ, ಅನಂತರ ಆ ವಿಷವರ್ತುಲಕ್ಕೆ ಸಿಲುಕಿ ಹೊರಬರಲಾಗದೆ

ನರಳಿದವರೇ ಅಧಿಕ. ಹೀಗಾಗಿ ಇಂಥ ವೈಯಕ್ತಿಕ ನೆಲೆಯಿಂದ ಸಮಸ್ಯೆ ಹುಟ್ಟಿ, ಬರಬರುತ್ತ ಇದು ಸಮಾಜಕ್ಕೆ ದೊಡ್ಡ ತಲೆನೋವಾಗಿ, ಅಪರಿಹಾರ್ಯ ಸಮಸ್ಯೆಯಾಗಿ ಕಂಡುಬಂದಿದೆ. ವೇಶ್ಯಾ ಸಮಸ್ಯೆಯ ಕುರಿತು ಹೆಚ್ಚು ಬರೆದವರು ಪ್ರಗತಿಶೀಲ ಲೇಖಕರು. ಈ ಕತೆಗಳನ್ನು ಗಮನಿಸಿದಾಗ ಸಾಮಾಜಿಕ ಕಟ್ಟುಪಾಡುಗಳು, ಧಾರ್ಮಿಕ ನಿಯಮಗಳು, ಸಮಾಜದ ಪ್ರತಿಷ್ಠಿತ ಜನರು, ಪುಂಡರು ಮತ್ತು ಸಾಂಪ್ರದಾಯಿಕ ವ್ಯವಸ್ಥೆಗೆ ಜೋತುಬಿದ್ದ ಪುರುಷ ಪ್ರದಾನ ಸಮಾಜವೇ ವಿಧವೆಯರು, ವೇಶ್ಯೆಯರಾಗಲು ಕಾರಣವೆಂಬ ಚಿತ್ರಣವಿದೆ. ಹೆಣ್ಣಿ ವೇಶ್ಯೆಯಾಗುವುದಕ್ಕೆ ಬದುಕಿನ ನಿರ್ವಹಣೆಯೂ ಕಾರಣವಾಗಿದೆ ಎನ್ನುವುದನ್ನು ಕತೆಗಳು ಹಲವೆಡೆ ದಾಖಲಿಸಿವೆ.

ವೇಶ್ಯೆಯರಾಗುವುದಕ್ಕೆ ಬಡತನ, ಹಣದ ಆಸೆ, ಆಶ್ರಯವಿಲ್ಲದ ಸ್ಥಿತಿ ಮುಂತಾದವುಗಳು ಕಾರಣವಾದಂತೆ ಹೆಣ್ಣಿನ ಅಸಹಾಯಕತೆ ಹಾಗೂ ಮುಗ್ಧತೆಯನ್ನು ದುರುಪಯೋಗ ಪಡಿಸಿಕೊಳ್ಳುವ ಪುರುಷ, ಒಮ್ಮೆ ದಾರಿ ತಪ್ಪಿ ತಿದ್ದಿಕೊಳ್ಳಲು ಪ್ರಯತ್ನಿಸಿದರೂ ಅದಕ್ಕೆ ಅವಕಾಶ ನೀಡದ ಸಾಮಾಜಿಕ ಧೋರಣೆಗಳೂ ಕಾರಣವಾಗಿವೆ ಎಂಬುದನ್ನು ಇಲ್ಲಿಯ ಕತೆಗಳು ಸೂಚಿಸುತ್ತವೆ. ಈ ರೀತಿ ವೇಶ್ಯಾ ಸಮಸ್ಯೆಗಳಿಗೆ ಕಾರಣಗಳನ್ನು ಗುರುತಿಸುವ ಕತೆಗಳಲ್ಲಿ ವಿ.ತಿ.ಶೀಗೇಹಳ್ಳಿಯವರ 'ಕುಸುಮ ಕಂಟಕ' ಮತ್ತು ಶ್ರೀಕೃಷ್ಣ ಚೊಕ್ಕಾಡಿಯವರ 'ಪರಿಣಾಮ' ಗಮನಾರ್ಹವಾಗಿವೆ.

ವೇಶ್ಯೆಯರೆಲ್ಲ ಬೇಕಾಗಿ ಆ ವೃತ್ತಿಗೆ ಬಂದವರಲ್ಲ. ಅನಿವಾರ್ಯವಾಗಿ ಅದನ್ನೇ ಅವಲಂಬಿಸುವುದಕ್ಕೆ ಬಾಹ್ಯ ಮತ್ತು ಕೌಟುಂಬಿಕ ಕಾರಣಗಳಿವೆ. ವಿ.ತಿ.ಶೀಗೇಹಳ್ಳಿಯವರು ಬರೆದ 'ಕುಸುಮ ಕಂಟಕ' ಕತೆಯಲ್ಲಿ ವ್ಯಾಪಾರಿ ಮಹಾಬಲನ ಕಾಮಪಿಪಾಸೆಗೆ ಬಲಿಯಾದ ವಿಧವೆ ಕಾಮಾಕ್ಷಿಯಮಗಳು ಸಾವಿತ್ರಿ ಗರ್ಭವತಿಯಾಗಿ ಮಗುವನ್ನು ಹಡೆಯುತ್ತಾಳೆ. ಇದೇ ಸಂದರ್ಭದಲ್ಲಿ ಮಹಾಬಲನ ಸಂಬಂಧಿಕರು ಅವನಿಗೆ ಲಗ್ನ ಮಾಡಿಸುತ್ತಾರೆ. "ತನ್ನ ಮರ್ಯಾದೆಯ ಹಾದಿಯಲ್ಲಿ ಸಾವಿತ್ರಿಯ ಇಡೀ ಜೀವನವನ್ನು ಸುಡಲು ಸಮ್ಮತಿಸಿದ. ಸಮಾಜದಲ್ಲಿ ಕೀಳೆಂದು ಬಗೆದು ಬದಿಗೊತ್ತಿದ ಸಾವಿತ್ರಿಯನ್ನು ಹೆಣ್ಣೊಬ್ಬಳನ್ನು ಉಪಯೋಗಿಸಿಕೊಂಡು ಕಸವೆಂದು ಬೀಸಾಡಿದ" (ವಿ.ತಿ.ಶೀಗೇಹಳ್ಳಿ; ಹರಿದ ಸೆರಗು; ೧೯೪೯; ಪಟ ೩೪). ಹೀಗೆ ಮಹಾಬಲನಿಂದ ತಿರಸ್ಕೃತಗೊಂಡ ಸಾವಿತ್ರಿ ಜಗತ್ತಿನ ಕಾಮದ ಹುಚ್ಚಿಗೆ ಬಲಿಯಾಗಿ ವೇಶ್ಯೆಯಾಗುತ್ತಾಳೆ. "ಅವರು ಅವಳ

ಸಂಗಡಲಾದರೂ ಚೆನ್ನಾಗಿರಲಿ. ನಾನೇಕೆ ಮದ್ಯ ಹುಳಿ ಹಿಂಡಲಿ! ಅವಳೂ ನನ್ನಂತೆ ಹೆಣ್ಣೆ. ನನಗೊಬ್ಬಳಿಗೆ ಈ ಗತಿಯಾಗಿದ್ದೇ ಸಾಕು ಇನ್ನಾರಿಗೂ ಬೇಡ!" (ವಿ.ತಿ.ಶೀಗೇಹಳ್ಳಿ; ಹರಿದ ಸೆರಗು; ೧೯೪೯; ಪುಟ ೩೫). ತಾನು ಗಂಡಸಿನ ಕ್ರೂರಮುಷ್ಟಿಗೆ ಸಿಲುಕಿ ಶೀಲವನ್ನು ಕಳೆದುಕೊಂಡರೂ ನನ್ನಂತೆ ಇನ್ನೊಬ್ಬ ಹೆಣ್ಣಿಗೆ ಎಂಬ ಸಾವಿತ್ರಿಯ ಮನದ ಉದಾರತೆಯನ್ನು ಕತೆಗಾರರು ಗುರುತಿಸಿದ್ದಾರೆ. "ಅಪಹೃತರಾದ ಸ್ತ್ರೀಯರನ್ನು ತಿರುಗಿ ನಿಮ್ಮ ನಿಮ್ಮ ಮನೆಗೆ ಸೇರಿಸಿಕೊಳ್ಳಿ ಅವರನ್ನು ಹಾಗೆ ಎಂದಿಗೂ ಪರದೇಶಿಗಳನ್ನಾಗಿ ಮಾಡಬೇಡಿ. ಅವರನ್ನು ಹಾಗೆ ಬಿಡುವುದರಿಂದ ದೇಶದ ಲೌಕಿಕ, ನೈತಿಕ ಪರಿಸ್ಥಿಯು ಇನ್ನೂ ಹದಗೆಟ್ಟು ಹೋಗುವುದು. ಅದರಿಂದ ಸ್ವತಂತ್ರ ಭಾರತದ ಕೀರ್ತಿಯು ಅಳಿಯುವದು. ಅವರೆಲ್ಲ ಅಕ್ಕತಂಗಿಯರು, ಹೆಂಡಂದಿರು, ತಾಯಂದಿರು! ಅವರನ್ನೆಲ್ಲ ದಿಕ್ಕಿಲ್ಲದವರನ್ನಾಗಿ ಮಾಡುವದು ಪರಮ ಅನ್ಯಾಯ! ಸೃಷ್ಟಿಯ ಎಲ್ಲ ಜೀವಿಗಳನ್ನು ಸೇವಿಸುತ್ತ ದೇವರ ಪೂಜ್ಯತ್ವವನ್ನು ಪ್ರೇಮವನ್ನು ವ್ಯಕ್ತಪಡಿಸುವುದಕ್ಕಾಗಿ ಮಾನವನು ದೇವರ ಪ್ರತಿನಿಧಿಯಾಗಿರುವನೆಂಬುದನ್ನು ಜ್ಞಾಪಕದಲ್ಲಿಟ್ಟುಕೊಳ್ಳಿರಿ. ಆದುದರಿಂದ, ದಯೆ, ಪ್ರೀತಿಯಿಂದ ಅವರನ್ನು ಪುನಃ ಸೇರಿಸಿಕೊಳ್ಳಿರಿ!" (ವಿ.ತಿ.ಶೀಗೇಹಳ್ಳಿ; ಹರಿದ ಸೆರಗು; ೧೯೪೯; ಪುಟ ೨೬). ಕತೆಯ ಆರಂಭದಲ್ಲಿ ಬರುವ ಗಾಂಧೀಜಿಯವರ ಪ್ರಾರ್ಥನೋತ್ತರ ಭಾಷಣದ ಸಾಲುಗಳು ಮತ್ತು ಕತೆಯ ಕೊನೆಯಲ್ಲಿ ಮಹಾಬಲ, ಸಾವಿತ್ರಿಯ ಬಗೆಗೆ ಕೈಗೊಳ್ಳುವ ನಿರ್ಣಯಗಳಲ್ಲಿ ವೇಶ್ಯೆಯರ ಜೀವನದ ಸಮಸ್ಯೆ ಸಮಸ್ಯೆಯಾಗಿಯೇ ಉಳಿದಿದೆಯೇ ಹೊರತು ವೇಶ್ಯೆಯರ ಉದ್ಧಾರ ಸಾಧ್ಯವಾಗಿಲ್ಲ ಎಂಬ ಆಶಯವನ್ನು ಕತೆಗಾರರು ವ್ಯಕ್ತಪಡಿಸಿದ್ದಾರೆ.

ಶ್ರೀಕೃಷ್ಣ ಚೊಕ್ಕಾಡಿಯವರ 'ಪರಿಣಾಮ' ಕತೆಯಲ್ಲಿ ಸುಂದರಿ, ಯುವಕನೊಬ್ಬನ ಕಾಮಕ್ಕೆ ಬಲಿಯಾಗಿ, ಅನಂತರ ಸಮಾಜದಲ್ಲಿ ವೇಶ್ಯೆಯಾಗಿ ಬದುಕಬೇಕಾದ ಅನಿವಾರ್ಯತೆ ಎದುರಾಗುವುದು. ಸುಂದರಿ ಪ್ರೀತಿಸಿದ ಯುವಕನಿಂದ ಗರ್ಭವತಿಯಾಗುತ್ತಾಳೆ. ಗರ್ಭಪಾತವನ್ನು ನಿರಾಕರಿಸಿದ ಡಾಕ್ಟರರು ಅದೇ ಯುವಕನೊಂದಿಗೆ ಬಾಳುವೆ ನಡೆಸುವಂತೆ ಸಲಹೆ ಕೊಡುತ್ತಾರೆ. ಆದರೆ ಮೇಲುಜಾತಿಯವನಾದ ಯುವಕ ಅವಳನ್ನು ತೊರೆಯುತ್ತಾನೆ. ಹೀಗೆ ಮನೆಯರಿಂದ, ತಿರಸ್ಕೃತಳಾದ ಸುಂದರಿ ಜೀವನ ನಿರ್ವಹಣೆಗಾಗಿ ಅನಿವಾರ್ಯವಾಗಿ ವೇಶ್ಯೆಯಾಗುತ್ತಾಳೆ. "ನನಗೆ ಬೇರೆ ಗತಿಯಿಲ್ಲವೆಂದು ಊರಿಗೇ ತಿಳಿದಿತ್ತು. ಗಂಡು ಕಣ್ಣುಗಳು ನನ್ನನ್ನು

ಹಸಿವೆಯಿಂದ ನೋಡುತ್ತಿದ್ದವು. ಆಗಲೇ ನನಗನ್ನಿಸಿದ್ದು ಹೇಗೂ ದಾರಿ ತಪ್ಪಿದ್ದಾಗಿದೆ. ಜೀವನಕ್ಕೆ ಇದೇ ದಾರಿ ಹಿಡಿದರೆ ತಪ್ಪೇನು? ಎಂದು" (ಶ್ರೀಕೃಷ್ಣ ಚೊಕ್ಕಾಡಿ; ನಿರೀಕ್ಷೆ; ೧೯೭೭; ಪುಟ ೫೮). ಹೀಗೆ ಬದುಕುವುದಕ್ಕಾಗಿ ಸಮಾಜದಲ್ಲಿ ವೇಶ್ಯೆಯಾಗಿ ಪರಿವರ್ತನೆಗೊಂಡ ಸ್ಥಿತಿಯನ್ನು ಸುಂದರಿ ಡಾಕ್ಟರರಿಗೆ ತಿಳಿಸುತ್ತಾಳೆ. "ಕಳೆದ ಐದಾರು ವರ್ಷಗಳಲ್ಲಿ ಹಲವಾರು ಗಂಡಸರ ಸಹವಾಸ ನನಗಾಗಿದೆ. ಅದರಲ್ಲಿ ಊರ ಮುಂದಾಳುಗಳಿದ್ದಾರೆ. ನನಗಿಂತ ಮೇಲಿನ ಜಾತಿಯವರೂ ಇದ್ದಾರೆ. ಅವರಲ್ಲಿ ಹಣವಿದೆ. ನನ್ನಲ್ಲಿ ಹೆಣ್ತನವಿದೆ. ನಾನೀಗ ಕೂಲಿ ಕೆಲಸದ ಹೆಣ್ಣಾಗಿಲ್ಲ. ಹಗಲಿನ ದುಡಿಮೆಯಿಲ್ಲದೆ ಬದುಕುತ್ತಿದ್ದೇನೆ. ನಾಲ್ಕು ಕಾಸೂ ನನ್ನ ಕೈಯಲ್ಲಿದೆ, ಎಂಬ ಅರಿವಾದ ಮೇಲೆ ಹಿಂದೆ ನನ್ನನ್ನೊಂದು ಕ್ಷುದ್ರ ಜಂತುವಿನಂತೆ ಕಂಡವರೇ ಇಂದು ಗೌರವದಿಂದ ಕಾಣುತ್ತಿದ್ದಾರೆ" (ಶ್ರೀಕೃಷ್ಣ ಚೊಕ್ಕಾಡಿ; ನಿರೀಕ್ಷೆ; ೧೯೭೭; ಪುಟ ೫೮). ಮೇಲಿನ ಮಾತುಗಳು ಸಮಾಜದ ಢಾಂಬಿಕ ಚಿತ್ರಣವನ್ನು ನೀಡುತ್ತದೆ. ಹೀಗೆ ಅನಿವಾರ್ಯವಾಗಿ ವೇಶ್ಯೆಯಾದ ಹೆಣ್ಣೊಬ್ಬಳು ಬದುಕು ಮತ್ತು ಜೀವ ಎರಡೂ ಗಾಣವೆನಿಸಿದಾಗಲೂ, ಯಾಂತ್ರಿಕ ಬದುಕನ್ನು ಸಾಗಿಸಬಹುದು ಎಂಬ ಅಂಶವು ವೇಶ್ಯಾ ಸಮಸ್ಯೆಗೆ ಹೆಚ್ಚಿನ ಸಂಕೀರ್ಣತೆಯನ್ನೂ ದಾರುಣತೆಯನ್ನೂ ತಂದುಕೊಡುತ್ತದೆ.

ಒಟ್ಟಿನಲ್ಲಿ ಹೆಣ್ಣಿ ಸದಾ ಶೋಷಿತಳು ಎಂಬುದನ್ನು ಹವ್ಯಕ ಕತೆಗಾರರು ಗುರುತಿಸಿದ್ದಾರೆ. ಹೆಣ್ಣು ವೇಶ್ಯೆಯಾಗಲು ಸಮಾಜದ ಅಮಾನವೀಯ ನಡವಳಿಕೆಯೇ ಕಾರಣ. ವೇಶ್ಯಾ ಸಮಸ್ಯೆಯು ಸರಳ ಕಾರಣವೊಂದರಿಂದ ಹುಟ್ಟಿಕೊಂಡದ್ದಲ್ಲ. ಅದು ಸಮಾಜ ನಿರ್ಮಿಸಿದ ಒಂದು ಸಂಕೀರ್ಣ ವ್ಯವಸ್ಥೆ ಎನ್ನುವುದರ ಕಡೆಗೆ ಹವ್ಯಕ ಬರಹಗಾರರು ಬೆಳಕು ಚೆಲ್ಲಿದ್ದಾರೆ.

### ೬.೪ ಜೀವಪರ ನಿಲುವು

ಭಾರತೀಸುತರ 'ದಾರಿಯಲ್ಲಿ ಬಿದ್ದ ಹೂವು', 'ಕರೆಗೆ ಓಗೊಟ್ಟ ಕಾರ್ಡೀಲಿಯಾ' ಮತ್ತು 'ಕಾವೇರಿ ಒಲಿದಿತ್ತ ಕನ್ಯೆ' ಕತೆಗಳಲ್ಲಿ ಮಹಿಳೆಯ ಬಗೆಗೆ ಜೀವಪರ ನಿಲುವು ಕಂಡುಬರುತ್ತದೆ. ಈ ಕತೆಗಳಲ್ಲಿ ಪತಿತೆಯಾದ ಹೆಂಗಸರಿಗೆ ಬಾಳುಕೊಟ್ಟು ಕಾಪಾಡುವ ಚಿತ್ರಣ ಕಂಡುಬರುತ್ತದೆ. ಪ್ರಗತಿಶೀಲ ಸಾಹಿತ್ಯ ಚಳುವಳಿಯ ಪ್ರಭಾವದಿಂದ ಭಾರತೀಸುತರು ತಮ್ಮ ಕತೆಗಳಲ್ಲಿ ಜೀವಪರ ನಿಲುವನ್ನು ಪ್ರಕಟಿಸಿದಂತಿದೆ.

ಭಾರತೀಸುತರ 'ದಾರಿಯಲ್ಲಿ ಬಿದ್ದ ಹೂವು' ಸಾಮಾಜಿಕ ಕಳಕಳಿಯಿಂದ ಜೀವಪರ ನಿಲುವನ್ನು ಹೊಂದಿದ ಕತೆ. ಚಾತುನಾಯಕನಿಂದಾಗಿ ಕಳ್ಳಗರ್ಭ ಹೊತ್ತ ಲಲಿತಾಂಬಿಕೆ ಊರು ತೊರೆದು ಕಾಡಿನಲ್ಲಿ ಪ್ರಸವಿಸುತ್ತಾಳೆ. ಆ ಸಂದರ್ಭದಲ್ಲಿ ವಾಸು ಅವಳನ್ನು ಕಾಪಾಡಿ ಮನೆಯ ಅತಿಥಿಯಾಗಿ ಮಾಡಿಕೊಂಡು, ಇಬ್ಬರೂ ಗಂಡಹೆಂಡಿರಂತೆ ನಟಿಸಿದರೂ ನೈಜ ದಂಪತಿಗಳಾಗದೆ ಜೀವಿಸುತ್ತಾರೆ. ಒಂದು ದಿನ ಸಂಯಮ ಮರೆತ ವಾಸು ಲಲಿತಳನ್ನು ಅಪ್ಪಿಕೊಂಡಾಗ ಕೆರಳಿದ ಅವಳು "ಹಳಸಿದ ಮಾಂಸವನ್ನು ಕಂಡು ಬಾಯಿಂದ ಜೊಲ್ಲು ಸುರಿಸಿ ನೆಗೆದ ಕುನ್ನಿ ನೀನು" (ಭಾರತೀಸುತ; ಚಿಂಬ ಹಿಡಿದ ಮೀನು; ೧೯೬೧; ಪುಟ ೯೦) ಎಂದು ಬೈಯುತ್ತಾಳೆ. ಅನೇಕ ಕಷ್ಟಗಳನ್ನು ಸಹಿಸಿದ ವಾಸು ಕೊನೆಗೆ "ತುಳಿದ ಮಲ್ಲಿಗೆಯನ್ನು ನೆತ್ತಿಯಲ್ಲಿ ಸೂಡಿ ಆದರಿಸುತ್ತೇನೆ" (ಭಾರತಿಸುತ ; ಚಿಂಬ ಹಿಡಿದ ಮೀನು; ೧೯೬೧; ಪುಟ ೧೦೩) ಎಂದು ಹೇಳುವಲ್ಲಿ ಪತಿತೆಗೆ ಜೀವವನ್ನು ಕೊಟ್ಟ ಸಂತೃಪ್ತ ಭಾವ ಕಂಡುಬರುತ್ತದೆ.

ಭಾರತೀಸುತರ 'ಕರೆಗೆ ಓಗೊಟ್ಟ ಕಾರ್ಡೀಲಿಯಾ' ಅನ್ಯಜಾತಿಯವನನ್ನು ಕೈ ಹಿಡಿದುದರಿಂದಾಗಿ ಮುತ್ತಣ್ಣನ (ತಂದೆಯ) ಕೋಪಕ್ಕೆ ತುತ್ತಾಗಿದ್ದರೂ, ಕೊನೆಗೆ ಮುತ್ತಣ್ಣನ ಮನಸ್ಸನ್ನು ಗೆದ್ದ ತಂಗುವಿನ ಕತೆಯಿದು. ತಂಗು ಅನ್ಯಜಾತಿಯವನನ್ನು ಪ್ರೀತಿಸಿ ಮದುಮೆಯಾದಾಗ ಮುತ್ತಣ್ಣನು ತನ್ನ ಮಗಳನ್ನು ದೂರ ಮಾಡುತ್ತಾನೆ. ಮಗಳು ಹೇಳಿದ ಶೇಕ್‌ಸ್ಪಿಯರ್ ಎಂಬ ಇಂಗ್ಲಿಷ್ ಕವಿ ಬರದ ಕಿಂಗ್ ಲಿಯರ್ ನಾಟಕದ ಕತೆಯನ್ನು ನೆನೆದು ಮಗಳಿಗೆ ಪತ್ರ ಬರೆಯುತ್ತಾನೆ. ಮುತ್ತಣ್ಣ ಆಸ್ಪತೆಯಲ್ಲಿ ಮಲಗಿರುವ ಸಂದರ್ಭದಲ್ಲಿ ಅವನನ್ನು ಎದೆಯಾಳದಿಂದ ಪ್ರೀತಿಸುತ್ತಾ ಅವರ ಕರೆಗೆ ಓಗೊಟ್ಟು ಮಗಳು ಓಡಿಬರುತ್ತಾಳೆ. ತಂದೆಯ ಬಗೆಗೆ ಮಗಳಿಗಿರುವ ಜೀವಪರ ನಿಲುವನ್ನು ಭಾರತೀಸುತರು ಸೊಗಸಾಗಿ ನಿರೂಪಿಸಿದ್ದಾರೆ. "ಮಗಳಾಡಿದ ಮಾತು ಮುತ್ತಣ್ಣ ಅಜ್ಜನ ಎದೆಯಲ್ಲಿ ಚೈತನ್ಯವನ್ನು ತುಂಬುವ ಸಂಜೀವಿನಿಯಾಯಿತು. ಮುತ್ತಣ್ಣ ಅಜ್ಜನ ಎಣಿಕೆ ಹುಸಿಯಾಗಲಿಲ್ಲ. ಲಿಯರ್ ದೊರೆಯ ಕರೆಗೆ ಓಗೊಟ್ಟು ಕಾರ್ಡೀಲಿಯಾ ಬಂದಿದ್ದಳು!" (ಭಾರತೀಸುತ; ಕರೆಗೆ ಓಗೊಟ್ಟ ಕಾರ್ಡೀಲಿಯ!; ೧೯೬೬; ಪುಟ ೧೭೬). ಶೇಕ್‌ಸ್ಪಿಯರನ ನಾಟಕವನ್ನು ಕನ್ನಡದ ನೆಲಕ್ಕೆ ಹೊಂದಿಸಿ ಬರೆದ ಭಾರತೀಸುತರ ಕಥನ ತಂತ್ರ ಇಲ್ಲಿ ವಿಶಿಷ್ಟವಾಗಿದೆ.

ತೀರ್ಥಯಾತ್ರೆಯಿಂದ ಹಿಂದಿರುಗುವ ಸಂದರ್ಭದಲ್ಲಿ ಮುಸಲರ ದಾಳಿಗೆ ಒಳಗಾದ ಜಾನಕಿಯನ್ನು ಗಂಡನ ಮನೆಯವರು ತಿರಸ್ಕರಿಸಿದಾಗ ಅವಳನ್ನು ಕಾಪಾಡಿದ ಸೋಮಯ್ಯನೇ ಅವಳಿಗೆ ಬಾಳು ಕೊಡುವ ಕತೆ ಭಾರತೀಸುತರ 'ಕಾವೇರಿ ಒಲಿದಿತ್ತ ಕನ್ಯೆ'. ಪತಿತೆಯಾದ ಸೊಸೆ(ಕಾವೇರಿ)ಯನ್ನು ಮಾವನಾದ ಶಂಕರ ಶಾಸ್ತ್ರಿಗಳು ತಿರಸ್ಕರಿಸಿದಾಗ ಹಾಗೂ ಕೊನೆಗೆ ಕಾವೇರಿ ನದಿಗೆ ಬಿದ್ದು ಆತ್ಮಹತ್ಯೆಗೆ ಯತ್ನಿಸಿದಾಗ ಕಾಪಾಡಿದ ಸೋಮಯ್ಯನು ಅವಳಿಗೆ ಜೀವದಾನವನ್ನು ಮಾಡಿ ವಿವಾಹವಾಗುತ್ತಾನೆ. ಕಾವೇರಿಯನ್ನು ಸೋಮಯ್ಯನು ಸ್ವೀಕರಿಸುವ ಸಂದರ್ಭದಲ್ಲಿ "ಮಾತಾಯಿ ಕಾವೇರಿ ನಿನ್ನನ್ನು ನನ್ನ ಕೈಗೆ ಒಪ್ಪಿಸಿದ್ದಾಳೆ. ನಿನ್ನ ಕೂದಲು ಕೊಂಕದಂತೆ ನೋಡಿಕೊಳ್ಳುವ ಹೊಣೆ ನನ್ನದು. ಕಾವೇರಿ ಮಾತೆಯ ಆಣೆ ಇದೆ." (ಭಾರತೀಸುತ; ಕರೆಗೆ ಓಗೊಟ್ಟ ಕಾರ್ಡೀಲಿಯಾ!; ೧೯೯೯; ಪುಟ ೧೬೩) ಎಂಬ ಮಾತಿನಲ್ಲಿ ಕತೆಗಾರರ ಜೀವಪರ ಕಾಳಜಿ, ಮಾನವೀಯತೆ ಸಹಜವಾಗಿ ವ್ಯಕ್ತವಾಗಿದೆ.

ಹೀಗೆ ಪ್ರಗತಿಶೀಲ ಚಳುವಳಿಯ ಪ್ರಭಾವದಿಂದ ಹವ್ಯಕ ಕತೆಗಾಗಾರರು ಹಸಿವು, ಶೋಷಣೆ, ವೇಶ್ಯಾ ಸಮಸ್ಯೆ ಮುಂತಾದ ವಿಷಯಗಳನ್ನು ತಮ್ಮ ಕಥೆಗಳಿಗೆ ವಸ್ತುವಾಗಿ ಸ್ವೀಕರಿಸಿ ಬರೆದಿದ್ದಾರೆ. ಸಾಮಾಜಿಕ ನ್ಯಾಯ ಮತ್ತು ಸಾಮಾಜಿಕ ಶೋಷಣೆಯ ಪ್ರತಿಪಾದನೆಯನ್ನು ತಮ್ಮ ಕತೆಗಳ ಮೂಲಕ ಮಂಡಿಸಿದರು. ಬಡತನ ಬಗ್ಗೆ ಅನುಕಂಪ, ಹೆಣ್ಣಿನ ಕಷ್ಟಗಳ ಬಗ್ಗೆ ಸಹಾನುಭೂತಿಯಂತಹ ಪ್ರಗತಿಶೀಲತೆಯ ಆದರ್ಶಗಳೂ ಇಲ್ಲಿ ಸೇರಿಕೊಳ್ಳುತ್ತವೆ. ಒಟ್ಟಿನಲ್ಲಿ ಈ ಮಾನವ ಬದುಕು ಅರ್ಥಪೂರ್ಣವಾಗುವುದಕ್ಕೆ ಮಾನವೀಯ ನಿಲುವುಗಳು ಅಗತ್ಯ ಎಂಬುದರ ಕಡೆಗೆ ಹವ್ಯಕ ಕತೆಗಾರರ ತುಡಿತವಿರುವುದನ್ನು ಗುರುತಿಸಲು ಸಾಧ್ಯವಾಗಿದೆ.

# ಅಧ್ಯಾಯ – ೭

## ಹವ್ಯಕ ಕತೆಗಳಲ್ಲಿ ವಸಾಹತುಶಾಹಿ ಅನುಭವಗಳು

### ೭.೧ ಸ್ವಾತಂತ್ರ್ಯ ಸಂಗ್ರಾಮದ ಚಿತ್ರಗಳು

ಭಾರತದ ಇತಿಹಾಸದಲ್ಲಿ ಸ್ವಾತಂತ್ರ್ಯ ಸಂಗ್ರಾಮ ಒಂದು ಮಹತ್ತ್ವದ ಘಟ್ಟ. ಸಾಹಿತ್ಯಕ ನೆಲೆಯಲ್ಲಿ ಸ್ವಾತಂತ್ರ್ಯ ಸಂಗ್ರಾಮ ಎಂದ ಕೂಡಲೆ ದೇಶಭಕ್ತಿ ಮೂಲವಾದ ಆದರ್ಶ–ಆವೇಶದ ಅಂಶಗಳನ್ನು ಗುರುತಿಸುತ್ತೇವೆ. ಗಾಂಧೀಜಿಯವರು ಆರಂಭಿಸಿದ ಅಹಿಂಸಾತ್ಮಕ ಹೋರಾಟ ಭಾರತೀಯರಲ್ಲಿ ನವಚೈತನ್ಯವನ್ನು ಮೂಡಿಸಿತು. ಇದೇ ಅವಧಿಯಲ್ಲಿ ಸುಧಾರಣಾವಾದಿಗಳು (ಮಾಡರಿಸ್ಟ್), ಕ್ರಾಂತಿವಾದಿಗಳು (ರೆವೂಲ್ಯೂಷನಿಸ್ಟ್) ಮೊದಲಾದ ವಿಭಿನ್ನ ತತ್ತ್ವಗಳಲ್ಲಿ ನಂಬಿಕೆಯಟ್ಟಿದ್ದ ರಾಷ್ಟ್ರೀಯ ಹೋರಾಟಗಾರರೂ ಇದ್ದರು. ಹೀಗಾಗಿ ಹೋರಾಟದ ತಾತ್ತ್ವಿಕ ನಿಲುವುಗಳು ಈ ಸಂದರ್ಭದಲ್ಲಿ ಹಲವು ರೀತಿಯಲ್ಲಿ ಬರಹಗಾರರನ್ನು ಕಾಡಿವೆ. ಈ ಅಂಶ ಹವ್ಯಕ ಬರಹಗಾರರ ಕತೆಗಳಲ್ಲಿ ವ್ಯಕ್ತವಾಗಿದೆ.

ವಸಾಹತುಶಾಹಿ ಆಡಳಿತ ಭಾರತೀಯರ ಸಾಂಪ್ರದಾಯಿಕ ಬದುಕಿನ ಮೇಲೆ ಬಲವಾಗಿ ಪ್ರಹಾರ ಮಾಡಿತು. ಇಂಗ್ಲಿಷ್ ಶಿಕ್ಷಣದ ಪರಿಣಾಮವಾಗಿ ಭಾರತೀಯರು ತಮ್ಮ ಸಂಸ್ಕೃತಿ ಮತ್ತು ಪರಂಪರೆಯನ್ನು ಹೊಸ ದೃಷ್ಟಿಕೋನದಿಂದ ನೋಡುವಂತಾಯಿತು. ಆರಂಭದಲ್ಲಿ ವಸಾಹತುಶಾಹಿಯನ್ನು ರಾಜಕೀಯ ಮತ್ತು ಧಾರ್ಮಿಕ ಕಾರ್ಯಕ್ರಮಗಳ ಮೂಲಕ ಎದುರಿಸಲು ತಿಲಕರು ಪ್ರಯತ್ನಿಸಿದರು. ಸತ್ಯಾಗ್ರಹ, ಅಸಹಕಾರ, ವಿದೇಶಿ ವಸ್ತ್ರ ಬಹಿಷ್ಕಾರ, ಕರವಿರೋಧಿ ಮತ್ತು ಜಾತಿ–ಧರ್ಮ ಸಾಮರಸ್ಯ, ಹಿಂದೂ ಮುಸ್ಲಿಂ ಸೋದರತೆ, ಮಹಿಳಾ ಶಿಕ್ಷಣ, ಅಸ್ಪೃಶ್ಯತಾ ನಿವಾರಣೆ– ಇವೇ ಮುಂತಾದ ಸಾಮಾಜಿಕ–ಸಾಂಸ್ಕೃತಿಕ ಮತ್ತು ರಾಜಕೀಯ ಕಾರ್ಯಕ್ರಮಗಳ ಮೂಲಕ ವಸಾಹತುಶಾಹಿ ಆಡಳಿತವನ್ನು ಎದುರಿಸಲು ಗಾಂಧೀಜಿ ಪ್ರಯತ್ನಿಸಿದರು. ತಿಲಕ ಮತ್ತು ಗಾಂಧೀಜಿಯವರ ಹೋರಾಟದ ಪ್ರಭಾವ ನವೋದಯ ಸಾಹಿತಿಗಳ ಮೇಲಾಗಿರುವುದನ್ನು ಗುರುತಿಸಬಹುದು.

ರಾಷ್ಟ್ರ-ರಾಷ್ಟ್ರೀಯತೆ ಮತ್ತು ರಾಷ್ಟ್ರ ಪ್ರೇಮದ ಕಲ್ಪನೆ, ಸ್ವಾತಂತ್ರ್ಯದ ಹಂಬಲ, ಅದಕ್ಕಾಗಿ ಹೋರಾಡುವ ತ್ಯಾಗ, ಬಲಿದಾನ, ನಮ್ಮ ಪರಂಪರೆಯ ಶ್ರೇಷ್ಠತೆಯ ಬಗ್ಗೆ ಗೌರವ, ಕನ್ನಡನಾಡು- ನುಡಿಗಳ ಅಭಿಮಾನದಿಂದ ಉಪರಾಷ್ಟ್ರೀಯತೆಯೊಂದು ಅಸ್ತಿತ್ವಕ್ಕೆ ಬರುವಂತಾಗಲು ಆ ಸಂದರ್ಭ ಕಾರಣವಾಯಿತು. ಪಂಜೆ ಮಂಗೇಶರಾಯರಲ್ಲಿಯೇ ಒಂದು ಬಗೆಯ ವಸಾಹತು ಅನುಭವವು ದಾಖಲಾಗಿದೆ. ಪಂಜೆಯವರ ಪ್ರಾರಂಭದ ನಾಲ್ಕು ಕತೆಗಳು 'ನನ್ನ ಚಿಕ್ಕ ತಾಯಿ', 'ನನ್ನ ಹೆಂಡತಿ', 'ನನ್ನ ಚಿಕ್ಕ ತಂದೆ', 'ನನ್ನ ಚಿಕ್ಕ ತಂದೆಯವರ ಉಯಿಲ್' ಕತೆಗಳ ಮುಖ್ಯ ಕಾಳಜಿ ಆಸ್ತಿಯ ಉತ್ತರಾಧಿಕಾರದ ಪ್ರಶ್ನೆಯೇ ಆಗಿದೆಯೆಂದು ವಿದ್ವಾಂಸರು ವಿಶ್ಲೇಷಿಸಿದ್ದಾರೆ. ಈ ನಿಟ್ಟಿನಿಂದ ಯೋಚಿಸಿದರೆ ಉತ್ತರಾಧಿಕಾರಿ ಇಲ್ಲದ ಆಸ್ತಿ ಬ್ರಿಟಿಷರಿಗೆ ಹೋಗುವುದೆನ್ನುವ ಕಾನೂನಿಗೆ ಪಂಜೆಯವರು ತೋರಿಸಿದ ಗುಪ್ತವಾದ ಪ್ರತಿಕ್ರಿಯೆಯೇ ಈ ಕತೆಗಳಲ್ಲಿ ಕಂಡುಬರುತ್ತದೆ. ನಿರಂಜನರು ತಾತ್ತ್ವಿಕ ಬದ್ಧತೆಯಿಂದ ಸ್ವಾತಂತ್ರ್ಯ ಪೂರ್ವದಲ್ಲಿಯೇ ರಾಷ್ಟ್ರೀಯತೆಯನ್ನು, ಸ್ವಾತಂತ್ರ್ಯವನ್ನು ಎತ್ತಿ ಹಿಡಿಯುವ ಕತೆಗಳನ್ನು ಪ್ರಕಟಿಸಿದ್ದರು. ಅವರ 'ರತಿಯ ಓಲೆ' (೧೯೩೮) ಯಂತಹ ಕತೆಗಳಲ್ಲಿ ನಿರಂಜನರು ಸ್ವಾತಂತ್ರ್ಯ ಹೋರಾಟವನ್ನು ರೂಪಕಗಳಲ್ಲಿ, ತಾತ್ತ್ವಿಕ ಚರ್ಚೆಗಳಲ್ಲಿ ವಿವೇಚಿಸಿದ್ದಾರೆ.

ಹವ್ಯಕ ಬರಹಗಾರರೂ ಇತರ ಬರಹಗಾರರಂತೆಯೇ ರಾಷ್ಟ್ರೀಯ ಹೋರಾಟ, ರಾಷ್ಟ್ರೀಯತೆಯ ಮುಖ್ಯ ಪ್ರವಾಹದಿಂದ ಸಾಕಷ್ಟು ಪ್ರಭಾವಿತರಾಗಿರುವುದನ್ನು ಅವರ ಕತೆಗಳಲ್ಲಿ ಗುರುತಿಸಬಹುದು. ಸುಧಾರಣಾವಾದ, ಗಾಂಧೀವಾದ ಮುಂತಾದ ವಿಭಿನ್ನ ತಾತ್ತ್ವಿಕತೆಗಳ ತಿಕ್ಕಾಟ, ರಾಷ್ಟ್ರೀಯತೆ ಕುರಿತು ಪ್ರಚಾರ, ಜನರ ಮನಃಪರಿವರ್ತನೆ ಮಾಡುವಿಕೆ, ರಾಷ್ಟ್ರೀಯ ಹೋರಾಟದ ಮುಖಂಡರ ಡಾಂಭಿಕತೆ ಇವುಗಳ ಕುರಿತು ಸೇಡಿಯಾಪು ಕೃಷ್ಣ ಭಟ್ಟರ 'ನಾಗರಬೆತ್ತ', ಕಡೆಂಗೋಡ್ಲು ಶಂಕರ ಭಟ್ಟರ 'ಗಾಜಿನ ಬಳೆ', ಭಾರತೀಸುತರ 'ಕುಡುಕನ ಕೊಡುಗೆ', ಮುಳಿಯ ಕೃಷ್ಣಭಟ್ಟರ 'ಅತಿಮಾನವ', ಮಹಾಬಲಮೂರ್ತಿ ಕೊಡ್ಲೆಕೆರೆಯವರ 'ವಿರಾಟನಗರ' ಹಾಗೂ ಬಿ.ಎನ್.ನಾಗರಾಜ ಭಟ್ ರವರ 'ವಿಧಿಯು ಕಾಣಿಸಿತು' ಕತೆಗಳು ಬಂದಿವೆ.

ಸೇಡಿಯಾಪು ಅವರ ಕಥೆಗಳಲ್ಲೆಲ್ಲ 'ನಾಗರ ಬೆತ್ತ' ಅತ್ಯಂತ ಪ್ರಸಿದ್ಧವಾದುದು. ಕನ್ನಡದ ಪ್ರಾತಿನಿಧಿಕ ಕಥೆಗಳಲ್ಲಿ ಇದೂ ಒಂದು. ಇಂಗ್ಲಿಷ್‌ಗೆ ಅನುವಾದಿತವಾಗಿ (cobra cane-ಅನುವಾದ ಡಾ। ಸಿ.ಎನ್.ರಾಮಚಂದ್ರನ್) ಕೇಂದ್ರ ಸಾಹಿತ್ಯ ಅಕಾಡೆಮಿಯವರಿಂದ ಕನ್ನಡದ ಪ್ರಾತಿನಿಧಿಕ ಕಥೆಗಳ ಆಂಗ್ಲಾನುವಾದದ ಸಂಕಲನದಲ್ಲಿ (ಸಂಪಾದಕರು–ಜಿ.ಎಸ್.ಆಮೂರ) ಪ್ರಕಟಗೊಂಡಿದೆ. ಬಾಲಕನೊಬ್ಬನ ನಾಗರಬೆತ್ತದ ಆಸೆಯ ಕಾರಣದಿಂದ ಭೀಕರ ದುರಂತವೊಂದು ಘಟಿಸಿದಂತೆ ಕಥೆಯನ್ನು ನಿರೂಪಿಸಲಾಗಿದೆ. ಇಂಗ್ಲಿಷರನ್ನು ಕುರಿತ ಭಕ್ತಿ ಗೌರವಗಳಿಗಿರುವ ದೇವಜ್ಜಿಯ ಗಂಡನೇ ಇಂಗ್ಲಿಷ್ ಸೈನಿಕರಿಂದ ನಿಷ್ಕಾರಣವಾಗಿ ಹತನಾಗಬೇಕಾದ ದುರಂತವೊದಗುವುದು, ಅದನ್ನು ದೇವಜ್ಜಿ ಸ್ವತಃ ನೋಡುವ ಪರಿಸ್ಥಿತಿಯೊದಗುವುದು. ನಾಗರಬೆತ್ತದ ಕಾರಣದಿಂದಲೇ ಆಕೆ ಒಂಟಿಯಾಗುವುದು ಕತೆಯ ಮುಖ್ಯಭಾಗ. ಇಂಗ್ಲಿಷ್‌ರ ಕುರಿತು ಗೌರವವಿರುವ ವ್ಯಕ್ತಿಯೇ ಅವರಿಂದ ದುರಂತಕ್ಕೆ ಗುರಿಯಾಗುವುದು ಆ ಘಟನೆಗೆ ಹೆಚ್ಚಿನ ಅರ್ಥವನ್ನಿತ್ತಿದೆ. ಬ್ರಿಟಿಷರ ದಬ್ಬಾಳಿಕೆಯ ಪ್ರವೃತ್ತಿಯ ಬಗೆಗೆ ಸೇಡಿಯಾಪು ಅವರಿಗಿದ್ದ ಮನಸ್ಸಿನ ತುಡಿತವು ಸುಂದರವಾದ ಕತೆಯಾಗಿ ಇಲ್ಲಿ ಮೂಡಿ ಬಂದಿದೆ.

"'ನಾಗರಬೆತ್ತ'ದಲ್ಲಿ ಕೇಂದ್ರ ಪ್ರತೀಕದ ಅರ್ಥಕ್ರಿಯೆಯನ್ನು ಮೂರು ವಿಭಿನ್ನ ದೃಷ್ಟಿಗಳಿಂದ ನೋಡುವುದು ಸಾಧ್ಯವಿದೆ. ಕತೆಯ ನಿವೇದಕನಿಗೆ ನಾಗರಬೆತ್ತ ತನ್ನ ಬಾಲ್ಯದ ಪ್ರೀತಿ ಸಂಬಂಧಗಳನ್ನು ನೆನಪಿಗೆ ತರುವ ಒಂದು ಸುಂದರ ವಸ್ತು. ಅವನ ಅಜ್ಜನಿಗೆ ಅದು ಇತಿಹಾಸದಲ್ಲಿ ಹುದುಗಿ ಹೋದ ದುರಂತವನ್ನು ಮತ್ತೆ ಬೆಳಕಿಗೆ ತರುವ ಅನಿಷ್ಟ. ದೇವಜ್ಜಿಗೆ ತನ್ನ ಗಂಡನ ಸಾವಿಗೆ ಕಾರಣವಾದ ನಾಗರಬೆತ್ತ ಮರೆಯಲಾಗದ ನೋವಿನ ಕುರುಹು." (ಜಿ.ಎಸ್.ಆಮೂರ; ಕನ್ನಡ ಕಥನ ಸಾಹಿತ್ಯ: ಸಣ್ಣಕತೆ; ೨೦೦೩; ಪುಟ ೯೧) ಎಂಬುದು ಜಿ.ಎಸ್.ಆಮೂರರ ಅಭಿಪ್ರಾಯ.

ದೇವಜ್ಜಿ ನವವಿವಾಹಿತೆಯಾಗಿ ಗಂಡನ ಜೊತೆ ಆಳುಗಳೊಂದಿಗೆ ಹೋಗುತ್ತಿದ್ದಾಗ ಅವರಿಗೆ ಕಂಪೆನಿ ಸೋಲ್ಜರರ ದಂಡು ಎದುರಾಗುತ್ತದೆ. ಎಲ್ಲರೂ ಹೆದರುತ್ತಿದ್ದಂತೆ "ಏನು ಹೇಡಿಗಳೊ ನೀವು! ಬರೀ ಮೂಢರು! ಸುಮ್ಮನಿರಿ ಅವರೇನು ಮನುಷ್ಯರಲ್ಲವೆ? ಅವರು ಕುಂಪನಿ 'ಸೋಜರು'! ಹಾಗೆಲ್ಲ ಸುಲಿಗೆ ಮಾಡಲು ಅವರು ಕಾಟಕಾಯಿಯವರಲ್ಲ. ನಮ್ಮೂರ ಸಂತೆಯ ಮೂರು ಕಾಸಿಗೊಂದರ ಅರಸುಗಳ

ಕಾಟವನ್ನೆಲ್ಲ ನಿಲ್ಲಿಸಿ ಬಿಟ್ಟಿದ್ದಾರೆ. ನಮ್ಮೂರಲ್ಲಿ ಈಗ ರಾಮರಾಜ್ಯ! ನೋಡಿ ಎಲ್ಲೆಲ್ಲಿಗೆ ರಸ್ತೆ ಕಡಿಸುತ್ತಿದ್ದಾರೆ! ಎಂಥಾ ಸಂಕ ಕಟ್ಟಿಸಿದ್ದಾರೆ! ಕಳ್ಳರನ್ನೆಲ್ಲ ಹಿಡಿದು ಜೈಲಿಗೆ ತಳ್ಳುತ್ತಾರೆ. ಅದಕ್ಕಾಗಿ 'ಪುಲಿಸಿ'ನವರು ಕೆಂಪು ಪಗಡಿ ಇಟ್ಟುಕೊಂಡು ಹಳ್ಳಿ ಹಳ್ಳಿ ತಿರುಗುತ್ತಿದ್ದಾರೆ. ಕುಂಪನಿಯವರನ್ನು ದೇವರೇ ನಮ್ಮೂರಿಗೆ ಕಳುಹಿದ್ದು! ಅವರನ್ನು ಕಂಡರೆ ಎದ್ದು ನಿಂತು ಕೈ ಮುಗಿಯಬೇಕು. (ಸೇಡಿಯಾಪು ಕೃಷ್ಣಭಟ್ಟ; ಪಳಮೆಗಳು; ೧೯೫೫; ಪುಟ ೬೧,೬೨) ಎಂದು ದೇವಜ್ಜಿಯ ಗಂಡ ಹೇಳುವ ಮಾತುಗಳಲ್ಲಿ ಅವನಿಗೆ ಇಂಗ್ಲಿಷರ ಬಗ್ಗೆ ಅತಿ ಅಭಿಮಾನ ವ್ಯಕ್ತವಾಗುತ್ತದೆ. ಈ ಉದ್ದೇಶದಿಂದ ಸೈನಿಕರಿಗೆ ಕೈ ಮುಗಿಯಲು ಹೋದ ದೇವಜ್ಜಿಯ ಗಂಡನಿಂದ ನಾಗರಬೆತ್ತವನ್ನು ಅವರು ಕಿತ್ತುಕೊಳ್ಳುತ್ತಾರೆ. ಪ್ರತಿಭಟಿಸಿದ ಅವನನ್ನು ಹೊಡೆದುಕೊಲ್ಲುತ್ತಾರೆ. "ಅಯ್ಯೋ, ಕುಂಪಿನಿ ರಾಕ್ಷಸಾ! ಅಯ್ಯೋ ದೇವ ....." (ಸೇಡಿಯಾಪು ಕೃಷ್ಣಭಟ್ಟ; ಪಳಮೆಗಳು; ೧೯೭೭; ಪುಟ ೬೨) ಎಂಬ ದೇವಜ್ಜಿಯ ಗಂಡನ ಆಕ್ರಂದನದಲ್ಲಿ ಕುಂಪನಿಯವರೆಲ್ಲ ದೇವರಲ್ಲ; ರಾಕ್ಷಸರು ಎನ್ನುವ ನಿಲುವನ್ನು ಕತೆ ಹೇಳುತ್ತದೆ.

'ನಾಗರಬೆತ್ತ'ದಲ್ಲಿ ಚಿಕ್ಕ ಮಗು ತರುವ ಬೆತ್ತವೊಂದು ದೇವಜ್ಜಿಯ ಬದುಕಿನ ಯಾತನೆಯ ಕತೆಯನ್ನು ಬಿಚ್ಚಿಡುತ್ತದೆ. ಹಿಂದಿನ ದುರಂತವೊಂದನ್ನು ಬೆತ್ತ ಸಾಂಕೇತಿಕವಾಗಿ ಧ್ವನಿಸುತ್ತದೆ. "ತಮ್ಮ ಕಾಲದ ಪರಿಸರದ ನಂಬಿಕೆ ಮತ್ತು ವಸಾಹತುಶಾಯಿಯ ಅನುಭವವನ್ನು ಈ ಕಥೆಯಲ್ಲಿ ಭಟ್ಟರು ಹಿಡಿದಿಟ್ಟಿದ್ದಾರೆ. ವಸಾಹತು ಪೂರ್ವದಲ್ಲಿ ಹೊಸ ಸಂಕೇತ, ಹೊಸ ತಂತ್ರದಿಂದ ಪ್ರಕಟವಾದ ಮಹತ್ತ್ವದ ಕಥೆಗಳ ಸಾಲಗೆ ಇದು ಸೇರುತ್ತದೆ" (ಡಾ. ಕರೀಗೌಡ ಬೀಚನಹಳ್ಳಿ;ಶತಮಾನದ ಸಣ್ಣಕಥೆಗಳ ಸಮೀಕ್ಷೆ; ೨೦೦೩; ಪುಟ ೪೯) ಎಂಬುದಾಗಿ ಕರೀಗೌಡ ಬೀಚನಹಳ್ಳಿಯವರು ಅಭಿಪ್ರಾಯಪಟ್ಟಿದ್ದಾರೆ.

"ಈ ಎಲ್ಲ ವಿವರಗಳ ನಡುವೆ ನಾಗರಬೆತ್ತ ಒಂದು ಸಂಕೇತವಾಗಿ ಅರ್ಥ ಪಡೆದುಕೊಳ್ಳುವ ರೀತಿ ವಿಶಿಷ್ಟವಾಗಿದೆ. ಒಂದು ರೀತಿಯಿಂದ ಭಾರತೀಯರಾಗಿ ನಾವು ಇತಿಹಾಸವನ್ನು ಸ್ವೀಕರಿಸುವ ರೀತಿಗೂ ಇದು ಸಂಕೇತವಾಗಿದೆ. ಸಿಟ್ಟಿನಿಂದ ನಾಗರಬೆತ್ತವನ್ನು ಮುರಿದು ಹಾಕುವ ಅಜ್ಜ, ಇತಿಹಾಸದ, ನೋವು, ಅಪಮಾನಗಳನ್ನು ಮರೆಯಲು ಯತ್ನಿಸುವ , ಮುಚ್ಚಿಡ ಬಯಸುವ ನಮ್ಮ ಪ್ರವೃತ್ತಿಯನ್ನು ಸೂಚಿಸುತ್ತಾನೆ."

(ಗಿರಡ್ಡಿ ಗೋವಿಂದರಾಜ (ಸಂ.); ಮರೆಯಬಾರದ ಹಳೆಯ ಕತೆಗಳು; ೧೯೯೯; ಪುಟ ೧೯೧) ಎಂಬುದು ಗಿರಡ್ಡಿ ಗೋವಿಂದರಾಜರ ಅಭಿಪ್ರಾಯ.

ಹೀಗೆ 'ನಾಗರಬೆತ್ತ'ದಲ್ಲಿ ವಸಾಹತುಶಾಹಿಯ ವ್ಯಂಗ್ಯಗಳು ಕಂಡು ಬರುತ್ತವೆ. ಬೆತ್ತವನ್ನುಳಿಸಿಕೊಳ್ಳಲು ಹೋಗಿ ಬ್ರಿಟಿಷ್ ಸೈನಿಕರ ಕೈಯಲ್ಲಿ ಪ್ರಾಣ ಕಳೆದುಕೊಂಡ ದೇವಜ್ಜಿಯ ಗಂಡ ಬ್ರಿಟಿಷರ ಹಾಗೂ ಬ್ರಿಟಿಷರ ನ್ಯಾಯಬುದ್ಧಿಯ ಸಮರ್ಥಕನಾಗಿದ್ದುದು ಚಾರಿತ್ರಿಕ ವ್ಯಂಗ್ಯಗಳಲ್ಲೊಂದಾಗಿದೆ.

ಕಡೆಂಗೋಡ್ಲು ಶಂಕರ ಭಟ್ಟರ 'ಗಾಜಿನಬಳೆ' ಸ್ವಾತಂತ್ರ್ಯ ಪೂರ್ವದ ರಾಜಕೀಯ ಹಿನ್ನೆಲೆಯಲ್ಲಿ ಸತ್ಯಾಗ್ರಹ, ಅಹಿಂಸೆ, ಕರ್ಮಯೋಗ ಮುಂತಾದ ವಿಚಾರಗಳ ಎಳೆಗಳನ್ನು ಆಧರಿಸಿ ಬರೆದ ಕತೆ. ದೇಶಾದ್ಯಂತ ಬೀಸಿದ್ದ ಸ್ವಾತಂತ್ರ್ಯ ಸಂಗ್ರಾಮದ ಬಿರುಗಾಳಿ ಪರಿಸರವನ್ನು ಅಲುಗಾಡಿಸುತ್ತಿರುವಾಗ, ಕೆಲವರು ಸಹಜವಾದ ಸ್ಫೂರ್ತಿಯಿಂದಲೆ ಹೋರಾಟಕ್ಕೆ ಅಣಿಯಾದರೆ ಇನ್ನು ಕೆಲವರು ಕ್ಷಣಿಕ ಆವೇಶದಿಂದಲೋ ಇತರ ಆಮಿಷಗಳಿಂದಲೋ ರಾಜಕೀಯಕ್ಕೆ ಇಳಿಯುತ್ತಾರೆ. ಕರ್ಮಯೋಗದ ಕುರಿತು ಬೋಧಿಸುವ ಪ್ರೊಫೆಸರ್ ಬಾದರಾಯಣ ಶಾಸ್ತ್ರಿಗಳು, ಕಾಲೇಜಿನಲ್ಲಿ ವಿದ್ಯಾರ್ಥಿಗಳ ಅಸಹಕಾರ ಚಳುವಳಿಗೆ ತಣ್ಣೀರೆರಚಿದುದಕ್ಕಾಗಿ ಕಾಲೇಜಿನ ವೀರಕನ್ಯೆ ತನ್ನ ಅಭಿಮಾನದ ಶಿಷ್ಯೆ ಮಾಲಿನಿಯ ನೇತೃತ್ವದಲ್ಲಿ ಶಾಸ್ತ್ರಿಗಳಿಗೆ ದೊರಕಿದ ಪುರಸ್ಕಾರ–ಗಾಜಿನ ಬಳೆಗಳು! ಪರಿಣಾಮವಾಗಿ ಅವರಲ್ಲೂ ಹೋರಾಟದ ಕೆಚ್ಚು ಕೆರಳಿ, ಸತ್ಯಾಗ್ರಹಕ್ಕೆ ಪ್ರತ್ಯಕ್ಷವಾಗಿ ದುಮುಕುತ್ತಾರೆ. ಪರಿಣಾಮ–ಕಾರಾಗೃಹ. ಮಾಲಿನಿಯನ್ನು ಮಾತ್ರ ಅವಧಿಗೆ ಮೊದಲೇ ಆಕೆಯ ದೊಡ್ಡಪ್ಪ ಹೊಣೆ ನಿಂತು ಕಾರಗೃಹದಿಂದ ಬಿಡಿಸಿಕೊಂಡು ಹೋಗುತ್ತಾರೆ. ಶಾಸ್ತ್ರಿಗಳು ಶಿಕ್ಷೆ ಮುಗಿಸಿಕೊಂಡು ಹೊರಬಂದಾಗ ಮಾಲಿನಿಗೆ ಆಕೆಯ ಕಾಲೇಜಿನ ಸಹಪಾಠಿ ರತ್ನಾಕರನೊಂದಿಗೆ ವಿವಾಹವು ಮುಗಿದಿರುತ್ತದೆ. ಕುಪಿತಗೊಂಡ ಶಾಸ್ತ್ರಿಗಳು ಹಿಂದೆ ಮಾಲಿನಿ 'ಗುರುದಕ್ಷಿಣೆ'ಯಾಗಿ ಕೊಟ್ಟಿದ್ದ ಗಾಜಿನ ಬಳೆಗಳನ್ನು ಮಾಲಿನಿಗೇ ಉಡುಗೊರೆಯಾಗಿ ಮರಳಿಸಲು ಸಂಕಲ್ಪಿಸುತ್ತಾರೆ.

"ಈ ಮೆರವಣಿಗೆ ಉಪ್ಪುನೀರನ್ನು ಸಮೀಪಿಸಿದಾಗ ಮಾಲಿನಿ, ಬಾದರಾಯಣರೆಂಬ ಸಕಲ ಪರಿಚಿತರಾದ ವ್ಯಕ್ತಿಗಳಿಬ್ಬರೇ ಇದ್ದರು, ಉಳಿದವರ ಕುಲಗೋತ್ರ ಯಾರಿಗೂ ತಿಳಿಯದು, ಒಂದು ಆವೇಶ, ಒಂದು ಉಕ್ಕು ದೇಶದ

ಸ್ವಾತಂತ್ರ್ಯವಿಲ್ಲದೆ ಅಳಿದರೇನು? ಉಳಿದರೇನು? ಎಂಬ ತಾತ್ಸಾರದಿಂದ ಬಾದರಾಯಣ ಶಾಸ್ತ್ರಿಗಳಿಂದು ಪ್ರಾಣತ್ಯಾಗಕ್ಕೂ ಸಿದ್ಧರಾಗಿದ್ದರು" (ಪಾದೆಕಲ್ಲು ವಿಷ್ಣುಭಟ್ಟ ಮತ್ತು ಇತರರು (ಸಂ.) ಕಡೆಂಗೋಡ್ಲು ಶಂಕರಭಟ್ಟ ಸಮಗ್ರ ಕಥಾಸಂಪುಟ; ೨೦೦೪; ಪುಟ ೧೪೯)ಎಂಬ ಮಾತಿನಲ್ಲಿ ಸ್ವಾತಂತ್ರ್ಯ ಹೋರಾಟದ ಚಿತ್ರಣವಿದೆ. ಬಾದರಾಯಣ ಶಾಸ್ತ್ರಿಗಳಂಥ ಸುಸಂಸ್ಕೃತ ವ್ಯಕ್ತಿಗಳು, ಪ್ರೇಮ, ರಾಷ್ಟ್ರಭಕ್ತಿ ಮುಂತಾದ ಭಾವಗಳಿಗೆ ತೋರುವ ಪ್ರತಿಕ್ರಿಯೆಗಳನ್ನೂ ಪರಿಸ್ಥಿತಿಗನುಗುಣವಾಗಿ ಅವರ ನಿರ್ಧಾರಗಳು ಬದಲಾಗುವುದನ್ನೂ ಶಂಕರ ಭಟ್ಟರು ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ಕರ್ಮಯೋಗದ ಬಗೆಗೆ ವ್ಯಾಖ್ಯಾನ ಮಾಡುವ ಸ್ಥಿತಪ್ರಜ್ಞೆಯ ಕುರಿತು ಸಾಕಷ್ಟು ಬಲ್ಲ ಶಾಸ್ತ್ರಿಗಳು, ಗಾಜಿನ ಬಳೆಯ ಪ್ರಕರಣವನ್ನು ಹುಡುಗಾಟವೆಂದು ಮರೆಯದೆ, ಬದಲಾಗಿ ಉಡುಗೊರೆಯಾಗಿ ನೀಡಿಯೇ ಪ್ರತೀಕಾರವನ್ನು ಸಾಧಿಸುತ್ತಾರೆ.

ಮುಳಿಯಕೃಷ್ಣ ಭಟ್ಟರು ಬರೆದ 'ಅತಿಮಾನವ' ಕತೆಯಲ್ಲಿ ಅಸಹಕಾರ ಚಳುವಳಿಯ ಉಲ್ಲೇಖವಿದೆ. ನಿರೂಪಕರು ಜವಳಿ ವ್ಯಾಪಾರವನ್ನು ಮಾರುತ್ತಿದ್ದ ಸಂದರ್ಭದಲ್ಲಿ ದೇಶಾದ್ಯಂತ ಅಸಹಕಾರ ಚಳುವಳಿಯ ತೀವ್ರತೆ ಉಂಟಾಗುತ್ತದೆ. ಅಸಹಕಾರ ಚಳುವಳಿಯ ಪರಿಣಾಮ ನಿರೂಪಕರ ವ್ಯಾಪಾರದ ಮೇಲೂ ಆಗಿದೆ. "ಕೆಲವು ದಿನಗಳಿಂದ ಅಸಹಕಾರ ಚಳುವಳಿ ಜೋರಾಗಿ ನಡೆದಿದ್ದುದರಿಂದ ನಮ್ಮ ವ್ಯಾಪಾರಕ್ಕೆ ಕೊಡಲಿಯೇಟು ಬಿತ್ತು. ಜನರು ಪರದೇಶಿ ಮಾಲುಗಳನ್ನು ಕೊಳ್ಳಬಾರದೆಂದು ಕಾಂಗ್ರೆಸ್ ಸ್ವಯಂಸೇವಕರು ಉಪದೇಶಿಸುತ್ತಿದ್ದರು. ನಮ್ಮ ದೊಡ್ಡ ಅಂಗಡಿಯ ಮುಂದೆ ಹಲವಾರು ಸ್ವಯಂಸೇವಕರು ಪಿಕೆಟಿಂಗ್ ನಡೆಸಿದರು. ವ್ಯಾಪಾರ ಕಡಿಮೆಯಾಯಿತು." (ಮುಳಿಯಕೃಷ್ಣ ಭಟ್ಟ; ಪ್ರತಿಬಿಂಬ; ೨೦೦೨; ಪುಟ ೫೯). ಸ್ವತಃ ವ್ಯಾಪಾರಿಗಳಾದ ಮುಳಿಯ ಕೃಷ್ಣಭಟ್ಟರು ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ಅನುಭವಿಸಿದ ಚಳುವಳಿಯ ಕಾವನ್ನು ಇಲ್ಲಿ ಸೂಕ್ಷ್ಮವಾಗಿ ದಾಖಲಿಸಿದ್ದಾರೆ.

ಬಿ.ಎನ್.ನಾಗರಾಜಭಟ್ ರವರ 'ವಿಧಿಯು ಕಾಣಿಸಿತು', ಮಹಾಬಲಮೂರ್ತಿ ಕೊಡ್ಲೆಕೆರೆಯವರ 'ವಿರಾಟನಗರ' ಕತೆಗಳಲ್ಲಿ ಸ್ವಾತಂತ್ರ್ಯ ಹೋರಾಟದ ಉಲ್ಲೇಖಗಳು ಕಂಡುಬರುತ್ತವೆ. ಮಹಾಬಲಮೂರ್ತಿ ಕೊಡ್ಲೆಕೆರೆಯವರ 'ವಿರಾಟನಗರ' ಕತೆಯು ೧೯೯೪ರಲ್ಲಿ ಪ್ರಕಟವಾಗಿದ್ದು ಸ್ವಾತಂತ್ರ್ಯ ಸಂಗ್ರಾಮದ ಕಾಲಘಟ್ಟದ ನೇರ

ನಿರೂಪಣೆಯಾಗಿರದೆ ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ನಡೆದ ಘಟನೆಗಳ ವಿವರಗಳನ್ನು ನಿರೂಪಕ ನೆನಪಿಸಿಕೊಳ್ಳುವ ದೃಶ್ಯವಿದೆ. ೧೯೪೦ರ ದಶಕದಲ್ಲಿ ಗೋಕರ್ಣನಗರದಲ್ಲಿ ಶಿವರಾತ್ರಿ ಕಾಲದ ಜಾತ್ರೆಯ ಸಂದರ್ಭದಲ್ಲಿ ಸರ್ವೇಶ ಕಾರಂತರು ದೊಡ್ಡ ತೇರಿನ ಮೇಲೆ ರಾಷ್ಟ್ರಧ್ವಜವನ್ನು ಹಾರಿಸಿ ಪೋಲಿಸರಿಂದ ಹೊಡೆತ ತಿಂದ ವಿಚಾರವನ್ನು ಕತಾನಾಯಕರಿಗೆ ನೆನಪಿಸಿಕೊಳ್ಳುತ್ತಾನೆ. "ದೊಡ್ಡ ತೇರಿನ ಶಿಖರದ ಮೇಲೆ ರಾಷ್ಟ್ರಧ್ವಜವನ್ನು ಹಾರಿಸಿ ಪೋಲೀಸರಿಂದ ನಂತರ ಬಾಸುಂಡೆ ಬರುವಷ್ಟು ಜೋರಾಗಿ ಹೊಡೆತ ತಿಂದಿದ್ದನಂತೆ. ಅಷ್ಟೊಂದು ನೋವಿನಲ್ಲೂ ಕ್ರೂರ ಪೋಲೀಸರಿಂದ ತಪ್ಪಿಸಿಕೊಂಡು ಮತ್ತೆ ಅದೇ ದೊಡ್ಡ ತೇರನ್ನೇರಿ ಜೋರಾಗಿ ವಂದೇ ಮಾತರಮ್, ಭಾರತ ಮಾತಾಕಿ ಜೈ, ಬ್ರಿಟಿಷರೇ ಭಾರತ ಬಿಟ್ಟು ತೊಲಗಿ– ನಮ್ಮ ದೇಶವನ್ನು ನಮಗೆ ಬಿಟ್ಟುಕೊಡಿ ಎಂದು ಕೂಗುತ್ತ ನೆರೆದಿದ್ದ ಸಾವಿರಾರು ಜನರೆದುರೇ ದೊಡ್ಡ ತೇರಿನ ನಾಲ್ಕನೇ ನೆಲೆಯಿಂದ ಧಬ್ಬನೆ ನೆಲಕ್ಕೆ ಹಾರಿ ಎಲ್ಲರ ಕಣ್ಣು ತಪ್ಪಿಸಿ ಎಲ್ಲಿಗೆ ಹೋದ ಎಂಬುದೇ ಪೋಲೀಸರಿಗೆ ತಿಳಿಯದಂತೆ ಪರಾರಿಯಾಗಿದ್ದ" (ಮಹಾಬಲಮೂರ್ತಿ ಕೊಡ್ಲೆಕರೆ; ಯಕ್ಷಸೃಷ್ಟಿ; ೧೯೯೪; ಪುಟ ೬) ಎಂಬ ಮಾತುಗಳು ತೀವ್ರಗೊಂಡಿದ್ದ ಸ್ವಾತಂತ್ರ್ಯ ಹೋರಾಟದ ನೆನಪುಗಳನ್ನು ದಾಖಲಿಸಿವೆ. ಬಿ.ಎನ್.ನಾಗರಾಜ ಭಟ್ ರವರು ಬರೆದ 'ವಿಧಿಯು ಕಾಣಿಸಿತು' ಕತೆಯಲ್ಲಿ ಕೂಡ ಕಥಾನಾಯಕನು ರೈಲ್ವೇ ನಿಲ್ದಾಣದಲ್ಲಿ ಕುಳಿತಿದ್ದ ವಿಧವೆಯನ್ನು ಮಾತನಾಡಿಸಿದಾಗ ಅವಳು ತನ್ನ ಗಂಡನ ಬದುಕಿನ ಘಟನೆಯನ್ನು ವಿವರಿಸುವ ಸಂದರ್ಭದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಉಲ್ಲೇಖವಿದೆ. ವಿಧವೆ ಹೆಂಗಸು ತನ್ನ ಗಂಡ ಶ್ರೀಕಂಠರಾಯ ಬಿ.ಎ. ಕೊನೆಯ ವರ್ಷದಲ್ಲಿ ಓದುತ್ತಿದ್ದ ಸಂದರ್ಭದಲ್ಲಿ ಬ್ರಿಟಿಷರ ವಿರುದ್ಧ ನಡೆದ ಸ್ವಾತಂತ್ರ್ಯ ಚಳುವಳಿಯ ಮೆರವಣಿಗೆಯಲ್ಲಿ ಭಾಗವಹಿಸಿ ಎರಡು ವರ್ಷ ಜೈಲು ಶಿಕ್ಷೆ ಅನುಭವಿಸಿದ ವಿಚಾರವನ್ನು ನಿರೂಪಕರಿಗೆ ತಿಳಿಸುತ್ತಾಳೆ. "ಸ್ವಾತಂತ್ರ್ಯದ ಕಾವು ಎಲ್ಲಾ ಕಡೆಯಲ್ಲೂ ಹರಡಿತ್ತು. ಬಿಸಿಲಿನ ಝಳದಂತೆ ಭಾರತೀಯನು ತನ್ನ ಮನೆಯಲ್ಲಿ ತಾನು ಇರಲು ಇಚ್ಚೈಸದಿರಲು ಆಂದೋಲನ ಮಾಡಬೇಕಿತ್ತು. ಅದಕ್ಕಾಗಿ ದೇಶಾದ್ಯಂತ ಇಂಗ್ಲೆಂಡ್ ಸರ್ಕಾರದ ವಿರುದ್ಧ ಜನ ರೊಚ್ಚಿಗೆದ್ದರು. ವಿದ್ಯಾರ್ಥಿಗಳು ಪಾಲ್ಗೊಂಡಿದ್ದರು. ಗಾಂಧೀಜಿಯವರ ನಾಯಕತ್ವದಲ್ಲಿ ಎಲ್ಲರೂ ಸ್ವಾತಂತ್ರ್ಯ ಭಿಕ್ಷೆಗೆ ಹೊರಟಿದ್ದರು. ಆಗ ನಾನು ಬಿ.ಎ. ಕೊನೆಯ ವರ್ಷದಲ್ಲಿ ಓದುತ್ತಿದ್ದೆ. ನಾವೆಲ್ಲ ರಾಜಕೀಯ ರಂಗಕ್ಕೆ ಧುಮುಕಿದೆವು; ಪರೀಕ್ಷೆ ಕೇವಲ ಮೂರು

ತಿಂಗಳಿತ್ತು. ಅಂದಿನ ಮೆರವಣಿಗೆಯಲ್ಲಿ ನಾನು ನಾಯಕತ್ವ ವಹಿಸಿದ್ದೆ. ಸರ್ಕಾರದ ವಿರುದ್ಧ ಘೋಷಣೆಗಳನ್ನು ಕೂಗುತ್ತಿದ್ದೆವು" (ಬಿ.ಎನ್ ನಾಗರಾಜ ಭಟ್ ; ಹುಣ್ಣಿಮೆಯ ರಜನಿ; ೧೯೭೯ ; ಪುಟ ೨೪, ೨೫).ವಿಧವೆಯ ಗಂಡನ ಸ್ವಾತಂತ್ರ್ಯ ಚಳುವಳಿಯ ಅನುಭವವನ್ನು ಅವಳು ಕಥಾನಾಯಕನಿಗೆ ವಿವರಿಸುವ ಸಂದರ್ಭದಲ್ಲಿ ಸ್ವಾತಂತ್ರ್ಯ ಹೋರಾಟ ಪಡೆಯುತ್ತಿದ್ದ ಸ್ವರೂಪ ಮತ್ತು ತಿರುವುಗಳು ಸುಂದರವಾಗಿ ಅಭಿವ್ಯಕ್ತಿಗೊಂಡಿವೆ.

ಭಾರತೀಸುತರ 'ಕುಡುಕನ ಕೊಡುಗೆ' ಕತೆಯಲ್ಲಿ ನಡುರಾತ್ರಿ ದಟ್ಟಕಾಡಿನ ನಡುವೆ ಇರುವ ವೀರಣ್ಣನ ಗುಡಿಸಲಿಗೆ ಬಂದ ಇಬ್ಬರು ತರುಣಿಯರಿಗೆ ಆಶ್ರಯವಿತ್ತು ಅವರಲ್ಲಿ ಒಬ್ಬಳು ತನ್ನ ಹೆಂಡತಿಯನ್ನು ಕಿತ್ತುಕೊಂಡ ವೈರಿ ಸಣ್ಣಯ್ಯನ ಮಗಳು ಎಂದು ಗೊತ್ತಾಗಿ ದ್ವೇಷ ಉಕ್ಕಿದರೂ, ಗಾಂಧೀಜಿಯ ಪ್ರಭಾವದಿಂದ ಏನೂ ಕೇಡೆಸಗದೆ ಅವರನ್ನು ಸುರಕ್ಷಿತವಾಗಿ ಹೊಳೆದಾಟಿಸಿ ಅವರಲ್ಲಿ ಕಾಂಗ್ರೆಸ್ ಫಂಡಿಗೆ ಹಣ ಕೊಡುವ ವಿಚಾರ ಬರುತ್ತದೆ.

"ಆದರೆ ಮಗಳು ಗಾಂಧೀಜನ! ಗಾಂಧಿಯ ನುಡಿಯನ್ನು ನೆತ್ತಿಯಲ್ಲಿ ಹೊತ್ತು ಹೊಸನಾಡನ್ನು ಕಟ್ಟಲು ಹೊರಟ ಜನ! ಗಾಂಧಿ ಎಂದೊಡನೆ ಅವನ ಎದೆಯಲ್ಲಿ ಭಯಭಕ್ತಿಗಳು ತಲೆದೋರಿದುವು. ಆಯುಧಗಳಿಲ್ಲದ ಗಂಡು ಹೆಣ್ಣು ಮಕ್ಕಳ ದಂಡನ್ನು ಕಟ್ಟಿ ಬ್ರಿಟಿಷರನ್ನು ಎದುರಿಸಲು ಹೊರಟ ಆ ಮುದುಕ ಸಾಮಾನ್ಯನಲ್ಲವೆಂದು ಅವನ ಮನಸ್ಸು ಹೇಳುತ್ತಿತ್ತು. ಹಿಂದೆ ಗಾಂಧಿ ಮಡಿಕೇರಿಗೆ ಬಂದಿದ್ದಾಗ ವೀರಣ್ಣ ಮಾಳಿಯೊಡನೆ ಹೋಗಿ ಅವರ ಪಾದ ಮುಟ್ಟಿ ನಮಸ್ಕಾರ ಮಾಡಿ ಐದು ರೂಪಾಯಿ ಕಾಣಿಕೆಯೊಪ್ಪಿಸಿ ಬಂದಿದ್ದ" (ಭಾರತೀಸುತ; ಚಿಂಬ ಹಿಡಿದ ಮೀನು; ೧೯೬೧; ಪುಟ ೮೧,೮೨).

"ತಮ್ಮ ಹಗೆಯ ಮಗಳು ಗಾಂಧಿ ಹೇಳಿದ ದಾರಿಯನ್ನು ತುಳಿದವಳು; ಸೇಡು ತೀರಿಸಿಕೊಳ್ಳಲು ಹೊರಡುವುದೆಂದರೆ, ಗಾಂಧಿಗೆ ದ್ರೋಹ ಬಗೆದಂತೆ!" (ಭಾರತೀಸುತ; ಚಿಂಬ ಹಿಡಿದ ಮೀನು; ೧೯೬೧ ಪುಟ ೮೨).

"ನೀವು ಗಾಂಧೀಜನ, ಆ ಮಹಾಪುರುಷನ ಮಾತನ್ನು ಹೊತ್ತು ಬಿಳಿಯರನ್ನು ಓಡಿಸೋಕೆ ಹೊರಟವರು ನೀವು; ನಿಮ್ಮ ನೋಂಪಿಗೆ ನಾನು ಒಪ್ಪಿಸೋ ಕಾಣಿಕೆ; ಒಬ್ಬ ಕುಡುಕನ ಕೊಡುಗೆ?" (ಭಾರತೀಸುತ; ಚಿಂಬ ಹಿಡಿದ ಮೀನು; ೧೯೬೧; ಪುಟ ೮೯)

ಕುಡುಕ ವೀರಣ್ಣನು ಇಬ್ಬರು ತರುಣಿಯರಲ್ಲಿ ಹೇಳುವ ಮಾತುಗಳಲ್ಲಿ ಗಾಂಧೀಜಿಯವರ ಚಿಂತನೆಯ ದಟ್ಟ ಪ್ರಭಾವ ಕಂಡುಬರುತ್ತದೆ. ಗಾಂಧೀಯುಗದ ಆದರ್ಶ– ಮೌಲ್ಯಗಳನ್ನು ಭಾರತೀಸುತರು ತಮ್ಮ ಕತೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಹೀಗೆ ಹವ್ಯಕರು ಬರೆದ ಕತೆಗಳಲ್ಲಿ ವಸಾಹತುಶಾಹಿಯ ವ್ಯಂಗ್ಯಗಳು ಕಂಡುಬರುತ್ತವೆ. ಸ್ವಾತಂತ್ರ್ಯ ಸಂಗ್ರಾಮದ ವಿವರಣೆ, ಅಸಹಕಾರ ಚಳುವಳಿಗೆ ಬೆಂಬಲ, ಗಾಂಧೀಯುಗದ ಪ್ರಭಾವ ಮುಂತಾದ ವಿಚಾರಗಳನ್ನು ಕತೆಗಾರರು ತಮ್ಮ ಕತೆಗಳಲ್ಲಿ ತಂದಿದ್ದಾರೆ. ಗಾಂಧೀಜಿಯವರು ಸ್ವಾತಂತ್ರ್ಯ ಚಳುವಳಿಗೆ ಕರೆಕೊಟ್ಟಾಗ ವಿದ್ಯಾರ್ಥಿಗಳೆಲ್ಲ ಶಾಲೆಗಳನ್ನು ಬಹಿಷ್ಕರಿಸಿದ ಸನ್ನಿವೇಶವನ್ನು ಕತೆಗಾರರು ಚಿತ್ರಿಸಿದ್ದಾರೆ.

ಹೀಗೆ ಸಮಕಾಲೀನ ಕಾಲಘಟ್ಟದ ರಾಜಕೀಯ ಸಂಘರ್ಷ ಹವ್ಯಕ ಬರಹಗಾರರ ಕತೆಗಳಲ್ಲಿ ಅಭಿವ್ಯಕ್ತಿಗೊಂಡಿವೆ. ಸ್ವಾತಂತ್ರ್ಯ ಹೋರಾಟ ಬರಹಗಾರರ ಮೇಲೆ ಪ್ರಭಾವ ಬೀರಿದ ಮಹತ್ತ್ವದ ಅಂಶಗಳಲ್ಲಿ ಒಂದು ಇದರ ಪ್ರಭಾವದಿಂದ ತಪ್ಪಿಸಿಕೊಳ್ಳಲು ಲೇಖಕರಿಗೆ ಸಾಧ್ಯವೇ ಇರಲಿಲ್ಲ. ಹವ್ಯಕ ಬರಹಗಾರರ ಕತೆಗಳಲ್ಲಿ ವಸಾಹತುಶಾಹಿ ಆಡಳಿತದ ವಿರುದ್ಧ ನಡೆದ ಹೋರಾಟದ ವಿವಿಧ ಮುಖಗಳು ದಾಖಲಾಗಿವೆ. ರಾಷ್ಟ್ರೀಯ ಚಳುವಳಿಯ ಹೆಜ್ಜೆಗುರುತುಗಳನ್ನು ಗುರುತಿಸುವ ಸಂದರ್ಭದಲ್ಲಿ ಹವ್ಯಕ ಬರಹಗಾರರ ಕತೆಗಳನ್ನು ಗಮನಿಸುವುದು ಅನಿವಾರ್ಯ. ಇಲ್ಲಿನ ಕಥೆಗಳು ಸ್ವಾತಂತ್ರ್ಯ ಹೋರಾಟದ ಒಳಸೂಕ್ಷ್ಮಗಳನ್ನು ಸಮರ್ಥವಾಗಿ ದಾಖಲಿಸಿವೆ ಎನ್ನಬಹುದು.

# ಅಧ್ಯಾಯ – ೮

## ಹವ್ಯಕ ನವ್ಯ ಕತೆಗಾರರು (೧೯೫೦ ರಿಂದ ೧೯೭೦ರ ವರೆಗೆ)

ಕನ್ನಡ ಸಾಹಿತ್ಯದಲ್ಲಿ 'ನವ್ಯತೆ' ಒಂದು ಮನೋಧರ್ಮವಾಗಿ ಸ್ಪಷ್ಟವಾಗಿ ಮೂಡಿ ಬಂದದ್ದನ್ನು ಕಾಣಿತ್ತೇವೆ. ಐವತ್ತು ಮತ್ತು ಅರವತ್ತರ ದಶಕ ನವ್ಯ ಸಾಹಿತ್ಯದ ಸೃಷ್ಟಿಯ ಕಾಲ. ಸ್ವಾತಂತ್ರ್ಯೋತ್ತರ ಕಾಲಘಟ್ಟದ ವಿಕ್ಷಿಪ್ತಕಾಲವಿದು. 'ರೋಮ್ಯಾಂಟಿಕ್' ಸಂಪ್ರದಾಯವನ್ನು ವಿರೋಧಿಸುವ ಮನೋವೃತ್ತಿ, ಆ ಕಾಲದ ಸಾಮಾಜಿಕ ಸಂದಿಗ್ಧತೆಗಳು ನವ್ಯತೆಗೆ ಕಾರಣವಾಗಿತ್ತು. ವಿಜ್ಞಾನದ ಪ್ರಗತಿ, ಔದ್ಯೋಗಿಕರಣ, ರಾಜಕಾರಣದಲ್ಲಿಯ ವಿಫಲತೆಗಳು, ಧರ್ಮದ ದುರ್ಬಲತೆ, ಮಾನವಶಾಸ್ತ್ರದ ಅನೇಕ ಶೋಧಗಳು, ಸಮಾಜಶಾಸ್ತ್ರದ ಹೊಸ ತತ್ತ್ವಗಳು, ಎರಡನೇ ಮಹಾಯದ್ಧದ ಅನಂತರದಲ್ಲಿ ಕಂಡುಬಂದ ಭೀಕರತೆ, ವ್ಯಕ್ತಿ ಹಾಗೂ ಸಮಾಜದ ಮೇಲೆ ನೇರ ಪರಿಣಾಮ ಬೀರಿತು.

ಆದರೆ, ಕನ್ನಡದ ನವ್ಯ ಸಾಹಿತ್ಯ ಸಂದರ್ಭದಲ್ಲಿ ಯುದ್ಧದ ಪ್ರಭಾವ, ಹಿಂಸೆಯ ತೀವ್ರತೆಗಿಂತ ಮಿಗಿಲಾಗಿ ವ್ಯಕ್ತಿಯ ಮಾನಸಿಕ ಮತ್ತು ಬೌದ್ಧಿಕ ಸಂಘರ್ಷವಿದೆ. ನವ್ಯ ಸಾಹಿತ್ಯ ಚಳುವಳಿ ಪ್ರಗತಿಶೀಲ ಚಳುವಳಿಯನ್ನು ಹಿಂದಿಕ್ಕಿ ಮನುಷ್ಯನ ಅಂತರಂಗದ ಬದುಕಿನಲ್ಲಿ ಆಸಕ್ತಿ ತಳೆಯಿತು. ವ್ಯಕ್ತಿಯ ಬದುಕನ್ನು ನವೋದಯ ಲೇಖಕರು ಹೊರಗಿನಿಂದ ನೋಡಿದರೆ, ನವ್ಯರು ಒಳಗಿಂದ ನೋಡಲು ಆರಂಭಿಸಿದರು. ವಸ್ತುವಿಗಾಗಿ ಸಾಮಾಜಿಕ ಸಮಸ್ಯೆಯನ್ನು ಆಯ್ದುಕೊಳ್ಳುವುದರ ಬದಲು, ನವ್ಯ ಬರಹಗಾರರು ವ್ಯಕ್ತಿಯ ವೈಯಕ್ತಿಕ ಅನುಭವಗಳನ್ನು ಆರಿಸಿಕೊಂಡರು. ಸಾಂಪ್ರದಾಯಕ ಕತೆಗಳಲ್ಲಿ ಆದಿ, ಮಧ್ಯ, ಅಂತ್ಯ ಇದ್ದು, ಅಂತ್ಯಭಾಗದಲ್ಲಿ ಹೆಚ್ಚಾಗಿ 'ಶಿಖರ' ತನ್ನ ಕೆಲಸವನ್ನು ಪೂರೈಸುತ್ತದೆ. "ನವ್ಯಕತೆ ಸಾಮಾನ್ಯವಾಗಿ ತನ್ನ ಶಿಖರದ ಹತ್ತಿರವೇ ಆರಂಭವಾಗಿ ಭೂತಕಾಲದ ಘಟನೆಗಳು ಬಿಟ್ಟುಹೋದ ಹೆಜ್ಜೆಯ ಗುರುತುಗಳನ್ನು ಆ ಕೊನೆಯ ಘಟನೆಯಲ್ಲೇ ಬಿಡಿಸಿ ತೋರಿಸುತ್ತದೆ. ಭೂತ ಹಾಗೂ ವರ್ತಮಾನಗಳೆರಡೂ ಒಂದೇ ಕ್ಷಣದಲ್ಲಿ ಹೇಗೆ ಒಂದರೊಳಗೊಂದು ತೊಡಕು ತೊಡಕಾಗಿ ಹೆಣೆದುಕೊಂಡಿವೆಯೆಂದು ತೋರಿಸುವುದು

ಇದರ ಉದ್ದೇಶ" (ಗೋವಿಂದರಾಜ ಗಿರಡ್ಡಿ; ಸಣ್ಣಕತೆಯ ಹೊಸ ಒಲವುಗಳು: ೧೯೭೬; ಪುಟ ೩೨) ಎಂಬ ಮಾತುಗಳು ನವ್ಯ ಸಾಹಿತ್ಯದ ಸ್ವರೂಪವನ್ನು ವಿವರಿಸುತ್ತದೆ.

ನವ್ಯ ಚಳುವಳಿಯು ಮನೋಧರ್ಮ ಹಾಗೂ ಕಥನಕಲೆಯಲ್ಲಿ ಮಹತ್ತ್ವದ ಬದಲಾವಣೆಯನ್ನು ತಂದಿತು. ಕನ್ನಡದಲ್ಲಿ ನವ್ಯ ಕತೆಗಳ ಬಗ್ಗೆ ಬಂದ ಕೆಲವು ವಿಮರ್ಶೆಗಳನ್ನುದ್ದೇಶಿಸಿ ಖ್ಯಾತ ವಿಮರ್ಶಕರಾದ ಕೆ. ನರಸಿಂಹಮೂರ್ತಿ ಅವರು ಈ ಕೆಳಗಿನ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ: " ______..ಇವುಗಳಲ್ಲಿ ತಂತ್ರ ಸ್ವಾರಸ್ಯ ಮಾತ್ರವಿದೆಯೆಂದು ಕೆಲವರೂ ಇವುಗಳನ್ನು ಅರ್ಥಮಾಡಿಕೊಳ್ಳುವುದೇ ಕಷ್ಟವೆಂದು ಕೆಲವರೂ ಆಕ್ಷೇಪಣೆ ಮಾಡುವುದುಂಟು. ಆದರೆ ಇವುಗಳ ನಾವೀನ್ಯ ತಂತ್ರ ನಾವಿನ್ಯಕ್ಕೆ ಸಂಬಂಧಿಸಿದುದು. ಅಂಥ ವಸ್ತುವನ್ನು ಅಂಥಮಾರ್ಗದಲ್ಲಿ ನಿರೂಪಿಸುವುದರಿಂದಲೇ ಅದು ಪರಿಣಾಮಕಾರಿಯಾಗಲು ಅರ್ಥವಾಗಲು ಸಾಧ್ಯ. ಆಧುನಿಕ ಆರ್ಥಿಕ ಸಿದ್ಧಾಂತವನ್ನು ಅನುಸರಿಸಿ ಪ್ರಗತಿಶೀಲರು ನವಸ್ಫೂರ್ತಿಯನ್ನು ತಂದಂತೆ, ಆಧುನಿಕ ಮಾನಸಿಕ ವಿಜ್ಞಾನದ ಸಂಶೋಧನೆಗಳನ್ನುಸರಿಸಿ ನವ್ಯ ಲೇಖಕರು ಕನ್ನಡ ಸಣ್ಣಕತೆಗೆ ಹೊಸ ಚೈತನ್ಯವನ್ನು ತಂದಿದ್ದಾರೆ. ಸುಪ್ತಚಿತ್ತದ ಪ್ರವೃತ್ತಿ ವೈಚಿತ್ರ್ಯವನ್ನು ಇದ್ದಕ್ಕಿದ್ದಂತೆ ನಾಟಕೀಯವಾಗಿ ಒಡಮೂಡಿಸಲು ಇವರು ಯತ್ನಿಸುತ್ತಾರೆ. ತಾವೇ ಕತೆಯನ್ನು ಹೇಳಹೋಗದೆ, ಪಾತ್ರಗಳ ಒಳಮನಸ್ಸಿನ ಭಾವ ತರಂಗಗಳನ್ನು ಪ್ರತಿಮೆಗಳ ಮೂಲಕ ಇವರು ಪ್ರತಿಬಿಂಬಸುತ್ತಾ ಹೋಗುತ್ತಾರೆ." (ನರಸಿಂಹಮೂರ್ತಿ ಕೆ. (ಸಂ.); ಕನ್ನಡದ ಅತ್ಯುತ್ತಮ ಕತೆಗಳು, ಪ್ರಸ್ತಾವನೆ; ೧೯೫೮; ಪುಟ ೧೬).

ಒಟ್ಟಿನಲ್ಲಿ ಕನ್ನಡ ಸಣ್ಣಕತೆಗಳಲ್ಲಿ ನವ್ಯ ಪ್ರಜ್ಞೆಯು, ಮನುಷ್ಯನ ಅಸಹಾಯಕ ಪರಿಸ್ಥಿತಿಯ ಪರಿವೆಯಿಂದ ಹುಟ್ಟಿದ, ಆತನ ಆಂತರಿಕ ಅಸ್ವಸ್ಥತೆಯ ವಿಶ್ಲೇಷಣೆಯಿಂದ ಆರಂಭವಾಯಿತು ಎನ್ನಬಹುದು. ರಾಮಚಂದ್ರ ಶರ್ಮರು ಕನ್ನಡ ಸಣ್ಣಕಥೆಗೆ ನವ್ಯತೆ ತಂದ ಮೊದಲ ಲೇಖಕರಾದರೂ. ಅನಂತಮೂರ್ತಿ, ಶಾಂತಿನಾಥ ದೇಸಾಯಿ, ಪಿ.ಲಂಕೇಶ, ಪೂರ್ಣಚಂದ್ರ ತೇಜಸ್ವಿ ಮುಂತಾದವರು ನವ್ಯ ಮಾರ್ಗದಲ್ಲಿ ಕಥೆಗಳನ್ನು ಬರೆದಿದ್ದಾರೆ. ಹಾಗೆಯೇ ರಾಘವೇಂದ್ರ ಖಾಸನೀಸ, ಎ.ಕೆ.ರಾಮಾನುಜನ್, ಶ್ರೀಕೃಷ್ಣ ಆಲನಹಳ್ಳಿ, ಎಸ್.ದಿವಾಕರ ಈ ಸಂವೇದನೆಯ ಪ್ರಮುಖ ಕಥೆಗಾರರಾಗಿದ್ದಾರೆ. ಪರಿಸರ, ರೀತಿರಿವಾಜು, ಹಳ್ಳಿಯ ಸೂಕ್ಷ್ಮತೆ ಮೌಢ್ಯತೆ, ನಗರ ಬದುಕಿನ ಸಂಕೀರ್ಣತೆ, ಕೌಟುಂಬಿಕ

ತುಮುಲ, ವಿಘಟನೆ, ನಂಬಿಕೆಗಳು, ಬದುಕಿನ ಬದಲಾವಣೆ, ಮುಂತಾದ ವಿಷಯಗಳನ್ನು ಕುರಿತು ನವ್ಯ ಕತೆಗಾರರು ಬರೆದಿದ್ದಾರೆ.

ಹವ್ಯಕರಲ್ಲಿ ೧೯೫೦ರ ಹೊತ್ತಿಗೆ ಯರ್ಮುಂಜ ರಾಮಚಂದ್ರ ಮತ್ತು ಮುಳಿಯ ಕೃಷ್ಣ ಭಟ್ಟರ ಕತೆಗಳ ಮೂಲಕ ನವ್ಯತೆ ಕಾಣಿಸಿಕೊಂಡಿತು. ಮುಳಿಯ ಕೃಷ್ಣ ಭಟ್ಟರ ಕತೆಗಳ ಬಗ್ಗೆ ಬರೆಯುತ್ತಾ; "ಅವರ 'ಪ್ರವಾಹದಲ್ಲಿ ಪ್ರತಿಬಿಂಬ' ಇಂತಹ ಒಂದು ಶ್ರೇಷ್ಠಕತೆ. ಈ ಕತೆಯಲ್ಲಿ ಕಾಫ್ಕನಂತಹ (ಕಾಫ್ಕನ್) ಪರಿಸರ ನಿರ್ಮಾಣ ಕಾಣಿತ್ತದೆ." (ಬಿ.ಜನಾರ್ದನ ಭಟ್ (ಸಂ.);ದಕ್ಷಿಣ ಕನ್ನಡದ ಶತಮಾನದ ಕತೆಗಳು, ಪ್ರಸ್ತಾವನೆ; ೨೦೦೩; ಪುಟ ೨೫) ಎಂಬುದಾಗಿ ಬಿ. ಜನಾರ್ದನ ಭಟ್ಟರು ಅಭಿಪ್ರಾಯಪಟ್ಟಿದ್ದಾರೆ. ಸುಬ್ರಾಯ ಚೊಕ್ಕಾಡಿ, ಜಯಪ್ರಕಾಶ ಮಾವಿನಕುಳಿ, ಜಿ.ಎಸ್.ಉಬರಡ್ಕ. ಕೆ.ವಿ.ತಿರುವಲೇಶ್,ಸುಬ್ರಾಯ ಭಟ್ ಬಕ್ಕಳ ಜಿ., ಅಶೋಕ ಹೆಗಡೆ, ನಾರಾಯಣ ಕಂಗಿಲ, ಗೋಪಾಲಕೃಷ್ಣ ಹೆಗಡೆ ಕೇರೀಮನೆ ಮುಂತಾದ ಹವ್ಯಕ ನವ್ಯ ಕತೆಗಾರರು ಸ್ವಾತಂತ್ರ್ಯೋತ್ತರ ಕಾಲದ ಭ್ರಮನಿರಸನ, ಜನಜೀವನದ ರೀತಿನೀತಿಗಳು, ಕೌಟುಂಬಿಕ ತುಮುಲಗಳು, ಸಾಮಾಜಿಕ ಬದಲಾವಣೆ ಇತ್ಯಾದಿಗಳ ಬಗ್ಗೆ ತಮ್ಮ ಸ್ವಾನುಭವದ ವ್ಯಕ್ತಿ ವಿಶಿಷ್ಟ ಸಿದ್ಧಾಂತದ ಮುದ್ರೆಯನ್ನು ತಮ್ಮ ಕತೆಗಳಲ್ಲೆಲ್ಲಾ ಪ್ರಧಾನವಾಗಿ ಮೂಡಿಸಿದ್ದಾರೆ.

### ೮.೧ ಸ್ವಾತಂತ್ರ್ಯೋತ್ತರ ಕಾಲದ ಭ್ರಮನಿರಸನ

ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಉಂಟಾದ ಸಮಸ್ಯೆ-ಸವಾಲುಗಳನ್ನು ಎದುರಿಸುವ ನಿಟ್ಟಿನಲ್ಲಿ ಕಾಣಿಸಿಕೊಂಡ ಬದಲಾವಣೆಯ, ಹೊಸ ಪರಿಕಲ್ಪನೆಗಳಲ್ಲಿ ಸಾಹಿತ್ಯ ರಚನೆಯು ಒಂದಾಗಿದ್ದು. ಇದು ಕನ್ನಡ ಸಾಹಿತ್ಯಕ್ಕೆ ಒಂದು ಹೊಸ ಆಯಾಮವನ್ನು ಕೊಟ್ಟಿತು. ಈ ನವ್ಯ ಸಾಹಿತ್ಯವು ಹಿಂದಿನ ನವೋದಯ, ಪ್ರಗತಿಶೀಲ ಸಾಹಿತ್ಯಗಳಂತೆ ಪಶ್ಚಿಮ ಮತ್ತು ದೇಸಿಯ ಸಂವೇದನೆಗಳ ಹಿನ್ನೆಲೆಯಲ್ಲಿ ರೂಪಿತವಾದ ಒಂದು ಬದ್ಧ ಸಾಹಿತ್ಯವಾಗಿದ್ದು, ಜಗತ್ತಿನ ಎರಡು ಮಹಾಯುದ್ಧಗಳಿಂದ ಪ್ರಪಂಚದಾದ್ಯಂತ ಉಂಟಾದ ಭೀಕರ ಸಾವು-ನೋವು ತೀವ್ರ ಪರಿಣಾಮದ ಫಲವಾಗಿ ಅದುವರೆಗೂ ನಂಬಿಕೊಂಡು ಬಂದ ಬದುಕು, ಮೌಲ್ಯಗಳಲ್ಲಿ ಕುಸಿತ ಕಾಣಿಸಿಕೊಂಡಿತು. ಈ ಸಂದರ್ಭದಲ್ಲಿ ಟಿ.ಎಸ್.ಎಲಿಯೆಟ್. ಕಾಮು, ಕಾಫ್ಕ ಮುಂತಾದ ಶ್ರೇಷ್ಠ ಸೃಜನಶೀಲ ಮತ್ತು ತಾತ್ತ್ವಿಕ ಚಿಂತಕರು ತಮ್ಮದೇ ಆದ ಸೈದ್ಧಾಂತಿಕ ನೆಲೆಯಲ್ಲಿ ಆ ಹಿಂದಿನ ಪರಂಪರೆಯ ಸಾಹಿತ್ಯ-

ಸಾಂಸ್ಕೃತಿಕ ಪ್ರಜ್ಞೆಯನ್ನು ಪ್ರಶ್ನಿಸುವ ಮೂಲಕ, ಸಾಹಿತ್ಯ ಮತ್ತು ಸಂಸ್ಕೃತಿಗೆ ಮುಖಾಮುಖಿ ಆದರು. ಈ ಸಂವೇದನೆಯು ಜಗತ್ತಿನಾದ್ಯಂತ ಎಲ್ಲ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂದರ್ಭದಲ್ಲಿ ತೀವ್ರ ಪರಿಣಾಮ ಮತ್ತು ಎಚ್ಚರವನ್ನುಂಟುಮಾಡಿತು. ಇದರಿಂದ ಭಾರತವು ಕೂಡಾ ಹೊರತಾಗಿ ನಿಲ್ಲದೆ, ಸ್ವಾತಂತ್ರ್ಯೋತ್ತರ ದಿಶೆಯಲ್ಲಿ ಉಂಟಾದ ಮೇಲಿನ ಪರಿಣಾಮಗಳ ಜತೆಗೇ ಸ್ವಾತಂತ್ರ್ಯ ಪಡೆಯುವ ತುರ್ತಿನಲ್ಲಿ ಕಟ್ಟಿಕೊಂಡ ಕನಸು, ಆದರ್ಶ, ನಂಬಿಕೆ, ಬದಲಾವಣೆ ಧ್ಯೆಯಧೋರಣೆ ನುಚ್ಚುನೂರಾದವು. ಅದರ ಹಿನ್ನೆಲೆಯಲ್ಲಿ ಭ್ರಮೆ, ನಿರಾಸೆ, ಏಕಾಂಗಿತನ, ಕುಟುಂಬ ವಿಘಟನೆ, ರಾಜಕೀಯ ಬದಲಾವಣೆ ಮುಂತಾದವು ನವ್ಯದ ಅಂತಃಸ್ಸತ್ವದಲ್ಲಿ ಕಾಣಿಸಿಕೊಳ್ಳುತ್ತದೆ. ಹವ್ಯಕ ಬರಹಗಾರರಾದ ಯರ್ಮುಂಜ ರಾಮಚಂದ್ರ, ಸುಬ್ರಾಯ ಚೊಕ್ಕಾಡಿ, ಜಯಪ್ರಕಾಶ ಮಾವಿನಕುಳಿ, ಕೆ.ವಿ.ತಿರುಮಲೇಶ, ಸುಬ್ರಾಯ ಭಟ್ ಬಕ್ಕಳ. ಮುಂತಾದವರು ತಮ್ಮ ಕತೆಗಳ ಮೂಲಕ ಸ್ವಾತಂತ್ರ್ಯೋತ್ತರ ಕಾಲದ ಭ್ರಮೆ, ನಿರಾಶೆ, ವ್ಯವಸ್ಥೆಯ ವಿರುದ್ಧ ಪ್ರತಿಭಟನೆಯ ಅಂಶಗಳನ್ನು ಕುರಿತು ಬರೆದಿದ್ದಾರೆ. ಹವ್ಯಕರು ಮನುಷ್ಯನ ಅಂತರಂಗದ ಪ್ರಪಂಚ ಮತ್ತು ಸುತ್ತಲಿನ ಬದುಕನ್ನು ಒಂದಾಗಿ ಬೆಸೆಯುವ ಪ್ರಯತ್ನವನ್ನು ತಮ್ಮ ಕತೆಗಳಲ್ಲಿ ಮಾಡಿದ್ದಾರೆ.

ಯರ್ಮುಂಜ ರಾಮಚಂದ್ರರು ಬರೆದ 'ಸ್ನೇಹಿತರು' ಮತ್ತು 'ಎಂಕಪ್ಪುವಿನ ದ್ವೇಷಾಗ್ನಿ' ಕತೆಗಳಲ್ಲಿ ಸ್ನೇಹ, ದ್ವೇಷಗಳ ಚಿತ್ರಣ ಕಂಡುಬರುತ್ತದೆ. ಅಂತರಂಗದ ಬದುಕಿಗೆ ಹೆಚ್ಚು ಒತ್ತು ನೀಡಿ ಅದನ್ನು ಶೋಧಿಸುವ ಪ್ರಯತ್ನವನ್ನು 'ಸ್ನೇಹಿತರು' ಕತೆಯಲ್ಲಿ ಸ್ಪಷ್ಟವಾಗಿ ಕಾಣಬಹುದು. ರಾಮಯ್ಯ ಮತ್ತು ಕೆಳಮನೆ ಶಿವಣ್ಣ ಜೀವದ ಗೆಳೆಯರು. ಶಿವಣ್ಣ ಆಗರ್ಭ ಶ್ರೀಮಂತ. ರಾಮಯ್ಯ ಕಡುಬಡವ. ಆದರೂ ಇವರಿಬ್ಬರ ನಡುವಿನ ಆತ್ಮೀಯತೆಗೆ ಕುಂದಿಲ್ಲ. ಇಂಥ ಗೆಳೆತನದ ಕೊಡುಗೆಯಾಗಿ ಶಿವಣ್ಣ ತನ್ನಲ್ಲಿದ್ದ ಒಂದು ತುಂಡು ಬಂಜರು ಭೂಮಿಯನ್ನು ಕೊಡುಗೆಯಾಗಿ ನೀಡಿದ್ದನು. ಇದನ್ನೇ ರಾಮಯ್ಯ ತನ್ನ ಕ್ರಿಯಾಶೀಲ ದುಡಿಮೆಯಿಂದ ಹತ್ತು ವರ್ಷಗಳಲ್ಲಿ ನಂದನವನವನ್ನಾಗಿಸಿದನು. ಕಾಲ ಕಳೆದಂತೆ ರಾಮಯ್ಯನ ಅಭಿವೃದ್ಧಿಯನ್ನು ಸಹಿಸದ ಶಿವಣ್ಣನ ಮನಸ್ಸಿನಲ್ಲಿ ವಿಷದ ಬೀಜ ಮೊಳೆಯ ತೊಡಗುತ್ತದೆ. ಇದರಿಂದಾಗಿ ಶಿವಣ್ಣ ಮಾನಸಿಕ ಖಿನ್ನತೆಗೆ ಒಳಗಾಗುತ್ತಾನೆ. ಕೊನೆಗೆ, ದೂರವಾಗಿದ್ದ ತಮ್ಮ ಕುಟುಂಬದ ಆತ್ಮೀಯತೆಯನ್ನು ಶಿವಣ್ಣ ಕೃತಕವಾಗಿ ನವೀಕರಿಸಿಕೊಂಡಾಗ ರಾಮಯ್ಯ ನನ್ನ ಶಿವಣ್ಣ ತಿರುಗಿ ಸಿಕ್ಕಿದ ಎಂದು ಹಿಗ್ಗುತ್ತಾನೆ.

ಆದರೆ ಆ ಹಿಗ್ಗು ಅದೇ ರಾತ್ರಿ ಕೊನೆಗೊಳ್ಳುತ್ತದೆ. ರಾತ್ರಿಯ ಕತ್ತಲಲ್ಲಿ ಅವರ ತೋಟದ ನಡುವೆ ನಾಲ್ವರು ಅವರನ್ನು ಕಟ್ಟಿ ಹೊತ್ತುಕೊಂಡು ಹೋಗುತ್ತಾರೆ. ಸ್ನೇಹ–ಅಸೂಯೆ, ಮಾನವೀಯತೆ– ಕ್ರೌರ್ಯ, ಕ್ರಿಯಾಶೀಲತೆ–ಮೈಗಳ್ಳತನ ಇತ್ಯಾದಿಯಾದ ವೈರುಧ್ಯಗಳನ್ನು ಒಂದಡೆ ತಂದು ಮಾನವೀಯ ಸ್ವಭಾವಗಳ ಪರೀಕ್ಷೆ ನಡೆಸುವ ಈ ಕತೆ ಮನೋಜ್ಞವಾಗಿದೆ. ಯರ್ಮುಂಜ ರಾಮಚಂದ್ರನರ 'ಎಂಕಪ್ಪುವಿನ ದ್ವೇಷಾಗ್ನಿ' ಕೂಡಾ ಸ್ನೇಹ–ದ್ವೇಷಗಳ ಚಿತ್ರಣದ ಕತೆಯಾಗಿದೆ. ಎಂಕಪ್ಪುವಿನ ದಣಿ ಆತನಿದ್ದ ಮನೆಯಿಂದ ಅವನನ್ನು ಒಕ್ಕಲೆಬ್ಬಿಸಿ ಆ ಮನೆಯಲ್ಲಿ ತನಿಯನನ್ನು ಇರಗೊಳಿಸುತ್ತಾರೆ. ಇದೇ ಎಂಕಪ್ಪುವಿನ ದ್ವೇಷ ಹೊತ್ತಿ ಉರಿಯಲು ಕಾರಣವಾಗುವುದು. ತನ್ನದಲ್ಲದ ತಪ್ಪಿಗೆ ತನಿಯ ಎಂಕಪ್ಪುವಿನ ಕ್ರೌರ್ಯ, ದ್ವೇಷಗಳಿಗೆ ಗುರಿಯಾಗಬೇಕಾಗುತ್ತದೆ. ಆದರೆ ಕೊನೆಗೆ ತನಿಯನ ಉದಾರತೆ, ನಿಷ್ಕಳಂಕ ನಡವಳಿಕೆ, ಸ್ನೇಹಗಳೆದುರು ಎಂಕಪ್ಪು ಸೋಲುತ್ತಾ ಹೋಗುತ್ತಾನೆ. ಹೀಗಾಗಿ ಎಂಕಪ್ಪುವಿನ ದ್ವೇಷದ ಗುರಿಗೆ ತನಿಯ ಈಡಾಗುವುದೇ ಇಲ್ಲ. ಪಶ್ಚಾತ್ತಾಪಗೊಂಡ ಎಂಕಪ್ಪುನೆ ತನಿಯನನ್ನು ತನ್ನ ಮನೆಗೆ ಊಟಕ್ಕೆ ಆಹ್ವಾನಿಸುವ ಮೂಲಕ ತನ್ನ ಅಕಾರಣ ದ್ವೇಷ, ಅಸಹನೆಗಳನ್ನು ಕೊನೆಗೊಳಿಸುತ್ತಾನೆ. ಈ ಕತೆ ದ್ವೇಷ, ಕ್ರೌರ್ಯಗಳು, ಮತ್ತೆ ಸ್ನೇಹಕ್ಕೆ ತಿರುಗುವ ಮಾನವನ ಮುಖವನ್ನು ಚಿತ್ರಿಸುತ್ತದೆ.

ಮೇಲಿನ ಎರಡೂ ಕತೆಗಳಲ್ಲಿ ಮನುಷ್ಯನ ಮೂಲಭೂತ ಸ್ವಭಾವ, ಮಾನವೀಯ ಮುಖಗಳನ್ನು ಶೋಧಿಸಲು ರಾಮಚಂದ್ರರು ಹೊರಟಿದ್ದಾರೆ. 'ಸ್ನೇಹಿತರು' ಕತೆಯಲ್ಲಿನ ರಾಮಯ್ಯ ಮತ್ತು ಶಿವಣ್ಣ–ಇಬ್ಬರೂ ಮಧ್ಯಮ–ಶ್ರೀಮಂತ ವರ್ಗಗಳಿಗೆ ಸೇರಿದವರು. ಇವರ ಸ್ವಭಾವ, ನಡವಳಿಕೆಗಳು ಆಯಾ ವರ್ಗದ ಹಿತಾಸಕ್ತಿಗಳಿಂದ ಪ್ರೇರಿತವಾದವುಗಳು. ಇಬ್ಬರೂ ಭಿನ್ನ ಶ್ರೇಣಿಗಳಿಗೆ ಸೇರಿದವರಾದ್ದರಿಂದ ಅವರ ನಡುವಿನ ಸ್ನೇಹ ವ್ಯವಹಾರದ ಮೇಲೆ ನಿಲ್ಲುವಂಥದ್ದು. ಹೀಗಾಗಿ ಅಲ್ಲಿ ಅಸೂಯೆ, ಕ್ರೌರ್ಯಗಳಿಗೆ ಸ್ಥಾನವಿದೆ. ಆದರೆ ಎರಡನೆಯ ಕತೆಯಲ್ಲಿನ ಎಂಕಪ್ಪು, ತನಿಯ ಇಬ್ಬರೂ ಒಂದೇ ವರ್ಗಕ್ಕೆ ಸೇರಿದವರು. ಅವರಿಬ್ಬರ ನಡುವಿನ ದ್ವೇಷ ಕೇವಲ ಸಾಂದರ್ಭಿಕ. ಇಬ್ಬರ ಹಿತಾಸಕ್ತಿಗಳು ಬೇರೆ ಬೇರೆಯಲ್ಲ. ಆದುದರಿಂದ ಇಬ್ಬರ ನಡುವೆ ಯಾವುದೇ ವೈರುಧ್ಯಗಳು ಇರಲಾರವು. ರಾಮಚಂದ್ರರು ಈ ಎರಡು ಕತೆಗಳ ಮೂಲಕ ಮನುಷ್ಯ ಸಂಬಂಧ ಮತ್ತು ಸ್ವಭಾವಗಳ ಬಗ್ಗೆ ಸುಂದರವಾಗಿ ಚಿತ್ರಿಸಿದ್ದಾರೆ.

ಯರ್ಮುಂಜರು ಬರೆದ 'ಚೆನ್ನಪ್ಪ ಒಡೆದ ಮೂರ್ತಿ' ಒಂದು ಮನೋವಿಶ್ಲೇಷಣಾತ್ಮಕ ಕತೆ. ಚೆನ್ನಪ್ಪ ದೇವರ ಮೂರ್ತಿಗಳನ್ನು ಮಾಡಿಕೊಡುವ ಕಲಾವಿದ. ಕೃಷಿಯಿಂದ ದೊರೆತ ಆದಾಯ ಜೀವನ ನಿರ್ವಹಣೆಗೆ ಸಾಕಾಗುವುದಿಲ್ಲವೆಂದು ಗಣೇಶನ ಚೌತಿ, ಧನಲಕ್ಷ್ಮಿ ಪೂಜೆಗಳ ಸಂದರ್ಭದಲ್ಲಿ ಇಂತಹ ಮೂರ್ತಿಗಳನ್ನು ಮಾಡಿಕೊಡುವುದು ಅವನ ಹವ್ಯಾಸ. ಒಮ್ಮೆ ಊರಿನ ಶ್ರೀಮಂತ, ವಿದ್ಯಾವಂತ ಶಿವಸ್ವಾಮಿ ಮೂರ್ತಿಗಳನ್ನು ಮಾಡಲು ಚೆನ್ನಪ್ಪನಿಗೆ ಹೇಳುತ್ತಾನೆ. ಹಬ್ಬದ ಸಮಯವಿಲ್ಲದಿದ್ದರೂ ಆತನಿಗೆ ದೇವರ ಮೂರ್ತಿಗಳು ಯಾಕೆಂದು ಚೆನ್ನಪ್ಪನಿಗೆ ಅಚ್ಚರಿ. ಆದರೂ ಹಣದ ಆಸೆಯಿಂದ ಮೂರ್ತಿಗಳನ್ನು ಮಾಡತೊಡಗಿದಂತೆ, ಊರವರ, ಪುರೋಹಿತರ ವಿರೋಧ ಕಾಣಿಸಿಕೊಂಡಾಗ ಚೆನ್ನಪ್ಪ ಗಾಬರಿಯಾಗುತ್ತಾನೆ. ಶಿವಸ್ವಾಮಿಯ ಮೂರ್ತಿ ಭಂಜಕ ಚಳುವಳಿಗಾಗಿ ತಾನವನಿಗೆ ಮೂರ್ತಿಗಳನ್ನು ಮಾಡಬೇಕಾಗಿದೆ ಎಂಬ ವಿಚಾರ ಚೆನ್ನಪ್ಪನಲ್ಲಿ ಗೊಂದಲ ಹುಟ್ಟಿಸುತ್ತದೆ. ಸ್ವತಃ ಶಿವಸ್ವಾಮಿಯಲ್ಲಿ ವಿಚಾರಿಸಿದಾಗ ಆತ ಅದನ್ನು ಅಲ್ಲಗಳೆಯುವುದಿಲ್ಲ. ಚೆನ್ನಪ್ಪನ ಮಗನಾದ ವೆಂಕ ಮೂರ್ತಿಗಳನ್ನು ಕೊಡುವುದು ಬೇಡವೆಂದು ತನ್ನ ವಿರೋಧವನ್ನು ವ್ಯಕ್ತಪಡಿಸುತ್ತಾನೆ. ಕೊನೆಗೆ ಭಯದಿಂದ ಮಾನಸಿಕ ತುಮುಲಗಳನ್ನು ಅನುಭವಿಸಿದ ಚೆನ್ನಪ್ಪ ಮೂರ್ತಿಗಳನ್ನು ಶಿವಸ್ವಾಮಿಗೆ ಭಂಜನೆಗಾಗಿ ಕೊಡದೆ, ತಾನೂ ಒಡೆಯದೆ, ಆವೆ ಮಣ್ಣಿನಲ್ಲಿ ಒತ್ತಿಡುತ್ತಾನೆ. ಗಣಪತಿಯ ಪ್ರತಿಮೆಯನ್ನು ನೀರಲ್ಲಿ ತಿಕ್ಕಿ ತಿಕ್ಕಿ ಕರಗಿಸುತ್ತಾನೆ.

"ಮೊದಲು ಒಂದು ವಿಷಯವನ್ನು ಸ್ಪಷ್ಟಪಡಿಸಬೇಕಾಗಿದೆ. ಶ್ರೀರಾಮಸ್ವಾಮಿ ನಾಯ್ಕರ ದ್ರಾವಿಡ ಕಝಗಮಿನ ಹೆಸರನ್ನು ನಮ್ಮ ಊರಿನಲ್ಲಿ ಕೇಳಿದವರೇ ಅಪರೂಪ. ಅವರ ಇತ್ತೀಚಿನ ಮೂರ್ತಿ ವಿಧ್ವಂಸಕ ಚಳವಳದ ಹೆಸರಂತೂ ನಮ್ಮ ಊರವರ ಕಲ್ಪನೆಗೂ ಅಸಾಧ್ಯವಾದ ಸಂಗತಿ. ಆದರೆ ಇದು ಸುದ್ದಿಗಾರರು ಮತ್ತು ಪತ್ರಿಕೆಗಳ ಕಾಲ ನೋಡಿರಿ. ಜಗತ್ತಿನ ಯಾವ ಮೂಲೆಯಲ್ಲಿ ಒಂದು ಇರುವೆ ಹರಿದರೂ ಅವರ ದೃಷ್ಟಿಯನ್ನು ತಪ್ಪಿಸಿಕೊಳ್ಳಲಾರದು. ಅಂಥದೇ ಒಂದು ವಾರ್ತಾಕಿಡಿ ನಮ್ಮ ಶಿವಸ್ವಾಮಿಯಲ್ಲಿ ಸ್ಫೂರ್ತಿಯನ್ನುಂಟು ಮಾಡಿತು." (ಯರ್ಮುಂಜ ರಾಮಚಂದ್ರ; ಯರ್ಮುಂಜ ರಾಮಚಂದ್ರ ಸಮಗ್ರ ಕಥೆ –ಕಾವ್ಯ; ೨೦೦೨; ಪುಟ೨೧) ಎಂಬುದಾಗಿ ಯರ್ಮುಂಜ ರಾಮಚಂದ್ರರು ತಮ್ಮ ಕತೆಗೆ ಸ್ಫೂರ್ತಿಯಾದ ಅಂಶವನ್ನು ಕತೆಯ ಆರಂಭದಲ್ಲಿ ಹೇಳಿಕೊಂಡಿದ್ದಾರೆ.

ಸಮಕಾಲೀನ ಘಟನೆಯಾದ ಡಿ.ಎಂ.ಕೆ.ಯ ನಿರೀಶ್ವರವಾದಿ ಚಳುವಳಿಗೆ ರಾಮಚಂದ್ರರು ಪ್ರತಿಕ್ರಿಯಿಸಿ ಅದನ್ನು ಕತೆ ಮಾಡಿದ್ದಾರೆ. ಆದರೆ ಚಳುವಳಿಯ ತತ್ತ್ವಗಳನ್ನು ನೇರವಾಗಿ ಭಟ್ಟಿಯಿಳಿಸದೆ ಅದರ ಬದಲು ದೂರದ ಈ ಚಳುವಳಿ ಹೇಗೆ ಒಂದು ಹಳ್ಳಿಯ ಜೀವನವನ್ನು ಬದಲಾಯಿಸಿತು ಎಂದು ತೋರಿಸುತ್ತಾರೆ. ನಾಸ್ತಿಕವಾದ ಈ ಕತೆಯಲ್ಲಿ ಕಂಡುಬರುತ್ತದೆ. ನಾಸ್ತಿಕವಾದದ ಪ್ರಭಾವದಿಂದ ಶಿವಸ್ವಾಮಿ ತಾನು ಗಳಿಸಿದ ಹಣದಿಂದ ಚಳುವಳಿ ಪ್ರಾರಂಭಿಸುತ್ತಾನೆ. ಚೆನ್ನಪ್ಪನೂ ಹಣದ ಆಸೆಗೇ ಮೂರ್ತಿ ಮಾಡುತ್ತಾನೆ. ಆದರೆ ಮೂರ್ತಿ ರಚನೆಯ ಹಿನ್ನೆಲೆಯನ್ನು ತಿಳಿದಾಗ ಅದು ಅವನಲ್ಲಿ ತುಮುಲಗಳನ್ನುಂಟು ಮಡುತ್ತದೆ. ತನ್ನ ಆಸ್ತಿಕತೆ ಉಳಿಸುವುದಕ್ಕಾಗಿ ಚೆನ್ನಪ್ಪನೇ ಈಗ ದೇವರ ಮೂರ್ತಿಗಳನ್ನು ನಾಶ ಮಾಡಬೇಕಾಗಿದೆ. ಹೀಗೆ ನಾಸ್ತಿಕತೆಯನ್ನು ವಿರೋಧಿಸುವವರೇ ನಾಸ್ತಿಕದ ಕಾರ್ಯ ಮಾಡಬೇಕಾಗಿ ಬರುವ ರೀತಿಯ ಬದಲಾವಣೆ ಊರಿನಲ್ಲಿ ಪ್ರಾರಂಭವಾಗಿದೆ ಎಂಬ ಅಂಶ ಕಂಡುಬರುತ್ತದೆ. ನಂಬಿಕೆಯೇ ಇಲ್ಲದ ಶಿವಸ್ವಾಮಿಗೆ ಒಳತೋಟಿಗಳಿಲ್ಲ. ಆದರೆ ನಂಬಿಕೆಯ ತಳಹದಿಯಲ್ಲಿಯೇ ಬದುಕುವ ಚೆನ್ನಪ್ಪ ಸ್ವತಃ ಅಪರಾಧಿಯಲ್ಲದಿದ್ದರೂ, ಎಲ್ಲಿ ತನ್ನಿಂದ ಅಪರಾಧವೆಸಗುವುದೋ ಎಂಬ ಭಯದಿಂದ ತುಮುಲವನ್ನನುಭವಿಸುವನು. ಧಾರ್ಮಿಕ ನಂಬಿಕೆಯ ಬೇರು ಯಾರಲ್ಲಿ ಎಷ್ಟು ಆಳಕ್ಕಿಳಿದಿದೆ ಎಂಬ ವಿಚಾರವನ್ನು ರಾಮಚಂದ್ರರು ಈ ಕತೆಯಲ್ಲಿ ವಿಶ್ಲೇಷಿಸುತ್ತಾರೆ.

ಸುಬ್ರಾಯ ಚೊಕ್ಕಾಡಿಯವರ 'ಮದುವೆ' ಕತೆಯಲ್ಲಿ ಕಥಾನಾಯಕ ಮದುವೆ ವ್ಯವಸ್ಥೆಯನ್ನು ಲೇವಡಿ ಮಾಡುತ್ತಾ, ಮನಸ್ಸು ನೈತಿಕ ದ್ವಂದ್ವಗಳಲ್ಲಿ ಮುಳುಗಿರುವ ಚಿತ್ರಣ ಕಂಡುಬಂದರೆ 'ಅರೂಪ' ಕತೆಯಲ್ಲಿ ಕಥಾನಾಯಕ ತನ್ನ ನಿಜಸ್ವರೂಪವನ್ನು ಹುಡುಕುವ, ಅನ್ವೇಷಿಸುವ ಚಿತ್ರವಿದೆ. 'ಮದುವೆ' ಕತೆಯಲ್ಲಿ ನಾಯಕ ಮದುವೆ ಸಂಬಂಧದ ನಿರರ್ಥಕತೆಯನ್ನು ಪ್ರಶ್ನೆ ಮಾಡುತ್ತಾನೆ ವ್ಯಕ್ತಿಯ ಅನಿರ್ಬಂಧಿತ ಸ್ವಾತಂತ್ರ್ಯಕ್ಕೆ ಮದುವೆ ಒಂದು ಕಡಿವಾಣ ಎಂಬ ವಿಚಾರ ನವ್ಯರ ಕತೆಗಳಲ್ಲಿ ಹಾಸುಹೊಕ್ಕಾಗಿವೆ. ಪ್ರಸ್ತುತ ಕತೆಯಲ್ಲಿ ಕಥಾನಾಯಕ ತನ್ನ ವಿಚಿತ್ರವಾದ ತರ್ಕದಿಂದ ತಾನು ಕೈಹಿಡಿದ ಹೆಂಡತಿ 'ಗಿರಿಜೆ'ಯನ್ನು ಬೆಚ್ಚಿ ಬೀಳುವಂತೆ ಮಾಡುತ್ತಾನೆ. "ಓಂ ____.... ಇಷೇ ಏಕಪದಾ ____... ಭವ____ ಸಾ____ಮಾಮಸುಪ್ರತಾಭವ______ (ಸುಬ್ರಾಯ ಚೊಕ್ಕಾಡಿ; ಬೇರುಗಳು ೧೯೭೪; ಪುಟ ೧೫), "ಅನಃ ______. ಪ್ರಜಾಂ ಜನಯತು ______" (ಅದೇ: ಪುಟ ೧೬), "_____.....ಕಾ ________..ಕಾರ್ಯೇಪು

ದಾಸೀ_____.. ಕಾರ್ಯೇ ಷುದಾಸೀ _____” (ಅದೇ; ಪುಟ ೧೬), “ಧರ್ಮೇಚಾರ್ಥೇಚ ಕಾಮೇಚ। ನಾತಿ ಚರಿತವ್ಯಾತ್ವೆಯೇಯಂ!” (ಅದೇ; ಪು೧೯) ಎಂಬ ಮದುವೆ ಸಂದರ್ಭದಲ್ಲಿ ಉಚ್ಚರಿಸುವ ಮಂತ್ರದ ಪ್ರತೀ ಶಬ್ದವನ್ನು ಗೇಲಿ ಮಾಡುತ್ತಾನೆ. ಅವು ವಾಸ್ತವ ಬದುಕಿನಲ್ಲಿ ಎಷ್ಟು ಅಪ್ರಸ್ತುತ ಎಂಬುದರ ಪರೀಕ್ಷೆ ಮಾಡುತ್ತಾ ಸಾಗುತ್ತಾನೆ. ನಾಯಕನ ಉದ್ದೇಶರಹಿತ ಚಟುವಟಿಕೆಗಳ ತೊಳಲಾಟ ಇಲ್ಲಿದೆ. ಈ ಕಥೆಯ ನಾಯಕ ಒಂದು ರೀತಿಯಲ್ಲಿ ಪ್ರತಿನಾಯಕ. ಪ್ರತಿನಾಯಕನಲ್ಲಿರುವ ಸಿಟ್ಟು, ಕ್ರೋಧ, ಅರೆಮರುಳಿನ ಸ್ಥಿತಿ ಇವನದು. ಈ ಕಥೆಯ ನಾಯಕ ಗಿರಿಜೆಯನ್ನು ಮದುವೆಯಾಗಿದ್ದರೂ ಅವಳನ್ನು ನಡೆಸಿಕೊಳ್ಳುವ ರೀತಿ ಅಸಂಬದ್ಧವಾಗಿ ತೋರುತ್ತದೆ. ‘ಗಿರಿಜಾ’ ಎಂದು ಕರೆದೆ, ‘ಲೇ’ ಅನ್ನಲಿಲ್ಲ. ‘ಹೌದೆ’ ಅನ್ನಲಿಲ್ಲ ಯಾಕೋ ಅದರಲ್ಲಿ ಅರ್ಥ ಕಾಣಲಿಲ್ಲ ... ‘ಕರೆದಿರಾ?’ ಎಂದು ಕೇಳಿದಳು. ಆಕೆಯನ್ನು ನೋಡಿದಾಗ ಯಾಕೋ ಗುರುತು ಮರೆತುಹೋದಂತೆ, ಮೊದಲಬಾರಿಗೆ ನೋಡುತ್ತಿರುವಂತೆ ಅನ್ನಿಸಿ, ಒಂದು ಕ್ಷಣ ದೃಷ್ಟಿಸಿ, ಗುರುತಿಸಲು ಪ್ರಯತ್ನಿಸಿ, ಅಸಾಧ್ಯವೆನ್ನುವಂತೆ ತೋರಿಬಂದು ‘ನೀನು ಇಲ್ಲಿಗೆ ಹೇಗೆ ಬಂದೆ?” ಎಂದು ಕೇಳಿದೆ” (ಸುಬ್ರಾಯ ಚೊಕ್ಕಾಡಿ; ಬೇರುಗಳು; ೧೯೭೪; ಪುಟ ೧೩). ಪತ್ನಿಯೊಂದಿಗಿನ ಸಂಬಂಧವನ್ನು ಕಳಚಿಕೊಂಡಂತೆ ಏಕಾಕಿತನವನ್ನು ಅನುಭವಿಸುತ್ತಾನೆ. ಮಾಡುವ ಯಾವುದೇ ಕೆಲಸಗಳೂ ಉದ್ದೇಶಪೂರ್ವಕವಾಗಿರದೆ ಚಂಚಲ ಮನಸ್ಸಿನ ತೊಳಲಾಟದಲ್ಲಿ ಬಳಲುತ್ತಾನೆ. “ಹೌದಾ ಗಿರಿಜಾ, ಆ ತಾಳಿಯನ್ನಿತ್ತ ಬಿಚ್ಚಿಕೊಡು, ಮಾರಿದರೆ ಒಳ್ಳೆ ದುಡ್ಡು ಬರಬಹುದು. ಆ ಅಂಗಡಿ ಕಮ್ತಿಯ ಪಿರಿಪಿರಿ ತಡೆಯಲಿಕ್ಕಾಗುವುದಿಲ್ಲ. ಅವನ ಮುಖಕ್ಕಿಷ್ಟು ದುಡ್ಡು ಬಿಸಾಕಿ, ಉಳಿದದ್ದರಲ್ಲಿ ಒಂದು ಉಂಗುರ ಮಾಡಿಸಿಕೊಳ್ಳುವ ಅಂತ” (ಸುಬ್ರಾಯ ಚೊಕ್ಕಾಡಿ; ಬೇರುಗಳು; ೧೯೭೪; ಪುಟ ೧೮) ಎಂಬ ಕಥಾನಾಯಕನ ಮಾತಿನಲ್ಲಿ ಮದುವೆ ಸಂಪ್ರದಾಯವನ್ನು ಲೇವಡಿ ಮಾಡುವ ಅಂಶ ಕಂಡುಬರುತ್ತದೆ. ಕಥೆಯ ಅಂತ್ಯ ಹೀಗಿದೆ. “ಮನಸ್ಸನ್ನೆಲ್ಲ ಕೊಚ್ಚುವ ಅಶಾಂತಿಯ ಪ್ರೇತಲೋಕದಲ್ಲಿ ಬಯಲಾಗಿ ನಿಂತ ನಾನು ಒಮ್ಮೆಗೇ ಕಣ್ಣುಮುಚ್ಚಿದೆ. ಹೃದಯವು ತೀರಾ ಚಪ್ಪಟೆಯಾಗಿ ಇಲ್ಲವಾಗಿದೆಯೇನೋ ಅನ್ನಿಸಿತು. ಕತ್ತಲಲ್ಲಿ ಕತ್ತಲಾಗಿ ಕುಳಿತೆ.” (ಸುಬ್ರಾಯ ಚೊಕ್ಕಾಡಿ; ಬೇರುಗಳು; ಪುಟ ೨೦). ನಾಯಕನ ಮನಸ್ಸು ನೈತಿಕ ದ್ವಂದ್ವಗಳಲ್ಲಿ ಮುಳುಗಿರುವುದನ್ನು ಈ ಮಾತುಗಳು ಹೇಳುತ್ತವೆ. ಈ ಕತೆಯಲ್ಲಿ ಬರುವ

‘ಕೋತಿ’ಗಳ ಪ್ರಸ್ತಾಪ ನಾಯಕನ ಚಂಚಲ ಮನಸ್ಥಿತಿಯ ಪ್ರತಿರೂಪವಾಗಿ ಬಳಸಿಕೊಳ್ಳಲಾಗಿದೆ.

ಸುಬ್ರಾಯ ಚೊಕ್ಕಾಡಿಯವರ ‘ಅರೂಪ’ ಕತೆಯ ಆರಂಭ ಸಾಲುಗಳಲ್ಲಿ ಬರುವ “ಹುಡುಕುವುದು ನನಗೊಂದು ಹವ್ಯಾಸವಾಗಿ ಬಿಟ್ಟಿದೆ. ಯಾವುದೋ ಒಂದು ಸಂದರ್ಭದಲ್ಲಿ ಇದು ಪ್ರಾರಂಭವಾಗಿ ಬಿಟ್ಟಿತು. ಯಾವಾಗ, ಯಾಕೆ ಎಂಬುದು ತಿಳಿದಿಲ್ಲ- ಇದು ಎಲ್ಲರಿಗೂ ಸಹಜವಾಗಿರುವ ಒಂದು ಅವಸ್ಥೆಯೇ ಅಥವಾ ನನಗೆ ಮಾತ್ರ ಸೀಮಿತವೇ ಎಂಬುದೂ ಗೊತ್ತಿಲ್ಲ (ಸುಬ್ರಾಯ ಚೊಕ್ಕಾಡಿ; ಬೇರುಗಳು; ೧೯೭೪; ಪುಟ ೬೮) ಎಂಬ ಕಥಾನಾಯಕನ ಮಾತುಗಳಿಂದ ಆರಂಭವಾಗಿ ಈ ಕತೆ ವಿಚಿತ್ರ ವಾತಾವರಣದಲ್ಲಿ ಬೆಳೆಯುತ್ತಾ ಸಾಗುತ್ತದೆ. ಅವನ ಪ್ರಯಾಣದ ಉದ್ದಕ್ಕೂ ಎದುರಾಗುವ ವ್ಯಕ್ತಿಗಳು ಎಷ್ಟು ಸೋಗಲಾಡಿಗಳು ಮತ್ತು ಎಷ್ಟೊಂದು ಪ್ರಯೋಜನವಾದಿಗಳು ಎಂಬುದನ್ನು ಕತೆ ಶೋಧಿಸುತ್ತಾ ಸಾಗುತ್ತದೆ. ಈ ಕತೆಯ ನಾಯಕ ಎಲ್ಲರನ್ನೂ ಸಂಶಯ ದೃಷ್ಟಿಯಿಂದ ನೋಡುವವನಾಗಿರುತ್ತಾನೆ. “ಇದು ನನ್ನ ಫೋಟೋವೇ ಎಂದೇನು ಗ್ಯಾರಂಟಿ.” (ಸುಬ್ರಾಯ ಚೊಕ್ಕಾಡಿ; ಬೇರುಗಳು; ೧೯೭೪; ಪುಟ ೭೬). ನಾಯಕ ಹೇಳುವ ಕತೆಯ ಕೊನೆಯ ಸಾಲುಗಳು ಅವನ ಸಂಶಯ ಪ್ರವೃತ್ತಿಗೆ ಸಾಕ್ಷಿಯಾಗಿವೆ. ಹೀಗೆ ಕತೆ ಮನುಷ್ಯನ ಮೂಲಭೂತ ಅಸ್ತಿತ್ವವನ್ನು ಹುಡುಕಲು ಪ್ರಯತ್ನಿಸುತ್ತದೆ.

ಇಪ್ಪತ್ತನೆಯ ಶತಮಾನದ ಒಂದು ತಾತ್ತ್ವಿಕ ಚಿಂತನೆಯಾಗಿ ಅಸ್ತಿತ್ವವಾದ ಹುಟ್ಟಿಕೊಂಡಿತು. “ಮನುಷ್ಯ ತನ್ನನ್ನು ತಾನು ಕಂಡುಕೊಳ್ಳುವುದಕ್ಕೆ ಸಹಾಯಕವಾಗುವ ಯಾವುದೇ ತತ್ತ್ವವಾಗಲೀ ಇಲ್ಲ. ಮಾನವ ತನ್ನ ಮನುಷ್ಯತ್ವವನ್ನು ತಾನೇ ಸೃಷ್ಟಿಸಿಕೊಳ್ಳಬೇಕು. ತನ್ನ ಗುಣ ಸ್ವಭಾವಕ್ಕೆ ತಾನೇ ಸಂಪೂರ್ಣ ಹೊಣೆಗಾರ. ಅವನಿಗೆ ಸ್ವತಂತ್ರವಾದ ಮನಸ್ಸು ಮತ್ತು ಇಚ್ಛಾಶಕ್ತಿ ಇದೆ. ಆದ್ದರಿಂದಲೇ ಅವನಿಗೆ ಜವಾಬ್ದಾರಿಗಳೂ ಇವೆ. ಒಂದು ವೇಳೆ ಅವನು ತಾನು ಏನು ‘ಆಗ’ಬೇಕೆಂದು ಆಯ್ಕೆ ಮಾಡದಿದ್ದರೆ ಅಥವಾ ಹೊರಗಿನ ಶಕ್ತಿಗಳಿಗೆ ಆಯ್ಕೆ ಮಾಡುವ ಅವಕಾಶ ನೀಡಿದರೆ ಆತ ತಿರಸ್ಕಾರ ಯೋಗ್ಯನಾಗುತ್ತಾನೆ”(ಓ.ಎಲ್.ನಾಗಭೂಷಣಸ್ವಾಮಿ; ವಿಮರ್ಶೆಯ ಪರಿಭಾಷೆ; ೧೯೯೮; ಪುಟ ೮೧). ಇಂಥ ಹಲವು ತಾತ್ತ್ವಿಕ ನೆಲೆಗಟ್ಟಿನಲ್ಲಿ ಹುಟ್ಟಿಕೊಂಡ ಅಸ್ತಿತ್ವವಾದ ನವ್ಯ ಸಾಹಿತ್ಯ ಚಳುವಳಿಯ ಅಂಗವಾಗಿ ಬೆಳೆಯಿತು. ಚೊಕ್ಕಾಡಿಯವರ ‘ಅಭಾವ’

ಇಂಥದೊಂದು ಪ್ರೇರಣೆಯಿಂದ ಕೂಡಿದ ಕಥೆಯಾಗಿದೆ. ನಾಯಕನ ಅಸ್ತಿತ್ವದ ಹುಡುಕಾಟವೇ ಈ ಕಥೆಯ ಮೂಲ ಸೆಲೆಯಾಗಿದ್ದರೂ ಅವನ ಅಸ್ತಿತ್ವದ ನಿಮಿತ್ತವಾಗಿ ಸ್ತ್ರೀ ಪಾತ್ರಗಳು ಕಾಣಿಸಿಕೊಳ್ಳುತ್ತವೆ. ವಿವಾಹಿತನಾದರೂ ಆ ಪರಿಸರದಲ್ಲಿ ತನ್ನ ನೆಮ್ಮದಿಯನ್ನು ಕಾಣಲಾಗದ ನಾಯಕ ವಿವಾಹೇತರ ಸಂಬಂಧಗಳಲ್ಲಿ ಅದನ್ನು ಹುಡುಕುವ ಆ ಹುಡುಕಾಟದಲ್ಲಿ ಏಕಾಕಿಯಾಗುವ ವೈರುಧ್ಯಗಳು ಕಾಣುತ್ತವೆ. ನಾಯಕ ವಾಸುವಿಗೆ ತನ್ನ ಅಸ್ತಿತ್ವ ಅಸಹ್ಯ ಎನಿಸಿದರೂ ತನ್ನ ಇಚ್ಛಾಶಕ್ತಿಯ ಬಲದಿಂದ ಅದನ್ನು ಸ್ಥಾಪಿಸಿಕೊಳ್ಳಲು ಅವನು ಯಶಸ್ವಿಯಾಗುವುದಿಲ್ಲ. ತನ್ನ ಅನಿಶ್ಚಿತ ವ್ಯಕ್ತಿತ್ವದಿಂದ ಹೊರಬರಲು ಸಾಧ್ಯವಾಗದೆ ಪರಿತಪಿಸುತ್ತಾನೆ. ತನ್ನ ಐಡೆಂಟಿಟಿಯನ್ನು ಸಾಧಿಸಿಕೊಳ್ಳುವಲ್ಲಿ ವಿಫಲನಾಗುತ್ತಾನೆ. ಯಾವುದರಲ್ಲೂ ಶಾಂತಿ–ಪ್ರೀತಿಯನ್ನು ಕಾಣದ ಒಂದು ಬಗೆಯ 'ಅಭಾವ' ಪರಿಸ್ಥಿತಿಯನ್ನು ಎದುರಿಸುವ ಕಥೆಗಾರನ ವ್ಯಕ್ತಿತ್ವವನ್ನು ಅನಾವರಣಗೊಳಿಸುವ ಕಥೆಯಿದು. ಚೊಕ್ಕಾಡಿಯವರ ಮೇಲಿನ ಎರಡೂ ಕತೆಗಳಲ್ಲಿ ಕಥಾನಾಯಕರು ಆಧುನಿಕ ಕಾಲದ ಭ್ರಮನಿರಸನ ಹೊಂದಿದ ವ್ಯಕ್ತಿಗಳಾಗಿ ಕಂಡುಬರುತ್ತಾರೆ.

ನಾರಾಯಣ ಕಂಗಿಲರ 'ವಿಪರ್ಯಾಸ', ಜಯಪ್ರಕಾಶ ಮಾವಿನಕುಳಿಯವರ 'ಸೊಳ್ಳೆಗಳು' ಮತ್ತು 'ವಿಲಾಪ' ಕತೆಗಳಲ್ಲಿ ಸ್ವಾತಂತ್ರೋತ್ತರ ಕಾಲದಲ್ಲಿ ರಾಜಕಾರಣಿಗಳು ಮತ್ತು ಅಧಿಕಾರಿಗಳು ಭ್ರಷ್ಟಾಚಾರದಲ್ಲಿ ತೊಡಗಿರುವ ಚಿತ್ರಣವಿದೆ. ಕಂಗಿಲರ 'ವಿಪರ್ಯಾಸ' ಕತೆಯಲ್ಲಿ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಪಕ್ಷನಿಷ್ಠೆಯನ್ನು ಮರೆತು ಅಧಿಕಾರಕ್ಕಾಗಿ ಪಕ್ಷಾಂತರ ಮಾಡುವ ರಾಜಕಾರಣಿಗಳ ವಿಡಂಬನೆಯಿದೆ. ಶಿಸ್ತಿನ ವ್ಯಕ್ತಿತ್ವವನ್ನು ರೂಪಿಸಿಕೊಂಡ ಜೋ ಜೀವನಕ್ಕಾಗಿ ವಿವಿಧ ವೃತ್ತಿಗಳನ್ನು ಕೈಗೊಂಡು ಯಶಸ್ವಿಯಾಗದೆ, ಕೊನೆಗೆ ರಾಜಕಾರಣದಲ್ಲೂ ಭ್ರಮನಿರಸನಗೊಂಡು ಜೀವನದಲ್ಲಿ ಧ್ಯೇಯವನ್ನು ಹೊಂದಬೇಕು ಎಂಬ ನಿರ್ಧಾರಕ್ಕೆ ಬರುತ್ತಾನೆ. "ಹೇಗೆ ನಮ್ಮ ನಿಷ್ಠ ನಾಯಕನೇ ಪಕ್ಷ ಬದಲಾಯಿಸಿದ ನೋಡಿ. ನನಗೆ ಇದರಿಂದ ಬಹಳ ಖೇದವಾಯಿತು. ಎಂ.ಎಲ್.ಎ. ಆಗೋದಕ್ಕೆ ಮೊದಲು ನಾವೇ ಆತನ ಎಡಗೈ ಬಲಗೈ ಅಂತಿದ್ದೆವು. ನಮ್ಮನ್ನೂ ಒಂದು ಮಾತು ಕೇಳಲಿಲ್ಲ. ಇನ್ನೂ ಇಲ್ಲಿಯ ಜನಾಭಿಪ್ರಾಯ ಬಿಡಿ. ಎಲೆಕ್ಷನ್ ಗೆದ್ದದ್ದೇ; ಆತ ಆಳುವ ಪಕ್ಷ ಸೇರಿದ ಖಂಡಿತ ನನಗೆ ಬೇಸರವಾಯಿತು. ಆತ ಹೀಗೂ ಮಾಡುವನೆಂದು ನಂಬಿರಲಿಲ್ಲ. ಅಧಿಕಾರ ಸಿಕ್ಕುವುದಿದ್ದರೆ ಈ ದೇಶದಾಗೆ ಚೂರು

ಬ್ರೆಡ್ಡಿಗೆ ಆಚೆ ಹಾರುತ್ತವೆ ಎಂಬುದು ಎಂತಹ ವಿಪರ್ಯಾಸ ಅಲ್ಲವೇ" (ನಾರಾಯಣ ಕಂಗಿಲ; ಒಯಸಿಸ್; ೧೯೮೪; ಪುಟ ೫೭). ಸ್ವಾತಂತ್ರ್ಯೋತ್ತರ ಭಾರತದ ರಾಜಕೀಯ ಚಿತ್ರಣ ಜೋವಿನ ಮಾತಿನಲ್ಲಿ ವ್ಯಕ್ತವಾಗಿದೆ. ಜಯಪ್ರಕಾಶ ಮಾವಿನಕುಳಿಯವರ 'ಸೊಳ್ಳೆಗಳು' ಕತೆಯಲ್ಲಿ ಕಥಾನಾಯಕ ಸೊಳ್ಳೆಗಳಿರುವ ಊರಿಗೆ ವರ್ಗಾವಣೆಗೊಂಡಾಗ ಆ ವರ್ಗಾವಣೆಯನ್ನು ರದ್ದುಗೊಳಿಸಲು ಬೆಂಗಳೂರಿನ ಕಛೇರಿಯ ಮುನಿಯಪ್ಪನ ಸೂಳೆಗೆ ಲಂಚ ಕೊಡಲು ನಿರಾಕರಿಸಿದರೂ, ಕೊನೆಗೆ ಪತ್ನಿಯ ಕಾಟವನ್ನು ಸಹಿಸಲಾರದ ನಾಯಕ ತನ್ನ ಪತ್ನಿಯ ಬಂಗಾರದ ಸರವನ್ನು ಮಾರಿ ಲಂಚ ಕೊಡಲು ಸಿದ್ಧನಾಗುತ್ತಾನೆ. 'ಸೊಳ್ಳೆಗಳು' ನಮ್ಮ ಸಮಾಜದ ದುಷ್ಟ ಶಕ್ತಿಗಳ ಸಂಕೇತವಾಗಿ ಮೂಡಿ ಬಂದು, ಆ ಕತೆಗೆ ಹೆಚ್ಚಿನ ಒಂದು ಆಯಾಮವನ್ನು ಒದಗಿಸಿದೆ. "ಏನ್ರಿ ಸೊಳ್ಳೆ ನಾಶ ಮಾಡೋಕಾಗಲ್ಲ, ಗಂಡಸರೇನ್ರಿ ನೀವು ನಿಮ್ಮಂಥ ಗಂಡಸರೇ ಇದ್ರಿದ್ರೆ ನಮ್ಮ ದೇಶಕ್ಕೆ ಸ್ವಾತಂತ್ರ್ಯವೇ ಸಿಗುತ್ತಿರಲಿಲ್ಲ" ( ಜಯಪ್ರಕಾಶ ಮಾವಿನಕುಳಿ; ಕಾಲ; ೧೯೯೦; ಪುಟ ೪) ಎಂಬುದಾಗಿ ಕಥಾನಾಯಕ ಪತ್ನಿ ಮೂದಲಿಸುವ ಮಾತುಗಳಲ್ಲಿ ಪ್ರಸ್ತುತ ಸಮಾಜದ ಗಂಡಸರ ವಿಡಂಬನೆಯಿದೆ. "ಸಮಾಜವನನ್ನು ಹಾಳುಗೆಡವಿ ರೋಗಗ್ರಸ್ತವನ್ನಾಗಿ ಮಾಡಿ ಗೊಬ್ಬರದ ಗುಂಡಿ ಮಾಡುತ್ತಿರುವ, ಈ ಸೊಳ್ಳೆಗಳು–ಎಲ್ಲೆಲ್ಲೂ ಕಣ್ಣಿಗೆ ಬಿದ್ದರು. ಸಮಾಜದ ಸಮಸ್ತ ಭಾಗಗಳನ್ನು ಮುತ್ತಿಕೊಂಡಿದ್ದರು, ರಕ್ತ ಹೀರುತ್ತಿದ್ದರು. ಅವುಗಳನ್ನು ಹಿಡಿಯಾಗದ, ಬಡಿಯಲಾಗದ ನಾಗರಿಕನ ನಪುಂಸಕತೆ ಧುತ್ತನೆ ಮುಖಕ್ಕೆ ರಾಚಿತು" (ಜಯಪ್ರಕಾಶ ಮಾವಿನಕುಳಿ; ಕಾಲ; ೧೯೯೦; ಪುಟ ೧೧) ಎಂಬುದು ಕಥಾನಾಯಕನ ಅನುಭವವಾಗಿ ಕಂಡುಬರುತ್ತದೆ. ಈ ಕತೆಯಲ್ಲಿ ನಾಯಕ ವ್ಯವಸ್ಥೆಯನ್ನು ಎದುರಿಸಲಾರದೆ ನಿರಾಶೆಗೊಳ್ಳುವ ಚಿತ್ರಣವಿದೆ.

ಮಾವಿನಕುಳಿಯವರ 'ವಿಲಾಪ' ಕತೆಯಲ್ಲಿ ಶಿಕ್ಷಣ ಕ್ಷೇತ್ರದಲ್ಲಿನ ಭ್ರಷ್ಟಾಚಾರದ ವಿವರಗಳಿವೆ. ಕಥಾನಾಯಕ ಒಂದು ಕಾಲದಲ್ಲಿ ವಿದ್ಯಾರ್ಥಿನಾಯಕನಾಗಿ ವಿಶ್ವವಿದ್ಯಾನಿಲಯದ ಅಧಿಕಾರವರ್ಗದವರ ವಿರುದ್ಧ ಮುಷ್ಕರ ನಡೆಸಿ, ತನ್ನ ಭವಿಷ್ಯವನ್ನು ಹಾಳುಗೆಡಹುತ್ತಾನೆ. ಮುಂದಿನ ದಿನಗಳಲ್ಲಿ ನಾಯಕ ತನ್ನ ನೆನಪುಗಳ ಮೂಲಕವಾಗಿ ವಿಶ್ವವಿದ್ಯಾನಿಲಯದ ಜಡ್ಡುಗಟ್ಟಿದ, ಪಟ್ಟಭದ್ರ ಹಿತಾಸಕ್ತಿಯಿಂದ ಕೂಡಿದ ವ್ಯವಸ್ಥೆಯನ್ನು ಅನಾವರಣಗೊಳಿಸುತ್ತಾನೆ. ಉಪಕುಲಪತಿಗಳು, ಪ್ರೊಫೆಸರ್ ರಂಗಪ್ಪ ಮುಂತಾದವರು ಕೂಡಾ ಭ್ರಷ್ಟ ವ್ಯವಸ್ಥೆಯ ಒಂದು ಭಾಗವೇ ಎಂಬ ಅಂಶ ಕಥಾನಾಯಕನಾದ

ಪ್ರಭಾಕರನಿಗೆ ತಿಳಿಯುತ್ತದೆ. ಕೊನೆಗೆ ಹಳ್ಳಿ ಜನರ ಉದ್ಧಾರಕ್ಕಾಗಿ ತನ್ನ ಬಾಳನ್ನು ಮುಡಿಪಾಗಿಡಲು ನಾಯಕ ನಿರ್ಧರಿಸುತ್ತಾನೆ. ಮುಷ್ಕರ ನಡೆಸುತ್ತಿರುವ ವಿದ್ಯಾರ್ಥಿಗಳನ್ನು ನೋಡಿ "ನೀವು ಹೋಗುವುದಿಲ್ಲವೇ? ನಿಮ್ಮನ್ನು ಹೇಗೆ ಮೆಟ್ಟಬೇಕೆಂದು ನನಗೆ ಗೊತ್ತಿದೆ, ಇಲ್ಲದಿದ್ದರೆ ನಾನು ವಿ.ಸಿ.ನೇ ಆಗುತ್ತಿರಲಿಲ್ಲ" (ಜಯಪ್ರಕಾಶ; ಮಾವಿನಕುಳಿ; ಕಾಲ ;೧೯೯೦; ಪುಟ ೩೯) ಎಂಬ ವಿ.ಸಿ.ಯವರ ಮಾತಿಗೆ ಪ್ರತಿಕ್ರಿಯೆಯಾಗಿ "ನನಗಂತೂ ಈ ವ್ಯವಸ್ಥೆಯ ಒಳಗೆ ಇರುವ ಹೇಸಿಗೆಯೆಲ್ಲ ಕಂಡು ಜಿಗುಪ್ಸೆ ಬರುತ್ತಿತ್ತು. ಹಾಗಾದರೆ ವಿ.ಸಿ. ಆಗಲಿಕ್ಕೆ ಬೇಕಾಗಿರುವುದು ಏನು? ಎಲ್ಲರನ್ನೂ ಮೆಟ್ಟಿ ಹಾಕುವ ಜಾಣತನವೇ? ಅಥವಾ ಅಪಾರವಾದ ಜ್ಞಾನ ಸಂಪತ್ತೇ? 'ನಹಿ ಜ್ಞಾನೇನ ಸದೃಶಂ!' ಎಲ್ಲಿ ಎಲ್ಲಿ?" (ಜಯಪ್ರಕಾಶ ಮಾವಿನಕುಳಿ; ಕಾಲ; ೧೯೯೦ ಪುಟ ४೩) ಪ್ರಭಾಕರ ಹೇಳುವ ಮಾತಿನಲ್ಲಿ ಶಿಕ್ಷಣ ವ್ಯವಸ್ಥೆಯಲ್ಲಿನ ಭ್ರಷ್ಟಾಚಾರದ ಚಿತ್ರಣವಿದೆ. ಕತೆಯ ಕೊನೆಯಲ್ಲಿ ಪ್ರಭಾಕರನ ಮಾತುಗಳಲ್ಲಿ ವಿಶ್ವವಿದ್ಯಾನಿಲಯಗಳಲ್ಲಿನ ಶಿಕ್ಷಣ ವ್ಯವಸ್ಥೆ ಬದಲಾಗಬೇಕೆಂಬ ಆಶಯ ವ್ಯಕ್ತವಾಗುತ್ತದೆ: "ಒಬ್ಬ ಪ್ರೊಫೆಸರ್ ಹೋದರೆ ಏನೂ ಪ್ರಯೋಜನವಿಲ್ಲ ಸುವರ್ಣ. ಇಂಥ ಪ್ರೊಫೆಸರ್‌ಗಳನ್ನು ಸೃಷ್ಟಿ ಮಾಡುವ ಈ ಕೊಳಕು ಶಿಕ್ಷಣ ಕ್ರಮ. ಒಟ್ಟಾರೆ ಈ ಶಿಕ್ಷಣಕ್ರಮವನ್ನು ನೀರುಗೊಬ್ಬರ ಹಾಕಿ ಬೆಳೆಸುತ್ತಿರುವ ಈ ವ್ಯವಸ್ಥೆ ಸಂಪೂರ್ಣವಾಗಿ ಬದಲಾಗಬೇಕು". (ಅದೇ; ಪುಟ ४೩). ರಾಜಕೀಯ, ಸಾಮಾಜಿಕ ಜೀವನ ಹಾಗೂ ಶಿಕ್ಷಣ ವ್ಯವಸ್ಥೆಯಲ್ಲಿ ಕಂಡುಬರುತ್ತಿರುವ ಭ್ರಷ್ಟಾಚಾರಗಳ ವಿವಿಧ ಮುಖಗಳನ್ನು ಮೇಲಿನ ಮೂವರು ಕತೆಗಾರರು ಭಿನ್ನ ಭಿನ್ನವಾಗಿ ವಿಶ್ಲೇಷಿಸಿದ್ದಾರೆ.

ಕೆ.ವಿ.ತಿರುಮಲೇಶರ 'ಪರಿವರ್ತನೆ', ಸುಬ್ರಾಯ ಭಟ್ ಬಕ್ಕಳರವರ 'ಇರುವುದೊಂದೇ ನೆಲ' ಕತೆಗಳಲ್ಲಿ ಸಾಮಾಜಿಕ ವ್ಯವಸ್ಥೆಯ ವಿರುದ್ಧ ಕಥಾನಾಯಕ ಪ್ರತಿಭಟಿಸುವ ಅಂಶಗಳು ಕಂಡುಬರುತ್ತವೆ. ತಿರುಮಲೇಶರ 'ಪರಿವರ್ತನೆ' ಕತೆಯಲ್ಲಿ ಖಾದಿ ಪಂಚೆ ತೊಟ್ಟಿರುವ ಗಾಂಧೀವಾದಿ ದಾಸಣ್ಣ ಸ್ವಾತಂತ್ರ್ಯ ಹೋರಾಟಗಾರನಾದರೂ ಜೀವನದಲ್ಲಿ ಸೋಲನ್ನು ಅನುಭವಿಸಿದಾಗ ಸಾಬಿಯ ಅಂಗಡಿಗೆ ಬೆಂಕಿ ಹಾಕಿದ ಹತಾಶ ಸ್ಥಿತಿಯ ವಿವರಗಳಿವೆ. "ಸ್ವಾತಂತ್ರ್ಯ ಸಂಗ್ರಾಮದಲ್ಲಿ ತಾನು ಭಾಗವಹಿಸಿದ ಕಾಲದ ನೆನಪುಗಳು ಬಂದುವು. ಗಾಂಧೀಜಿಯ ಭಾಷಣವನ್ನು ಕೇಳಲು ತಾನು ಮಂಗಳೂರಿಗೆ ಹೋದದ್ದು, ಕಾಲ್ನಡೆ ಜಾಥಾದಲ್ಲಿ ಭಾಗವಹಿಸಿದ್ದು, ಖಾದಿ ತೊಡುತ್ತೇನೆಂದು ಪ್ರತಿಜ್ಞೆ

ಮಾಡಿದ್ದು, ಆಗ ತಾನೆ ಮದುವೆಯಾಗಿದ್ದ ಹೊಸ ಹೆಂಡತಿಯ ಮಾತನ್ನು ಕೂಡ ಕೇಳದೆ ಕೋರ್ಟು ಕಛೇರಿಗಳನ್ನು ಪಿಕೇಟು ಮಡಿದ್ದು ಘೋಷಣೆಗಳನ್ನು ಅರಚಿದ್ದು.

ಭಾರತ ಮಾತಾಕೀ ಜೈ!
ಮಹಾತ್ಮಾ ಗಾಂಧೀ ಕೀ ಜೈ!
ಅಳಿಯುವುದಾದರೇ–
ಭಾರತದಲ್ಲಿ !
ಉಳಿಯುವುದಾದರೇ–
ಭಾರತದಲ್ಲಿ !
ಬ್ರಿಟಿಷರೇ ತೊಲಗಿರಿ!
ಭಾರತ್ ಮಾತಾ ಕೀ ಜೈ !!

ಲಾಠೀಚಾರ್ಜು, ಗೋಲಿಬಾರು, ಜೈಲು" (ಕೆ.ವಿ.ತಿರುಮಲೇಶ್; ನಾಯಕ ಮತ್ತು ಇತರರು; ೧೯೮೨; ಪುಟ ೪೫,೪೬). ಮೇಲಿನ ಮಾತುಗಳಲ್ಲಿ ದರ್ಜಿ ದಾಸಣ್ಣ ತಾನು ಸ್ವಾತಂತ್ರ್ಯ ಹೋರಾಟಗಾರನಾಗಿದ್ದ ದಿನಗಳನ್ನು ನೆನಪಿಸಿಕೊಳ್ಳುತ್ತಾನೆ. ಆದರೆ ಗಾಂಧೀವಾದಿ ದಾಸಣ್ಣ ಸ್ವಾತಂತ್ರ್ಯೋತ್ತರ ಕಾಲದಲ್ಲಿ ದರ್ಜಿಯಾಗಿ ಜೀವನ ನಡೆಸಲು ಕಷ್ಟಪಡುತ್ತಿರುವಾಗ ಅವನ ಮನಸ್ಸು ಭ್ರಮನಿರಸನಗೊಂಡು ಸಾಬಿಯ ಅಂಗಡಿಗೆ ಬೆಂಕಿ ಹಚ್ಚುವ ಮನೋಸ್ಥಿತಿಗೆ ತಲುಪುತ್ತಾನೆ. ಸ್ವಾತಂತ್ರ್ಯಪೂರ್ವದಲ್ಲಿ ಜನರಲ್ಲಿದ್ದ ಆದರ್ಶ, ಕನಸುಗಳು ಮುಂದಿನ ದಿನಗಳಲ್ಲಿ ಹೇಗೆ ಕಮರಿಹೋಗುತ್ತವೆ ಎಂಬ ಅಂಶವನ್ನು ಕತೆಗಾರರು ಗುರುತಿಸಿದ್ದಾರೆ. ಸುಬ್ರಾಯ ಭಟ್ ಬಕ್ಕಳರವರ 'ಇರುವುದೊಂದೇ ನೆಲ' ಕತೆಯಲ್ಲಿ ಪರಿಸರವಾದಿ ನಾಯಕ (ಸುಘೋಷ)ನು ಕಾಡನ್ನು ರಕ್ಷಿಸಲಾರದೆ, ಹತಾಶನಾಗುವ ಚಿತ್ರಣ ಕಂಡುಬರುತ್ತದೆ. ಪರಿಸರ ಸಂರಕ್ಷಣೆಯ ಕುರಿತು ಭಾಷಣ ಮಾಡುವ ಗೌಡ ತನ್ನ ಸ್ವಾರ್ಥಕ್ಕಾಗಿ ಕಾಡುಗಳನ್ನು ಕಡಿಯುತ್ತಾನೆ. ಇದನ್ನು ಪ್ರಶ್ನಿಸಿದ ಸುಘೋಷನಿಗೆ ಮರದಿಂದ ಲಾಭ ಪಡೆದುಕೊಳ್ಳುವಂತೆ, ಸೂಚಿಸುತ್ತಾನೆ; "ಹೌದು, ಮೋಣಿಯೂ ಇದರಲ್ಲಿ ಶಾಮೀಲಾಗಿದ್ದಾನೆ. ಪಾಪ! ಇದು ನಿನಗೂ ತಿಳಿಯಲಿ, ನೀನೂ ಸೇರಿಕೊಂಡರೆ ಎಲ್ಲರೂ ಅಷ್ಟಿಷ್ಟು ಹಣ ಮಾಡಿಕೊಳ್ಳಬಹುದು. ಹೇಗಿದ್ದರೂ ಜನ ನಮ್ಮ ಮೇಲೆ ಸಂಶಯ ಪಡುವುದಿಲ್ಲ ಒಮ್ಮೆ ಸಂಶಯ ಪಡುವುದರೊಳಗೆ ನಾವು ಶ್ರೀಮಂತರಾಗುತ್ತೇವೆ. ಆಗ ಹಣವೇ ಜನರನ್ನು ನಿಯಂತ್ರಿಸುವಂತಾಗುತ್ತದೆ". (ಸುಬ್ರಾಯ ಭಟ್ ಬಕ್ಕಳ; ಕುಬ್ಲಾ; ೧೯೯೭; ಪುಟ ೪೨). ಗೌಡರನ್ನು ಎದುರಿಸಲಾರದೆ ಹತಾಶನಾಗುವ ಸ್ಥಿತಿ ಸಘೋಷನ ಮತುಗಳಲ್ಲಿ ವ್ಯಕ್ತವಾಗುತ್ತದೆ: "ಇವರ ವಿರುದ್ಧ

ಪ್ರತಿಭಟಿಸಲೇ ಅಥವಾ ನನ್ನ ತಾಯಿಯನ್ನು ರಕ್ಷಿಸುವಲ್ಲಿ ಸೋತೆನೆಂದು ಈ ನೆಲದ ಕಂಪಿನಲ್ಲಿ ಒಂದು ಹಿಡಿ ಮಣ್ಣನ್ನು ಹಿಡಿದು ಮಲಗಿಬಿಡಲೇ" (ಸುಬ್ರಾಯ ಭಟ್ ಬಕ್ಕಳ;ಕುಬ್ಲಾ; ೧೯೯೭ ಪುಟ ೪೪). ಸುಘೋಷ ಪರಿಸರ ಸಂರಕ್ಷಣೆಯ ನೆಪದಲ್ಲಿ ಪರಿಸರ ನಾಶ ಮಾಡುತ್ತಿರುವ ಶ್ರೀಮಂತರನ್ನು ಎದುರಿಸಲಾರದೆ ವ್ಯವಸ್ಥೆಯ ವಿರುದ್ಧ ಹೋರಾಡಿ ಸೋಲುತ್ತಾನೆ.

ಕೆ.ವಿ. ತಿರುಮಲೇಶರ 'ಇನ್ನೊಬ್ಬ' ಮತ್ತು 'ನೆಳಲೆ ಮಠದ ಶ್ರೀಗಳು' ಕತೆಗಳಲ್ಲಿ ನಾಯಕರುಗಳು ಸಾಮಾಜಿಕ ಜೀವನದಲ್ಲಿ ಆಸಕ್ತಿ ಕಳೆದುಕೊಂಡು ಹತಾಶರಾಗುವ ಚಿತ್ರಣವಿದೆ. ತಿರುಮಲೇಶರ 'ಇನ್ನೊಬ್ಬ' ಕತೆಯಲ್ಲಿ ನಿರೂಪಕ ತನ್ನ ಬಗ್ಗೆಯೇ ಬಹಳ ಮಾತಾಡುತ್ತಾ, ಕೊನೆಗೆ ರಾಮನ್ ನಾಯರ್‌ನ ಭೌತಿಕವಾದ, ಕಮ್ಯುನಿಸಂ, ಅತ್ಯುತ್ತಮ ಕೃಷಿ ಇತ್ಯಾದಿಗಳ ಬಗ್ಗೆ ಕತೆ ಹೊರಳುತ್ತದೆ ಆತ ಅಂತಿಮವಾಗಿ ಅತೀಂದ್ರಿಯದ ಕಡೆಗೂ ಹೊರಳಿ ಸನ್ಯಾಸಿಯಾಗುತ್ತಾನೆ. ಮತ್ತೆ ಪುನಃ ಊರಿಗೆ ಮರಳಿದ ಆತ ನಿರೂಪಕನಲ್ಲಿ ಮಾತನಾಡುತ್ತಾ ಇದ್ದಾಗ ಅವರೀರ್ವರು 'ಇನ್ನೊಬ್ಬ'ನನ್ನು ಕಾಣಿತ್ತಾನೆ. ಕಮ್ಯುನಿಸಂ ಮತ್ತು ಪಾರಲೌಕಿಕತೆಯ ಮುಖಾಮುಖಿ; ಸಂಸಾರ ಮತ್ತು ಸನ್ಯಾಸದ ತಾಕಲಾಟ; ಅಮೂರ್ತತೆಯ ಪರವಾದ; ಮೂರ್ತತೆಯೇ ಸರಿ ಎಂಬ ನಾಸ್ತಿಕತೆ; ಕಮ್ಯುನಿಸಂ ಗೇಲಿ; ಪಾರಮಾರ್ಥಿಕತೆಯ ವಿಡಂಬನೆ ಇತ್ಯಾದಿ ಹಲವು ಆಶಯಗಳು ಈ ಕತೆಯಲ್ಲಿ ಕಂಡು ಬರುತ್ತದೆ. ಕತೆಯ ಆರಂಭದಲ್ಲಿ ಭೂ ಮಸೂದೆಯ ಕಾನೂನು ಹಾಗೂ ಕಮ್ಯೂನಿಸಂನ ಪ್ರಭಾವಕ್ಕೆ ಒಳಗಾದ ರಾಮನ್ ನಾಯರ್ ಕೃಷಿಯಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಾನೆ: "ರಾಮನ ನಾಯರ್ ಉಳುವವನೇ ಹೊಲದೊಡೆಯ ಎಂಬ ನೀತಿಯನ್ನು ಕೇವಲ ನೀತಿಗಾಗಿ ನಂಬಿದವನಲ್ಲ. ಅದನ್ನು ಕಾರ್ಯರೂಪದಿಂದ ಸಮರ್ಥಿಸಿದವನು" (ಕೆ.ವಿ.ತಿರುಮಲೇಶ್; ಜಾಗುವಾ ಮತ್ತು ಇತರರು; ೧೯೯೦; ಪುಟ ೫೫). ಕಮ್ಯುನಿಸಂ ತತ್ತ್ವದಿಂದ ರಾಮನ್ ನಾಯರ್ ಸನ್ಯಾಸಿಯಾಗಿ ಪಾರಲೌಕಿಕತೆಯತ್ತ ಹೊರಳುತ್ತಾನೆ. ಸನ್ಯಾಸಿಯಾಗಿದ್ದ ರಾಮನ್ ನಾಯರ್ ಮತ್ತೆ ಗೃಹಸ್ಥಾಶ್ರಮಕ್ಕೆ ಹಿಂತಿರುಗುತ್ತಾನೆ. ಹೀಗೆ ಭೌತಿಕವಾದ, ಕಮ್ಯುನಿಸಂ, ಸನ್ಯಾಸ ಯಾವುದರಲ್ಲೂ ನೆಮ್ಮದಿ ಕಾಣದ ರಾಮನ್ ನಾಯರ್ ಭ್ರಮನಿರಸಕ್ಕೆ ಒಳಗಾದಂತೆ ಇರುತ್ತಾನೆ.

ತಿರುಮಲೇಶರ 'ನೆಳಲೆ ಮಠದ ಶ್ರೀಗಳು' ಕತೆ ಸಾಕಷ್ಟು ಸಾಮಾಜಿಕ ಆಯಾಮ ಉಳ್ಳದ್ದು. ಮಠ ನೆರೆಯಲ್ಲಿ ಮುಳುಗಿದಾಗ ಸ್ವಾಮಿಗಳ ಒದ್ದಾಟ–ಮೂರ್ತಿಯಡಿಯಲ್ಲಿ

ಅಡಗಿಸಿದ ಹಣದ ಲಪಟಾಯಿಸುವಿಕೆ–ಪಾರುಪತ್ಯಗಾರರ ಕುತಂತ್ರ–ಅಲಕನಂದಳೆಂಬ ಭಕ್ತಪುತ್ರಿಯಲ್ಲಿ ಸ್ವಾಮಿಗಳ ಪ್ರಣಯ ಭಿಕ್ಷೆ–ಹೊಸ ಮಠದ ಸ್ಥಾಪನೆ ಮೈಸೂರಿಗೆ ಓಡಿದ ಸ್ವಾಮಿಯನ್ನು ಕರೆತಂದು ವ್ಯವಸ್ಥೆ ಕಾಪಾಡುವ ಪಾರುಪತ್ಯಗಾರ–ಹಿಂದಿನ ಸ್ವಾಮಿಗಳ ಮಗನೇ ಈಗಿನ ಕಾರ್ ಡ್ರೈವರ್ ಎಂಬ ಸತ್ಯ. ಇದು ಈ ಕತೆಯ ಹಂದರ. ಮಠದ ವ್ಯವಸ್ಥೆಯ ಹುಳುಕನ್ನು ಕತೆಗಾರರು ವಿವರಿಸುತ್ತಾರೆ. ವ್ಯವಸ್ಥೆಯಲ್ಲಿ ಸಿಲುಕಿದ ನೆಳಲೆಮಠದ ಶ್ರೀಗಳ ಮಾನಸಿಕ ಅಸ್ವಸ್ಥತೆಯನ್ನು ಕಾಣಬಹುದು. "ಸ್ವಾಮಿಯಾಗುತ್ತಲೇ ನಾನು ನನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡೆ; ವ್ಯಕ್ತಿತ್ವವನ್ನು ಕಳೆದುಕೊಂಡೆ; ತಲೆಕೂದಲನ್ನೂ ಹೆಸರನ್ನೂ ಕಳೆದುಕೊಂಡೆ–ಈಗ ಮತ್ತೆ ನಾನು ಸುಬ್ಬಣ್ಣನಾಗಿದ್ದೇನೆ. ನನ್ನ ಸ್ವಾತಂತ್ರ್ಯವನ್ನು ಮರಳಿ ಪಡೆದಿದ್ದೇನೆ. ಇದರಲ್ಲಿ ತಪ್ಪೇನು ?" (ಕೆ.ವಿ ತಿರುಮಲೇಶ; ಜಾಗುವಾ ಮತ್ತು ಇತರರು; ೧೯೯೦; ಪುಟ ೯೧). ನೆಳಲೆ ಮಠದ ಶ್ರೀಗಳು ಪಾರುಪತ್ಯೆಗಾರರಾದ ಕೃಷ್ಣಶಾಸ್ತ್ರಿಗಳಲ್ಲಿ ಹೇಳುವ ಮಾತುಗಳಲ್ಲಿ ಮಠದ ವ್ಯವಸ್ಥೆಯಿಂದ ಜಿಗುಪ್ಸೆಗೊಂಡು ಹತಾಶರಾಗಿ ಹೊರಬರಬೇಕೆಂಬ ತುಡಿತ ವ್ಯಕ್ತವಾಗುತ್ತದೆ. ಧಾರ್ಮಿಕ ಶ್ರದ್ಧೆಯ ಸವಕಲು ಸ್ಥಿತಿಯನ್ನು, ಅದರ ಅಸಂಗತೆಯನ್ನು ಸುಸಂಬದ್ಧವಾದ ನಿರೂಪಣೆಯಲ್ಲಿ ಕತೆಗಾರರು ನಮ್ಮೆದುರಿಗೆ ತಂದು ನಿಲ್ಲಿಸಿದ್ದಾರೆ.

ಜೀವ ಸಮೂಹದ ದುರಂತವನ್ನೂ, ಸಾಮಾಜಿಕ ವೈಷಮ್ಯಗಳನ್ನೂ ಜಿ.ಎಸ್.ಉಬರಡ್ಕರವರ 'ಚಿಕ್ಕದೊಂದು ಗಿಳಿಯಸಾಕಿ' ಮತ್ತು 'ಒಂದು ಬಡಕಾಗೆಯ ಕತೆ' ಕತೆಗಳಲ್ಲಿ ಗುರುತಿಸಬಹುದು. ಉಬರಡ್ಕರ 'ಚಿಕ್ಕದೊಂದು ಗಿಳಿಯ ಸಾಕಿ' ಕತೆಯಲ್ಲಿ ನಾಯಕ ಗಿಳಿಯನ್ನು ಆಸಕ್ತಿಯಿಂದ ಹಿಡಿದು ಸಾಕತೊಡಗಿದರೂ, ನಂತರ ಸಮಾಜ ಅದಕ್ಕೆ ತೋರುವ ಅತ್ಯುತ್ಸಾಹದ ಪ್ರತಿಕ್ರಿಯೆಯು ಅವನು ಗಿಳಿಯನ್ನು ಬಿಟ್ಟು ಮುಕ್ತನಾಗುವುದಕ್ಕೆ ಪ್ರಚೋದನೆ ನೀಡುತ್ತದೆ; ಮಾತ್ರವಲ್ಲ ನಾಯಕನ ಸ್ವಸ್ಥ ಬದುಕನ್ನು ಅಸ್ವಸ್ಥಗೊಳಿಸುತ್ತದೆ. ಅದೇ 'ಒಂದು ಬಡ ಕಾಗೆಯ ಕತೆ'ಯಲ್ಲೂ–ಕಾಗೆಯನ್ನು ಸಾಕಿದ್ದರಿಂದಾಗಿ ನಾಯಕ ನೋವು. ಅಪಮಾನವನ್ನು ಅನುಭವಿಸಬೇಕಾಗುತ್ತದೆ. ಎರಡೂ ಕತೆಗಳಲ್ಲೂ ಸಮಾಜ ವ್ಯಕ್ತಿಯನ್ನೂ ಬದುಕನ್ನೂ, ಕುಟುಂಬ ಸ್ವಾಸ್ಥವನ್ನೂ ಕೆಡಿಸಿ, ಅಸಹನೀಯಗೋಳಿಸುತ್ತದೆ. 'ಚಿಕ್ಕದೊಂದು ಗಿಳಿಯ ಸಾಕಿ' ಕತೆಯಲ್ಲಿ ಇದು ಸಮಾಜದ ಪ್ರೋತ್ಸಾಹಕ ಉತ್ಸಾಹದಿಂದ ಸಂಭವಿಸುತ್ತದಾದರೆ, 'ಒಂದು ಬಡ ಕಾಗೆಯ ಕತೆ' ಕತೆಯಲ್ಲಿ ಅದು ಸಮಾಜದವರ ತೀವ್ರ ತಿರಸ್ಕಾರದಿಂದ ಸಂಭವಿಸುತ್ತದೆ. ಸಮಾಜದ ಈ

ಎರಡೂ ಅತಿರೇಕದ ಪ್ರತಿಕ್ರಿಯೆಗಳು ಸಂವೇದನಾಶೀಲ ವ್ಯಕ್ತಿಯ ಆಂತರಿಕ ಬದುಕನ್ನು ನಾಶಪಡಿಸುತ್ತದೆ ಎಂಬ ಆಂಶ ಕಂಡು ಬರುತ್ತದೆ. ನಾಯಕನ ನೋವು ವ್ಯಕ್ತವಾಗಿಯೇ ಪ್ರಕಟವಾಗುತ್ತದಾದರೆ, ಗಿಳಿ, ಕಾಗೆಯಂಥ ಅಸಹಾಯಕ ಜೀವಿಗಳ ನೋವು–ಯಾರ ಅರಿವಿಗೂ ಬಾರದೆ, ಅವ್ಯಕ್ತವಾಗಿಯೇ ಇಲ್ಲಿ ಪ್ರಕಟವಾಗುವುದನ್ನು ನಾವು ಗಮನಿಸಬೇಕು. ಮನುಷ್ಯ ಸಹವಾಸಕ್ಕೆ ಹಾತೊರೆಯುವ ಪಕ್ಷಿಗಳು, ಅವುಗಳನ್ನು ಮಾನವ ತಾರತಮ್ಯದಿಂದ ನೋಡುವ ಕ್ರಮ– ಇವುಗಳು, ಮನುಷ್ಯ ತನಗಿಂತ ಭಿನ್ನರಾದ ಮೆಲು ಹಾಗೂ ಕೀಳುವರ್ಗಗಳನ್ನು ನೋಡುವ ಕ್ರಮವನ್ನು ಸೂಕ್ಷ್ಮವಾಗಿ ವಿವರಿಸುತ್ತವೆ. ಗಿಳಿ ನಮ್ಮ ಪ್ರದರ್ಶನ ಪ್ರಿಯ ಮೇಲುವರ್ಗವನ್ನೂ, ಕಾಗೆ ಕೆಳವರ್ಗವನ್ನೂ ಸಂಕೇತಿಸುತ್ತದೆ.

## ೮.೨ ದೇಶ ವಿಭಜನೆಯ ಸಮಸ್ಯೆ

ಸ್ವಾತಂತ್ರ್ಯಾನಂತರ ರಾಜಕೀಯ, ಮತೀಯ ಅತಿರೇಕಗಳಿಂದ ಜನರ ದಿನನಿತ್ಯದ ಬದುಕು ಅಸಾಮಾನ್ಯ ಪರಿಸ್ಥಿತಿಗಳಲ್ಲಿ ಸಿಕ್ಕಿ ಕತೆಗಳಾಗುವುದನ್ನು ಪಾ.ವೆಂ.ಆಚಾರ್ಯ, ಕಡೆಂಗೋಡ್ಲು ಶಂಕರ ಭಟ್ಟ, ಬೊಳುವಾರು ಮಹಮ್ಮದ್ ಕುಂಞ, ಶ್ರೀನಿವಾಸ ಜೋಕಟ್ಟೆ ಮುಂತಾದವರ ಕತೆಗಳು ತೋರಿಸಿಕೊಟ್ಟಿವೆ. ಪಾ.ವೆಂ. ಅವರ ಕತೆಯಲ್ಲಿ 'ನಾಯಕರು' ಹಿಂದೂ–ಮುಸ್ಲಿಂ ಗಲಭೆಗಳನ್ನು ಮಾಡಿಸಲು ಹುನ್ನಾರ ಹಾಕುತ್ತಿದ್ದರೂ ಅದು ಅಷ್ಟು ಯಶಸ್ವಿಯಾಗುವುದಿಲ್ಲ. ಅಯೋಧ್ಯೆಯ ವಿವಾದವು ಸಾಮರಸ್ಯದಿಂದಿದ್ದ ಎರಡು ಮತಗಳ ನಡುವೆ ಗೋಡೆಗಳನ್ನು ಎಬ್ಬಿಸುವುದನ್ನು ಬೊಳುವಾರು ಅವರ ಕತೆ 'ಒಂದು ತುಂಡು ಗೋಡೆ' ಹೃದಯ ಸ್ಪರ್ಶಿಯಾಗಿ ಅನುಭವಕ್ಕೆ ತಂದು ಕೊಡುತ್ತದೆ. ಜನರು ಭಿನ್ನಮತವನ್ನು ಹೊಂದದೆ ಸಾಮರಸ್ಯವನ್ನು ಅನುಭವಿಸಿ ಕೃತಾರ್ಥರಾಗಬೇಕೆಂದು ಕರೆ ಕೊಡುವ ಉದ್ದೇಶ ಕೋಮು ವೈಷಮ್ಯ– ಸೌಹಾರ್ದವನ್ನು ವಸ್ತುವಾಗುಳ್ಳ ಅನೇಕ ಕತೆಗಳು ದೊರೆಯುತ್ತವೆ.

ದೇಶವಿಭಜನೆಯ ಪೂರ್ವದ ಸಮಕಾಲೀನ ಕೋಮುಗಲಭೆಯನ್ನು ಹೇಳುವ ಎಮ್. ಸುಬ್ರಾಯನ್ ಬರೆದ 'ಕುಂಞಾಲಿ ಸತ್ತ' ಕತೆಯು ಮುಸ್ಲಿಂ ಕೇರಿಯೊಂದರಲ್ಲಿ ಹುಟ್ಟುವ ಮುಸ್ಲಿಂ ಯುವಕರ ಹಿಂದೂ ದ್ವೇಷದ ಉದ್ಧಟತನದ ತೀರ್ಮಾನಕ್ಕೆ ವಿರುದ್ಧವಾಗಿ ಪಾಕಿಸ್ಥಾನಕ್ಕೆ ಹೋಗದೆ ಊರಲ್ಲೇ ನಿಲ್ಲುವ ಹಿರಿಯರ ಸಂಯಮವನ್ನು ಸೃಷ್ಟಿಸುತ್ತದೆ. ಮುಟ್ಟತ್ತೋಡು ಎಂಬ ಕಿರಿಯ ಮುಸಲ್ಮಾನರ ಬಸ್ತಿಯಲ್ಲಿ ಹಿಂದೂಗಳ

ವಿರುದ್ಧ ದ್ವೇಷ ಭಾವನೆಯನ್ನು ಬಿತ್ತುವ ಉದ್ದೇಶದಿಂದ ಕುಂಞಾಲಿಯ ಮಕ್ಕಳಾದ ಖಲೀಫ ಇಸ್ಮಾಯಿಲ ಮತ್ತು ಫಕೀರ ಮಹಮ್ಮದರಿಬ್ಬರು ಸಭೆಯಲ್ಲಿ ಮುಂದೆ ನಿಂತು ಭಾಷಣ ಮಾಡುವ ಸಂದರ್ಭದಲ್ಲಿ: "ಸಹೋದರರೆ! ಬಂಧುಗಳೇ! ಇಂದು ನಮ್ಮ ಜಾತಿಯ ಪ್ರಶ್ನೆ ಇದೆ. ಇದು ಆತ್ಮಸಂರಕ್ಷಣೆಯ ಪ್ರಶ್ನೆ. ಹಿಂದೂಗಳ ವಶವರ್ತಿಗಳಾಗಿ ನಾವುಳಿವುದು ನಮ್ಮ ಮತಕ್ಕೆ ಸಲ್ಲುವುದಿಲ್ಲ. ನಮ್ಮ ಧರ್ಮವು ಕಾಫರರನ್ನು ದ್ವೇಷಿಸುತ್ತಿರುವುದು. ಹಿಂದೂಗಳನ್ನು ದಂಡಿಸಬೇಕಾದರೆ ನಮ್ಮ ಕರ್ತವ್ಯವಿನ್ನು ಇದೆ. ಕಡಿಮೆ ಸಂಖ್ಯೆಯವರಾದ ನಾವು ಈ ಸ್ಥಾನವನ್ನು ಬಿಟ್ಟು ನಮ್ಮ ಆಳ್ವಿಕೆಯುಳ್ಳ ನೆಲೆಗಳನ್ನು ಸೇರಬೇಕಾಗಿದೆ. ಅದಕ್ಕೆ ನಾವೀ ಬಸದಿಗಳನ್ನು ಬಿಟ್ಟು ನಾಳೆಯಿಂದ ಒಂದಾಗಿ ರೈಲ್ವೇ ಸ್ಟೇಷನಿಗೆ ಹೋಗಿ ಸೇರಬೇಕು. ಎಲ್ಲರನ್ನೂ ಈ ವಿಷಯದಲ್ಲಿ ಎಚ್ಚರಿಸುವುದು" (ಎಮ್. ಸುಬ್ರಾಯನ್; ಕುಟ್ಟಿದೊಣ್ಣೆ; ೧೯೫೨; ಪುಟ ೫೮). ಹೇಳುವ ಮಾತುಗಳಲ್ಲಿ ಹಿಂದೂ ದ್ವೇಷದ ವಿರುದ್ಧದ ಹುನ್ನಾರ ವ್ಯಕ್ತವಾಗುತ್ತದೆ. ಹಿಂದೂಗಳ ವಿರುದ್ಧದ ದ್ವೇಷ ಭಾವನೆಯಿಂದ ಪಾಕಿಸ್ತಾನಕ್ಕೆ ಹೋಗುವಂತೆ ಮುಸ್ಲಿಂರನ್ನು ಪ್ರೇರೇಪಿಸುವ ತಮ್ಮ ಮಕ್ಕಳ ಮನಸ್ಥಿತಿಯನ್ನು ನೋಡಿ ಜೀನಮ್ಮರಣ ಸ್ಥಿತಿಯಲ್ಲಿರುವ ಕುಂಞಾಲಿ ಹೇಳುವ ಮಾತುಗಳು: "ಮಕ್ಕಳೇ ನೀವೇನು ಮಾಡಿದಿರಿ. ಧರ್ಮವು ನಿಮ್ಮನು ಕೆಡಿಸಿತೇ, ಹಾಯ್! ಮನುಷ್ಯನು ಮಾನವತೆಯನ್ನು ಬಿಡುವುದೇ! ಧರ್ಮವು ಯಾರೊಡನೆಯೂ ಬಲಾತ್ಕರಿಸ ಹೊರಡುವುದಿಲ್ಲ. ಅದರಿಂದ ಧರ್ಮಾಭಿವೃದ್ಧಿಯಿಲ್ಲ. ಮಕ್ಕಳೇ, ನಿಮಗೆ ಇನ್ನೂ ಹೇಳುವೆ. ನೀವಿಂದು ಯಾವ ವರ್ತನೆಗೊಂಡಿರೋ ಅದು ಬಹಳ ಹಾನಿಕಾರಕವಾದುದು. ಧರ್ಮದ ಸೋಗಿನಿಂದ ಮೋಸ ಹೋಗಿರುವಿರಿ. ಮನುಷ್ಯನು ಮನುಷ್ಯನೊಡನೆ ಅನ್ಯಾಯ ವರ್ತನೆಗೊಳ್ಳುವಂತೆ ನಿಮ್ಮಿಂದ ಬೋಧಿಸಲಾಗಿದೆ ಮನುಷ್ಯನು ಮನುಷ್ಯನನ್ನು ಕೊಲ್ಲುವ ಪಾಠವು ನಿಮ್ಮಿಂದ ಕಲಿಸಲಾಗಿದೆ. ಮನುಷ್ಯತೆಯನ್ನು ಹೃದಯದಿಂದ ದೂರಗೊಳಿಸುವ ಪ್ರಯತ್ನವು ನಿಮ್ಮಿಂದ ನಡೆದಿದೆ. ನೀವು ಮಾನವತೆಯ ಮಹಾಶತ್ರುಗಳು" (ಎಮ್. ಸುಬ್ರಾಯನ್; ಕುಟ್ಟಿದೊಣ್ಣೆ; ೧೯೫೨; ಪುಟ ೫೯). ಅವನ ಮಕ್ಕಳು ಮಾನವತೆಯನ್ನು ಮರೆತು ದ್ವೇಷ ಭಾವನೆಯನ್ನು ಬಿತ್ತುವ ಚಿತ್ರಣವಿದೆ. ಕುಂಞಾಲಿಯ ಮಾತುಗಳನ್ನು ಕೇಳಿದ ಅವನ ಮಕ್ಕಳ ಮನಸ್ಸಿನಲ್ಲಿ ಅಸುರೀ ಪ್ರೇರಣೆಯ ಬದಲು ಮಾನವೀ ಶಕ್ತಿಯ ಪ್ರೇರಣೆ ಜಾಗೃತಗೊಂಡು ಪಾಕಿಸ್ತಾನಕ್ಕೆ ಹೋಗದೆ ಊರಲ್ಲೇ

ನಿಲ್ಲುವ ಯೋಚನೆಯನ್ನು ಮಾಡುತ್ತಾರೆ. ಹೀಗೆ 'ಕುಂಞಾಲಿ ಸತ್ತ' ಕತೆಯು ಹಿಂದೂ-ಮುಸ್ಲಿಂ ಮತೀಯರ ನಡುವಿನ ಸಾಮರಸ್ಯವನ್ನು ಆಶಿಸುತ್ತದೆ.

### ೮.೩ ವಲಸೆ ಮತ್ತು ಪರಕೀಯತೆ

ಕನ್ನಡ ನವ್ಯಕಥೆಗಳ ಕೇಂದ್ರವಸ್ತು ಪ್ರಧಾನವಾಗಿ ಸಮಕಾಲೀನ ಸಮಾಜ ಮತ್ತು ಆಧುನಿಕ ಮನುಷ್ಯ. ಇವುಗಳ ಸಂಬಂಧದ ಅರ್ಥಪೂರ್ಣ ಹುಡುಕಾಟವೆ ಈ ಕಥಾಸಾಹಿತ್ಯದ ಮುಖ್ಯ ಆಶಯವಾಗಿದೆ. ಯರ್ಮುಂಜ ರಾಮಚಂದ್ರರ 'ಕಿಟ್ಟಯ್ಯನ ಯಾತ್ರೆ', ನಾರಾಯಣ ಕಂಗಿಲರ 'ಅಂತರಂಗ' ಕತೆಗಳಲ್ಲಿ ಆಧುನಿಕ ಯುವಕರು ನಗರವಾಸಿ ಜೀವನದ ಆಕರ್ಷಣೆಗೆ ಒಳಗಾಗಿ ಪಟ್ಟಣಕ್ಕೆ ವಲಸೆ ಹೋಗುವ ಸನ್ನಿವೇಶದ ಚಿತ್ರಣವಿದೆ. ಅಶೋಕ ಹೆಗಡೆಯವರ 'ಅಪ್ಪ' ಕತೆಯಲ್ಲಿ ಕಥಾನಾಯಕ ಮನು ಪಟ್ಟಣದಲ್ಲಿ ಉದ್ಯೋಗದಲ್ಲಿದ್ದರೂ ತನ್ನ ತಂದೆಯ ಸಾವಿನಿಂದಾಗಿ ಹಳ್ಳಿಯ ಕಡೆ ಮುಖ ಮಾಡುವ ವಿವರಣೆಗಳಿವೆ.

ಯರ್ಮುಂಜ ರಾಮಚಂದ್ರರು ಬರೆದ 'ಕಿಟ್ಟಯ್ಯನ ಯಾತ್ರೆ' ವ್ಯಕ್ತಿಗತ ಸಂಬಂಧದ ಕುರಿತಾದ ಕಥೆ. ಎಂಕಜ್ಜಿ ಪ್ರೀತಿಯಿಂದ ಸಾಕಿದ ಮಗ ಕಿಟ್ಟಯ್ಯ. ತಾಯಿ ಮಗ ಇಬ್ಬರೂ ಪರಸ್ಪರ ವಾತ್ಸಲ್ಯದ ಬಂಧನದಲ್ಲಿ ಇದ್ದವರು. ಇದ್ದಕ್ಕಿದ್ದಂತೆ ಕಿಟ್ಟಯ್ಯ ಸ್ನೇಹಿತರ ಸಹವಾಸಕ್ಕೆ ಬಿದ್ದಾಗ ಎಂಕಜ್ಜಿಗೆ ದಿಗಿಲು ಹುಟ್ಟುತ್ತದೆ. ತಾನು ಸ್ನೇಹಿತನೊಂದಿಗೆ 'ಪೇಟೆ'ಗೆ ಹೋದುದರ ಬಗ್ಗೆ ಕಿಟ್ಟಯ್ಯನಿಗೆ ಅಪರಾಧಿ ಪ್ರಜ್ಞೆ ಇದೆ. ರೋಗಗ್ರಸ್ತಳಾದ ತಾಯಿ ತೀರಿಕೊಂಡಾಗ, ಕಿಟ್ಟಯ್ಯನಿಗೆ ಅನಾಥ ಭಾವ ಕಾಡುತ್ತದೆ. ಮತ್ತೆ ಹಳೆಯ ಗೆಳೆಯ ಶಿವಣ್ಣ ಹತ್ತಿರವಾಗುತ್ತಾನೆ. ಕೊನೆಗೆ ಶಿವಣ್ಣನ ಮಾತುಗಳು ಮತ್ತೆ ದ್ವಂದ್ವಕ್ಕೆ ತಳ್ಳುತ್ತವೆ. ರಾತ್ರಿಯ ಕತ್ತಲಲ್ಲಿ ತಾಯಿ ಮುಖ ಕಾಣಿಸಿಕೊಂಡು ಉಪದೇಶ ನೀಡಿದಂತೆ ಭಾಸವಾಗುತ್ತದೆ. ಇಂಥ ಮಾನಸಿಕ ತುಮುಲವನ್ನು ಹತ್ತಿಕ್ಕಿ ಕಿಟ್ಟಯ್ಯ ಮುಂದೆ ಮುಂದೆ ನಡೆಯತೊಡಗುತ್ತಾನೆ. ತಾಯಿ ಮತ್ತು ಆಕೆಯ ನೆನಪು ಕಿಟ್ಟಯ್ಯನ ಮನಸ್ಸಿನೊಳಗಿರುವ ಗ್ರಾಮೀಣ ಸೆಳೆತವಾಗಿ ಕಾಣಿಸಿಕೊಂಡರೆ, ಶಿವಣ್ಣ ನಗರದ ಆಕರ್ಷಣೆಯಾಗಿ ಕಾಡುತ್ತಾನೆ. ಕಿಟ್ಟಯ್ಯನ ಮನಸ್ಸಿನಲ್ಲಿ ಹುಟ್ಟುವ ದ್ವಂದ್ವ ಆಧುನಿಕ ಗ್ರಾಮೀಣ ಯುವಕರೆಲ್ಲರಲ್ಲಿ ಕಂಡುಬರುವ ಸಾಮಾನ್ಯ ಸಂಗತಿ. " ನಾಲ್ಕು ದಿನವಾದರೂ ಸುಖದಲ್ಲಿ ಕಳೆಯಬಹುದು! ನೀನು ಉಣ್ಣುವುದು ಇಲ್ಲಿಯಾದರೂ ಒಂದೇ; ಪೇಟೆಯಲ್ಲಾದರೂ ಒಂದೇ, ಅಲ್ಲೇ ಇದ್ದು

ಬಿಟ್ಟರೇನು" (ಯರ್ಮುಂಜ ರಾಮಚಂದ್ರ; ಯರ್ಮುಂಜ ರಾಮಚಂದ್ರ ಸಮಗ್ರ ಕಥೆ-ಕಾವ್ಯ; ೨೦೦೨; ಪುಟ ೪೨) ಎಂಬ ಶಿವಣ್ಣನ ಮಾತಿನಲ್ಲಿ ಆಧುನಿಕ ಯುವಕರ ನಗರವಾಸಿ ಜೀವನದ ಆಕರ್ಷಣೆಯ ಚಿತ್ರಣವಿದೆ. ನಾರಾಯಣ ಕಂಗಿಲರ 'ಅಂತರಂಗ' ಕತೆಯಲ್ಲಿ ಪಟ್ಟಣದಲ್ಲಿ ಉದ್ಯೋಗ ದೊರೆತರೂ ಮನೆಯ ಸಾಂಪ್ರದಾಯಿಕ ಸಂಬಂಧದಿಂದ ಬಿಡಿಕೊಳ್ಳಲಾರದ ದ್ವಂದ್ವ ಮನೋಸ್ಥಿತಿ ನಾಯಕನನ್ನು ಕಾಡುತ್ತದೆ. ತಂಗಿಯ ಮದುವೆ ವಿಚಾರವಾಗಿ ಊರಿಗೆ ಬಂದ ಸದಾಶಿವನಿಗೆ ಹಳ್ಳಿಯ ಜನಜೀವನದ ಸ್ಥಿತಿಗತಿಯನ್ನು ನೋಡಿದಾಗ ಅಲ್ಲಿಂದ ಹೊರಟುಬಿಡಬೇಕೆನ್ನುವಷ್ಟು ಪರದೇಶಿತನ ಕಾಡತೊಡಗಿತು. " ಮತ್ತೆ ಈ ಎಲ್ಲ ಅನಗತ್ಯ ಹೊಡೆದಾಡಿಕೊಂಡು ಇಲ್ಲಿಯೇ ಇರುವುದು ನನ್ನಿಂದ ಅಸಾಧ್ಯ. ಯಾವುದನ್ನೂ ನೀವೇ ನಿರ್ಧರಿಸಿ ಕಾಗದ ಬರೆಯಿರಿ" (ನಾರಾಯಣ ಕಂಗಿಲ; ಒಯಸಿಸ್;೧೯೮೪; ಪುಟ೧೮) ಎಂಬುದು ಹಳ್ಳಿಯಿಂದ ಪಟ್ಟಣಕ್ಕೆ ವಲಸೆಹೋಗುವ ನಾಯಕನ ಮನೋಸ್ಥಿತಿಯ ಚಿತ್ರಣವಾಗಿದೆ. ಹಳ್ಳಿಯಲ್ಲಿ ಬೇರಿದ್ದು ನಗರಾನುಭವ ಪಡೆದ, ನಾಯಕನ ಅನುಭವ ಪ್ರಪಂಚದ ವಿವರಣೆಯಿದೆ.

ಮೇಲಿನ ಎರಡು ಕತೆಗಳಲ್ಲಿ ಹಳ್ಳಿಯಿಂದ ಪೇಟೆಯ ಕಡೆಗೆ ವಲಸೆ ಹೋಗುವ ಚಿತ್ರಣ ಕಂಡುಬಂದರೆ ಅಶೋಕ ಹೆಗಡೆಯವರ 'ಅಪ್ಪ' ಕತೆಯಲ್ಲಿ ಕಥಾನಾಯಕ ಮನು ಪಟ್ಟಣದಲ್ಲಿ ಉದ್ಯೋಗದಲ್ಲಿದ್ದರೂ ತನ್ನ ಅಪ್ಪನ ಸಾವಿನಿಂದಾಗಿ ಹಳ್ಳಿಯ ಕಡೆಗೆ ಹೊರಳುವ ದೃಶ್ಯ ಕಂಡು ಬರುತ್ತದೆ. ಅಧ್ಯಾಪಕ ವೃತ್ತಿಯೊಂದಿಗೆ ನಗರವಾಸಿಯಾಗಿದ್ದ ಮನು ಜಾತಿ ವಿನಾಶದ ಬಗೆಗೆ, ವರ್ಣ ವ್ಯವಸ್ಥೆಯ ಬಗೆಗೆ ಕ್ರಾಂತಿಕಾರಿ ಅಭಿಪ್ರಾಯಗಳನ್ನು ಹೊಂದಿರುತ್ತಾನೆ. ತನ್ನ ತಂದೆಯ ಆಕಸ್ಮಿಕ ಮರಣದಿಂದಾಗಿ ಮನು ಹಳ್ಳಿಗೆ ಬರಬೇಕಾದ ಸಂದರ್ಭ ಬರುತ್ತದೆ. ಹಳ್ಳಿಯ ಬದುಕಿನ ಕುರಿತು ಮನು ತನ್ನ ತಂದೆಯಿಂದ ತಿಳಿದುಕೊಂಡಿದ್ದ. ತಂದೆಯ ಸಾವಿನೊಂದಿಗೆ ಈ ಎಲ್ಲ ನೆನಪುಗಳೂ ಮರುಕಳಿಸುತ್ತವೆ. "ಮನು, ಬೆಂಗಳೂರಿನಲ್ಲಿ ನಿನಗೆ ಯಾಕೆ ಕೆಲಸಬೇಕು. ಒಬ್ಬನೇ ಮಗಾ. ಬಂಗಾರ ಬೆಳೆಯುವ ಭೂಮಿ ಇದೆ. ಮನಶ್ಶಾಂತಿ ಇದರಲ್ಲಿ ಸಿಗುವುದಕ್ಕಿಂತ ಹೆಚ್ಚು ಅದರಲ್ಲೇನಿದೆ. ಇಲ್ಲಿ ಬಡವರಾದರೂ ಮನುಷ್ಯರಿದ್ದಾರೆ. ಅಲ್ಲಿಯ ಹಾಗೆ ಟಾರ್ ರೋಡಿನಲ್ಲಿ ಏರ್ ಕಂಡೀಷನ್ ರೂಂನಲ್ಲಿ ನಮ್ಮನ್ನೇ ನಾವು ಹುಡುಕೋ ಪ್ರಸಂಗ ಇರೋದಿಲ್ಲ". (ಅಶೋಕ ಹೆಗಡೆ; ಒಂದು ತಗಡಿನ ಚೂರು ; ೧೯೯೯; ಪುಟ ೨೫). "ಮನು, ನಾಲ್ಕು ಗೋಡೆಗಳ ಒಳಗೆ ನಿಂತು ಪಾಠ ಮಾಡುವುದಕ್ಕಿಂತ ಇಲ್ಲಿ ಸೃಷ್ಟಿಕ್ರಿಯೆಗೆ

ತೊಡಗುವುದು ಮಹತ್ತ್ವದ್ದು ಅಲ್ಪಕ್ಕೆ ಭ್ರಾಂತಿಪಟ್ಟು ನಮ್ಮೆಲ್ಲಾ ಚೇತನವನ್ನು ಕಳೆದುಕೊಳ್ಳುವುದು. ನನ್ನ ಕೇಳಿದರೆ ಈ ಗದ್ದೆ ಬಯಲಿಲ್ಲಿ, ಹಸಿರು ಮಧ್ಯ ಕುಳಿತು ಕಾಲದ ಜೊತೆಗೆ ಸ್ತಬ್ಧವಾಗುವುದು ಒಳ್ಳೆಯದು." (ಅಶೋಕ ಹೆಗಡೆ; ಒಂದು ತಗಡಿನ ಚೂರು ; ೧೯೯೯; ಪುಟ ೨೬). ವಿವಿಧ ಸಂದರ್ಭಗಳಲ್ಲಿ ತಂದೆ ಹೇಳಿದ ಮೇಲಿನ ಮಾತುಗಳು ಕ್ರಾಂತಿಕಾರಿ ಮನೋಭಾವದ ಮನುವನ್ನು ಹಳ್ಳಿಯ ಕಡೆಗೆ ಸೆಳೆಯುತ್ತದೆ. ಕತೆಯ ಕೊನೆಯಲ್ಲಿ ರೋಸನಾಳಿಗೆ ಮನು ಬರೆಯುವ ಪತ್ರದಲ್ಲಿ ಹಳ್ಳಿಯಲ್ಲಿ ನೆಲೆಸಿ ಹೊಸ ಮನುಷ್ಯನಾಗಬೇಕೆಂಬ ಆಶಯ ಕಂಡುಬರುತ್ತದೆ: "ಡಿಯರ್ ರೋಸನಾ, ಈ ಪತ್ರ ಬರೆಯುವ ಮನುವಿಗೂ ಹಿಂದಿನ ಮನುವಿಗೂ ಬಹಳ ಅಂತರವಿದೆ. ನಾನು ಇನ್ನು ಮುಂದೆ ಕಾಂಕ್ರೀಟ್ ಕಟ್ಟಡಗಳ ಮಧ್ಯೆ, ಸಿಟಿಬಸ್ಸುಗಳ, ನನ್ನ ರೂಂನ ತುಂಬೆಲ್ಲಾ ಆವರಿಸುವ ನಿನ್ನ ಬೆಚ್ಚನೆಯ ಬಿಸಿಯ ಮೀರಿ ನಮ್ಮ ಮಾತೇ ನಮಗೆ ಅಸಂಗತವಾಗುವ ಕ್ರಿಯೆಯಿಂದ ಹೊರಬರುತ್ತೇನೆ. ಇಲ್ಲಿ ನನ್ನೂರ ಮಣ್ಣಿನಲ್ಲಿ ಹೊಸ ಸೃಷ್ಟಿಯ ಬೀಜ ಬಿತ್ತುತ್ತೇನೆ. ಮೊಳಕೆಯೊಡೆದಾಗ, ಸಸಿಯಾದಾಗ, ಬಿಸಿಲಿಗೆ ಬಾಡಿ ಗಾಳಿಗೆ ನಗುವಾಗ ನಿನಗೆ ಪತ್ರ ಬರೆಯುತ್ತಿರುತ್ತೇನೆ." (ಅಶೋಕ ಹೆಗಡೆ; ಒಂದು ತಗಡಿನ ಚೂರು; ೧೯೯೯; ಪುಟ ೨೯).

ಸುಬ್ರಾಯ ಚೊಕ್ಕಾಡಿಯವರ 'ಬಲಿ', 'ನನ್ನದ್ದಲ್ಲದ್ದು', ಜಯಪ್ರಕಾಶ ಮಾವಿನಕುಳಿಯವರ 'ಕರುಣಾಳು ಬಾ ಬೆಳಕೆ', ಕೆ.ವಿ. ತಿರುಮಲೇಶರ 'ಅನ್ವೇಷಣೆ ರೂಮು' 'ಸಂದರ್ಶನ', ಅಶೋಕ ಹೆಗಡೆಯವರ 'ಶೇಷ ವೃತ್ತಾಂತ'. ಗೋಪಾಲಕೃಷ್ಣ ಹೆಗಡೆ ಕೇರಿಮನೆಯವರ 'ಹಿಂತಿರುಗಿ ಬರಲಿಲ್ಲ' ಮತ್ತು ಕುಮಾರ ಜೋಶಿಯವರ 'ಕಾಡು ಹೊಕ್ಕ ಹಾದಿ' ಕತೆಗಳಲ್ಲಿ ಕತಾನಾಯಕರು ವಿವಿಧ ಹಂತಗಳಲ್ಲಿ ಪರಕೀಯ ಪ್ರಜ್ಞೆಯಿಂದ ನರಳುವ ದೃಶ್ಯವು ಕಂಡುಬರುತ್ತದೆ. ಇವರ ಕಥಾನಾಯಕರು ದುರ್ಬಲರು, ಸುಶಿಕ್ಷಿತರು, ಸಂವೇದನಾಶೀಲರು, ಅಂತರ್ಮುಖಿಗಳು ಮತ್ತು ಪರಿಸರದ ಒತ್ತಾಯದಿಂದ ಹೇರಿದ ಬದುಕಿನ ರೀತಿಯ ನಡುವೆ ಇರುವ ಕಂದರವನ್ನು ಅನುಭವಿಸುವವರು. ಹಳೆಯ ನಂಬಿಕೆ, ಸಂಪ್ರದಾಯ, ಪರಂಪರೆಗಳಲ್ಲಿ ಬದುಕಲಾರದೆ, ಹೊಸ ನಂಬಿಕೆಗಳನ್ನು, ಆಧುನಿಕತೆಯನ್ನು ಸ್ಪಷ್ಟಪಡಿಸಿಕೊಳ್ಳಲಾಗದೆ, ಪರಕೀಯ ಸ್ಥಿತಿಯನ್ನು ಅನುಭವಿಸುವ ದೌರ್ಬಲ್ಯವನ್ನು ಹೊಂದಿದವರು.

ಸುಬ್ರಾಯ ಚೊಕ್ಕಾಡಿಯವರ 'ಬಲಿ' ಕತೆಯು ಕಳೆದುಹೋದ ಹಸು ಶಾರದೆಯನ್ನು ಹುಡುಕುವುದರೊಂದಿಗೆ ಪ್ರಾರಂಭವಾಗಿ ಅದು 'ಬಲಿ'ಯಾಗುವುದರಲ್ಲಿ ಮುಕ್ತಾಯವಾಗುತ್ತದೆ. ವಿವಾಹಬಾಹಿರ ಲೈಂಗಿಕ ಸಂಬಂಧಗಳು ಅನೈತಿಕವೆಂಬ ಪಾಪಪ್ರಜ್ಞೆಯ ಮನೋಧರ್ಮವಾಗಿ ಹೆಣ್ಣಿನ ಅಭಿವ್ಯಕ್ತಿಯನ್ನು 'ಬಲಿ' ಕತೆಯಲ್ಲಿ ನೋಡಬಹುದು. ಗಂಡಿನ ಕಾಮದ ಒತ್ತಡಕ್ಕೆ ಸಿಕ್ಕ ತಾನು ನಂಬಿದ್ದ ನೈತಿಕ ಮೌಲ್ಯವನ್ನು ಮೀರಬೇಕಾದ ಸ್ಥಿತಿ ಇಲ್ಲಿನ ಹೆಣ್ಣಿನದು. ಪುರುಷನ ಭರವಸೆಗಳಿಗೆ ಸೋತು ಹೋಗುವ ಹೆಣ್ಣಿ ದೌರ್ಬಲ್ಯವನ್ನು ಕಥೆ ಹೇಳುತ್ತದೆ. ಈ ಕತೆಯಲ್ಲಿ 'ಬಲಿ' ಸಾಂಕೇತಿಕವಾಗಿ ಹಲವು ನೆಲೆಗಳಲ್ಲಿ ಕೆಲಸ ಮಾಡುತ್ತದೆ. ಇಲ್ಲಿನ ಪಾತ್ರಗಳಾದ-ಕೃಷ್ಣ ಭಟ್ಟ, ಸರಸೋತಿ, ನಾಗಣ್ಣ ಹಾಗೂ ಹಸು ಶಾರದೆ ಒಂದಲ್ಲ ಒಂದು ರೀತಿಯಲ್ಲಿ ಬಲಿಯಾಗುತ್ತಾರೆ. “ಸೀರೆಯ ಸೆರಗು ಜಾರಿದ, ಜೀವವೆಲ್ಲ ಸೋರಿ ಹೋದಂತೆ ಕಾಣುವ ಸರಸ್ವತಿ ಮತ್ತೆ ಮೆಲ್ಲ ಮೆಲ್ಲನೆ ಶೂನ್ಯದಲ್ಲಿ ಕರಗಿಹೋಗುತ್ತಿರುವ ಅವಳ ಮುಖ ..” (ಸುಬ್ರಾಯ ಚೊಕ್ಕಾಡಿ; ಬೇರುಗಳು; ೧೯೭೪; ಪುಟ ೧೧) ಎಂಬ ಮಾತಿನಲ್ಲಿ ಕೃಷ್ಣಭಟ್ಟರು ಪಾಪಪ್ರಜ್ಞೆಯಿಂದ ಬಳಲುತ್ತಿರುವ ಅಂಶ ವ್ಯಕ್ತವಾಗುತ್ತದೆ. ಇಡೀ ಕಥೆ ಪ್ರತಿಮಾತ್ಮಕವಾಗಿ ಬಂದಿದೆ. ಸರಸ್ವತಿಯ ತಂದೆ ಕೃಷ್ಣಭಟ್ಟರ ಹಸು ಶಾರದೆ ತಪ್ಪಿಸಿಕೊಂಡು ಅದು ಊರಿಗೆ ನುಸುಳಿದ ಹುಲಿಯ ಬಾಯಿಗೆ ಸಿಕ್ಕಿದ್ದು, ಬಲಿಯಾದದ್ದು ಪ್ರತಿಮಾತ್ಮಕವಾಗಿ ಮೂಡಿದೆ. ಚೊಕ್ಕಾಡಿಯವರ 'ನನ್ನದಲ್ಲದ್ದು' ಅಪ್ಪಟ ನವ್ಯಕತೆ. ಕತೆಯ ತುಂಬಾ ಕಥಾನಾಯಕನ ಅಸ್ವಸ್ಥತೆ ತುಂಬಿಕೊಂಡಿದೆ. ಈ ಕಥೆಯ ನಾಯಕ ವಿಪರೀತ ಪರಕೀಯ. ಮೈಸೂರು ಮತ್ತು ತನ್ನ ಹಳ್ಳಿ– ಎರಡರಿಂದಲೂ ದೂರವಾದವನು. ತಾನು ಪ್ರೀತಿಸಿದ ವಿಶಾಲಳನ್ನು ಗೆಲ್ಲಲಾರದವನು. ಅಂತೆಯೇ ತಾನು ಮದುವೆಯಾದವಳಲ್ಲೂ ಪ್ರೀತಿಯನ್ನು ಕಾಣದ ಪರತಂತ್ರ–ಅತಂತ್ರಜೀವಿ. ಚೊಕ್ಕಾಡಿಯವರ ಕತೆಯಂತೆ ಜಯಪ್ರಕಾಶ ಮಾವಿನಕುಳಿಯವರ 'ಕರುಣಾಳು ಬಾ ಬೆಳಕೆ' ಕತೆಯಲ್ಲೂ ಕತೆಯ ನಾಯಕ ಒಂದು ಕಡೆ ತಾನು ಉದ್ಯೋಗ ಮಾಡುವಲ್ಲಿನ ಜಸಿಂತಾ ಫರ್ನಾಂಡಿಸ್ ಇನ್ನೊಂದು ಕಡೆ ಮದುವೆಗೆ ಒತ್ತಾಯಿಸುವ ಹೆತ್ತವರ ನಡುವೆ ಮಾನಸಿಕ ಅಸ್ವಸ್ಥತೆಯಿಂದ ತೊಳಲುತ್ತಾನೆ. “ನನಗಾಗಿ ಊಟ ಬಿಟ್ಟು ಕಾಯುವವರಿಲ್ಲವಲ್ಲ, ಒಬ್ಬರು. ಒಬ್ಬಾನೊಬ್ಬರು ನನ್ನ ಅನಿಸಿಕೆಗಳನ್ನು ಕೇಳುವ ಆಪ್ತರು. ನನ್ನ ಒಳದನಿಗಳನ್ನು ಆಲಿಸುವ ಒಲವಿನವರು ಉಮ್ಮಳಗಳನ್ನು ಹಂಚಿಕೊಳ್ಳುವ ಹಿತೈಷಿಗಳು. ನನ್ನನ್ನು ಪ್ರೀತಿಯಿಂದ ನೆನೆಯುವ

ಆತ್ಮೀಯರು ......" (ಜಯಪ್ರಕಾಶ ಮಾವಿನಕುಳಿ; ಕಾಲ; ೧೯೯೦; ಪುಟ ೧೦೦).ಮೇಲಿನ ಮಾತುಗಳಲ್ಲಿ ಕಥಾನಾಯಕನ ಅತಂತ್ರಸ್ಥಿತಿ, ಪರಕೀಯತೆ ವ್ಯಕ್ತವಾಗುತ್ತದೆ.

ಕೆ.ವಿ.ತಿರುಮಲೇಶ್ ಅವರ 'ಅನ್ವೇಷಣೆ ರೂಮು' ಮತ್ತು 'ಸಂದರ್ಶನ' ಕತೆಗಳಲ್ಲಿ ನಾಯಕರ ಭಿನ್ನವಾದ ಪರಕೀಯ ಪ್ರಜ್ಞೆಯ ನೆಲೆಗಳನ್ನು ಗುರುತಿಸಬಹುದು. 'ಅನ್ವೇಷಣೆ ರೂಮು' ಕತೆಯಲ್ಲಿ ನಾಯಕ ತನ್ನ ರೂಮನ್ನು ಹುಡುಕುತ್ತಾ ಹೋಗುತ್ತಾನೆ. ಆ ಸಂದರ್ಭದಲ್ಲಿ ಅವನು ಒಬ್ಬ ಬೊಕ್ಕ ತಲೆಯವನನ್ನು ಭೇಟಿಯಾಗುತ್ತಾನೆ. ಮರುದಿನ ಬೆಳಗ್ಗೆ ಆ ಬೊಕ್ಕ ತಲೆಯವನು ನೇಣಿ ಹಾಕಿಕೊಂಡಿರುತ್ತಾನೆ. ಆದರೆ ಕೊನೆಗೂ ನಾಯಕನಿಗೆ ತನ್ನ ರೂಮು ಸಿಗದೇ ಹೋಗುತ್ತದೆ. ರೂಮಿನ ಕೀಯನ್ನು ಹುಡುಕುವ ಪ್ರಕ್ರಿಯೆ, ರೂಮಿನ ನಂಬರು ನೆನಪಾಗದಿರುವ ಸನ್ನಿವೇಶಗಳಲ್ಲಿ ನಾಯಕನಿಗೆ ಪರಕೀಯತೆ ಕಾಡುತ್ತದೆ. "ನೇಣಿ ಹಾಕಿಕೊಂಡ ಈ ವ್ಯಕ್ತಿಗೂ ಜಗತ್ತಗೂ ಯಾವ ಸಂಬಂಧವೂ ಇಲ್ಲ. ಎಲ್ಲ ಸಂಬಂಧಗಳೂ ಕಳಚಿದ್ದರಿಂದಲೆ ಬಹುಶಃ ಆತ ನೇಣಿ ಹಾಕಿಕೊಂಡಿರಬಹುದು ಅಥವ ಆತ ನೇಣಿ ಹಾಕಿಕೊಂಡಿದ್ದರಿಂದ ಇವೆಲ್ಲ ಕಳಚಿಕೊಂಡಿರಬಹುದು. ಆದರೆ ತಾನು ಇನ್ನೂ ಬದುಕಿದ್ದೇನಲ್ಲ. ಇದು ಆಶ್ಚರ್ಯ ಎಂಬಿತ್ಯಾದಿಯಾಗಿ" (ಕೆ.ವಿ.ತಿರುವಲೇಶ್; ನಾಯಕ ಮತ್ತು ಇತರರು; ೧೯೮೨; ಪುಟ ೧೭). ಕತೆಯ ಕೊನೆಯ ಸಾಲುಗಳು ನಾಯಕನ ಪರಕೀಯ ಪ್ರಜ್ಞೆಗೆ ಸಾಕ್ಷಿಯಾಗಿದೆ. ತಿರುಮಲೇಶರ 'ಸಂದರ್ಶನ' ಕತೆಯಲ್ಲಿ ಖ್ಯಾತ ಸಾಹಿತಿಗಳಾದ ರಾಯರು ತನ್ನ ಸಹಪಾಠಿ ಸದಾಶಿವ ಬರೆದ ಕವಿತೆಗಳನ್ನು ಒತ್ತುವರಿ ಮಾಡಿಕೊಂಡು ಪ್ರಕಟಿಸುತ್ತಿದ್ದರು. ಇದರಿಂದ ಪ್ರಸಿದ್ಧಿ ಪಡೆದ ರಾಯರನ್ನು ನಿರೂಪಕರು ಸಂದರ್ಶಿಸುವ ಸಂದರ್ಭದಲ್ಲಿ ತಮ್ಮ ಪ್ರಸಿದ್ಧಿಯ ಹಿಂದಿರುವ ರಹಸ್ಯವನ್ನು ವಿವರಿಸುತ್ತಾರೆ. ಆದರೆ ಸಾಹಿತಿಗಳಾಗಿ ಖ್ಯಾತರಾದ ರಾಯರು ಪರಕೀಯತೆಯಿಂದ ನರಳುತ್ತಾರೆ.

ಅಶೋಕ ಹೆಗಡೆಯವರ 'ಶೇಷ ವೃತ್ತಾಂತ' ಕತೆಯ ನಾಯಕ ಪರಕೀಯ ಪ್ರಜ್ಞೆಯಿಂದ ನರಳುತ್ತಾನೆ. ತನ್ನ ಊರಾದ ಶಿರಸಿಯ ಪರಿಸರ, ಅಲ್ಲಿನ ಜನಗಳ ವ್ಯವಹಾರ, ತನ್ನ ಕುಟುಂಬದವರ ನಡವಳಿಕೆಗಳನ್ನು ನೋಡುತ್ತಾ ಹತಾಶನಾಗುತ್ತಾನೆ. ತನ್ನ ಗೆಳತಿ 'ಮಂಗಳಾ'ಳೊಂದಿಗೆ ಬದುಕಿನ ಘಟನೆಗಳನ್ನು ಬಿಚ್ಚಿಡುತ್ತಾ ಹೋಗುತ್ತಾನೆ. "ಕಾಲಕಾಲದಿಂದ ಕುದಿಯುತ್ತಾ ಬಂದ ಕುದಿತವೊಂದು ಖಾಲಿಯಾದಂತೆ ಮನು ಮುಖ

ಮುಚ್ಚಿ ಕೂತು ಬಿಕ್ಕಿದ “ (ಅಶೋಕ ಹೆಗಡೆ; ಒಂದು ತಗಡಿನ ಚೂರು; ೧೯೯೬; ಪುಟ ೫೫) ಎಂಬ ಕತೆಯ ಕೊನೆಯ ಸಾಲುಗಳಲ್ಲಿ ಮನುವಿನ ಅಸಹಾಯಕ ಸ್ಥಿತಿಯ ಚಿತ್ರಣವಿದೆ.

ಗೋಪಾಲಕೃಷ್ಣ ಹೆಗಡೆ ಕೇರೀಮನೆಯವರ ‘ಹಿಂತಿರುಗಿ ಬರಲಿಲ್ಲ’ ಎಂಬುದು ಒಂದು ಭಾವಜೀವಿಯ(Sentimental Character) ಅಚ್ಚುಕಟ್ಟಾದ ಕತೆ. ಕಥಾನಾಯಕಿ ಹೇಮಾ ಹಾಸ್ಟೆಲ್‌ನಲ್ಲಿ ವಾಸಿಸುತ್ತಿರುವ ಸಂದರ್ಭದಲ್ಲಿ ಯಾವುದೋ ಅವ್ಯಕ್ತ ವ್ಯಕ್ತಿಯ ಕರೆ ಅವಳಿಗೆ ಕೇಳುತ್ತಿರುತ್ತದೆ. ಮುಂದೆ ಹೇಮಾಳ ವಿವಾಹವಾದ ಮೇಲೆ ಅವಳು ತನ್ನ ಗಂಡನಿಗೆ ಬಂದ ಪತ್ರವನ್ನು ನೋಡಿದಾಗ ಅವನು ತನ್ನ ಸ್ನೇಹಿತನಾದ ರವಿಯ ಬದುಕಿನ ಘಟನೆಗಳನ್ನು ವಿವರಿಸುತ್ತಾನೆ: “ಅವನದೊಂದು ದೊಡ್ಡಕತೆ ಹೇಮಾ ಅದಕ್ಕೆ ಹೇಳುತ್ತಾರೆ ಭಾವ ಜೀವಿಗಳಾಗಿರಬಾರದು ಎಂದು; ಆತ ಭಾವಜೀವಿಯಾಗಿದ್ದ ಜನರು ಹೇಳುತ್ತಿದ್ದ ಹಾಗೆ ಅವನೊಬ್ಬ ಕವಿ” (ಗೋಪಾಲಕೃಷ್ಣ ಹೆಗಡೆ ಕೇರೀಮನೆ; ನವ್ಯಕತೆಗಳು; ೧೯೬೫; ಪುಟ ೫೬). ಹೇಗೆ ತನ್ನ ಸ್ನೇಹಿತ ಒಂದು ಹುಡುಗಿಯನ್ನು ಪ್ರೀತಿಸಿ, ಕೊನೆಗೆ ಅವಳು ನಿರಾಕರಿಸಿದಾಗ ಅವನು ಆತ್ಮಹತ್ಮೆ ಮಾಡಿಕೊಂಡ ಎಂಬ ವಿಚಾರವನ್ನು ಹೇಮಾಳ ಗಂಡ ಅವಳಿಗೆ ತಿಳಿಸುತ್ತಾನೆ. “ತನ್ನನ್ನು ಇಷ್ಟು ದಿನವೂ ಹೇಮಾ ಹೇಮಾ ಎಂದು ಅನವರತ ಕರೆದ ಅರ್ತನಾದ ರವಿಯ ಆತ್ಮವಿರಬಹುದೇ ಅದು ಅವನ ಅತೃಪ್ತ ಆತ್ಮದ ಕರೆ ಇರಬಹುದೇ? ಅಥವಾ ಅವನ ಪಿಶಾಚಿಯೇ?” (ಗೋಪಾಲಕೃಷ್ಣ ಹೆಗಡೆ ಕೇರೀಮನೆ; ನವ್ಯಕತೆಗಳು; ೧೯೬೫; ಪುಟ ೫೮) ಎಂಬುದಾಗಿ ರವಿಯ ಆತ್ಮಹತ್ಯೆಯ ವಿಚಾರ ತಿಳಿದ ಹೇಮಾ ಮಾನಸಿಕವಾಗಿ ನೊಂದು ಪರಕೀಯ ಭಾವನೆಯಿಂದ ನರಳುತ್ತಾಳೆ. ಮೇಲಿನ ಎಲ್ಲಾ ಕತೆಗಳಲ್ಲಿ ನಾಯಕರು ಪರಕೀಯ ಪ್ರಜ್ಞೆಯಿಂದ ನರಳಿದರೆ ಕೇರಿಮನೆಯವರ ‘ಹಿಂತಿರುಗಿ ಬರಲಿಲ್ಲ’ ಕತೆಯಲ್ಲಿ ನಾಯಕಿ ಪರಕೀಯ ಪ್ರಜ್ಞೆಯಿಂದ ನರಳುವ ದೃಶ್ಯ ಕಂಡುಬರುತ್ತದೆ.

ತನ್ನ ಜನ್ಮದಾತನ ಹುಡುಕಾಟದಲ್ಲಿದ್ದ ತರುಣ ಹಾಗೂ ತನಗೆ ಹುಟ್ಟಿದವನೆಂದು ತಿಳಿದು ಬೇರೊಬ್ಬನನ್ನು ಸಾಕುತ್ತ ಬಂದಿದ್ದ ಕೇಶವಶರ್ಮರು ಒಬ್ಬರನ್ನೊಬ್ಬರು ಸಂಧಿಸುವ ನಿಗೂಢ ಬಗೆ ಕುಮಾರ ಜೋಶಿಯವರ ‘ಕಾಡು ಹೊಕ್ಕ ಹಾದಿ’ ಕತೆಯ ವಸ್ತುವಾಗಿದೆ. ಸಂಸ್ಕೃತ ಅಧ್ಯಾಪಕನಾದ ‘ಅವನು’ ತನ್ನ ಜನ್ಮದಾತನನ್ನು ಹುಡುಕುವುದಕ್ಕಾಗಿ ಕೃಷ್ಣಾಪುರಕ್ಕೆ ಬರುತ್ತಾನೆ. ಕೇಶವಶರ್ಮರೇ ತನ್ನ ತಂದೆಯೆಂದು ತಿಳಿದು ಬಂದಾಗ

ಅವನು ತನ್ನ ಅಧ್ಯಾಪಕ ವೃತ್ತಿಗೆ ರಾಜೀನಾಮೆ ನೀಡಿ ಊರು ಬಿಟ್ಟು ತೆರಳುತ್ತಾನೆ. ಕತೆಯುದ್ದಕ್ಕೂ ಅವನು ತನ್ನ ತಂದೆ ಯಾರೆಂದು ಶೋಧಿಸುವ ಸಂದರ್ಭದಲ್ಲಿ ಪರಕೀಯ ಸ್ಥಿತಿಯನ್ನು ಅನುಭವಿಸುತ್ತಾನೆ.

ಒಟ್ಟಿನಲ್ಲಿ ಹವ್ಯಕ ನವ್ಯ ಕತೆಗಾರರು ಬರೆದ ಕತೆಗಳಲ್ಲಿ ಕಾಮ, ಮನುಷ್ಯನ ಒಳಮನಸ್ಸಿನ ತಾಕಲಾಟ, ಸಂಕೀರ್ಣತೆಗಳು, ಏಕಾಂಗಿತನಗಳ ಚಿತ್ರಣವನ್ನು ಕಾಣಬಹುದು. ಹೆಚ್ಚಿನ ಕತೆಗಾರರು ಮನುಷ್ಯನ ಅಂತರಂಗದ ಬದುಕಿನಲ್ಲೇ ಆಸಕ್ತಿ ಹೆಚ್ಚಾಗಿರುವುದರಿಂದ ಅವರು ಬದುಕನ್ನು ಒಳಗಿನಿಂದ ನೋಡುತ್ತಾರೆ. ಇವರ ಕಥಾನಾಯಕರು ಅಂತರ್ಮುಖಿಗಳಾಗಿದ್ದುಕೊಂಡು, ಪರಿಸರದ ಒತ್ತಾಯದಿಂದ ಹೇರಿದ ಬದುಕಿನ ರೀತಿಯ ನಡುವೆ ಬಾಳುತ್ತಾರೆ.

# ಅಧ್ಯಾಯ – ೯

## ಹವ್ಯಕ ಕಥೆಗಾರರಲ್ಲಿ ಕಾಣುವ ಬಂಡಾಯದ ಧ್ವನಿಗಳು

ಕನ್ನಡದಲ್ಲಿ ನವ್ಯ ಸಾಹಿತ್ಯಮಾರ್ಗ ಪ್ರಚಲಿತದಲ್ಲಿರುವಾಗಲೇ ದಲಿತ ಮತ್ತು ಬಂಡಾಯ ಸಾಹಿತ್ಯ ಎಪ್ಪತ್ತರ ದಶಕದ ಕೊನೆಯಲ್ಲಿ ಅಸ್ತಿತ್ವಕ್ಕೆ ಬಂದಿದೆ. ೧೯೭೯ರಲ್ಲಿ ಧರ್ಮಸ್ಥಳದಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ದಲಿತ ಸಾಹಿತ್ಯವನ್ನು ಕುರಿತು ಪ್ರತ್ಯೇಕಗೋಷ್ಠಿ ನಡೆಸಬೇಕೆಂದು ಪ್ರಗತಿಪರ ಚಿಂತನೆಯ ಕೆಲವು ಲೇಖಕರು ಒತ್ತಾಯಿಸಿದಾಗ, ಸಮ್ಮೇಳನದ ಸಂಘಟಕರು ಆಗ ಒಪ್ಪಲಿಲ್ಲ. ಈ ಕಾರಣಕ್ಕಾಗಿ ಮಾರ್ಚ್ ೧೦,೧೧,೧೯೭೯ ರಂದು ಬೆಂಗಳೂರಿನಲ್ಲಿ ಪರ್ಯಾಯ ಸಾಹಿತ್ಯ ಸಮ್ಮೇಳನ ನಡೆಯಿತು.ಇದು ಮೊದಲನೇ ಬಂಡಾಯ ಸಾಹಿತ್ಯ ಸಮ್ಮೇಳನವೆಂದೂ ಹೆಸರು ಪಡೆಯಿತು .ಈ ಸಮ್ಮೇಳನದಲ್ಲಿ ಕನ್ನಡದ ಎಲ್ಲಾ ಪ್ರಗತಿಪರ ಲೇಖಕರು ಮತ್ತು ದಲಿತ ಬರಹಗಾರರು ಪಾಲ್ಗೊಂಡು ಕನ್ನಡ ಸಾಹಿತ್ಯದ ಪ್ರಥಮ ಕಾಳಜಿಯಾದ ಪ್ರತಿಭಟನೆಯ ಸತ್ತ್ವಕ್ಕೆ ಜೀವ ತುಂಬಲು ಪ್ರಯತ್ನಿಸಿದರು. ಒಂದೇ ಕಾಲಮಾನದಲ್ಲಿ ದಲಿತ ಮತ್ತು ಬಂಡಾಯ ಸಾಹಿತ್ಯವೆಂಬ ಎರಡು ಪ್ರಕಾರಗಳು ಸಮಾನ ಧೋರಣೆಗಳನ್ನಿರಿಸಿಕೊಂಡು ಅಸ್ತಿತ್ವಕ್ಕೆ ಬಂದುದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಅಪೂರ್ವ ಪ್ರಸಂಗವಾಗಿದೆ. ಬಂಡಾಯ ಸಾಹಿತ್ಯದ ತಾತ್ತ್ವಿಕ ನೆಲೆಯ ಬಗೆಗೆ ಬರಗೂರು ರಾಮಚಂದ್ರಪ್ಪನವರು ಹೀಗೆ ವಿವರಿಸಿದ್ದಾರೆ:

"ನಮ್ಮ ಸಾಹಿತ್ಯಿಕ ಕ್ಷೇತ್ರದಲ್ಲಿ ಅನೇಕ ವರ್ಷಗಳಿಂದ ಕಂಡುಬರುತ್ತಿರುವ ಪ್ರಗತಿಪರ ಧೋರಣೆಗಳು ತೆಗೆದುಕೊಂಡ ತಿರುವುಗಳು,ಎದುರಿಸಿದ ಸಮಸ್ಯೆಗಳು ಮತ್ತು ತಲುಪಿದ ಕ್ಷೀಣ ನೆಲೆಗಳನ್ನು ಗಮನಿಸಿದಾಗ ಅವುಗಳಿಂದ ಪಾಠ ಕಲಿತ ವ್ಯಾಪಕ ಸ್ವರೂಪದ ಸಂಘಟನೆಯ ಅಗತ್ಯ ಗೊತ್ತಾಗುತ್ತದೆ.......ಸಮಕಾಲಿನ ಚರಿತ್ರೆಯ ಬೆಳವಣಿಗೆಯ ಸ್ವರೂಪದಿಂದಾಗಿ ಎಲ್ಲಾ ವಾಮಪಂಥೀಯರ ಸಾಂಸ್ಕೃತಿಕ ಒಗ್ಗಟ್ಟು ಈಗ ಅತ್ಯಂತ ಮಹತ್ತ್ವವಾದದ್ದು. ಈ ದಿಕ್ಕಿನಲ್ಲಿ ಬಂಡಾಯ ಸಾಹಿತ್ಯ ಬೆಳವಣಿಗೆಯ ಕನ್ನಡ ಸಾಂಸ್ಕೃತಿಕ ಕ್ಷೇತ್ರದಲ್ಲಿ ಅತ್ಯಂತ ವ್ಯಾಪಕವಾಗಿ ಹಬ್ಬುವ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕು. ಶೋಷಿತ ಜನತೆಯ ಪರವಾದ ನಿಲುವುಗಳನ್ನು ಸಾಂಸ್ಕೃತಿಕ ಕ್ಷೇತ್ರದಲ್ಲಿ

ಭದ್ರವಾಗಿ ನೆಲೆಗೊಳಿಸುವುದು ನಮ್ಮ ಮುಖ್ಯ ಗುರಿಗಳಲ್ಲೊಂದಾಗಬೇಕು....... ಅಸ್ಪೃಶ್ಯತೆ,ಜಾತಿ ಪದ್ಧತಿ,ಲಿಂಗಭೇದ ಮತ್ತು ವರ್ಗಭೇದ ನೀತಿಯ ವಿರುದ್ಧ ಹೋರಾಟವನ್ನು ಕಟ್ಟುವುದು ನಮ್ಮ ಮುಖ್ಯ ಉದ್ದೇಶಗಳಲ್ಲಿ ಒಂದು. ಎಲ್ಲ ಜನಪರ ನಿಲುವುಗಳಿಗೆ ನಮ್ಮ ಬೆಂಬಲ. ಜನಪರವಾದ ಸಾಂಸ್ಕೃತಿಕ ಹೋರಾಟ ನಮ್ಮ ಮುಖ್ಯ ನೆಲೆ.ಇಂಥ ಒಲವಿನ ಸಾಹಿತ್ಯ ಸೃಷ್ಟಿ ನಮ್ಮ ಹೋರಾಟದ ಮುಖ್ಯ ದಾಖಲೆ"(ಬರಗೂರು ರಾಮಚಂದ್ರಪ್ಪ; ಸಂಸ್ಕೃತಿ-ದಲಿತ ಸಾಹಿತ್ಯ;೧೯೯೨; ಪುಟ೩). ಮೇಲಿನ ಪ್ರಣಾಳಿಕೆಯ ವಿವರಗಳನ್ನು ಗಮನಿಸಿದರೆ ಬಂಡಾಯ ಸಾಹಿತ್ಯದ ಉದ್ದೇಶ ಮತ್ತು ಧೋರಣೆಗಳು ಸ್ಪಷ್ಟವಾಗುತ್ತದೆ.

ಈ ನೆಲದ ಅನಿವಾರ್ಯತೆಯ ಅಂಗವಾಗಿ ಬಂಡಾಯ ಸಾಹಿತ್ಯ ಚಳುವಳಿ ರೂಪುಗೊಂಡಿದೆ. ಸಮಾನತೆಗಾಗಿ ಹೋರಾಟ ಎಂಬ ತಾತ್ವಿಕ ನೆಲೆಯಲ್ಲಿ ಮಾನವಿಯತೆಗೆ ಹೆಚ್ಚಿನ ಮಹತ್ತ್ವವನ್ನು ನೀಡಲಾಗಿದೆ. ಸಹಜವಾಗಿ ದಲಿತ-ಬಂಡಾಯದಲ್ಲಿ ಸಾಹಿತ್ಯವು ಹಸಿವು,ಬಡತನ,ಶೋಷಣೆ ಇಂತಹ ಜನಪರ ಕಾಳಜಿಗಳಿಗೆ ಬದ್ಧತೆಯನ್ನು ತೋರಿಸಿತು. ಈ ಆಶಯವನ್ನು ಸಾಧಿಸಲು ಸಾಮೂಹಿಕ ಹೋರಾಟವನ್ನು ಸಂಘಟಿಸಲಾಯಿತು. ಜಾತಿ, ವರ್ಗ, ಲಿಂಗ ವ್ಯವಸ್ಥೆಯ ಮೂಲಭೂತವಾದಿ ನಿಲವು ಹಾಗೂ ಬಂಡವಾಳಶಾಹಿ ಪ್ರವೃತ್ತಿಯ ಸೈದ್ಧಾಂತಿಕ ನೆಲೆಯಲ್ಲಿ ಇವರು ವಿರೋಧಿಸುತ್ತಾರೆ. ದಲಿತ ಬಂಡಾಯ ಸಾಹಿತ್ಯ ತನ್ನ ಸಮಾಜದ ಹುಳುಕನ್ನು ಪ್ರಶ್ನಿಸುತ್ತಾ, ಪ್ರತಿಭಟಿಸುತ್ತಾ ಜನಸಾಮಾನ್ಯರ ಧ್ವನಿಯಾಗಿ ರೂಪು ಪಡೆದಿದೆ. ಶೋಷಣೆಯ ವಿರುದ್ಧ ಮಾತನಾಡಿದ ದಲಿತ ಬಂಡಾಯ ಸಾಹಿತ್ಯ ಜನಸಾಮಾನ್ಯರಲ್ಲಿರುವ ಅಜ್ಞಾನ, ಅಂಧಃಶ್ರದ್ದೆ, ನೋವು, ಸಂಕಟ ಅನಕ್ಷರತೆಯ ಬಗೆಗೆ ಎಚ್ಚರ ಮೂಡಿಸುವ ಪ್ರಯತ್ನವನ್ನು ನಡೆಸಿದೆ.

'ಬಂಡಾಯ' ಕೇವಲ ಇಂದು ನಿನ್ನೆಯದಲ್ಲ, ಅದಕ್ಕೊಂದು ದೀರ್ಘ ಪರಂಪರೆಯಿದೆ. ಜಾಗತಿಕ ಬಂಡಾಯ ಪರಂಪರೆಯಲ್ಲಿಯೇ ನಮ್ಮ ರಾಷ್ಟ್ರದ, ನಮ್ಮ ನಾಡಿನ ಬಂಡಾಯ ಪರಂಪರೆಯ ಕೂಡಿಕೊಂಡಿದೆ. ಹೀಗಾಗಿ ಬಂಡಾಯವೆಂಬುದು ಕೇವಲ ಒಂದು ಭಾಷೆ. ಒಂದು ಪ್ರದೇಶ, ಒಂದು ಕಾಲಘಟ್ಟಕ್ಕೆ ಮಾತ್ರ ಸೀಮಿತವಾಗಿರದೆ, ಅದು ಭಾಷೆ-ದೇಶಗಳನ್ನು ಮೀರಿ ಹರಿಯುವ ನಿರಂತರ ನದಿಯಾಗಿದೆ. ವಿವಿಧ ದೇಶ-ಭಾಷೆಗಳ ಸಾಹಿತ್ಯ ಘಟ್ಟಗಳಲ್ಲಿ ಬಂಡಾಯದ

ಪರಂಪರೆಯಿರುವಂತೆ, ಕನ್ನಡ ಸಾಹಿತ್ಯದಲ್ಲಿಯೂ ಬಂಡಾಯ ಪರಂಪರೆಯೊಂದನ್ನು ಗುರುತಿಸಬಹುದಾಗಿದೆ. ಆದರೆ ಹಿಂದಿನ ಲೇಖಕರಲ್ಲಿ ಬಂಡಾಯವೆಂಬುದು ಒಂದು ಸಂದರ್ಭವಾಗಿ, ಒಂದು ಘಟನೆಯಾಗಿ ಪ್ರಕಟವಾಗುತ್ತಿತ್ತೇ ಹೊರತು ಅದೇ ಪ್ರಮುಖ ಮೌಲ್ಯವಾಗಿರಲಿಲ್ಲ. ಇಂದಿನ ಹಾಗೆ ಹಿಂದೆ ಬಂಡಾಯವು ಒಂದು ಮನೋಧರ್ಮವಾಗಿರಲಿಲ್ಲ. ಆದರೆ ಸಾಹಿತ್ಯ ಚರಿತ್ರೆಯ ಸಂದರ್ಭದಲ್ಲಿ ಅಲ್ಲಲ್ಲಿ ಎದ್ದು ಕಾಣಿವ ಬಂಡಾಯ ಪರಂಪರೆಯನ್ನು ಅಲ್ಲಗಳೆಯುವಂತಿಲ್ಲ. ಈ ಪಂಪರೆಯ ನೆಲೆಗಳನ್ನು ಆದಿಕವಿ ಪಂಪನಿಂದಲೇ ಕಾಣಬಹುದಾಗಿದೆ.

ಸ್ವಾತಂತ್ರ್ಯಾ ನಂತರದ ಈ ಅರುವತ್ತು ವರ್ಷಗಳ ಬದಲಾದ ಜೀವನ ಕ್ರಮದಲ್ಲಿ ಈಗ ಬರೆಯುತ್ತಿರುವ ಎಲ್ಲ ತಲೆಮಾರಿನ ಲೇಖಕರ ಮೇಲೆ ಬಂಡಾಯ ಸಾಹಿತ್ಯ ತುಂಬಾ ಪ್ರಭಾವಬೀರಿದೆ. ಸುಮಾರು ಒಂದು ತಲೆಮಾರಿನ ಸಾಹಿತ್ಯ ಸೃಷ್ಟಿಯೊಂದಿಗೆ ಬಂಡಾಯ ಸಾಹಿತ್ಯ ತನ್ನದೇ ಆದ ಹೆಜ್ಜೆಗಳನ್ನು ಮೂಡಿಸಿದೆ. ಕಾವ್ಯ, ಕಥೆ, ಕಾದಂಬರಿ ಮತ್ತು ವಿಮರ್ಶಾ ವಲಯದಲ್ಲಿ ಗಣನೀಯ ಕೃತಿಗಳನ್ನು ಬಂಡಾಯ ಧೋರಣೆಯ ಲೇಖಕರು ನೀಡಿದ್ದಾರೆ. ದಲಿತ ಸಂವೇದನೆ, ಮುಸ್ಲಿಂ ಸಂವೇದನೆ, ಮಹಿಳಾ ಸಂವೇದನೆ ಹಾಗೂ ಗ್ರಾಮೀಣ–ಸಂವೇದನೆ. ಇವು ಬಂಡಾಯ ಸಾಹಿತ್ಯದ ಪ್ರಮುಖ ಸಂವೇದನೆಗಳಾಗಿವೆ. ಕನ್ನಡ ಸಾಹಿತ್ಯಕ್ಕೆ ಅಪರಿಚಿತವಾಗಿದ್ದ ಅನುಭವಗಳನ್ನು ಈ ಸಂವೇದನೆಗಳ ಮೂಲಕ ಬಂಡಾಯ ಸಾಹಿತ್ಯ ಕಟ್ಟಿಕೊಟ್ಟಿತು.

ಬಂಡಾಯ ಸಂದರ್ಭದ ಕತೆಗಳಲ್ಲಿ ಸಾಮಾಜಿಕ ಕಾಳಜಿ ಹಾಗೂ ಸಮಾನತೆಯ ಆಶಯ ಎದ್ದು ಕಾಣುತ್ತವೆ. ಸಮಾಜದ ವಿವಿಧ ಸ್ತರಗಳಿಂದ ಬಂದ ಇಲ್ಲಿಯ ಲೇಖಕರ ಒಟ್ಟು ಆಶಯವೇ ಜನಪರವಾಗಿದೆ. ದೇವನೂರು ಮಹಾದೇವ, ಬರಗೂರು ರಾಮಚಂದ್ರಪ್ಪ, ಕುಂ. ವೀರಭದ್ರಪ್ಪ, ಬೆಸಗರಹಳ್ಳಿ ರಾಮಣ್ಣ, ಬೊಳುವಾರು ಮಹಮ್ಮದ ಕುಂಞ, ಸಾರಾ ಅಬೂಬಕರ್, ಕರೀಗೌಡ ಬೀಚನಹಳ್ಳಿ, ಗೀತಾ ನಾಗಭೂಷಣ ಈ ಮೊದಲಾದ ಬಂಡಾಯ ಲೇಖಕರ ಕತೆಗಳಲ್ಲಿ ಜನಪರ ನಿಲುವುಗಳೇ ಪ್ರಧಾನವಾಗಿವೆ. ಲಂಕೇಶ, ತೇಜಸ್ವಿ, ವೈದೇಹಿ ಈ ಮೊದಲಾದ ಲೇಖಕರ ಕತೆಗಳಲ್ಲಿಯೂ ಜನಪರ ಆಶಯಗಳು ಅರ್ಥಪೂರ್ಣವಾಗಿ ಮೂಡಿ ಬಂದಿವೆ.

ಹಳಗನ್ನಡ–ನಡುಗನ್ನಡ ಸಾಹಿತ್ಯದ ಸಂದರ್ಭದಲ್ಲಿ ಬೆಳೆದುಕೊಂಡು ಬಂದ ಬಂಡಾಯ ಪರಂಪರೆ ಆಧುನಿಕ ಸಂದರ್ಭದ ನವೋದಯ ಪ್ರಗತಿಶೀಲ ಘಟ್ಟಗಳಲ್ಲಿಯೂ ಕಾಣಿಸಿಕೊಂಡಿತು. ನವೋದಯ ಘಟ್ಟದ ಕುವೆಂಪು, ಕಾರಂತ, ಬೇಂದ್ರೆಯವರಂತಹ ಕೆಲವು ಪ್ರಮುಖ ಸಾಹಿತಿಗಳಲ್ಲಿ ಸಾಮಾಜಿಕ ಪ್ರಜ್ಞೆ, ಪ್ರತಿಭಟನೆ, ಜನಪರ ಕಾಳಜಿಗಳನ್ನು ಕಾಣಬಹುದಾಗಿದೆ. ಅದೇ ರೀತಿ ಪ್ರಗತಶೀಲ ಲೇಖಕರಾದ ನಿರಂಜನ, ಬಸವರಾಜ ಕಟ್ಟೀಮನಿ, ಚದುರಂಗ, ವ್ಯಾಸರಾಯ ಬಲ್ಲಾಳ ಈ ಮುಂತಾದವರಲ್ಲಿ ಬಂಡಾಯದ ಸ್ಫೋಟವನ್ನು ಗುರುತಿಸಬಹುದಾಗಿದೆ. ಹಾಗೆಯೇ ನವ್ಯದ ಲಂಕೇಶ, ಅನಂತಮೂರ್ತಿ, ತೇಜಸ್ವಿಯವರಲ್ಲಿ ಪ್ರಗತಿಪರ ನೆಲೆಗಟ್ಟನ್ನು ಕಾಣಬಹುದಾಗಿದೆ. ಹೀಗೆ ೧೦ನೇ ಶತಮಾನದಿಂದ ಹಿಡಿದು ೨೦ನೇ ಶತಮಾನದವರೆಗೆ ಸಾಹಿತ್ಯದಲ್ಲಿ ಬಂದಿರುವ ಜನಪರ ಕಾಳಜಿ, ಬಂಡಾಯದ ಗುಣ ಒಂದು ಪರಂಪರೆಯಾಗಿ ಕನ್ನಡ ಸಾಹಿತ್ಯದಲ್ಲಿ ಬೆಳೆದು ಬಂದಿದೆ.

ದಲಿತ ಲೇಖಕರು ಮತ್ತು ದಲಿತರಲ್ಲದೆ ಸವರ್ಣೀಯ ಲೇಖಕರು ತಮ್ಮ ಸಾಹಿತ್ಯ ರಚನೆಯಲ್ಲಿ ವ್ಯವಸ್ಥೆಯ ವಿರುದ್ಧದ ಪ್ರತಿಭಟನೆಯನ್ನು ಕಾಣಿಸಿರುವುದು ಸ್ವಾಭಾವಿಕ. ಆದರೆ ಹವ್ಯಕ ಬರಹಗಾರರು ಬರೆದ ಕತೆಗಳಲ್ಲಿ ಬಂಡಾಯ ಧೋರಣೆಯನ್ನು ಗುರುತಿಸಲು ಸಾಧ್ಯ. ಜಿ.ಶಂಕರ ಭಟ್ಟ 'ವಿಮೋಚನೆ', 'ಚನಿಯ ಕಂಡ ಜೋಡಾಟ', ಕೈಂತಜೆ ಗೋವಿಂದ ಭಟ್‌ರವರ 'ಕಾಳಿಗೆ ಕಾಳಿಗೆ' ಕತೆಗಳಲ್ಲಿ ಯಜಮಾನ ಸಂಸ್ಕೃತಿ ನಿರ್ಮಿಸಿದ ಸಾಮಾಜಿಕ ನೀತಿಯ ವಿರುದ್ಧ ಬಂಡೆದ್ದ ಧೋರಣೆಯನ್ನು ಗುರುತಿಸಬಹುದು. ಶ್ರೀಕೃಷ್ಣ ಚೊಕ್ಕಾಡಿಯವರ 'ಶ್ರಾದ್ಧ', ಕುಮಾರ ಜೋಶಿಯವರ 'ಹೊಲಿಗೆಗಿಂತ ಹರಕು ಮೊದಲು' ,'ಉತ್ಸವ', ಶೇಷಗಿರಿ ಮಾ.ರಾ. ಅವರ 'ಬ್ರಾಹ್ಮಣ' ಹಾಗೂ ಜಿ.ಶಂಕರ ಭಟ್ಟರ 'ಊರ್ಧ್ವ' ಕತೆಗಳಲ್ಲಿ ಬ್ರಾಹ್ಮಣರ ಆಚರಣೆಯ ವಿರುದ್ಧ ಬ್ರಾಹ್ಮಣರೇ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿದ್ದಾರೆ.

೧೯೫೦ರಲ್ಲಿ ಜಿ.ಶಂಕರ ಭಟ್ಟರು ಬರೆದ 'ವಿಮೋಚನೆ' ಕತೆಯ ಲಿಂಗಣ್ಣ ಒಬ್ಬ ಕೃಷಿ ಕಾರ್ಮಿಕ. ಗುಲಾಮನಾಗಿಯೇ ತಾನು ಬಾಳಬೇಕೆಂಬ ಭಯವು ಕನಸು ಕೂಡಾ ಆಗಿ ಬರುವ ಸ್ಥಿತಿಯವನು. ಧಣಿ ಸೂರಪ್ಪ ಶೆಟ್ಟರಲ್ಲಿ ಆಳುಗಳು ಕೆಲಸದಲ್ಲಿದ್ದಾಗ ಅವರಿಗೆ ಬಂದ ಪತ್ರ 'ಬುಲ್‌ಡೋಜರ್' ಯಂತ್ರ ಬರುವುದನ್ನು ಸೂಚಿಸಿತು.

ಲಿಂಗಣ್ಣನಿಗೂ ಅವನ ಒಡನಾಡಿಗಳಿಗೂ ಕೆಲಸದ ಮುಕ್ತಾಯವನ್ನು ಹೇಳಿದ ಶೆಟ್ಟರು ಬುಲ್‌ಡೋಜರ್ ನಿಂದ ತಮಗಾಗುವ ಆರ್ಥಿಕ ಲಾಭ ಮತ್ತು ಶ್ರಮ-ಸಮಯದ ಉಳಿತಾಯವನ್ನು ಹೆಮ್ಮೆಯಿಂದ ಘೋಷಿಸಿದರು. ಮಳೆಗಾಲದಲ್ಲಿ ನಿರ್ಗತಿಕನಾದ ಲಿಂಗಣ್ಣ ತನ್ನ ಬಡತನದಿಂದ ಬಿಡುಗಡೆಯನ್ನು ತಾನು ಭಯ-ಕುತೂಹಲಗಳಿಂದ ನೋಡುತ್ತಿದ್ದ ಬುಲ್‌ಡೋಜರ್ ಯಂತ್ರಕ್ಕೆ ಬೆಂಕಿ ಹಾಕುವ ಮೂಲಕ ಪಡೆದುಕೊಳ್ಳಲು ಮುಂದಾದ. ಕತೆಯ ಶಕ್ತಿ ಇರುವುದು ಲಿಂಗಣ್ಣನ ಬಡತನ ಮತ್ತು ಸ್ವಾತಂತ್ರ್ಯದ ಹಪಹಪಿಕೆಯಲ್ಲಿ. ಲಿಂಗಣ್ಣನ ಬಂಡಾಯ ಪ್ರತಭಟನೆಗಳಿಗೆ ಕ್ರಿಯೆಯ ರೂಪ ಕೊಡುವ ಈ ಕತೆಯು; ತನ್ನ ಪೂರ್ವಜ ಕಥಾನಾಯಕರಂತೆ ದುರಂತವನ್ನೋ, ಅಸಹಾಯಕತೆಯನ್ನೋ, ಕಣ್ಣೀರನ್ನೋ ಹೊಂದುವ ಬದಲು-ನಾಯಕ ಪಾತ್ರಕ್ಕೆ ವಿಚಿತ್ರ ಧೈರ್ಯವನ್ನು ಒದಗಿಸುತ್ತದೆ. ತಮ್ಮದು ಬಂಡಾಯವೆಂದು ಕರೆದುಕೊಳ್ಳುವ ಸಾಹಿತ್ಯ ಚಳುವಳಿಯ ಬಹುಪೂರ್ವದಲ್ಲೇ ಜಿ.ಶಂಕರ ಭಟ್ಟರು ಸ್ಪಷ್ಟ ಬಂಡಾಯ ಪಂಥದ ಕಥೆಯೊಂದನ್ನು ಸೊಗಸಾಗಿ ರಚಿಸಿದ್ದಾರೆ. ಯಂತ್ರ ಸಂಸ್ಕೃತಿ ಮತ್ತು ಗ್ರಾಮ ಜೀವನ ಪದ್ಧತಿಯ ತಾಕಲಾಟವನ್ನು ಹೇಳುವ ಕತೆಯ ಒಳನೋಟ ಜಾಗತೀಕರಣದ ಸಂದರ್ಭದಲ್ಲಿ ಮಾತ್ರವಲ್ಲ ಗಾಂಧೀ ಧೋರಣೆಯ ಹೋರಾಟದ ಕಾಲಕ್ಕೂ ಪ್ರಸ್ತುತವಾಗಿ ಬಿಡುತ್ತದೆ.

ಜಿ.ಶಂಕರ ಭಟ್ಟರು ರಚಿಸಿದ 'ಚನಿಯ ಕಂಡ ಜೋಡಾಟ' ತನ್ನ ತಂತ್ರ, ಭಾಷೆ, ನಿರೂಪಣೆ, ಸೂಕ್ಷ್ಮ ಬಂಡಾಯದ ಆಶಯ ಇತ್ಯಾದಿಗಳಿಂದ ಕನ್ನಡದ ಅಪರೂಪದ ಕತೆಯಾಗಿ ನಿಲ್ಲಬಲ್ಲುದು. ಹಳ್ಳಿಗಳಲ್ಲಿ ಹಿಂದೆ ನಡೆಯುತ್ತಿದ್ದ ತೆಂಕುತಿಟ್ಟಿನ ಮೇಳಗಳ ತಿರುಗಾಟ ಮತ್ತು ಜೋಡಾಟಗಳ ವಾತಾವರಣವನ್ನು ಕತೆ ಚಿತ್ರಿಸುತ್ತದೆ. ಕತೆಯ ನಿರೂಪಕ ಚನಿಯ ಈ ಆಟಗಳಿಗೆ ದೊಂದಿ ಹಿಡವ ವೃತ್ತಿಯವನು. ಇಲ್ಲಿ 'ಅವನು' ಎಂದರೆ ಕತೆ ಹೇಳುವ ಚನಿಯ, 'ಅವರು ' ಎಂದರೆ ಕತೆ ಕೇಳಿದ ಪಡ್ಡಿಲ್ಲಾಯರು.

ಚನಿಯ ದೊಂದಿ ಹಿಡಿಯುವುದು ಕದ್ರಿಮೇಳದಲ್ಲಿ. ಅದರ ಯಜಮಾನ ಮಾರಪ್ಪ ಹೆಗ್ಗಡೆಯವರಿಗೆ, ಕೊರಗ ಶೆಟ್ಟರ ಮೂಲ್ಕಿ ಮೇಳದ ವಿರುದ್ಧ ದೇವಿ ಮಹಾತ್ಮೆ ಜೊಡಾಟದ ಸ್ಪರ್ದೆಯಲ್ಲಿ ಹೇಗಾದರೂ ಗೆಲ್ಲಬೇಕೆನ್ನುವ ಹುಮ್ಮಸ್ಸು. " ಈದಿನದ ಆಟ ಚೆನ್ನಾಗಿ ನಡೆಯಬೇಕು. ಹುಷಾರಾದರೆ ಮೇಳಕ್ಕೆ, ಎಂದರೆ ನಿಮಗೆ ಕೀರ್ತಿ ಎಲ್ಲಾದರೂ

ಮೈ ನೋವು ಕಾಲು ನೋವೆಂದು ಉದಾಸೀನ ಮಾಡಿದರೆ ನಿಮ್ಮ ಚರ್ಮ ಸುಲಿದೇನು. ಅಲ್ಲಿ ಚೆಂಡೆಯ ದಿಗಣ ಹಾಕುವಾಗ ವೇಷ ರಂಗಸ್ಥಳಕ್ಕೆ ಬರಬೇಕು. ಎಲ್ಲಿಯಾದರೂ ನಿದ್ರೆ ಮಾಡಿ ಸಮಯಕ್ಕೆ ಸರಿಯಾಗಿ ಬಾರದಿದ್ದರೆ, ಮೆಟ್ಟಿನಲ್ಲಿ ಕಪಾಲಕ್ಕೆ ಬಾರಿಸಿಯೇನು. ದೀವಟಿಗೆ ಹಿಡಿಯುವುದರಿಂದ ಹಿಡಿದು ಭಾಗವತರವರೆಗೆ ಎಲ್ಲರಿಗೂ ಹೇಳಿದುದು ನಾನು" (ಜಿ.ಶಂಕರ ಭಟ್ಟ; ಕನ್ನಡಿಯಲ್ಲಿ ಕರೆನಾಡು; ೧೯೫೪; ಪುಟ ೩೦). ಇದು ಚಾಟಿ ಹಿಡಿದ ಅವರ ಎಚ್ಚರಿಕೆ. ಚನಿಯನ ಕೆಲಸವೋ ಪ್ರತೀ ಬಣ್ಣದ ವೇಷಕ್ಕೂ (ರಾಕ್ಷಸವೇಷ) ದೀವಟಿಗೆ ಹಿಡಿಯುವುದು.

ಎರಡೂ ವೇದಿಕೆಗಳಲ್ಲಿ ದೇವಿಮಹಾತ್ಮೆ ಕಥಾನಕಗಳು ಏಕಪ್ರಕಾರವಾಗಿ ಬೆಳೆಯುತ್ತಾ ಮೂಲ್ಕಿ ಮೇಳದಿಂದ ರಕ್ತ ಬೀಜಾಸುರ ಬಂದಾಗ ಕದ್ರಿಮೇಳದ ವೇದಿಕೆಯಲ್ಲಿ ರಕ್ತ ಬೀಜಾಸುರ ಕಾಣಲೇ ಇಲ್ಲ. ಆಗ ಐತಪ್ಪ ಹಿಂದೆಂದೂ ಯಕ್ಷಗಾನವು ರಂಗದಲ್ಲಿ ಸ್ಥಾಪಿಸದಿದ್ದ ಅಪೂರ್ವ ರಕ್ತ ಬೀಜನನ್ನು ಬೇರೆಯೇ ಜೋಡಿ ದೊಂದಿಯವರೊಂದಿಗೆ ತಂದು ಬಿಟ್ಟು ಮೂಲ್ಕಿ ಮೇಳವನ್ನು ಸೋಲಿಸಿಬಿಟ್ಟುದನ್ನು ಕತೆ ಚನಿಯನ ಬಾಯಲ್ಲಿ ಹೇಳಿಸುತ್ತದೆ. ಸಭೆಯೇ ತತ್ತರಿಸುವಂತಿದ್ದ, ಎದುರಾಳಿ ಮೇಳಕ್ಕೆ ಕೊಂಚ ಸುಳಿವೂ ಸಿಗದೆ ಮೂಡಿಬಂದಿದ್ದ ಈ ರಕ್ತಬೀಜ.

ಕೊನೆಗೆ ಮೂಲ್ಕಿ ಮೇಳದವರು ಕದ್ರಿ ಮೇಳದ ರಕ್ತಬೀಜಾಸುರ ವೇಷಧಾರಿಯೊಂದಿಗೆ ಮಾರಾಮಾರಿಯಾದಾಗ ಇಬ್ಬರು ಯಜಮಾನರು ಪಿಸ್ತೂಲು ತೋರಿಸಿ ಪರಿಸ್ಥಿತಿ ಸುಧಾರಿಸಿದರು. ಐತಪ್ಪನಿಗೆ ಅಸಾಧ್ಯ ಪೆಟ್ಟಾಗಿತ್ತು. ಕತೆಯ ಕಡೆಯ ಸಾಲುಗಳು ಹೀಗೆ ಮುಂದುವರಿಯುತ್ತವೆ: "ಅನಂತರಾಯರ ವೇಷವನ್ನು ನನ್ನ ಜೀವಮಾನದಲ್ಲಿ ಒಮ್ಮೆಯಾದರೂ ಸೋಲಿಸಿದೆನಲ್ಲ. ಸಾಕು ಇನ್ನು ಸತ್ತರು ನನ್ನ ಜನ್ಮ ಸಾರ್ಥಕ ___.. ಅವರ ಕೈಯಿಂದ ತಿಂದ ಪೆಟ್ಟು, ಆಡಿಸಿಕೊಂಡ ಮಾತುಗಳಿಗೆ ಸಾರ್ಥಕವಾಯಿತು. ಇನ್ನು _____. ಮಣ್ಣಿ _____. ಮುಕ್ಕಿದರೂ _______.ನಾನು _______ಧ_______.ನ್ಯ ! ಎಂದು ಕೊನೆಯ ಮಾತು ಹೇಳಿದನು.""ಅದೇನು ಹಾಗೆ?" ಎಂದು ಪಡ್ಡಿಲ್ಲಾಯರು ಕೇಳಿದರು.

ಅಂದರೆ ಹೀಗೆ! ಅನಂತರಾಯರಲ್ಲಿ ಬಡವನಾದ ಐತಪ್ಪ ವೇಷ ಹಾಕುವುದನ್ನು ಕಲಿಯುತ್ತಿದ್ದ. ಅನಂತರಾಯರು ಬ್ರಾಹ್ಮಣರು. ಐತಪ್ಪ ಮೆಟ್ಟು ಹೊಲಿಯುವ ಜಾತಿಯವ.

ಆತನನ್ನು ಅನ್ಯಾಯವಾಗಿ ಹಿಂಸಿಸುತ್ತಿದ್ದರಂತೆ ಅನಂತರಾಯರು ದಿಕ್ಕಿಲ್ಲದವನೆಂದು ತನ್ನ ಕಾಲೊತ್ತಿಸಿಕೊಳ್ಳುವುದು, ಮನೆಯ ಕೆಲಸಗಳನ್ನು ಮಾಡಿಸುವುದು, ವೇಷ ಸರಿಯಾಗಿ ಮಾಡಲು ತಿಳಿಯುವುದಿಲ್ಲವೆಂದು 'ಕುಟ್ಟಿ' ಹೊಡೆಯುವುದು ಇದ್ದಿತಂತೆ. ಒಮ್ಮೆ ಸಹಿಸಲಾರದೆ ಆತನು ಮೂರ್ಛೆ ಹೋದುದೂ ಉಂಟಂತೆ. 'ನೀನು ಕೀಳು ಜಾತಿಯವ, ನಿನ್ನ ನಾಲಗೆಗೆ ಅರ್ಥ ಹೇಳಲು ತಿಳಿಯಲಿಕ್ಕಿಲ್ಲ. ನಿನ್ನ ಕಾಲಿಗೆ ನಾಟ್ಯಕಲೆ ಒಗ್ಗದು ಫರ್ದೇಶಿ' ಎಂದು ಬೈದಿದ್ದರಂತೆ" (ಜಿ. ಶಂಕರಭಟ್ಟ; ಕನ್ನಡಿಯಲ್ಲಿ ಕರನಾಡು: ೧೯೫೪; ಪುಟ ೩೬).

ಕತೆ ತನ್ನ ಬಂಡಾಯದ ಧೋರಣೆಯನ್ನು ಕ್ರಿಯಾತ್ಮಕವಾಗಿಸಿಕೊಂಡೇ ಕಲಾತ್ಮಕವಾಗುತ್ತದೆ. ಯಕ್ಷಗಾನ ಕಲೆಯ ಶ್ರೇಷ್ಠತೆ, ಕಲಾವಿದರ ಬಾಳೇ ಅದರೊಳಗೆ ಐಕ್ಯವಾಗುವ ರೀತಿ ಇವುಗಳನ್ನು ಒಪ್ಪುತ್ತಲೇ ಕಲೆಯ ಜೊತೆಗಿರುವ ಪಾಳೆಯಗಾರಿಕೆ ಪ್ರವೃತ್ತಿ, ಜಾತಿಯತೆಯನ್ನು ಕತೆ ದಿಟ್ಟತನದಿಂದ ಹೇಳುತ್ತದೆ. ಜೊತೆಗೆ ಇದು ಯಕ್ಷಗಾನ ರಂಗದಲ್ಲಿರುವ ವಿಷಮತೆ ಮಾತ್ರವಾಗದೆ, ಮಾನವನ ಸ್ವಭಾವದ ಸೂಚನೆಯಾಗಿಯೂ ಕಂಡುಬರುತ್ತದೆ.

ಕೈಂತಜೆ ಗೋವಿಂದ ಭಟ್ ಅವರು ಬರೆದ 'ಕಾಳಿಗೆ ಕಾಣಿಕೆ' ಕತೆಯ ನಂಜ ಒಬ್ಬ ಕೂಲಿಕಾರ್ಮಿಕ. ಬಡವನಾದ ನಂಜ ರಾಜತ್ವದ ವಿರುದ್ಧ ಪ್ರತಿಭಟನೆಯನ್ನು ಮಾಡಿದವ. ವಿಕ್ರಮಸಿಂಹ ಮಹಾರಾಜರು ಕಾಳಿಕಾ ದೇವಾಲಯವನ್ನು ಪ್ರಜೆಗಳ ಸಹಾಯದಿಂದ ಕಟ್ಟಿಸಲು ಆಜ್ಞೆ ಮಾಡುತ್ತಾರೆ. ಅಂತೆಯೇ ಪ್ರತಿ ಮನೆಯಿಂದಲೂ ಒಬ್ಬೊಬ್ಬ ಪ್ರಜೆ ದೇವಾಲಯವನ್ನು ನಿರ್ಮಿಸಲು ತೆರಳುತ್ತಾರೆ. ಬಡವನಾದ ನಂಜ ದೇವಾಲಯದ ಕೆಲಸ ಪೂರೈಸಿ ಬರುವಾಗ ಅವನ ಮಗಳ ದುರ್ಮರಣವಾಗುತ್ತದೆ. ದೇವಾಲಯದ ಪ್ರಾರಂಭೋತ್ಸವದಂದು ನಂಜನು ತನ್ನ ಮಗಳ ಮೃತ ದೇಹವನ್ನೇ ಕಾಳಿಗೆ ಕಾಣಿಕೆಯಾಗಿ ನೀಡುತ್ತಾನೆ. ಕತೆಯ ಶಕ್ತಿ ಇರುವುದು ನಂಜನ ಬಡತನ ಮತ್ತು ಪ್ರಭುತ್ವವನ್ನು ಪ್ರತಿಭಟಿಸುವ ನೆಲೆಯಲ್ಲಿ. ಈ ಕತೆಯಲ್ಲಿ ರಾಜಕೀಯದಲ್ಲಿ ಶೋಷಣೆ ಮಾಡುವವರ ವಿರುದ್ಧದ ಪ್ರತಿಭಟನೆಯ ಧ್ವನಿ ಕೇಳುತ್ತದೆ.

ಹವ್ಯಕ ಬರಹಗಾರರು ಹವ್ಯಕ ಸಮುದಾಯದಲ್ಲಿ ಕಂಡು ಬರುವ ಗೊಡ್ಡು ಸಂಪ್ರದಾಯ, ಆಚರಣೆಗಳ ವಿರುದ್ಧ ತಮ್ಮ ಕತೆಗಳ ಮೂಲಕ ಪ್ರತಿಭಟನೆಯ ಧ್ವನಿಯನ್ನು

ವ್ಯಕ್ತಪಡಿಸಿದ್ದಾರೆ. ಶ್ರೀಕೃಷ್ಣ ಚೊಕ್ಕಾಡಿಯವರ 'ಶ್ರಾದ್ಧ' , ಜಿ.ಶಂಕರ ಭಟ್ಟರ 'ಊರ್ಧ್ವ' ಕತೆಗಳಲ್ಲಿ ಶ್ರಾದ್ಧದ ಆಚರಣೆಯ ವಿರುದ್ಧ ಪ್ರತಿಭಟನೆಯ ಕಾವು ಕಂಡುಬರುತ್ತದೆ. ಚೊಕ್ಕಾಡಿಯವರ 'ಶ್ರಾದ್ಧ' ಕತೆಯಲ್ಲಿ ಕಥಾನಾಯಕ ಕೃಷ್ಣ ತನ್ನ ಓಡಿಹೋದ ಅಣ್ಣನ ಶ್ರಾದ್ಧ ನಡೆಸುವ ಸಂದರ್ಭದಲ್ಲಿ ಮಾನಸಿಕವಾಗಿ ಪ್ರತಿಭಟಿಸುವ ಸನ್ನಿವೇಶದ ಚಿತ್ರಣವಿದೆ. ಕೃಷ್ಣನ ಅಣ್ಣ ವಿದ್ಯೆ ಕಲಿಯುವ ಆಸೆಯಿಂದ ಮನೆಯಿಂದ ಓಡಿಹೋಗಿ, ಹನ್ನೆರಡು ವರ್ಷ ಹಿಂದಿರುಗದಿದ್ದಾಗ ಪುರೋಹಿತರ ಸಲಹೆಯಂತೆ ಕೃಷ್ಣನು ಅಣ್ಣನ ಶ್ರಾದ್ಧವನ್ನು ನೆರವೇರಿಸುತ್ತಾನೆ. ಆ ಸಂದರ್ಭದಲ್ಲಿ ನಿರೂಪಕರು ಯೋಚಿಸುವ ರೀತಿ: "ಹಾಗೆ ಮಾಡುತ್ತಿದ್ದಂತೆಯೇ ನನಗೆ ಬೇರೆ ಯೋಚನೆಯೊಂದು ಬಂತು. ಅದೆಂದರೆ ಶ್ರಾದ್ಧದಲ್ಲಿ ಪಿಂಡ ಹಾಕುವುದು ಮುಖ್ಯವೋ ಬ್ರಾಹ್ಮಣ ಭೋಜನವೋ ಎಂಬುದು. ಬ್ರಾಹ್ಮಣ ಭೋಜನವೇ ಮುಖ್ಯವೆಂದಾದರೆ ಈ ಮಂತ್ರತಂತ್ರಗಳ ನಾಟಕ ಯಾಕೆ? ಪಿಂಡ ಪ್ರಧಾನವೇ ಅಗತ್ಯವೆಂದಾದರೆ ಈ ಒಡೆ ಪಾಯಸಗಳ ಔತಣ ಯಾಕೆ ಬೇಕು? ಈ ಭಟ್ಟರುಗಳಿಗೆ ಒಂದೇ ಹಾಗೇ ಊಟ ಹಾಕಿ ಕೊಬ್ಬಿಸುವ ಬದಲು, ನಾಲ್ಕಾರು ಅನ್ನದ ಮುದ್ದೆಗಳನ್ನು ದರ್ಭೆಯ ಮೇಲಿಟ್ಟು ಎಳ್ಳು ನೀರೆರೆದು ಹಳ್ಳಕ್ಕೆ ಹಾಕಬಹುದಲ್ಲ–ಈ ಭಟ್ಟರುಗಳೇ ದೇವರೆಂದು ಅವರಿಗೆ ಪೂಜೆ ಮಾಡುವುದಾದರೂ ತಪ್ಪುತ್ತಿತ್ತು ಎನ್ನಿಸಿತು." (ಶ್ರೀಕೃಷ್ಣ ಚೊಕ್ಕಾಡಿ; ನಿರೀಕ್ಷೆ; ೧೯೭೬, ಪುಟ ೮೨). ನಿರೂಪಕರ ಮನಸಿನಲ್ಲಿ ಮೂಡಿಬಂದ ಯೋಚನೆಯಲ್ಲಿ, ಧಾರ್ಮಿಕ ಆಚರಣೆಯ ವಿರುದ್ಧದ ಬಂಡಾಯದ ಧ್ವನಿ ಕಂಡು ಬರುತ್ತದೆ.

ಜಿ. ಶಂಕರಭಟ್ಟರು ಬರೆದ 'ಊರ್ಧ್ವ' ಒಬ್ಬ ಕೃಷಿಕ ಸದ್ಗೃಹಸ್ಥನ ಕೊನೆಯ ದಿನಗಳ ಕತೆ. ಜೀವನವನ್ನು ಚೆನ್ನಾದ ದುಡಿತದಿಂದ ಸಫಲಗೊಳಿಸಿ, ಇಬ್ಬರು ಯೋಗ್ಯ ಪುತ್ರರನ್ನು ಪಡೆದು, ಅವರಿಗೆ ಸರಿಯಾದ ವಿದ್ಯಾಭ್ಯಾಸ ನೀಡಿದ ಒಬ್ಬ ಗೃಹಸ್ಥನು, ಆಕಸ್ಮಾತ್ ಅನಾರೋಗ್ಯದಿಂದ ಬವಣೆಪಟ್ಟು ಮರಣ ಹೊಂದಿದ ಕತೆ. ಹಿರಿಯ ಮಗ ಕೇಶವ, ಸತ್ತ ಮೇಲೆ ಮಾಡುವ ಶ್ರಾದ್ಧದ ಕುರಿತು ದಿನಕಳೆದಂತೆ ವಿಶ್ವಾಸ ಕಳೆದುಕೊಂಡು ಆ ವೆಚ್ಚವನ್ನು ಅನಾಥಶ್ರಮಕ್ಕೆ ಕೊಡುವುದು, ತಮ್ಮ ಶ್ರೀಹರಿಗೂ ಅದೇ ಉಪದೇಶ ಮಾಡುವುದರಲ್ಲಿ ಪ್ರಗತಿಪರ ಮನೋಧರ್ಮ ವ್ಯಕ್ತವಾಗುತ್ತದೆ. ಬದುಕಿರುವಾಗ ನಾವು ಮಾಡತಕ್ಕ ಕರ್ತವ್ಯವೇ ಹಿರಿದಲ್ಲದೆ ಸತ್ತಮೇಲೆ ಮಾಡುವ ಕ್ರಿಯಾದಿಗಳಲ್ಲವೆಂಬ ಜೀವಿತ ಧರ್ಮವನ್ನು ಈ ಕತೆ ತಿಳಿಸುತ್ತದೆ. ತಂದೆ ಗತಿಸಿ ವರ್ಷವಾಗುತ್ತಿದ್ದಂತೆ ಶ್ರೀಹರಿ ಶ್ರಾದ್ಧದ

ಕುರಿತು ವಿಚಾರಿಸಿ ಬರೆದ ಕಾಗದಕ್ಕೆ ಉತ್ತರವಾಗಿ ಕೇಶವ ಬರೆದ ಪತ್ರದಲ್ಲಿ ಧಾರ್ಮಿಕ ಆಚರಣೆಗಿಂತ ಬದುಕಿರುವಾಗ ನಾವು ಮಾಡತಕ್ಕ ಕರ್ತವ್ಯವೇ ಹಿರಿದು ಎಂಬ ಆಂಶವನ್ನು ತಿಳಿಸುತ್ತಾನೆ: " ನೀನು ಹೋದ ಬಳಿಕ ತಿಂಗಳು ತಿಂಗಳು ಶ್ರಾದ್ಧಗಳನ್ನು ಮಾಡುತ್ತ ಬಂದೆ. ಆದರೆ ಮಾಸಗಳು ಸರಿದಂತೆ ಶ್ರದ್ಧೆ ಉಳಿದಂತೆ ಕಾಣಲಿಲ್ಲ. ಅವರು ಬದುಕಿರುವಾಗ ಮಾಡಿದ ಸೇವೆಗಿಂತ ಹೆಚ್ಚಿನ ಔಚಿತ್ಯ ಇದರಲ್ಲಿ ತೋರಿಲ್ಲ. ಮೊನ್ನೆ ತಾನೇ ವರ್ಷಾಂತ್ಯದ ಕಾರ್ಯಕ್ರಮಕ್ಕೆ ಬೇಕಾಗಬಹುದಾದ ತನ್ನ ಪಾಲಿನ ಹಣವನ್ನು ಅನಾಥಾಶ್ರಮಕ್ಕೆ ಹೋಗಿ ಕೊಟ್ಟು ಬಂದೆ. ನೀನು ನಿನ್ನ ಮನಸ್ಸಿಗೆ ತೃಪ್ತಿ ತರುವಂತೆ ಬೆಂಗಳೂರಲ್ಲಿಯೋ, ಎಲ್ಲಿಯಾದರೂ ಪುಣ್ಯಕ್ಷೇತ್ರದಲ್ಲಿಯೋ ವರ್ಷಾಂತ್ಯದ ಕಾರ್ಯಕ್ರಮವನ್ನು ಯೋಗ್ಯ ರೀತಿಯಲ್ಲಿ ನೆರವೇರಿಸಿಕೊಂಡು ಬಾ". (ಜಿ. ಶಂಕರಭಟ್ಟ; ಸಂಚಯ; ೧೯೮೭; ಪುಟ ೭೪). ಹೀಗೆ ಧಾರ್ಮಿಕ ಆಚರಣೆಯಾದ 'ಶ್ರಾದ್ಧ'ದ ಮಹತ್ತ್ವವನ್ನು ವಸ್ತುನಿಷ್ಠ ನೆಲೆಯಲ್ಲಿ ದಾಖಲಿಸುವುದರೊಂದಿಗೆ ವ್ಯವಸ್ಥೆಯ ವಿರುದ್ಧ ಸೌಮ್ಯವಾದ ಪ್ರತಿಭಟನೆಯನ್ನು ತೋರಿದ್ದಾರೆ.

ಕುಮಾರ ಜೋಶಿಯವರ 'ಉತ್ಸವ' ಕತೆಯು ನಿರೂಪಕನು ಗೊಡ್ಡು ಸಂಪ್ರಾದಯದ ವಿರುದ್ಧ ಬಂಡಾಯ ಏಳುವ ಚಿತ್ರಣವನ್ನು ನೀಡುತ್ತದೆ. ದೇವರ ಉತ್ಸವದಲ್ಲಿ ಭಾಗವಹಿಸಬೇಕಾದ ಸಂದರ್ಭದಲ್ಲಿ ನಿರೂಪಕ ಅದನ್ನು ವಿರೋಧಿಸುತ್ತಾನೆ ತನ್ನ ಮನೆಯಲ್ಲಿ ನಡೆದ ಎಲ್ಲ ಅವಘಡಗಳನ್ನು ಯಾಕೆ ದೇವರು ತಪ್ಪಿಸಲಿಲ್ಲ ಎಂಬ ವಾದ ಅವನದು. ಆದರೆ ಅವನ ವಾದವನ್ನು ಲೆಕ್ಕಿಸದ ಅವನ ಅಜ್ಜ ಅಸೌಖ್ಯವಿದ್ದರೂ ಉತ್ಸವಕ್ಕೆ ಹೊರಟಾಗ ನಿರೂಪಕ ಅನಿವಾರ್ಯವಾಗಿ ಸಂಪ್ರದಾಯವನ್ನು ಒಪ್ಪಿಕೊಳ್ಳುತ್ತಾನೆ. "ದೇವರು ಬಂದು 'ನನಗೆ ಹೀಗೆಲ್ಲ ಮಾಡಿ' ಅಂತ ಇವರ ಬಳಿ ಹೇಳಿ ಹೋಗಿದ್ದಾನಾ? ಎಲ್ಲ ತಮ್ಮಷ್ಟಕ್ಕೆ ತಮಗೆ ಬೇಕಾದಂತೆ ಇವರೇ ಸೃಷ್ಟಿಸಿಕೊಂಡಿದ್ದು. ಒಳಗೊಂದು ಹೊರಗೊಂದು ಇಟ್ಟುಕೊಂಡು ದಿನವೂ ದೇವರಿಗೆ ಕೈ ಮುಗಿಯುವುದು, ಅಭಿಷೇಕಕ್ಕೆ, ಕುಂಕುಮಾರ್ಚನೆಗೆ, ಅದಕ್ಕೆ, ಇದಕ್ಕೆ ಅಂತ ಭಾವನೆಗಳಿಗೆ ಆಳಾದವರನ್ನು ನಂಬಿಕೆಯ ಬೋನಿನೊಳಕ್ಕೆ ಎಳೆದು ಸರಿಯಾಗಿ ಸುಲಿಯುವುದು ನೈವೇದ್ಯಕ್ಕಿಟ್ಟಿದ್ದರಲ್ಲಿ ಸ್ವಲ್ಪವೇ ಸ್ವಲ್ಪ ಭಾಗವನ್ನು ದೇವರು ತಿನ್ನುತ್ತಿದ್ದುದಾದರೆ ಖಂಡಿತ ಯಾರೂ ನೈವೇದ್ಯ ಮಾಡುತ್ತಿರಲಿಲ್ಲ!" (ಕುಮಾರ ಜೋಶಿ; ಸಿಸ್ಟಿರ್ ಮಿರಾಂಡಾಳ ಕಪ್ಪು ರವಿವಾರ; ೧೯೯೧; ಪುಟ ೨೫).

"ನಾವು ಭಾರತದ ಕೆಲವು ಕೋಟಿ ಜನರಷ್ಟೆ ತಾನೆ ಸತ್ತವರ ಆತ್ಮಕ್ಕೆ ಮುಕ್ತಿ ಸಿಗಲೆಂದು ಅಪರಕಾರ್ಯ ನಡೆಸಿ ಪಿಂಡ ಹಾಕುವುದು? ಆದರೆ ಜಗತ್ತಿನ ಉಳಿದ ದೇಶಗಳಲ್ಲಿ ಜನಗಳು ಸತ್ತಾಗ ಪಿಂಡ ಹಾಕುವುದಿಲ್ಲವಲ್ಲ? ಅಂದಾಗ ಜಗತ್ತಿನ ತುಂಬ ಎಲ್ಲೆಲ್ಲೊ ಮೋಕ್ಷ ಹೊಂದಿದ ಪ್ರೇತಾತ್ಮಗಳು ತುಂಬಿಹೋಗಬೇಕಾಗಿತ್ತು! ಯಾಕೆ ಹಾಗಾಗುತ್ತಿಲ್ಲ?" (ಕುಮಾರ ಜೋಶಿ; ಸಿಸ್ಟಿರ್ ಮಿರಾಂಡಾಳ ಕಪ್ಪು ರವಿವಾರ; ೧೯೯೧; ಪುಟ ೨೭,೨೮). ನಿರೂಪಕರು ಹೇಳುವ ಮೇಲಿನ ಮಾತುಗಳಲ್ಲಿ ಸಂಪ್ರದಾಯ ಆಚರಣೆಗಳನ್ನು ಆಧುನಿಕ ದೃಷ್ಟಿಕೋನದಿಂದ ಪ್ರತಿಭಟಿಸುವ ಅಂಶವಿದೆ. ವ್ಯವಸ್ಥೆಯಲ್ಲಿರುವ ಲೋಪದೋಷಗಳನ್ನು ಪ್ರತಿಭಟಿಸಿದರೂ ಕೊನೆಗೆ ಕಥಾನಾಯಕ ಸಂಪ್ರದಾಯಕ್ಕೆ ಶರಣಾಗುವ ಅನಿವಾರ್ಯತೆಯನ್ನು ಲೇಖಕರು ಚಿತ್ರಿಸಿದ್ದಾರೆ.

"ಗೊಡ್ಡು ಸಂಪ್ರದಾಯದ ವಿರುದ್ಧ ಬಂಡೇಳುವ ಈ ಕಥೆ ಸಾಮಾನ್ಯ ಬಂಡಾಯದ ಕಥೆಯಿಂದ ಭಿನ್ನವಾಗುವುದು ಅದರ ಕೊನೆಯಿಂದಾಗಿ! ತಾನು ಒಪ್ಪದ ಸಂಪ್ರದಾಯದ ಬಗ್ಗೆ ತನ್ನ ಅಜ್ಜನಿಗಿರುವ ಪ್ರಚಂಡ ಶ್ರದ್ಧೆ ನೋಟ, ಇಲ್ಲಿಯ ಬಿಸಿರಕ್ತದ ತರುಣನಾಯಕ ವ್ಯಕ್ತಪಡಿಸುವ ಆದರ ತುಂಬಿದ ಬೆರಗು ಮೆಚ್ಚಿಕೊಳ್ಳುವಂತಹದಾಗಿದೆ. ಇಂದಿನ ಸಮಾಜದಲ್ಲಿ 'ಸಿಟ್ಟು' ಒಂದೇ ನಮ್ಮ ಸಾಹಿತ್ಯವನ್ನು ರೂಪಿಸುವ ಶಕ್ತಿಯಾಗಬೇಕು ಎಂಬಂಥ ಸೈದ್ಧಾಂತಿಕ 'ಆದೇಶ' ಕುಮಾರನನ್ನು ತಟ್ಟಿಲ್ಲ ಎನ್ನುವುದು ಅತ್ಯಂತ ಆರೋಗ್ಯಕರ ಸಂಗತಿಯಾಗಿದೆ." (ಕುಮಾರಜೋಶಿ; ಸಿಸ್ಟಿರ್ ಮಿರಾಂಡಾಳ ಕಪ್ಪು ರವಿವಾರ, ಮುನ್ನುಡಿ; ೧೯೯೧; ಪುಟ ೬).ಎಂಬುದಾಗಿ ಯಶವಂತ ಚಿತ್ತಾಲರು ಅಭಿಪ್ರಾಯಪಟ್ಟಿದ್ದಾರೆ.

ಶೇಷಗಿರಿ ಮಾ.ರಾ. ಅವರು ಬರೆದ 'ಬ್ರಾಹ್ಮಣ' ಬ್ರಾಹ್ಮಣ್ಯವನ್ನು ಆಚರಿಸುತ್ತಿರುವ ಕಥಾನಾಯಕನನ್ನು ವಿಡಂಬಿಸುವ ಕಥೆಯಾಗಿದೆ. ಇಲ್ಲಿ ಮೌಢ್ಯದ ವಿಡಂಬನೆಯಿದೆ. ಬ್ರಾಹ್ಮಣನಾಗಿ ಹುಟ್ಟಿದ ಕಥಾನಾಯಕ ಧಾರ್ಮಿಕ ವಿಧಿಗಳನ್ನು ಶ್ರದ್ಧೆಯಿಂದ ಮಾಡುವ ಬದಲು ಅತ್ಯಾಚಾರ, ಅನಾಚಾರಗಳಲ್ಲಿ ತೊಡಗುತ್ತಾನೆ. ಬ್ರಾಹ್ಮಣನ ದಿನಚರಿಯಲ್ಲಿ 'ರಾಧಾಸಾನಿ.........ಬಿರಿಯಾನಿ!' ಮಟ್ಟದ ವಿಚಾರಗಳು ಕಂಡುಬರುತ್ತವೆ. ಚೌಡನ ಮಗಳಿಗೆ ಅಸೌಖ್ಯವಾದಾಗ ಕಥಾನಾಯಕ ಬ್ರಾಹ್ಮಣ ಮಂತ್ರ ಹೇಳಿ ತಾಯಿತವನ್ನು ತಯಾರು ಮಾಡುವ ಬದಲು, ಧ್ಯಾನಾಸಕ್ತನಂತೆ ಕುಳಿತ ಸಂದರ್ಭದಲ್ಲಿ ಅವನ ಮನಸ್ಸಿನ

ವಿಚಾರಧಾರೆಯನ್ನು ಕತೆಗಾರರು ವಿವರಿಸಿದ್ದಾರೆ: "ಕಳೆದ ಬಾರಿ ಸಂತೆಗೆ ಹೋದಾಗ ಪೇಟೆಯ ಅಂಚಿನ ಓಣಿಯಲ್ಲಿನ ಮಿಲಿಟರಿ ಹೋಟೆಲಿನಲ್ಲಿ, ಮುತ್ತಿಕೊಂಡ ನೊಣದ ಗುಂಪನ್ನು ಝೂಡಿಸುತ್ತಾ ಕಂಠಪೂರ್ತಿ ಬಿರಿಯಾನಿ ಮುಕ್ಕಿದ್ದನ್ನು ಜ್ಞಾಪಿಸಿಕೊಂಡ. ಬೆಳಗಿನ ಜಾವ ಕದ್ದು ಆರಿಸಿದ ಅಡಿಕೆಗೆ ಎಷ್ಟು ದುಡ್ಡು ಬಂದೀತು ಎಂದು ತಲೆ ಕೆಡಿಸಿಕೊಂಡ. ಕತ್ತನ್ನು ಅತ್ತಿತ್ತ ಸರ್ರನೆ ಹೊರಳಿಸಿ ನಟಿಗೆ ತೆಗೆದ. ಮೊನ್ನೆ ತನಗೆ ಬೇಕಾದ ಒಂದೇ ಒಂದು ಎಲೆಯನ್ನು ಬಿಟ್ಟದ್ದರೆ ಅದೆಷ್ಟೋ ನೋಟುಗಳನ್ನು ಎಳೆದುಕೊಳ್ಳಬಹುದಿತ್ತು ಎಂದುಕೊಂಡು ದುರ್ದೈವಕ್ಕೆ ಬೈದ. ರಾಧಾಸಾನಿಯ ಮನೆಯ ಒಳಕೋಣೆಯ ಕತ್ತಲನ್ನು ಊಳಿಗದ ಚೆನ್ನಿಯ ತೊಗಲಿನ ಬಣ್ಣಕ್ಕೆ  ಹೋಲಿಸಲು ಪ್ರಯತ್ನಪಟ್ಟ. ನೆನಪನ್ನು ಕೊಡವಿ ಕಣ್ತೆರೆದ. ಮಿಕಿ ಮಿಕಿ ನೋಡುತ್ತಾ ಎದುರು ಕುಳಿತಿರುವ ಚೌಡನನ್ನು ಕಂಡಾಗ ಕವಡೆಯನ್ನು ನೆಲಕ್ಕೆ ಉರುಳಿಸಿದ" (ಶೇಷಗಿರಿ.ಮಾ.ರಾ.; ನಡೆದದ್ದು ನಡೆಯಲಾರದ್ದು; ೧೯೬೭; ಪುಟ ೭೮). ಪೌರೋಹಿತ್ಯವನ್ನು ತೋರಿಕೆಗೆ ಆಚರಿಸಿ, ಅನಾಚಾರದಲ್ಲಿ ತೊಡಗಿರುವ ಕಥಾನಾಯಕನ ವರ್ತನೆಯನ್ನು ಕತೆಗಾರರು ಇಲ್ಲಿ ವ್ಯಂಗ್ಯವಾಗಿ ಟೀಕಿಸಿದ್ದಾರೆ. ಬ್ರಾಹ್ಮಣನಾಗಿ ಹುಟ್ಟಿ ಬ್ರಾಹ್ಮಣ್ಯವನ್ನು ಆಚರಿಸದ ಬ್ರಾಹ್ಮಣರ ವಿರುದ್ಧ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿದ್ದಾರೆ.

ಕುಮಾರ ಜೋಶಿಯವರು ಬರೆದ 'ಹೊಲಿಗೆಗಿಂತ ಹರಕು ಮೊದಲು' ಕತೆಯಲ್ಲಿ ನಿರೂಪಕ ಸಂಪ್ರದಾಯದ ವಿರುದ್ಧ ಬಂಡೇಳುವ ಧ್ವನಿ ಕಂಡುಬರುತ್ತದೆ. ಪೌರೋಹಿತ್ಯ ನಡೆಸುತ್ತಿರುವ ನಿರೂಪಕನ ಅಜ್ಜ, ಕೆಳಜಾತಿಯವನಾದ ಆನಂದ ದೇವಸ್ಥಾನದ ಒಳಗೆ ಬಂದಾಗ ವಿರೋಧಿಸುವರು. ಆದರೆ ನಿರೂಪಕನಿಗೆ ಆನಂದ ಸ್ನೇಹಿತನಾಗಿ ಕಂಡು ಬರುತ್ತಾನೆಯೇ ಹೊರತು ಅವನಿಗೆ ಜಾತಿ ಮುಖ್ಯವೆನಿಸುವುದಿಲ್ಲ. ಹೀಗೆ ಅಜ್ಜನಿಗೆ ಮತ್ತು ನಿರೂಪನಿಕಗೆ ಮಡಿವಂತಿಕೆ ಮತ್ತು ಸಂಪ್ರದಾಯದ  ವಿಚಾರದಲ್ಲಿ ಭಿನ್ನಾಭಿಪ್ರಾಯಗಳು– ಉಂಟಾದಾಗ ಆಧುನಿಕ ದೃಷ್ಟಿಕೋನ ಹೊಂದಿದ ನಿರೂಪಕ ಅಜ್ಜನನ್ನು ಟೀಕಿಸುತ್ತಾನೆ. "ಇಲ್ಲಿರುವುದು ದೇವರಲ್ಲ – ಬರೇಕಲ್ಲು. ಇಲ್ಲಿ ನಡೆಯುವುದು ಭಕ್ತಿಯ ಉಪಾಸನೆ ಅಲ್ಲ ಢೋಂಗಿ ನಾಟಕ. ವಿಗ್ರಹ ಅಲುಗಾಡುವುದು ಯಾರಿಗೆ ಗೊತ್ತಿದೆ? ಅಷ್ಟಬಂಧ ಹಾಕಿ ಎಷ್ಟು ವರ್ಷವಾಯಿತು? ಮೊಕ್ತೇಸರರು ಯಾಕೆ ಅಷ್ಟಬಂಧ ಮಾಡಿಸುವುದಿಲ್ಲ? ಹುಂಡಿಯ ಹಣವೆಲ್ಲ ಎಲ್ಲಿಗೆ ಹೋಗುತ್ತದೆ? ದೇವರ ವಿಗ್ರಹದ ಮೇಲೆ ಯಾವಾಗಲೂ

ಜಿರಲೆ, ಇರುವೆ ಹರಿದಾಡುತ್ತಿರುವಾಗ, ಅಲ್ಲಿ ಭಕ್ತಿ ಉತ್ಪನ್ನವಾಗುವುದಾದರೂ ಹೇಗೆ? ನೀವೆಲ್ಲ ಬಹಳ ಹಿಂದೆ ಇದ್ದೀರಿ. ನಿಮ್ಮ ಮೂವತ್ತುಮೂರು ಕೋಟಿ ದೇವರುಗಳಲ್ಲಿ ಒಬ್ಬನಾದ ಚಂದ್ರನ ಮೇಲೆ ಅಮೆರಿಕಾದವರು ತಿರುಗಾಡಿ ಬಂದರೂ ನೀವಿನ್ನೂ ರಾಹು-ಕೇತು ಗ್ರಹಣಗಳಲ್ಲೇ ಇದ್ದೀರಿ. ಅದೇ ಹಳೆಯ ಬಾವಿಯಲ್ಲಿ ಮುಳುಗಿಕೊಂಡು ಇದೇ ಜಗತ್ತು ಅಂದುಕೊಂಡಿದ್ದೀರಿ. ಆದರೆ ಜಗತ್ತು ಎಷ್ಟು ಮುಂದೆ ಹೋಗಿದೆ ಎಂಬುದೇ ಗೊತ್ತಿಲ್ಲ. ಹೊಲೆಯರೂ ಮನುಷ್ಯರೇ ಅಲ್ಲವೇ? ಅಲ್ಲದಿದ್ದರೆ ಅವ ದೇವರಾಗಲಿಕ್ಕೆ ಅಯೋಗ್ಯ. ಸ್ನಾನ ಮಾಡಿ ಒಳ್ಳೆ ಬಟ್ಟೆ ಹಾಕಿಕೊಂಡು ಒಬ್ಬ ಹೊಲೆಯ ಯಾಕೆ ಒಳಗೆ ಬರಬಾರದು ? ಕೇವಲ ಜಾತಿಯಿಂದ, ವೃತ್ತಿಯಿಂದಷ್ಟೆ ಹೊಲೆಯರಾಗುವುದಿಲ್ಲ ಯಾರೂ ವ್ಯಕ್ತಿ. ತನ್ನ ಹೊಲಸು ಹೃದಯದಿಂದ ಹೊಲೆಯನಾಗುತ್ತಾನೆ." (ಕುಮಾರಜೋಶಿ; ಸಿಸ್ಟರ್ ಮಿರಾಂಡಾಳ ಕಪ್ಪು ರವಿವಾರ; ೧೯೯೧; ಪುಟ ೩೪) ಎಂಬ ನಿರೂಪಕನ ಮಾತಿನಲ್ಲಿ ಧಾರ್ಮಿಕ ಆಚರಣೆಯ ವಿರುದ್ಧ ಪ್ರತಿಭಟನೆಯ ಧ್ವನಿ ಕಂಡುಬರುತ್ತದೆ. ಇಲ್ಲಿ ಆಧುನಿಕ ವಿಜ್ಞಾನದ ಸಂಶೋಧನೆಯನ್ನು ಲೇಖಕರು ಪ್ರತಿಭಟಿಸಲು ಬಳಸಿರುವುದು ಗಮನಾರ್ಹ. ಆಧುನಿಕ ಕಾಲದಲ್ಲೂ ದಲಿತ ಜನಾಂಗದವರು ದೇವಾಲಯ ಪ್ರವೇಶಿಸಿದಾಗ ಅದನ್ನು ವಿರೋಧಿಸಿದ ಅಜ್ಜನ ನಿಲುವಿನಲ್ಲಿ ಜಾತೀಯತೆ ಜೀವಂತವಾಗಿರುವ ಚಿತ್ರಣವನ್ನು ಕಾಣುತ್ತೇವೆ. ಹೀಗೆ ವ್ಯಂಗ್ಯ ವಿಡಂಬನೆ, ಪ್ರತಿಭಟನೆಯ ಮೂಲಕ ಕುಮಾರಜೋಶಿಯವರು ತಮ್ಮ ಕತೆಗಳಲ್ಲಿ ಸುಧಾರಣಾವಾದಿ ನಿಲುವನ್ನು ವ್ಯಕ್ತಪಡಿಸಿದ್ದಾರೆ.

ಒಟ್ಟಿನಲ್ಲಿ ಹವ್ಯಕ ಕತೆಗಾರರು ವ್ಯವಸ್ಥೆಯ ವಿರುದ್ಧ ಏಳುವ ಬಂಡಾಯದ ಸ್ವರೂಪದಲ್ಲಿ ಕೆಲವೊಮ್ಮೆ ಆಕ್ರೋಶ ಕಂಡುಬರುತ್ತದೆ. ಮತ್ತೆ ಕೆಲವೊಮ್ಮೆ ಅದರ ಬದಲಿಗೆ ಸಾತ್ವಿಕ ವಿಡಂಬನೆಯಿದೆ. ಆಧುನಿಕ ಜಗತ್ತಿಗೆ ಅಪ್ರಸ್ತುತವಾಗುತ್ತಿರುವ ಬ್ರಾಹ್ಮಣ್ಯದ ವಿರುದ್ಧ ಬ್ರಾಹ್ಮಣರೇ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿರುವುದು ಗಮನಿಸಬೇಕಾದ ಅಂಶ. ಸಾವಿರಾರು ವರ್ಷಗಳಿಂದ ನಡೆದುಕೊಂಡು ಬಂದ ಒಂದು ವ್ಯವಸ್ಥೆಯ ಒಳಗೆ ಪ್ರತಿಭಟನೆಯ ಕಿಚ್ಚು ರೂಪುಗೊಳ್ಳುತ್ತಿರುವುದು ಇಲ್ಲಿನ ಕತೆಗಳಲ್ಲಿ ಸ್ಪಷ್ಟವಾಗಿ ವ್ಯಕ್ತವಾಗಿದೆ.

# ಅಧ್ಯಾಯ – ೧೦

## ಹವ್ಯಕ ಮಹಿಳಾ ಕತೆಗಾರರ ಕಥೆಗಳಲ್ಲಿ ಸ್ತ್ರೀ ಸಂವೇದನೆ

ಭಾರತೀಯರಿಗೆ ಇಂಗ್ಲಿಷ್ ಶಿಕ್ಷಣವನ್ನು ನೀಡುವುದರ ಹಿಂದೆ ಪಾಶ್ಚಾತ್ಯರಿಗೆ ನಿರ್ದಿಷ್ಟ ಉದ್ದೇಶಗಳಿದ್ದವು. ಭಾರತೀಯ ಸಂಸ್ಕೃತಿಯ ಧಾರ್ಮಿಕ ಮತ್ತು ಸಾಂಸ್ಕೃತಿಕ ಆಕ್ರಮಣ, ಆಡಳಿತಾತ್ಮಕವಾಗಿ ಕೆಳಹಂತದ ನೌಕರ ವರ್ಗದ ನಿರ್ಮಾಣ ಇದರಿಂದ ಸಾಧ್ಯವಾಯಿತು. ಹೀಗಾಗಿ ಇಂಗ್ಲಿಷ್ ಶಿಕ್ಷಣಕ್ಕೆ ಸಂಬಂಧಿಸಿ ಮೆಕಾಲೆ ನೀಡಿದ ಸಲಹೆಗಳನ್ನು ಅಂಗೀಕರಿಸಿದ ಅನಂತರ ಕ್ರೈಸ್ತ ಮಿಶನರಿಗಳಿಂದ ಶಿಕ್ಷಣ ಸಂಸ್ಥೆಗಳು ಆರಂಭಗೊಂಡವು. ಇದರ ಮುಂದುವರಿಕೆಯಾಗಿ ೧೮೫೭ರಲ್ಲಿ ಮದ್ರಾಸು, ಕಲ್ಕತ್ತ ಮತ್ತು ಮುಂಬಯಿ ವಿಶ್ವವಿದ್ಯಾನಿಲಯಗಳು ಅಸ್ತಿತ್ವಕ್ಕೆ ಬಂದವು. ಇಲ್ಲಿ ಅಧ್ಯಯನ ಮಾಡಿದ ಮೊದಲ ತಲೆಮಾರಿನ ವಿದ್ವಾಂಸರ ಆಲೋಚನೆಗಳು ಭಿನ್ನ ರೀತಿಯಲ್ಲಿ ರೂಪುಗೊಂಡವು. ರಾಷ್ಟ್ರೀಯತೆಯ ಕಲ್ಪನೆ ಮೂಡಿತು. ಮಾನವೀಯತೆಯ ಸ್ಪರ್ಶವಿಲ್ಲದ ಆಚರಣೆಗಳು, ತರ್ಕಕ್ಕೆ ನಿಲುಕದ ಮೌಢ್ಯಗಳನ್ನು ಧೈರ್ಯವಾಗಿ ಪ್ರಶ್ನಿಸಿದರು. ನಿಂತ ನೀರಿನಂತಿದ್ದ ಭಾರತೀಯ ಸಮಾಜದಲ್ಲಿ ಈ ಬಗೆಯ ಆಲೋಚನೆಗಳು ಸಂಚಲನವನ್ನು ಮೂಡಿಸಿತು. ಒಟ್ಟಿನಲ್ಲಿ ಇಂಗ್ಲಿಷ್ ಶಿಕ್ಷಣವನ್ನು ಪಡೆದ ಜನ ಸಮುದಾಯದ ನಿಲುವುಗಳು ಸಾಂಪ್ರದಾಯಿಕ ಸಮಾಜದ ಆಲೋಚನೆಗಳಿಗಿಂತ ಸಾಕಷ್ಟು ಭಿನ್ನವಾಗಿದ್ದವು. "ಇಂಗ್ಲಿಷ್ ಶಿಕ್ಷಣದಲ್ಲಿ ಸ್ತ್ರೀ–ಪುರುಷರಿಬ್ಬರಿಗೂ ಪ್ರವೇಶ ದೊರೆಯಿತು. ಸ್ತ್ರೀಶಿಕ್ಷಣದತ್ತ ಮಿನಶರಿಗಳು ಮನಸ್ಸುಗೊಟ್ಟದು ವಿಶೇಷ ಸಂಗತಿಯಾಗಿದ್ದು, ಆ ದಿಶೆಯಲ್ಲಿ ಲಂಡನ್ ಮಿಶನ್ನಿನವರೇ ಮೊದಲಿಗರಾಗಿದ್ದಾರೆ" (ಡಾ. ಶ್ರೀನಿವಾಸ ಹಾವನೂರ; ಹೊಗನ್ನಡದ ಅರುಣೋದಯ; ೧೯೭೪; ಪುಟ ೬೮) ಎಂಬ ಮಾತುಗಳು ಈ ಸಂದರ್ಭದಲ್ಲಿ ಗಮನಾರ್ಹ. ಹೀಗೆ ಶೈಕ್ಷಣಿಕ ರಂಗದಲ್ಲಿ ಆದ ಬದಲಾವಣೆ ರಾಜಕೀಯ, ಸಾಮಾಜಿಕ, ಧಾರ್ಮಿಕ ಕ್ಷೇತ್ರದಲ್ಲಿ ಅಗಾಧ ಪರಿವರ್ತನೆಗೆ ದಾರಿ ಮಾಡಿತು. ನಾಡಿನ ಎಲ್ಲೆಡೆಗಳಲ್ಲಿ ಆರಂಭವಾದ ಸ್ವಾತಂತ್ರ್ಯ ಹೋರಾಟದ ಬಿಸಿ ಮಹಿಳೆಯರ ಜಾಗೃತಿಗೂ ಪ್ರೇರಕವಾಯಿತು. ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದ ಚಳುವಳಿಯಲ್ಲಿ ಸ್ತ್ರೀಯರೂ ಸಕ್ರಿಯವಾಗಿ ಭಾಗವಹಿಸಿದರು. ಸರೋಜಿನಿ ನಾಯ್ಡು, ಸರಳಾದೇವಿ ಚೌಧರಾಣಿ, ಅನಿಬೆಸೆಂಟ್ ಮುಂತಾದ ಅನೇಕ ಧೀಮಂತ ಮಹಿಳೆಯರು ರಾಷ್ಟ್ರೀಯ ಚಳುವಳಿಯಲ್ಲಿ ಪ್ರಮುಖ ಪಾತ್ರ ವಹಿಸಿದರು. ಈ

ಭಾಗವಹಿಸುವಿಕೆ ಕರ್ನಾಟಕದ ಸಂದರ್ಭದಲ್ಲಿ ಮಹಿಳೆಯರ ಜಾಗೃತಿಗೆ ಕಾರಣವಾಯಿತು. ಕಾಲಕ್ರಮೇಣ ಮಹಿಳೆಯರ ಬರವಣಿಗೆಯಲ್ಲಿ ಆಧುನೀಕರಣದ ಪ್ರಕ್ರಿಯೆಗೆಗಳು ಪ್ರಕ್ರಿಯೆಗಳು ಕಾಣಿಸಿಕೊಂಡವು.

ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯವನ್ನು ನವೋದಯ, ಪ್ರಗತಿಶೀಲ, ನವ್ಯ, ನವ್ಯೋತ್ತರ ಎಂದು ಪ್ರೇರಣೆ ಪ್ರಭಾವದ ದೃಷ್ಟಿಯಿಂದ ವಿಂಗಡಿಸಿದೆ. ಈ ಬಗೆಯ ಸಾಹಿತ್ಯದ ಆಂದೋಲನದ ಪ್ರಭಾವ ಲೇಖಕಿಯರ ಮೇಲೆ ಹೇಗೆ ಆಗಿದೆ ಎಂಬುದು ಕುತೂಹಲದ ವಿಷಯ. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆಯಲ್ಲಿ ಆಧುನಿಕ ಮಹಿಳಾ ಸಾಹಿತ್ಯವನ್ನು ತಿರುಮಲಾಂಬ ಅವರಿಂದ ೧೯೫೦ರ ವರೆಗಿನ ಮಹಿಳಾ ಸಾಹಿತ್ಯ, ೧೯೫೦ ರಿಂದ ೧೯೭೫ರ ವರೆಗಿನ ಮಹಿಳಾ ಸಾಹಿತ್ಯ, ೧೯೭೫ರ ಅನಂತರ ಮಹಿಳಾ ಸಾಹಿತ್ಯ ಎಂದು ವಿಂಗಡಿಸಿದ್ದಾರೆ. ಪಂಥ ಅಥವಾ ಸೈದ್ಧಾಂತಿಕ ನೆಲೆಯ ಹಿನ್ನೆಲೆಯಲ್ಲಿ ವಿಂಗಡಿಸಿಲ್ಲ ಎಂಬುದು ಗಮನಾರ್ಹ ಅಂಶ. ಕನ್ನಡದಲ್ಲಿ ಬಂದ ಸಾಹಿತ್ಯ ಚರಿತ್ರೆಯ ಕೃತಿಗಳಲ್ಲಿಯೂ ಪುರುಷರ ಸಾಹಿತ್ಯವನ್ನು ನವೋದಯ, ನವ್ಯ ಇತ್ಯಾದಿ ಪಂಥಗಳೆಂದು ವರ್ಗೀಕರಿಸಿದ್ದಾರೆ. ಲೇಖಕಿಯರ ಪ್ರಸ್ತಾಪ ಪುರುಷ ನಿರ್ಮಿತ ಸಾಹಿತ್ಯ ಚರಿತ್ರೆಗಳಲ್ಲಿ ಕೇವಲ ಸಾಂದರ್ಭಿಕವಾಗಿ ಬಂದಿದೆ. ಹೀಗಾಗಿ ಸಾಹಿತ್ಯ ಚರಿತ್ರೆಗಳು ಲೇಖಕಿಯ ಬಗೆಗೆ ಪ್ರಸ್ತಾಪಿಸಿರುವುದು ತೀರಾ ವಿರಳ ಅಥವಾ ಅವರ ಸಾಹಿತ್ಯ ಸೇವೆಯನ್ನು ನಿರ್ಲಕ್ಷಿಸಿರುವುದೇ ಹೆಚ್ಚು. ವಿದ್ವಾಂಸರು ಪುರುಷ ನಿರ್ಮಿತ ಸಾಹಿತ್ಯವನ್ನು ಸಂಗ್ರಹಿಸಿ ದಾಖಲಿಸುವಲ್ಲಿ ವಹಿಸಿದ ಪರಿಶ್ರಮವನ್ನು ಮಹಿಳಾ ಸಾಹಿತ್ಯದ ಸಂದರ್ಭದಲ್ಲಿ ತೋರಲಿಲ್ಲ ಎನಿಸುತ್ತದೆ. ಹೀಗಾಗಿ ಇತ್ತೀಚಿನವರೆಗೂ ಸ್ತ್ರೀ ಸಾಹಿತ್ಯದ ಅಸ್ತಿತ್ವದ ಕುರುಹುಗಳನ್ನು ಶೋಧಿಸುವುದು ಸವಾಲಿನ ಕೆಲಸವಾಗಿತ್ತು.

ಆಧುನಿಕ ಕಾಲಕ್ಕೆ ಸ್ತ್ರೀ ಪುರುಷರಿಬ್ಬರೂ ಶಿಕ್ಷಣ ವ್ಯವಸ್ಥೆಯ ಬಾಗಿಲುಗಳು ತೆರೆದುಕೊಂಡವು ಎಂಬುದು ಸತ್ಯ ಸಂಗತಿ. ಆದರೆ ಶಿಕ್ಷಣದ ಪರಿಣಾಮ ಮತ್ತು ಸಾಧ್ಯತೆಗಳು ಸ್ತ್ರೀ ಪುರುಷರಿಬ್ಬರಲ್ಲಿಯೂ ಭಿನ್ನ ಸ್ವರೂಪದ್ದಾಗಿ ಕಾಣಿಸಿಕೊಳ್ಳುತ್ತದೆ. ಸಾಹಿತ್ಯ ಸಂದರ್ಭದಲ್ಲಿ ಈ ಅಂಶವನ್ನು ಗುರುತಿಸಬಹುದು. ಲೇಖಕಿ ಬರೆದ ಕೃತಿ ಬೆಳಕು ಕಂಡರೂ ಅದು ಓದುಗನ ನೆಲೆಯನ್ನು ತಲುಪುವುದು ಸುಲಭವಾಗಿಲ್ಲ. ಇನ್ನು ಸಾಹಿತ್ಯ ಚರ್ಚೆಯ ಸಂದರ್ಭದಲ್ಲಿಯೂ ಮಹಿಳೆಯರ ಸಾಹಿತ್ಯವನ್ನು

ಪರಿಗಣಿಸದಿರುವುದೇ ಹೆಚ್ಚು. ವಾಸ್ತವವಾಗಿ ಸಾಮಾಜಿಕ ಸಂದರ್ಭ, ಸಾಹಿತ್ಯ ರಚನೆಯ ಸಂದರ್ಭದಲ್ಲಿ ಪುರುಷ ಮತ್ತು ಮಹಿಳೆ ಎದುರಿಸಿದ ಸವಾಲುಗಳು ಏಕರೂಪಿಯಲ್ಲ; ಭಿನ್ನ ಸ್ವರೂಪದವು. ಹೀಗಾಗಿ ಮಹಿಳೆಯರ ಸಾಹಿತ್ಯದಲ್ಲಿ ವ್ಯಕ್ತವಾದ ನಿಲುವುಗಳನ್ನು ಪರಿಶೀಲಿಸುವಾಗ ಸಾಕಷ್ಟು ಎಚ್ಚರದಿಂದ ವ್ಯವಹರಿಸುವ ಅಗತ್ಯವಿದೆ. ಇಲ್ಲಿ ನವೋದಯ, ಪ್ರಗತಿಶೀಲ, ನವ್ಯ ಎಂಬಿತ್ಯಾದಿ ನಿಲುವುಗಳಿಗೆ ಗಂಟು ಬೀಳದೆ ಅವರು ತಮ್ಮ ಸಮಕಾಲೀನ ಬದುಕಿನ ಪಲ್ಲಟಗಳು, ತಲ್ಲಣಗಳಿಗೆ ಪ್ರತಿಕ್ರಿಯಿಸದ ರೀತಿಯನ್ನು ಗುರುತಿಸಬೇಕಾಗುತ್ತದೆ. ಹಾಗೆಯೇ ಅವರು ವ್ಯಕ್ತಪಡಿಸಿದ ಪ್ರತಿಕ್ರಿಯೆಯ ಹಿಂದೆ ಕೆಲಸ ಮಾಡಿದ ಮನಸ್ಥಿತಿ, ಪ್ರೇರಣೆ, ಪ್ರಭಾವಗಳನ್ನು ಗಮನಿಸುವುದು ಮುಖ್ಯವಾಗುತ್ತದೆ.

ಹತ್ತೊಂಬತ್ತನೆಯ ಶತಮಾನದ ಕೊನೆ ಮತ್ತು ಇಪ್ಪತ್ತನೆಯ ಶತಮಾನದ ಮೊದಲ ದಶಕದಲ್ಲಿ ಕನ್ನಡದಲ್ಲಿ ಪ್ರಾರಂಭವಾದ ನವೋದಯವು ಹೊಸ ಮನ್ವಂತರಕ್ಕೆ ನಾಂದಿಯಾಯಿತು. ಆಧುನಿಕ ಶಿಕ್ಷಣದ ಪ್ರಭಾವ ಈ ಕಾಲದ ಸಾಹಿತ್ಯವನ್ನು ರೂಪಿಸುವಲ್ಲಿ ಮಹತ್ತ್ವದ ಪಾತ್ರವಹಿಸಿದೆ. ಇದೇ ಹೊತ್ತಿಗೆ ಸ್ವತಃ ನೋವನ್ನನುಭವಿಸಿದ ಮಹಿಳೆಯರು ತಮ್ಮ ಸಮಸ್ಯೆ ಮತ್ತು ಅನುಭವಗಳನ್ನು ಸಮಾಜದ ಎದುರು ತೆರೆದಿಡಬೇಕಾದ ಸ್ತ್ರೀಯಾತ್ಮಕತೆಯ ಅಭಿವ್ಯಕ್ತಿ ಅನಿವಾರ್ಯವಾಯಿತು. ಅಂತಹ ಸ್ತ್ರೀ ಪ್ರಜ್ಞೆ ಎಚ್ಚೆತ್ತುಕೊಂಡಿದ್ದಲ್ಲದೆ ತನ್ನ ಚಿಂತನೆಯ ವ್ಯಾಪ್ತಿಯನ್ನು ಹಿಗ್ಗಿಸಿಕೊಂಡಿತು. ಇದರ ಪರಿಣಾಮವಾಗಿ ಸ್ವಾತಂತ್ರ್ಯ ಪೂರ್ವದಲ್ಲಿ ಸ್ತ್ರೀಯರು ಬರವಣಿಗೆಯಲ್ಲಿ ತಮ್ಮನ್ನು ತಾವು ಸಕ್ರಿಯವಾಗಿ ತೊಡಗಿಸಿಕೊಂಡರು. ಕೆಲವರು ಕೃತಿಗಳನ್ನು ಪ್ರಕಟಿಸುವ ಅವಕಾಶವನ್ನು ಹೊಂದಿದ್ದರೆ ಮತ್ತೆ ಕೆಲವರು ಅಂದಿನ ಹಲವು ಪತ್ರಿಕೆಗಳಾದ ಜಯಕರ್ನಾಟಕ, ಸರಸ್ವತಿ, ಕರ್ನಾಟಕ ನಂದಿನಿ, ಸುಪ್ರಭಾತ, ವೀರಮಾತೆ ಮೊದಲಾದುವುಗಳಲ್ಲಿ ಬರೆದು ಎಲೆಮರೆಯ ಕಾಯಾಗಿಯೇ ಉಳಿದಿದ್ದಾರೆ. ಈ ಯುಗದ ಮಹಿಳಾ ಸಾಹಿತ್ಯದಲ್ಲಿ ಕಥೆ, ಕಾದಂಬರಿಗಳ ರಚನೆಯೇ ಹೆಚ್ಚು. ಆದರೆ ಇನ್ನುಳಿದ ಸಾಹಿತ್ಯ ಪ್ರಕಾರಗಳಾದ ಕಾವ್ಯ, ನಾಟಕ, ಶಿಶು ಸಾಹಿತ್ಯ, ವಿಚಾರ ಸಾಹಿತ್ಯ, ಅನುವಾದ ಸಾಹಿತ್ಯ ಮತ್ತು ವಿಮರ್ಶಾ ಸಾಹಿತ್ಯ ಇವೇ ಮೊದಲಾದ ಪ್ರಕಾರಗಳಲ್ಲಿಯೂ ಮಹಿಳೆಯರು ಕೃತಿಗಳನ್ನು ರಚಿಸಿದ್ದಾರೆ.

ಮಹಿಳೆ ಅಕ್ಷರ ಲೋಕಕ್ಕೆ ತೆರೆದುಕೊಂಡ ಆರಂಭದ ಕಾಲಘಟ್ಟದಲ್ಲಿ ಶಾಂತಾಬಾಯಿ ನೀಲಗಾರ, ನಂಜನಗೂಡು ತಿರುಮಲಾಂಬ, ಆರ್. ಕಲ್ಯಾಣಮ್ಮ,

ಬೆಳಗೆರೆ ಜಾನಕಮ್ಮ ಮುಂತಾದವರು ಬರವಣಿಗೆಯಲ್ಲಿ ತೊಡಗಿಸಿಕೊಂಡಿದ್ದರು. ತಮ್ಮ ಕಾಲದ ಸಾಮಾಜಿಕ ಸಮಸ್ಯೆಗಳನ್ನು ಗ್ರಹಿಸಿದ ವಿಧಾನ, ಅದಕ್ಕೆ ಬಂದ ಪ್ರತಿಕ್ರಿಯೆ, ಸ್ತ್ರೀ ಶಿಕ್ಷಣಕ್ಕೆ ನೀಡಿದ ಪ್ರೋತ್ಸಾಹ, ಸ್ತ್ರೀ ಕಲ್ಯಾಣ, ಸುಧಾರಣಾವಾದಿ ಚಳುವಳಿ, ವೈಧವ್ಯದ ಸಮಸ್ಯೆ ಮುಂತಾದ ವಸ್ತುವನ್ನು ಆರಿಸಿಕೊಂಡು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿದರು. ಸ್ತ್ರೀಗೆ ಶಿಕ್ಷಣ ನೀಡಿದರೆ ಆಕೆಯ ಉದ್ಧಾರ ಸಾಧ್ಯ ಎಂಬ ಆಧುನಿಕ ನಿಲುವನ್ನು ಮೊದಲ ತಲೆಮಾರಿನ ಲೇಖಕಿಯರು ತಾಳಿರುವುದು ಗಮನೀಯ ಅಂಶ. ಕೌಟುಂಬಿಕ ಪರಿಸರದ ನಡುವೆ ಸಮಯವನ್ನು ಹೊಂದಿಸಿಕೊಂಡು ಇವರು ನಡೆಸಿದ ಬರವಣಿಗೆಗೆ ವಿಶೇಷ ಮಹತ್ತ್ವವಿದೆ. ಏಕೆಂದರೆ ತಮ್ಮ ಬರವಣಿಗೆಯ ಮಾದರಿಗಳನ್ನು ರೂಪಿಸಿಕೊಳ್ಳುವ ಗುರುತರ ಜವಾಬ್ದಾರಿ ಮತ್ತು ಸವಾಲು ಅವರ ಮುಂದಿತ್ತು. ವೈಯುಕ್ತಿಕ ಬದುಕಿನ ನೋವುಗಳನ್ನು ಮೀರಿ ಬದುಕನ್ನು ಕಟ್ಟುವ, ಸಾಹಿತ್ಯವನ್ನು ರೂಪಿಸುವ ಕೆಲಸದಲ್ಲಿ ಆರಂಭಕಾಲೀನ ಲೇಖಕಿಯರು ಶ್ರಮಿಸಿದ್ದು ಸಣ್ಣ ವಿಷಯವಲ್ಲ. ಆರಂಭದ ಹಂತದಲ್ಲಿ, ಗದ್ಯಪ್ರಕಾರದಲ್ಲಿ ಅದರಲ್ಲಿಯೂ ಕಾದಂಬರಿ, ನಾಟಕ, ಸಣ್ಣಕಥಾ ಕ್ಷೇತ್ರದಲ್ಲಿ ಲೇಖಕಿಯರು ಕೆಲಸ ಮಾಡಿರುವುದು ವಿಶೇಷವಾಗಿ ಗಮನ ಸೆಳೆಯುತ್ತದೆ.

ಹವ್ಯಕ ಮಹಿಳೆಯರು ಆರಂಭದ ಹಂತದಲ್ಲಿ ಸಾಂಪ್ರದಾಯಿಕ ಹಾಡುಗಳು, ಸೋಬಾನೆ ಪದಗಳನ್ನು ಕಟ್ಟಿ ಹಾಡುತ್ತಿದ್ದಂತೆ ತೋರುತ್ತದೆ. ೧೯೦೦ರ ಕಾಲಘಟ್ಟದಲ್ಲಿ ಹವ್ಯಕ ಮಹಿಳೆಯರು ಶಾಲೆಗೆ ಹೋಗಿದ್ದು ಕಡಿಮೆಯೆಂದೇ ಹೇಳಬೇಕು. ಮುಳಿಯ ಮೂಕಾಂಬಿಕ ಅಮ್ಮ (೧೮೭೦ – ೧೯೪೨) ನಂತಹ ಮಹಿಳೆಯರು ಶಿಕ್ಷಣವನ್ನು ಪಡೆಯದಿದ್ದರೂ 'ಮೂಕಾಂಬಿಕೆ' ಎಂಬ ಹೆಸರಿನಲ್ಲಿ ಸಾಂಪ್ರದಾಯಿಕ ಶೈಲಿಯಲ್ಲಿ ಕೃತಿ ರಚನೆ ಮಾಡಿರುವುದು ಕಂಡುಬರುತ್ತದೆ.

ಆಧುನಿಕ ಶಿಕ್ಷಣವನ್ನು ಪಡೆದ ಹವ್ಯಕ ಮಹಿಳೆಯರು ತಮ್ಮ ಸಮಕಾಲೀನ ಸಮಸ್ಯೆಗೆ ತೀವ್ರ ಸ್ವರೂಪದಲ್ಲಿ ಪ್ರತಿಕ್ರಿಯಿಸಿದ್ದು ಕಾಣುತ್ತದೆ. ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿ ತಲ್ಲಣಕ್ಕೆ ಒಳಗಾಗಿ ಪರಿವರ್ತನೆಯ ಹಾದಿಯಲ್ಲಿರುವ ಹವ್ಯಕ ಸಮಾಜದ ಚಿತ್ರಣ ದೊರೆಯುತ್ತದೆ. ದೇವಾಂಗನಾ ಶಾಸ್ತ್ರಿ ಗೋಕರ್ಣ, ಕೊಡಗಿನ ಗೌರಮ್ಮ, ಎ.ಪಿ. ಮಾಲತಿ, ಗಂಗಾ ಪಾದೇಕಲ್, ಮನೋರಮಾ ಭಟ್, ಜಯ ಯಾಜಿ ಶಿರಾಲಿ ಮುಂತಾದವರ ಬರವಣಿಗೆಯಲ್ಲಿ ಹವ್ಯಕ ಸಮಾಜ ಎದುರಿಸಿದ ಸಾಮಾಜಿಕ ಮತ್ತು

ಸಾಂಸ್ಕೃತಿಕ ಸಮಸ್ಯೆಯ ಚಿತ್ರಣ ಬಂದಿರುವುದನ್ನು ಗುರುತಿಸಬಹುದು. ಈ ಲೇಖಕಿಯರ ಕೃತಿಗಳು ಏಕರೂಪಿಯಲ್ಲ. ಸಮಸ್ಯೆಯ ಗ್ರಹಿಕೆ ಮತ್ತು ಅದನ್ನು ನಿಭಾಯಿಸುವಲ್ಲಿ ಪ್ರತಿಯೊಬ್ಬರೂ ಅನುಸರಿಸುವ ವಿಧಾನ ಭಿನ್ನವಾಗಿದೆ. ತಮ್ಮ ಕಾಲಕ್ಕೆ ಬಳಕೆಯಲ್ಲಿದ್ದ ಕಥನ ಮಾದರಿಯನ್ನು ಬಳಸಿಕೊಂಡು ಹವ್ಯಕ ಲೇಖಕಿಯರು ವಿಧವಾ ವಿವಾಹದ ಸಮಸ್ಯೆ, ಪ್ರೇಮ ವಿವಾಹದ ಬಿಕ್ಕಟ್ಟುಗಳು, ಆಧುನಿಕ ಶಿಕ್ಷಣದ ಅವಶ್ಯಕತೆ, ಪರಂಪರಾಗತವಾಗಿ ಬಂದ ಸಾಮಾಜಿಕ ಮೌಲ್ಯಗಳನ್ನು ಪ್ರಶ್ನಿಸುವ ಮನೋಧರ್ಮ, ವಿವಿಧ ರೀತಿಯ ಸಾಂಸಾರಿಕ ಸಮಸ್ಯೆಗಳನ್ನು ಆಧರಿಸಿದ ಕತೆಗಳನ್ನು ಬರೆದರು.

೧೯೭೦ರ ನಂತರ ಬರೆಯತೊಡಗಿದ ಲೇಖಕಿಯರು ಜಾಗತಿಕ ಸ್ವರೂಪದ ಸ್ತ್ರೀ ವಿಮೋಚನೆ ಚಳುವಳಿಯಿಂದ ಪ್ರಭಾವಿತರಾಗಿದ್ದಾರೆ. ಈ ಹೊತ್ತಿಗೆ ಸಾಮಾಜಿಕವಾಗಿಯೂ ಸಾಕಷ್ಟು ಸ್ಥಿತ್ಯಂತರಗಳಾಗಿದ್ದವು. ಹೆಚ್ಚಿನ ಹವ್ಯಕ ಮಹಿಳಾ ಕತೆಗಾರ್ತಿಯರು ಗ್ರಾಮೀಣ ಬದುಕಿನ ಹಿನ್ನೆಲೆಯಿಂದ ಬಂದಿದ್ದು ಅವರು ತಮ್ಮ ಸಮಕಾಲೀನ ಬದುಕನ್ನು ನೋಡುವ ದೃಷ್ಟಿಕೋನ ವಿಶಿಷ್ಟವಾಗಿದೆ. ಕುಟುಂಬ, ಪರಿಸರ, ಹರಿಹರೆಯದ ಪ್ರೇಮ, ವಿಧವಾ ವಿವಾಹ, ಶಿಕ್ಷಣ, ಮಾನವೀಯ ಸಂಬಂಧ, ವರದಕ್ಷಿಣೆ ಇತ್ಯಾದಿಯಾಗಿ ವಿಷಯಕ್ಕೆ ಸಂಬಂಧಿಸಿ ಅವರ ಕಥಾವಸ್ತುಗಳು ಕೇಂದ್ರೀಕೃತವಾಗಿರುವುದನ್ನು ಗಮನಿಸಬಹುದು.

ಹವ್ಯಕ ಮಹಿಳೆಯರು ತಮ್ಮ ಕೃತಿಗಳಲ್ಲಿ ಚರ್ಚಿಸಿದ ವಸ್ತುವಿನ ಆಧಾರದ ಮೇಲೆ ಕತೆಗಳನ್ನು ವಿಂಗಡಿಸಿ ಈ ಕೆಳಗಿನಂತೆ ಅಧ್ಯಯನವನ್ನು ಕೈಗೊಳ್ಳಲಾಗಿದೆ.

### ೧೦.೧ ಬಾಲ ವೈಧವ್ಯ ಮತ್ತು ವಿಧವಾ ಸಮಸ್ಯೆ

ಭಾರತೀಯ ಸಂಸ್ಕೃತಿಯಲ್ಲಿ ಅತ್ಯಂತ ಚಿಕ್ಕ ವಯಸ್ಸಿನಲ್ಲಿಯೇ ಹೆಣ್ಣು ಮಕ್ಕಳಿಗೆ ವಿವಾಹ ಮಾಡುತ್ತಿದ್ದುದು ಒಂದು ಕಾಲಕ್ಕೆ ಒಪ್ಪಿತವಾದ ಮೌಲ್ಯವೇ ಆಗಿದ್ದರೂ ೧೯ನೇ ಶತಮಾನದ ಉತ್ತರಾರ್ಧ ಹಾಗೂ ೨೦ನೇ ಶತಮಾನದ ಪ್ರಾರಂಭದ ಕಾಲದಲ್ಲಿ ಈ ಬಾಲ್ಯವಿವಾಹ ಪದ್ಧತಿಯಿಂದಾಗುವ ದುಷ್ಪರಿಣಾಮಗಳನ್ನು ಗ್ರಹಿಸಿ, ಅದರ ನಿವಾರಣೆಗೆ ಸುಧಾರಕ ಪಂಥಗಳು ಹುಟ್ಟಿಕೊಂಡವು. ಭಾರತೀಯ ಸುಧಾರಕ ಪಂಥದ ಜೊತೆಗೆ ಆಡಳಿತ ವ್ಯವಸ್ಥೆಯ ಪ್ರೋತ್ಸಾಹವೂ ದೊರಕಿತು. ಲಾರ್ಡ್ ವಿಲಿಯಂ ಬೆಂಟಿಂಕ್ ಮತ್ತು ರಾಜಾರಾಮ್ ಮೋಹನರಾಯ್ ಅವರ ಪ್ರಯತ್ನದ ಫಲವಾಗಿ ಈ ಸಮಸ್ಯೆಗೆ

ಚಾರಿತ್ರಿಕ ತಿರುವು ದೊರೆಯಿತು. ಕರ್ನಾಟಕದಲ್ಲಿಯೂ ಇದು ಒಂದು ತೀವ್ರ ಸಮಸ್ಯೆಯಾಗಿ ಕಾಡಿದೆ. ಬಾಲ್ಯವಿವಾಹ ವೈದಿಕ ಮತ್ತು ಅವೈದಿಕ ಎಂಬ ಸಮುದಾಯದ ಭೇದವಿಲ್ಲದೆ ಮೂವತ್ತರ ದಶಕದ ಸಂದರ್ಭದಲ್ಲಿ ನಡೆಯುತ್ತಿದ್ದುದನ್ನು ಅಂದಿನ ಪತ್ರಿಕೆಗಳು ವರದಿ ಮಾಡಿವೆ. ಈಗಲೂ ಹಳ್ಳಿಗಳಲ್ಲಿ ಅಪರೂಪಕ್ಕೆ ಇಂಥ ವಿವಾಹಗಳು ನಡೆಯುವುದನ್ನು ಗಮನಿಸುತ್ತೇವೆ.

ಬಾಲ್ಯ ವಿವಾಹದಿಂದ ಉಂಟಾಗುವ ಬಾಲ ವೈವಿಧ್ಯದ ಸಮಸ್ಯೆಯ ಕುರಿತು ಹವ್ಯಕ ಲೇಖಕಿಯರು ಕತೆಗಳನ್ನು ರಚಿಸಿದ್ದಾರೆ. ಭಾರತೀಯ ಸಮಾಜದಲ್ಲಿ ಬೇರು ಬಿಟ್ಟಿರುವ ಬಾಲ್ಯವಿವಾಹ ಪದ್ಧತಿ ಮತ್ತು ವಿಧವೆಯರು ಅನುಭವಿಸುವ ಅಪಮಾನ–ದುರ್ಗತಿಗಳ ದಾರುಣ ಚಿತ್ರಣವನ್ನು ದೇವಂಗನಾ ಶಾಸ್ತ್ರಿಯವರ 'ವೇಣೀ ಸಂಹಾರ', ಕೊಡಗಿನ ಗೌರಮ್ಮನವರ 'ಪುನರ್ವಿವಾಹ', 'ಒಂದು ಪುಟ್ಟ ಚಿತ್ರ', 'ವಾಣಿಯ ಸಮಸ್ಯೆ' ಕತೆಗಳು ನೀಡುತ್ತವೆ. ವೈಧವ್ಯದ ಕಷ್ಟ ಪರಂಪರೆಗಳಲ್ಲಿ ಸಿಲುಕಿದ ತರುಣಿಯರು ಕುಟುಂಬದ ಒಳಗೆ ಹೊರಗೆ ಅನುಭವಿಸಿದ ನಿಂದೆ ಅವಮಾನ, ಅತ್ಯಾಚಾರ, ಹಿಂಸೆಯ ನಾನಾ ಮುಖಗಳನ್ನು ಈ ಲೇಖಕಿಯರ ಕತೆಗಳು ಪರಿಣಾಮಕಾರಿಯಾಗಿ ಚಿತ್ರಿಸಿವೆ. ವಿವಾಹವೆಂದರೆ ಏನೆಂದೇ ತಿಳಿಯದ ವಯಸ್ಸಿನಲ್ಲಿ ವಿಧವೆಯಾಗಿ, ಜೀವನವನ್ನು ಒಂಟಿಯಾಗಿ ಸಾಗಿಸಬೇಕಾದ ಕಷ್ಟವೇ ಈ ಎಲ್ಲ ಕತೆಗಳ ವಸ್ತುವಾಗಿದೆ.

ದೇವಾಂಗನಾ ಅವರ ಲಭ್ಯಕತೆಗಳಲ್ಲಿ ಮೊದಲನೆಯದು 'ವೇಣೀಸಂಹಾರ'. ಜಯಂತಿ ಪತ್ರಿಕೆ ಏರ್ಪಡಿಸಿದ್ದ ಸಣ್ಣಕತೆಗಳ ಸ್ಪರ್ಧೆಯಲ್ಲಿ ಮೊದಲ ಬಹುಮಾನ ಪಡೆದ ಕತೆಯಿದು. ಧರ್ಮಶಾಸ್ತ್ರ ಸಂಪ್ರದಾಯಗಳ ಹೆಸರಿನಲ್ಲಿ ವೈದಿಕ ಸಮಾಜವು ವಿಧವೆಯರನ್ನು ಅಮಾನವೀಯವಾಗಿ ನಡೆಸಿಕೊಳ್ಳುವ ಪ್ರವೃತ್ತಿಯನ್ನು 'ವೇಣೀ ಸಂಹಾರ' ತೀವ್ರ ವಿಷಾದದೊಂದಿಗೆ ವಿಡಂಬಡಿಸುತ್ತದೆ. ವೈದಿಕ ಸಮಾಜದಲ್ಲಿರುವ ವಿಧವೆಯ ಕೇಶಮುಂಡನದಂತಹ ಕ್ರೂರ ಆಚರಣೆಯನ್ನೂ, ಅದನ್ನು ಜೀವಂತವಾಗಿಸುವಲ್ಲಿ ಮಹತ್ತ್ವದ ಅಂಗವಾಗಿರುವ ಪುರೋಹಿತಶಾಹಿ ವ್ಯವಸ್ಥೆಯ ಧರ್ಮಾಂಧತೆ ಮತ್ತು ಜೀವವಿರೋಧಿ ನೀತಿಯನ್ನು ಕಟುವಾಗಿ ವಿಡಂಬಡಿಸುತ್ತದೆ. ಏಳು ವರ್ಷದ ಶಾಂತೆಯ ವಿವಾಹವು ನಾಲ್ಕು ಮಕ್ಕಳ ತಂದೆಯಾಗಿದ್ದ ೪೫ ದಾಟಿದ ವಿಧುರ ಅಗ್ನಿಹೋತ್ರಿ ಚಿದಾನಂದ ದೀಕ್ಷಿತನೊಂದಿಗೆ ನಡೆಯುತ್ತದೆ. ಮದುವೆಯಾದ ಮರುವರ್ಷಕ್ಕೆ ದೀಕ್ಷಿತರು

ಮರಣಹೊಂದಿ, ಎಂಟು ವರ್ಷದ ಬಾಲೆ ಶಾಂತೆಗೆ ವಿಧವೆಯ ಪಟ್ಟ ಕಟ್ಟುತ್ತಾರೆ. ಬಾಲ ವಿಧವೆ ಶಾಂತೆಯ ಕೇಶಮುಂಡನ ಸಿದ್ಧತೆ ನಡೆಯುತ್ತದೆ. ಆದರೆ ಶಾಂತೆಯ ತಂದೆಯಿಂದಾಗಿ ಶಾಂತೆ ಕೇಶ ಮುಂಡನದ ಅಪಾಯದಿಂದ ಪಾರಾಗುತ್ತಾಳೆ. ಆದರೆ ಮುಂದೊಮ್ಮೆ ಹದಿನೆಂಟರ ತರುಣಿ ಶಾಂತೆಗೆ ವೈವಿಧ್ಯದ ಶಾಪವು ಕೇಶಹರಣದ ರೂಪದಲ್ಲಿ ಪ್ರತ್ಯಕ್ಷವಾಗುತ್ತದೆ. ವಿಧವೆಯು ಸಕೇಶಿಯಾಗಿರುವುದು ಧರ್ಮವಿರೋಧಿಯೆಂದೂ, ಸತ್ತ ಗಂಡನಿಗೆ ಸ್ವರ್ಗದ ಹಾದಿ ನಿರಾಯಾಸವಾಗಬೇಕಾದರೆ ಹೆಂಡತಿಯ ತಲೆಯ ಭಾರ ಕಳೆಯಬೇಕು ಎನ್ನುವ ಪುರೋಹಿತರ ಆದೇಶದಂತೆ ಶಾಂತೆಯ ಕೇಶಮುಂಡನಕ್ಕೆ ಸಿದ್ಧತೆ ನಡೆಯುತ್ತದೆ. "ಅಂತೂ ಧರ್ಮ ಉಳಿದುಕೊಂಡಿತು. ಪರಲೋಕದ ಗಂಡನಿಗೆ ಆಹಾರದ ಜೊತೆಯಲ್ಲಿ ಭೂಲೋಕದಲ್ಲಿಯ ಹೆಂಡತಿಯ ತಲೆಗೂದಲಿನ ನೀರು ಬೆರೆದುಕೊಳ್ಳುವುದು ತಪ್ಪಿತು. ಹೆಣ್ಣು ಮಡಿಯಾದಳು; ಸ್ವರ್ಗಕ್ಕೆ ಹಾದಿ ನಿರಂತರವಾಯ್ತು". (ದೇವಾಗನಾ ಶಾಸ್ತ್ರಿ; ವೇಣೀ ಸಂಹಾರ; ೨೦೦೫; ಪುಟ ೨೬) ಎಂದು ಧರ್ಮರಕ್ಷಕ ಪುರೋಹಿತರು ಪುಣ್ಯಕಾರ್ಯ ಮಾಡಿದ ತೃಪ್ತಿಯಿಂದ ಬೀಗುತ್ತಾರೆ. ಮುಗ್ಧ ತರುಣಿಯನ್ನು ವಿಕಾರಗೊಳಿಸಿ, ಆಕೆಯ ಮನಸ್ಸಿನ ಭಾವನೆಗಳನ್ನು ಚಿಂದಿಗೊಳಿಸಿದ ವಿಕೃತ ಮನಸ್ಸುಗಳು: "ಆದದ್ದು ಒಳಿತೇ ಆಯ್ತು. ಈ ಶಾಂತೆ ಅಷ್ಟೇನೂ ಸಂಭಾವಿತ ಹುಡುಗಿಯಲ್ಲ. ಎಷ್ಟು ಜನರೊಡನೆ ಆಕೆ ಸಂಪರ್ಕವಿಟ್ಟುಕೊಂಡಿದ್ದಾಳೆಯೋ!" (ದೇವಾಗನಾ ಶಾಸ್ತ್ರಿ; ವೇಣೀ ಸಂಹಾರ; ೨೦೦೫; ಪುಟ ೨೭) ಎಂದು ಶಾಂತೆಗೆ ಕಳಂಕವನ್ನು ಹೊರಿಸುತ್ತಾರೆ. "ಸಹಗಮನ ಪದ್ಧತಿಯನ್ನು ಬಿಟ್ಟರೆ ವಿಧವೆಯರಿಗೆ ಅತ್ಯಂತ ಹಿಂಸಾತ್ಮಕವಾದ ಪದ್ಧತಿ ಎಂದರೆ ಕೇಶ ಮುಂಡನ. ಕೇಶ ಮುಂಡನವನ್ನು ಯಾವ ಶಾಸ್ತ್ರಗಳಲ್ಲೂ ವಿಧಿಸಿಲ್ಲ. ಇದು ವೇದಕಾಲದಲ್ಲಿರಲಿಲ್ಲ. ಏಳನೆಯ ಶತಮಾನದವರೆಗೂ ಈ ಪದ್ಧತಿಯೇ ಇರಲಿಲ್ಲವೆಂದು ತಿಳಿದುಬರುತ್ತದೆ. ಚೌದ್ಧಾಯಾನ ಪಿತೃಮೇಧ ಸೂತ್ರಗಳಲ್ಲಿ, ಸ್ತ್ರೀಯರಿಗೆ ಖಂಡಿತವಾಗಿಯೂ ವಪನ ಇಲ್ಲವೆಂದು ಹೇಳಿದೆ. ಮನು ಯಾಜ್ಞವಲ್ಕ್ಯರು ಕೂಡ ವಪನ ವಿಷಯವನ್ನು ಹೇಳಲಿಲ್ಲ" (ನಂದಿನಿ; ವಿಧವೆಯ ಸಮಸ್ಯೆಗಳು; ೧೯೭೫; ಪುಟ ೧೫) ಎಂಬುದಾಗಿ ಅಭಿಪ್ರಾಯವಿದೆ. ಹೀಗೆ ಶಾಸ್ತ್ರಗಳಲ್ಲಿ ಹೇಳದ ವಪನ ವಿಷಯವು ವೈದಿಕ ಸಮಾಜದಲ್ಲಿ ಆಚರಣೆಯಲ್ಲಿರುವುದನ್ನು ಕತೆಗಾರರು ತೀವ್ರವಾಗಿ ವಿಡಂಬಡಿಸುತ್ತಾರೆ.

ಬಾಲ ವೈಧವ್ಯದಂತಹ ವಿಷಯಕ್ಕೆ ಸಾಹಿತ್ಯದಲ್ಲಿ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದ ಆರಂಭದ ತಲೆಮಾರಿನ ಮಹಿಳೆಯರಲ್ಲಿ ಕೊಡಗಿನ ಗೌರಮ್ಮನವರಿಗೆ ಮಹತ್ತ್ವದ ಸ್ಥಾನವಿದೆ. ಅವರ ಕತೆಗಳು ಆ ಕಾಲದ ಜ್ವಲಂತ ಸಮಸ್ಯೆಯಾದ ಬಾಲವಿಧವೆಯರನ್ನು ಕುರಿತೇ ಬಂದಿವೆ. ಆದುದರಿಂದ ಆ ಕಾಲದ ಸಾಮಾಜಿಕ ಸಮಸ್ಯೆಗಳ ಪ್ರಜ್ಞೆಯು ಅವರಿಗೆ ಇದೆ ಎಂಬುದು ಸ್ಪಷ್ಟ. ಗೌರಮ್ಮನವರ 'ಪುನರ್ವಿವಾಹ' ಕತೆಯಲ್ಲಿ ಮೂವತ್ತೈದು ವರ್ಷದ ವಿಧುರನೊಬ್ಬನು ಸುಂದರ ತರುಣಿಯನ್ನು ದೂರದಿಂದ ಕಂಡು ಮೋಹಗೊಳ್ಳುತ್ತಾನೆ. ಪರಿಚಯ, ಸ್ನೇಹವಾಗಿ ತಿರುಗಿ ಅವಳನ್ನು ಭೇಟಿಯಾಗುತ್ತಾನೆ. ಆ ಸಂದರ್ಭದಲ್ಲಿ ಅವಳು 'ಬಾಲವಿಧವೆ'ಯನ್ನು ಮದುವೆಯಾಗುವಿರಾ? ಎಂದು ಪ್ರಶ್ನಿಸುತ್ತಾಳೆ. ಯಾವಳನ್ನು ಅಪ್ಸರೆಯೆಂದು ಕನವರಿಸಿ, ಮದುವೆಯ ದಿನಕ್ಕಾಗಿ ಕಾದು ಕುಳಿತಿದ್ದನೋ ಯುವಕನಿಗೆ ಅವಳು 'ಬಾಲವಿಧವೆ' ಎಂದು ತಿಳಿದಾಗ ಅಮಂಗಳೆಯಾಗಿ ಕಾಣುತ್ತಾಳೆ. "ನೀನು ವಿಧವೆ ಎಂದು ತಿಳಿದಿದ್ದರೆ ನಿನ್ನ ಮುಖವನ್ನು ಸಹ ನೋಡುತ್ತಿರಲಿಲ್ಲ" (ಕಾಳೇಗೌಡ ನಾಗವಾರ (ಸಂ.); ಜೀವನ ಪ್ರೀತಿ; ೨೦೦೨; ಪುಟ ೧೨೫) ಎಂದು ಬಿರುನುಡಿಯುತ್ತಾನೆ. "ಸಮಾಜದಲ್ಲಿ ಇದು ನಡೆದರೂ ಸಹ ನಾನು ಪವಿತ್ರ ಕುಲವನ್ನು ವಿಧವಾ ವಿವಾಹದಿಂದ ಕಲುಷಿತ ಮಾಡಲು ತಯಾರಿಲ್ಲ. ಪ್ರತಿದಿನ ಬೆಳಗಾದೊಡನೆ ವಿಧವೆಯ ಮುಖ ನೋಡುವ ಬಯಕೆ ನನಗಿಲ್ಲ" (ಕಾಳೇಗೌಡ ನಾಗವಾರ (ಸಂ.); ಜೀವನ ಪ್ರೀತಿ; ೨೦೦೨; ಪುಟ ೧೨೬). ಅದನ್ನು ಕೇಳಿದ 'ಬಾಲವಿಧವೆ' ರಾಜಿಯ ಪ್ರತಿಭಟನೆಯು ಸಾಮಾಜಿಕ ಬದಲಾವಣೆಗೆ ನಿದರ್ಶನವೆಂಬಂತೆ ಚಿತ್ರಿತವಾಗಿದೆ. ವಿಧುರರಿಗೊಂದು ನೀತಿ; ವಿಧವೆಯರಿಗೊಂದು ನೀತಿಯಿರುವ ಸಮಾಜವನ್ನು ತೀಕ್ಷ್ಣವಾಗಿ ಟೀಕಿಸುವ ರಾಜಿಯ ನುಡಿಗಳನ್ನು ಉಲ್ಲೇಖಿಸಿದರೆ ಇಲ್ಲಿ ಹೆಚ್ಚು ಸಮಂಜಸವಾಗಿ ಕಾಣುತ್ತದೆ. "ಏನಂದಿರಿ? ಬೆಳಗಾದೊಡನೆಯೇ ನಿಮಗೆ ವಿಧವೆಯ ಮುಖ ನೋಡುವ ಅಪೇಕ್ಷೆಯಿಲ್ಲವೇ ! ನನಗೂ ಇಲ್ಲ.......... ನಿಮ್ಮಂತಹವರ ಮೋಹಕ್ಕೆ ಬಲಿಯಾಗಿ ಬುದ್ಧಿ ಬರುವ ಮೊದಲೇ ವಿಧವೆಯರಾದ ನನ್ನ ಲಕ್ಷೋಪಲಕ್ಷ ಸಹೋದರಿಯರು ಎಂದಿನವರೆಗೆ ಸಮಾಜದ ಅನ್ಯಾಯಕ್ಕೆ ತುತ್ತಾಗಿರುವರೋ ಅಂದಿನವರೆಗೆ ಹಿಂದೂ ಸಮಾಜದ ಉನ್ನತಿ ಆಗಲಾರದೆಂದು ತಿಳಿಯಿರಿ. ಈ ತರಹದ ಸಾಮಾಜಿಕ ಅನ್ಯಾಯದಿಂದ ಎಷ್ಟು ಹಿಂದೂ ವಿಧವೆಯರು ನಿರ್ಲಜ್ಜತನದ ಜೀವನವನ್ನು ಅವಲಂಬಿಸಿದ್ದಾರೆ: ಎಷ್ಟು ವೇಶ್ಯೆಯರ

ಸಂಖ್ಯೆಯು ಹೆಚ್ಚಾಗಿದೆ! ಎಷ್ಟು ಬಾಲಹತ್ಯೆ, ಭ್ರೂಣ ಹತ್ಯೆಗಳು ನಡೆಯುತ್ತಿವೆ. ಗೊತ್ತಿದೆಯೇ? ಇದಕ್ಕೆಲ್ಲ ಕಾರಣರು ಯಾರು ? ಅಜ್ಞಾನಿಯಾದ ಒಬ್ಬ ಚಿಕ್ಕ ಬಾಲೆಯೇ ? ಶಾಸ್ತ್ರ ಶಾಸ್ತ್ರವೆಂದು ಬಡಿದುಕೊಂಡು ಜಾತಿ ಕೆಡುತ್ತದೆಂಬ ಹೆದರಿಕೆಯಿಂದ ಎಳೆ ಮಕ್ಕಳನ್ನು ಮುದುಕರ ಕೊರಳಿಗೆ ಕಟ್ಟುವ ತಂದೆತಾಯಿಗಳೆ ? ಅಥವಾ ನಿಮ್ಮಂತಹ ಕಾಮುಕರೇ ? ಅಲ್ಲ; ತಪ್ಪು ನಿಮ್ಮದಲ್ಲ, ಸಹಾಯ ಹೀನೆಯರಾದ ಚಿಕ್ಕ ಹುಡುಗಿಯರೇ ತಪ್ಪುಗಾರರು.........” (ಕಾಳೇಗೌಡ ನಾಗವಾರ (ಸಂ.); ಜೀವನ ಪ್ರೀತಿ; ೨೦೦೨; ಪುಟ ೧೨೬). ಹೀಗೆ ವ್ಯಂಗ್ಯವಾಗಿ ಮೂದಲಿಸುತ್ತ, ಇಡೀ ಪುರುಷ ಸಮಾಜವನ್ನೆ ಖಂಡಿಸಿದ್ದನ್ನು ನೋಡಿದರೆ, ಸಾಮಾಜಿಕ ನೀತಿ–ನಿಯಮಗಳ, ಬಿಗಿ ಬಲವಾಗಿರುವುದನ್ನು ಅರ್ಥೈಸಿಕೊಂಡು, ಆಧುನಿಕ ಸ್ತ್ರೀಯ ಪ್ರತೀಕವಾಗಿ ರಾಜಿಯ ಮಾತುಗಳು ಬಂದಿವೆ. ಹಾಗೆಯೇ, ಹಿಂದೂ ಬಾಲವಿಧವೆಯರ ಸ್ಥಾನಮಾನ, ಸ್ಥಿತಿ–ಗತಿಗಳ ಕರುಣಾಜನಕ ಚಿತ್ರವೊಂದು ಸ್ತ್ರೀಯ ನೆಲೆಯಿಂದ ತೆರೆದಿಡುವ ಪ್ರಯತ್ನವಿಲ್ಲಿ ನಡೆದಿದೆ. ಮಾನವೀಯ ದೃಷ್ಟಿಯಿಂದ ಬಾಲ ವಿಧವೆಯರನ್ನು ಮದುವೆಯಾಗಬೇಕು ಎಂಬ ನಿಲುವು ಗೌರಮ್ಮನವರದು.

ಗೌರಮ್ಮನವರ ಮನೋಧರ್ಮವನ್ನು ಅರ್ಥಮಾಡಿಕೊಳ್ಳಲು ನೆರವಾಗುವ ಇನ್ನೊಂದು ಕತೆ ‘ಒಂದು ಪುಟ್ಟ ಚಿತ್ರ’ ಸುಶಿಕ್ಷಿತ ಬಾಲವಿಧವೆಯೊಬ್ಬಳು ಪ್ರೇಮದ ತೊಡಕಿನಲ್ಲಿ ಸಿಲುಕುತ್ತಾಳೆ. ಅವನನ್ನೇ ನಂಬುತ್ತಾಳೆ. ಆತನು ಮದುವೆಯಾಗುವೆನೆಂದು ಅವಳನ್ನು ನಂಬಿಸಿ, ಮದುವೆಗೆ ಮುಂಚೆ ದೇಹದಾಹವನ್ನು ತೀರಿಸಿಕೊಂಡು ಅವಳಿಂದ ದೂರ ಹೊರಟು ಹೋಗುತ್ತಾನೆ. ಗರ್ಭ ತಳೆದ ಅವಳು ಪತ್ರ ಮುಖೇನ ತಿಳಿಸಿ, ಅವನಿಂದಲೇ ಛೀಮಾರಿ ಹಾಕಿಸಿಕೊಂಡು ಸಮಾಜದಲ್ಲಿ ತಲೆಎತ್ತಿ ನಿಲ್ಲುವ ಸಾಮರ್ಥ್ಯವಿಲ್ಲದೆ, ಒಟ್ಟು ಸ್ತ್ರೀ ಹಾಗೂ ಪುರುಷ ಸಮಾಜದ ಸಹಾನುಭೂತಿ, ಸಹಾಯ ದೊರೆಯುವ ಭರವಸೆ ಕಾಣದೆ ಮರಣವನ್ನಪ್ಪುವ ದುರಂತ ಚಿತ್ರಣ ಇಲ್ಲಿನದು. ಲೇಖಕಿಯ ದೃಷ್ಟಿಕೋನವು ವಾಸ್ತವ ಬದುಕನ್ನು ಅರ್ಥೈಸುವುದರ ಪ್ರತೀಕವಾಗಿ ಬಂದಿದೆ. ಗೌರಮ್ಮನವರ ‘ವಾಣಿಯ ಸಮಸ್ಯೆ’ ಕತೆಯಲ್ಲಿ ಬರುವ ‘ಇಂದು’ ಬಾಲವಿಧವೆ. ತಾನು ನಡೆಸುವ ಸ್ವಾವಲಂಬಿ, ಸ್ವತಂತ್ರ ಜೀವನದಿಂದ ಒಂಟಿ ಬದುಕಿನಲ್ಲಿಯೇ ಸುಖವನ್ನು ಕಂಡುಕೊಂಡವಳು. ಇಂಥವಳಲ್ಲಿಯೂ ಆಕಸ್ಮಾತ್ತಾಗಿ ನೆರೆಹೊರೆಯವರಾಗಿ ಬಂದಿಳಿದ ವಾಣಿ–ರತ್ನರ ದಾಂಪತ್ಯ ಜೀವನವು ಸುಪ್ತವಾಗಿದ್ದ ಅವಳ ಬಯಕೆಯನ್ನು ಕೆರಳಿಸುತ್ತದೆ.

ಪರಿಚಯ, ಸಂಪರ್ಕ ಬೆಳೆದಂತೆ ಬದುಕಿನಲ್ಲಿ ಅವಳಿಗಿದ್ದ ಕೊರತೆಯ ಅರಿವು ಹೆಚ್ಚುತ್ತಾ ಹೋಗುತ್ತದೆ. ಅವಳ ಈ ಬಯಕೆಗೆ ರತ್ನನ ಬಯಕೆಯ ನೋಟವೂ ಸೇರಿದಾಗ ಇಂದು ತಲ್ಲಣಿಸುತ್ತಾಳೆ. ಏಕಾಂಗಿತನದ ನೋವಿನಿಂದ ದುಃಖಿಸುತ್ತಾಳೆ. ವಾಣಿಯ ಸುದೈವಕ್ಕೆ ಅಸೂಯೆ ಪಡುತ್ತಾಳೆ. ದುಃಖ ಆದಾಗ ಇದು ಉಚಿತವಲ್ಲ, ರತ್ನನು ಎದುರಿಗಿದ್ದರೆ ಸ್ಥಿಮಿತವನ್ನು ಕಳೆದುಕೊಳ್ಳಬಹುದೆಂದು 'ಇಂದು' ಭಯಪಡುತ್ತಾಳೆ, ರತ್ನನ ದೃಷ್ಟಿಯಿಂದ ತಪ್ಪಿಸಿಕೊಳ್ಳಲು ಹವಣಿಸುತ್ತಾಳೆ. ಆದರೆ ರತ್ನನು ಹೆಂಡತಿ ತವರಿಗೆ ಹೋದಾಗ ದೊರೆತ ಅವಕಾಶವನ್ನು ಕಳೆದುಕೊಳ್ಳಬಾರದೆಂಬ ಹವಣಿಕೆಯಿಂದ ಪತ್ರವೊಂದನ್ನು ಹಾಕುತ್ತಾನೆ. "ರತ್ನನ ಅಕ್ಷರಗಳ ಪರಿಚಯವಿದ್ದ ಅವಳಿಗದು ಅವನದೆಂದು ನೋಡಿದೊಡನೆಯೇ ತಿಳಿಯಿತು. ತಿಳಿದು ಬಹಳ ಹೊತ್ತು ಒಡೆಯದೆ ಅದನ್ನು ಕೈಯಲ್ಲಿ ಹಿಡಿದುಕೊಂಡು ಆಲೋಚಿಸುತ್ತ ಕುಳಿತಿದ್ದಳು. ಮತ್ತವಳು ಬಲು ಹೊತ್ತಿನ ಮೇಲೆ ಅಲ್ಲಿಂದೆಳುವಾಗಲೂ ಅದು ಒಡೆಯಲ್ಪಟ್ಟಿರಲಿಲ್ಲ ಆದರೆ, ಅವಳ ಕಣ್ಣೀರಿನಿಂದ ಅಭಿಷಿಕ್ತವಾಗಿ ಒದ್ದೆಯಾಗಿ ಹೋಗಿತ್ತು. ಎದ್ದವಳು ಹಾಗೆಯೇ ಆ ಕಾಗದವನ್ನು ಹಿಡಿದುಕೊಮಡು ಅಡಿಗೆ ಮನೆಗೆ ಹೋದಳು. ಮತ್ತೊಂದು ನಿಮಿಷದಲ್ಲಿ ಒಲೆಯಲ್ಲಿ ಉರಿಯುತ್ತಿದ್ದ ಬೆಂಕಿಯಲ್ಲದು ಬೂದಿಯಾಗಿ ಹೋಯ್ತು" (ಕಾಳೇಗೌಡ ನಾಗವಾರ (ಸಂ.); ಜೀವನ ಪ್ರೀತಿ; ೨೦೦೨; ಪುಟ ೧೪). ಮಾನಸಿಕ ತಲ್ಲಣಕ್ಕೆ ಸಿಲುಕಿದ ಬಾಲವಿಧವೆಯ ಮಾನಸಿಕ ಬೇಗುದಿಯನ್ನು ಗೌರಮ್ಮನವರು ಇಲ್ಲಿ ಚಿತ್ರಿಸಿದ್ದಾರೆ. "ಗೌರಮ್ಮನವರ ಕತೆಗಳಲ್ಲಂತೂ ಈ ಕತೆ ಅತ್ಯಂತ ಪಕ್ವವಾದುದು. ಹೀಗಾಗಿ ಅದು ಹಲವಾರು ಸಂಗ್ರಹಗಳಿಗಾಗಿ ಆಯ್ಕೆಗೊಂಡಿದೆ". (ಜಿ.ಎಸ್. ಆಮೂರ; ಕನ್ನಡ ಕಥನ ಸಾಹಿತ್ಯ: ಸಣ್ಣಕತೆ; ೨೦೦೩; ಪುಟ ೩೩೬) ಎಂಬುದಾಗಿ ಜಿ.ಎಸ್. ಆಮೂರ ಅಭಿಪ್ರಾಯಪಟ್ಟಿದ್ದಾರೆ.

'ಪುನರ್ವಿವಾಹ', 'ಒಂದು ಪುಟ್ಟ ಚಿತ್ರ', 'ವಾಣಿಯ ಸಮಸ್ಯೆ' ಕತೆಗಳನ್ನು ಗಮನಿಸಿದರೆ ವಿವಾಹವೆಂದರೆ ಏನೆಂದೇ ತಿಳಿಯದ ವಯಸ್ಸಿನಲ್ಲಿ ವಿಧವೆಯರಾಗಿ, ಜೀವನವನ್ನು ಒಂಟಿಯಾಗಿ ಸಾಗಿಸಬೇಕಾದ ಸ್ತ್ರೀಯ ಬದುಕಿನ ಸಂಕಟಗಳನ್ನು ಇಲ್ಲಿ ತೆರೆದುಕೊಂಡಿವೆ. 'ವೇಣೀ ಸಂಹಾರ' ಕತೆಯು ವಿಧವೆಯಾದ ಶಾಂತಳ ಕುರಿತು ಹೇಳಿದರೂ ಗೌರಮ್ಮನವರ ಕತೆಗಳಿಗಿಂತ ಭಿನ್ನವಾಗುವುದು ವೈಧವ್ಯದೊಂದಿಗೆ ಕೇಶಮುಂಡನದ ಸಮಸ್ಯೆಯನ್ನು ಸೇರಿಸುವ ಕಾರಣಕ್ಕಾಗಿ. ಮೇಲಿನ ಕತೆಗಳಲ್ಲಿ ಬಾಲೆಯ ಮಾನಸಿಕ ವಿಶ್ಲೇಷಣೆಯ ಮೂಲಕ ವಿಧವೆಯ ಸಂಕಷ್ಟದ ಪರಿಯನ್ನು

ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ. ಕೊಡಗಿನ ಗೌರಮ್ಮನವರ ಕತೆಗಳಲ್ಲಿ ಕಂಡುಬರುವ ಅಂಶವು ಸಾಮಾಜಿಕ ನಿರ್ಬಂಧಗಳಿಂದ, ಪುರುಷನಿಂದ ಸ್ತ್ರೀಯರ ಮೇಲಾಗುತ್ತಿರುವ ದುಷ್ಪರಿಣಾಮ, ಅನ್ಯಾಯಗಳನ್ನು ವಿವೇಕದಿಂದ ಸುಧಾರಕ ದೃಷ್ಟಿಯಿಂದ ಎತ್ತಿ ತೋರಿಸುವುದೇ ಆಗಿದೆ. ಬಾಲ್ಯವಿವಾಹದಿಂದ ಈಗಾಗಲೇ ಗುರುತಿಸಿದಂತೆ, ಬದುಕಿನ ನಿಸ್ಸಾರತೆ, ವಿಧವೆಯರ ಹೆಚ್ಚಳ ಮುಂತಾದುವು ಸಮಸ್ಯೆಯಾಗಿ ಸಮಾಜವನ್ನು ಕಾಡಿರುವುದನ್ನು ಈ ಕತೆಗಳು ನಿರೂಪಿಸಿವೆ. ಬಾಲ ವೈಧವ್ಯದ ವಿಚಾರವನ್ನು ಕತೆಗಳಲ್ಲಿ ಹೇಳುವ ಸಂದರ್ಭದಲ್ಲಿ ಎಲ್ಲೂ ಬೋಧನೆಯ ಮತ್ತು ಉಪದೇಶದ ಮಾರ್ಗವನ್ನು ಅವರು ಹಿಡಿದಿಲ್ಲ.

ವೈಧವ್ಯ ಎಂಬುದು ಹಿಂದೂ ಧರ್ಮದಲ್ಲಿ ಹೆಣ್ಣಿನ ಬಾಳಿನ ಒಂದು ಅವಸ್ಥಾಂತರ ಮಾತ್ರವಾಗಿಲ್ಲ. ಅದು ಆಕೆಯನ್ನು ಜೀವಂತ ಸುಡುವುದಕ್ಕೆ ಸಮಾನವಾಗಿದೆ. ಹೆಣ್ಣು, ಬಾಲ್ಯ, ಯೌವನ ಮತ್ತು ವೃದ್ಧಾಪ್ಯಗಳಲ್ಲಿ ಕ್ರಮವಾಗಿ ತಂದೆ, ಗಂಡ ಹಾಗೂ ಮಗನ ರಕ್ಷಣೆಯಲ್ಲೇ ಇರಬೇಕೆಂದು ವಿಧಿಸುವ ಮೂಲಕ ಹಿಂದೂ ಧರ್ಮದಲ್ಲಿ ಹೆಣ್ಣಿಗೆ ಇರುವ ಪರಾವಲಂಬಿ ಸ್ಥಿತಿಯನ್ನು ಧರ್ಮಶಾಸ್ತ್ರಗಳು ರೂಪಿಸಿದೆ. ಅದು 'ನಾರೀಧರ್ಮ', 'ಸತೀಧರ್ಮ' ಎಂಬ ಹೆಸರಿನಲ್ಲಿ ವ್ಯವಸ್ಥಿತವಾಗಿ, ಆಕೆಯ ಮೇಲೆ ಬೌದ್ಧಿಕ ಹಿಡಿತವನ್ನು ಇರಿಸಿಕೊಂಡಿದೆ. ಹೀಗಾಗಿ ವೈಧವ್ಯದ ಸಂದರ್ಭದಲ್ಲಿ ಆಕೆಯ ಎಲ್ಲ ಹಕ್ಕುಗಳನ್ನು ಕಿತ್ತುಕೊಂಡು ಆಕೆಯನ್ನು ಇನ್ನಷ್ಟು ಅನಾಕರ್ಷಗೊಳಿಸುವ ಮತ್ತು ಅತಂತ್ರಗೊಳಿಸುವ ಕ್ರಿಯೆಯು ಮುಂದುವರೆದುಕೊಂಡು ಬಂದಿದೆ. ಯಾವುದೋ ಒಂದು ಸಂದರ್ಭದಲ್ಲಿ ರೂಢಿಗೆ ಬಂದ ವಿಧಿವಿಧಾನಗಳು ಮುಂದೆ ಅನಿವಾರ್ಯ ಅಂಗಗಳಾಗಿ ಬೆಳೆದುದು, ಕಾಲಾನಂತರದಲ್ಲಿ ಮತ್ತೆ ಅದು ಆಧುನಿಕ ಯುವ ಪೀಳಿಗೆಯ ಚಿಂತನ ಕ್ರಮದಿಂದ ಒಡೆದು ಕಾಣುವಂತಾದುದು ಗಮನಾರ್ಹ. ಆದರೆ ಇದೇ ಸಂದರ್ಭದಲ್ಲಿ ಅಥವಾ ಸಮಕಾಲೀನರಲ್ಲಿ ಅದನ್ನು ವಿರೋಧಿಸುವ ಆಧುನಿಕ ಸಂಪ್ರದಾಯವಾದಿಗಳೂ ಇದ್ದುದು ಗಮನಾರ್ಹವಾಗಿದೆ. ಭಾರತದಾದ್ಯಂತ ವಿಧವೆಯರ ಸಾಮಾಜಿಕ ಸ್ಥಿತಿಗತಿಗಳಲ್ಲಿ ಹೆಚ್ಚಿನ ವ್ಯತ್ಯಾಸಗಳು ಕಂಡುಬರುವುದಿಲ್ಲ. ಎಲ್ಲೆಡೆ ಏಕಪ್ರಕಾರವಾಗಿ ಆಕೆ ಮನುಷ್ಯ ಜೀವಿ ಎಂಬುದನ್ನೇ ಮರೆತಂತೆ ಭಾಸವಾಗುತ್ತದೆ. ಆಕೆಯನ್ನು ವಿರೂಪಗೊಳಿಸುವ ಪ್ರಕ್ರಿಯೆಗಳು ವ್ಯವಸ್ಥಿತವಾಗಿ ನಡೆದಿವೆ. ಬಳೆ ಒಡೆದು, ಕುಂಕುಮ ಅಳಿಸಿ, ಒಳ್ಳೆಯ ಉಡುಪು, ಹೂವನ್ನು ಧರಿಸಲು ನಿಷೇಧಿಸುವುದಲ್ಲದೆ, ಕೇಶವಪನವನ್ನು ಮಾಡಿ, ಅನ್ಯರಿರಲಿ ತನ್ನನ್ನು

ತಾನೆ ನೋಡಿಕೊಳ್ಳಲು ಅಸಾಧ್ಯವಾಗಿಸುವಂತೆ ಮಾಡುವ ಧಾರ್ಮಿಕ ಆಚರಣೆಗಳು ವಿಧವೆಯ ಬದುಕನ್ನು ಬರ್ಬರಗೊಳಿಸಿದ ಪರಿಯನ್ನು ಬಿಡಿಸಿಡುತ್ತವೆ.

ವಿಧವೆಯಾದವಳ ಬದುಕಿನ ಕ್ರೂರ ಚಿತ್ರಣ ಗಂಗಾಪಾದೇಕಲ್‌ರವರ 'ನಮ್ಮಲ್ಲಿ ಒಬ್ಬಳು ಅಕ್ಕಣಿ' ಕತೆಯಲ್ಲಿ ಕಂಡುಬರುತ್ತದೆ. ಹದಿಹರೆಯದಲ್ಲಿ ಗಂಡನನ್ನು ಕಳೆದುಕೊಂಡ 'ಅಕ್ಕಣಿ' ತನ್ನ ಹಸುಳೆ ಮಾಧವನಿಗಾಗಿ ಜೀವವನ್ನೇ ಮುಡಿಪಾಗಿಡುತ್ತಾಳೆ. ವಿದ್ಯಾವಂತನಾದ ಮಾಧವ ಪಟ್ಟಣವನ್ನು ಸೇರಿ ಆಂಗ್ಲೋ-ಇಂಡಿಯನ್ ಹುಡುಗಿಯನ್ನು ಪ್ರೇಮಿಸಿ ವಿವಾಹವಾಗುತ್ತಾನೆ. ಸೊಸೆಯೊಂದಿಗೆ ಸರಿ ಹೊಂದದ ಅಕ್ಕಣಿ ತನ್ನ ಹಳ್ಳಿಗೆ ಹಿಂದಿರುಗುತ್ತಾಳೆ. ವಿಧವೆಯಾದ ಅಕ್ಕಣಿ ತನ್ನ ಮಗನಿಗಾಗಿ ಜೀವ ತೇದರೂ ಮಗನೊಂದಿಗೆ ಬದುಕುವ ಅವಕಾಶದಿಂದ ವಂಚಿತಳಾಗುತ್ತಾಳೆ. "ವಿನೂ ನೀನಂದೆಯಲ್ಲವೆ ಆಗ? ಇದೊಂದು ಮಾಮೂಲಿ ಕಥೆಯೆಂದು ನಿಜ ವಿನೂ, ಇಂಥ ಲಕ್ಷಾಂತರ ಅಕ್ಕಣಿಯರು ನಮ್ಮಲ್ಲಿರಬಹುದು. ಅದಕ್ಕೇ ಅದು ನಮಗೆ ಮಾಮೂಲಿಯಾಗಿದೆ. ಮಗನಿದ್ದೂ ತಿಂದುಂಬುವ, ಕಂಡವರ ಬಾಗಿಲು ಕಾವ ಅಕ್ಕಣಿಯಂಥ ವೃದ್ಧೆಯರು ನಮ್ಮಲ್ಲೆಷ್ಟು ಮಂದಿಯೋ? ನಮ್ಮ ಹೈ ಕಲ್ಚರ್ ಸೊಸೈಟಿ, ಆಧುನಿಕತೆ, ಪಾಶ್ಚಾತ್ಯರ ಅನುಕರಣೆ ನಮ್ಮಲ್ಲಿ ಮಾಡಿದ್ದೇನು ಗೊತ್ತೇ? ಮನುಷ್ಯ ಸಹಜ ಭಾವನೆಗಳ ಸಮಾಧಿ, ನಾವೆಲ್ಲ ಯಂತ್ರ ಮಾನವರು. ವಿನೂ, ಯಂತ್ರ ಮಾನವರು". (ಗಂಗಾಪಾದೇಕಲ್; ಹೆಜ್ಜೆ ಮೂಡದ ಹಾದಿಯಲ್ಲಿ; ೧೯೮೮; ಪುಟ ೧೯) ಸುಜಾತ ನಿರೂಪಗೆ ಹೇಳುವ ಈ ಮಾತಿನಲ್ಲಿ ಆಧುನಿಕತೆಯ ಪ್ರಭಾವದಿಂದ ಮಾನವೀಯ ಸಂಬಂಧಗಳು ಮುರಿದು ಬೀಳುವ ಚಿತ್ರಣವಿದೆ. ಮನೋರಮಾ ಎಂ. ಭಟ್ ಅವರ 'ಪೀಪೀ ಅಜ್ಜ' ಕತೆಯಲ್ಲಿ ತನ್ನ ನಿಧನಾನಂತರ ಕುಂಕುಮ ಅಳಿಸಬಾರದು ಎಂಬುದಾಗಿ ಪೀಪೀ ಅಜ್ಜ ತನ್ನ ಪತ್ನಿಗೆ ಹೇಳುತ್ತಾನೆ. ಆದರೆ ವಾಸ್ತವದಲ್ಲಿ ಅಜ್ಜನ ಅನಿಸಿಕೆಗಳಿಗೆ ಬೆಲೆ ಕೊಡದೆ ವಿಧವೆಯಾದ ಪೀಪೀ ಅಜ್ಜಿಯನ್ನು ಸಂಪ್ರದಾಯದಂತೆ ನಡೆಸಿಕೊಂಡಿದ್ದರು. "ಕಲಾ........ ಅಲ್ಲಿ ಕಂಡದ್ದು........ ಒಬ್ಬ ಸಾಮಾನ್ಯಳಾದ ವಿಧವೆ ಮುದುಕಿಯನ್ನ....... ಅಜ್ಜನ ಅನಿಸಿಕೆಗಳನ್ನು ಯಾರೂ ಗೌರವಿಸಲೇ ಇಲ್ಲ....... ಅಜ್ಜಿಯ ಹಣೆ...... ಕುಂಕುಮವಿಲ್ಲದೆ ಬೋಳು ಬೋಳಾಗಿತ್ತು....... ಛೆ...... ಗಂಡ ಸತ್ತವರು ಹೀಗೆ ಇರಕೂಡದು ಅಂತ ಬಾಯಿ ಬಿಟ್ಟು ಹೇಳಿದ್ದರು ಪೀಪೀ ಅಜ್ಜ". (ಮನೋರಮಾ ಎಂ. ಭಟ್; ಸ್ವಯಂವರ; ೧೯೯೪; ಪುಟ ೧೨). 'ವಿಧವೆ'ಯರ ಕುರಿತು "ಭಾರತೀಯ

ಸಮಾಜದಲ್ಲಿ ಇಂದೂ 'ವಿಧವೆ' ಅತ್ಯಂತ ನಿಕೃಷ್ಟ ಜೀವಿ. ವಿಧವೆಯ ಬದುಕು ಅತ್ಯಂತ ದಾರುಣವಾದುದು. ಆಕೆ ನಮ್ಮ ಸಾಮಾಜಿಕ ಧಾರ್ಮಿಕ ಕಾರ್ಯಗಳಲ್ಲಿ 'ಅಸ್ಪೃಶ್ಯರು' ನಾವು ವಿಧವೆಯನ್ನು ಕಾಣುವ ರೀತಿಯೇ 'ಜೀವ ವಿರೋಧಿ' ಹಾಗೂ 'ಅಮಾನವೀಯ' ಎಂದು ನನ್ನ ಭಾವನೆ" (ಮನೋರಮಾ ಎಂ. ಭಟ್; ಸ್ವಯಂವರ, ಎರಡು ಮಾತು; ೧೯೯೪; ಪುಟ ೧೨) ಎಂಬುದು ಮನೋರಮಾ ಭಟ್‌ರವರ ಅಭಿಪ್ರಾಯ. ತಮ್ಮ ಕತೆಗಳಲ್ಲಿ 'ವಿಧವೆ'ಯರ ಕುರಿತು ಪ್ರಗತಿಪರ ಆಶಯವನ್ನು ವ್ಯಕ್ತಪಡಿಸಿದ ಅವರು ವೈಯುಕ್ತಿಕ ಬದುಕಿನಲ್ಲಿಯೂ ಹೂ, ಕುಂಕುಮ ಅಳಿಸದೆ, ಕರಿಮಣಿ ತೆಗೆದಿಡದೆ ದಿಟ್ಟತನವನ್ನು ತೋರಿದ್ದಾರೆ.

ವಿಧವಾ ಸಮಸ್ಯೆಗೆ ಸಂಬಂಧಿಸಿದಂತೆ ಬಂದ ಕತೆಗಳನ್ನು ಗಮನಿಸಿದಾಗ ಕೆಲ ಮುಖ್ಯ ತೀರ್ಮಾನಗಳಿಗೆ ಬರಬಹುದು. ವಿಧವಾ ಸಮಸ್ಯೆಯ ನಾನಾ ಮುಖಗಳನ್ನು ಚಿತ್ರಿಸಿದ ಕತೆಗಾರರು ಸಮಸ್ಯೆಯನ್ನು ಪ್ರಧಾನವಾಗಿ ಎರಡು ನೆಲೆಗಳಲ್ಲಿ ಗ್ರಹಿಸಿದ್ದಾರೆ. ಒಂದು, ಬಾಲವಿಧವೆಯ ವೈಧವ್ಯವನ್ನು ಕಂಡ ಮುಗ್ಧವಾದ ಬಗೆ. ಎರಡನೆಯದು ಪ್ರೌಢ ವಿಧವೆ ಅಥವಾ ಬಾಲ ವಿಧವೆ ಪ್ರೌಢಳಾದಾಗ ಆಕೆ ವೈಧವ್ಯದಿಂದಾಗಿ ಎದುರಿಸುವ ಮಾನಸಿಕ ಮತ್ತು ದೈಹಿಕ ಸಮಸ್ಯೆಗಳನ್ನು ಬಚ್ಚಿಡುವ ಬಗೆ.

ವೇದ–ಸ್ಮೃತಿಗಳಲ್ಲೆಲ್ಲ ಪುನರ್ವಿವಾಹಕ್ಕೆ ಅವಕಾಶವಿತ್ತು. ಪುನರ್ವಿವಾಹವು 'ಪಾಪ' ಎಂಬ ಕಲ್ಪನೆಯೇ ಇರಲಿಲ್ಲ ಎನ್ನುವುದು ಸ್ಪಷ್ಟವಾಗಿದೆ. ಪುನರ್ವಿವಾಹವಾಗುವ ಸ್ತ್ರೀಯರನ್ನು 'ಅನ್ಯಪೂರ್ವ' ಹಾಗೂ 'ಅನನ್ಯ ಪೂರ್ವ' ಎಂದು ಎರಡು ವಿಧದಲ್ಲಿ ವಿಂಗಡಿಸುತ್ತಿದ್ದ ಬಗ್ಗೆ ಮತ್ತು ಲಗ್ನವಾಗಿ ಬ್ರಹ್ಮಚಾರಿಯಾಗಿದ್ದವಳು ಪುನರ್ವಿವಾಹ ಮಾಡಿಕೊಡರೆ 'ಪುನರ್ಭ' ಎಂದು ಕರೆಯುತ್ತಿದ್ದರು. ಇದರಲ್ಲಿ ಒಳವಿಭಾಗಗಳಾಗಿ 'ಕ್ಷತಾ' ಮತ್ತು 'ಅಕ್ಷತಾ' ಎಂಬ ವರ್ಗೀಕರಣವಿತ್ತು. ವಿಧವೆಯರು ಬ್ರಹ್ಮಚರ್ಯ, ವ್ರತದಿಂದಿರುವುದು 'ಉತ್ತಮ', ಸಹಗಮನದಿಂದ ಸತಿಯಾಗುವುದು 'ಮಧ್ಯಮ', ಪುನರ್ವಿವಾಹ ಮಾಡಿಕೊಳ್ಳುವುದು 'ಅಧಮ' ಎಂಬ ಅಭಿಪ್ರಾಯ ವೇದ ಸಮ್ಮತವಾಗಿತ್ತು.[೧]

೧.ನೋಡಿ :
ಅ. ಋಗ್ವೇದ ಮಂತ್ರ : ೧೦ : ಸೂ. ೪೦. ಮಂ. ೫
ಆ. ಹೆಚ್ಚಿನ ವಿವರಕ್ಕೆ ನೋಡಿ : ನಂದಿನಿ : ವಿಧವೆಯರ ಸಮಸ್ಯೆಗಳು : ೩–೧೧

ವೈದಿಕ ಕಾಲದ ಕೊನೆಯ ಹೊತ್ತಿಗೆ ಈ ರೀತಿಯ ವಿಧವಾ ವಿವಾಹದ ಸ್ವಾತಂತ್ರ್ಯವನ್ನು ಕಳೆದುಕೊಂಡಂತೆ ತಿಳಿದು ಬರುತ್ತದೆ. ಸ್ತ್ರೀಗೆ ಇರುವ ಆಸ್ತಿ ಹಕ್ಕಿನ ಪ್ರಶ್ನೆ ಹಾಗೂ ನೈತಿಕತೆಯ ಪ್ರಶ್ನಗಳೇ ಇದಕ್ಕೆ ಮುಖ್ಯವಾಗಿತ್ತೆಂದು ತೋರುತ್ತದೆ. ಆದರೆ ಈ ರೀತಿಯ ಪುನರ್ವಿವಾಹ ನಿಷೇಧ ವೈದಿಕರಲ್ಲಿಯೇ ಅಧಿಕೃತವಾಗಿ ನೆಲೆ ನಿಂತಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ. ಹವ್ಯಕ ಕತೆಗಾರ್ತಿಯರಾದ ಲೀಲಾ ಮಣ್ಣಾಲರ 'ಹೊಳೆ ದಾಟಿದ ಮೇಲೆ', ಗಂಗಾ ಪಾದೇಕಲ್‌ರವರ 'ಪರೀಕ್ಷೆ' ಕತೆಗಳಲ್ಲಿ ವಿಧವೆಯರ ಪುನರ್ವಿವಾಹದ ಚಿತ್ರಣ ಕಂಡುಬರುತ್ತದೆ. ಮಣ್ಣಾಲರ 'ಹೊಳೆ ದಾಟಿದ ಮೇಲೆ' ಕತೆಯಲ್ಲಿ ಧನಂಜಯರಾವ್ ಗಾಂಧೀಜಿಯ ಜೀವನ ತತ್ತ್ವಗಳಿಂದ ಬಹಳಷ್ಟು ಪ್ರಭಾವಿತರಾಗಿ ಅನೇಕ ರೀತಿಯ ಸಮಾಜ ಸುಧಾರಣೆಯ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. "ಸ್ವತಃ ತಾನು ವಿಧವೆಯೊಬ್ಬಳನ್ನು ಮದುವೆಯಾಗಿ ಮಾರ್ಗದರ್ಶಿಯಾಗಿದ್ದ" (ಲೀಲಾಮಣ್ಣಾಲ; ತೆರೆ; ೧೯೯೮; ಪುಟ ೬೧) ಎಂಬ ಮಾತಿನಲ್ಲಿ ಧನಂಜನ ರಾವ್ ವಿಧವಾ ವಿವಾಹಕ್ಕೆ ಬೆಂಬಲ ನೀಡಿದ್ದು ಸ್ಪಷ್ಟವಾಗಿದೆ. ಇದು ವೈಧವ್ಯದ ಸಮಸ್ಯೆಗೆ ಲೇಖಕಿ ಸೂಚಿಸುವ ಪರಿಹಾರದ ಮಾರ್ಗವೂ ಹೌದು. ಗಂಗಾ ಪಾದೇಕಲ್‌ರವರ 'ಪರೀಕ್ಷೆ' ಕತೆಯಲ್ಲಿ ಕುಸುಮಳ ಮರುವಿವಾಹವನ್ನು ಕಥೆ ಆಶಿಸುವುದಾದರೂ ಈ ಮದುವೆಗೆ ಒಪ್ಪಲಾಗದ ಶಾಸ್ತ್ರಿಗಳ ಸ್ಥಿತಿಯನ್ನು ವಿವರಿಸುತ್ತದೆ. ಮಹೇಶ, ರಾಜಾರಾಯರು ಇರುವ ಸ್ಥಿತಿಯೇ ಬೇರೆ, ಶಾಸ್ತ್ರಿಗಳಿರುವ ಪರಿಸ್ಥಿತಿಯೇ ಬೇರೆ. ತಮ್ಮ ಮಗಳ ಸುಖಕ್ಕೆ ಅಡ್ಡಿ ಬರುವಂತಾದ ಅವರ ಸಾಂಪ್ರದಾಯಿಕ, ಸಾಮಾಜಿಕ, ಆರ್ಥಿಕ ಬಿಕ್ಕಟ್ಟು ಮತ್ತು ಸ್ನೇಹ ಅವರನ್ನು ಇಕ್ಕಟ್ಟಿನಲ್ಲಿ ಸಿಕ್ಕಿಸುತ್ತದೆ. ಆದರೆ ರಾಜಾರಾಯ, ಮಹೇಶ ಸಾಂಪ್ರದಾಯಿಕ ಜಾಡಿನಿಂದ ಆಚೆ ಹೋಗಿ ತಮ್ಮ ಜೀವನದಲ್ಲೇ ಬದಲಾವಣೆಯನ್ನು ಒಪ್ಪಿಕೊಂಡವರು. ಹೀಗಾಗಿ ಇಲ್ಲಿಯ ವಿಧವಾ ವಿವಾಹದ ಹಿಂದೆ ಪ್ರೀತಿ ಮತ್ತು ಔದಾರ್ಯ ಕೆಲಸ ಮಾಡಿದೆ. ಈ ನಿರ್ಣಯವನ್ನು ತೆಗೆದುಕೊಳ್ಳುವ ಜಾಗದಲ್ಲಿ ಗಂಡಸರಿದ್ದು ಅವರೇ ವಿಧವಾ ವಿವಾಹವನ್ನು ಪ್ರೋತ್ಸಾಹಿಸಿದ್ದಾರೆ. ವೈಧವ್ಯದ ಕಾರಣದಿಂದ ಸ್ವತಃ ನೊಂದಿರುವ ಗಂಗಾಪಾದೇಕಲ್‌ರವರು ವಿಧವಾ ಸಮಸ್ಯೆಗೆ ಪರಿಹಾರವಾಗಿ ಮರುಮದುವೆಯ ಕಲ್ಪನೆಯನ್ನು ಕತೆಗಳಲ್ಲಿ ನೀಡಿರುವುದು ಅರ್ಥಪೂರ್ಣವಾಗಿದೆ.

ಲೀಲಾ ಮಣ್ಣಾಲರ 'ಗಾಜಿನ ಗೊಂಬೆಗಳು' ಕತೆಯಲ್ಲಿ ವಿಧವೆಯರ ಮರುವಿವಾಹಕ್ಕಾಗಿ ನಿರೂಪಕ 'ಹೊಂಬೆಳಕು' ಎಂಬ ಸಂಸ್ಥೆಯನ್ನು ಹುಟ್ಟು ಹಾಕುವ ಮೂಲಕ ವಿಧವೆಯರ ಸಮಸ್ಯೆಗೆ ಸ್ಪಂದಿಸುವ ವಿಚಾರ ಕಂಡುಬರುತ್ತದೆ. ಸಂಸ್ಥೆಯ ಆರ್ಥಿಕ ವೆಚ್ಚವನ್ನು ಭರಿಸುವ ಉದ್ದೇಶದಿಂದ ಪ್ರಸಿದ್ಧ ಗಾಯಕಿ ನಯನ ತಾರಾಳ ಸಂಗೀತ ಕಾರ್ಯಕ್ರಮವನ್ನು ಆಯೋಜಿಸುತ್ತಾರೆ. ಆದರೆ 'ಹೊಂಬೆಳಕು' ಎಂಬ ಸಂಸ್ಥೆ ವಿಧವೆಯರಿಗೆ ಆಶ್ರಯ ನೀಡುವ ಸಂಸ್ಥೆ ಎಂದು ತಿಳಿದಾಗ ನಯನ ತಾರಾಳ ಗಂಡ ಚಂದ್ರಕಾಂತ ಕಾರ್ಯಕ್ರಮವನ್ನು ರದ್ದುಗೊಳಿಸುತ್ತಾನೆ. ಕೊನೆಗೆ ವಿಧವೆಯಾದ ನಯನ ತಾರಾ ಆಸರೆಗಾಗಿ 'ಹೊಂಬೆಳಕು' ಸಂಸ್ಥೆಯ ಸಹಾಯವನ್ನು ಯಾಚಿಸಿ ಬರುತ್ತಾಳೆ. " ಆಕೆಯ ತಲೆಯನ್ನು ಬೋಳಿಸಲಾಗಿತ್ತು. ಉಟ್ಟಿದ್ದ ಕೆಂಪು ಸೀರೆಯ ಸೆರಗನ್ನು ತಲೆಯ ಮೇಲೆ ಹೊದ್ದು ಮುಖ ತಗ್ಗಿಸಿ, ನಿಧಾನವಾಗಿ ನಡೆದು ಬರುತ್ತಿದ್ದಳು. ಆಕೆಯ ಹಣೆಯಲ್ಲಿ ಕುಂಕುಮ ಆಗಲೀ ಕೈಯಲ್ಲಿ ಬಳೆಯಾಗಲೀ ಇರಲಿಲ್ಲ." (ಲೀಲಾ ಮಣ್ಣಾಲ; ತೆರೆ; ೧೯೯೮; ಪುಟ ೧೩೭) ಎಂಬ ನಿರೂಪಕರ ಮಾತಿನಲ್ಲಿ ೧೯೫೦ರ ದಶಕದ ಮಧ್ಯಮ ವರ್ಗದ ಹವ್ಯಕ ಬ್ರಾಹ್ಮಣ ಕುಟುಂಬದ ವಿಧವೆಯ ಚಿತ್ರಣವಿದೆ. ಬಾಲ್ಯದಲ್ಲಿ ನಾನು ನೋಡಿದ ವಿಧವೆಯರ ದಾರುಣ ಬದುಕಿಗಾಗಿ ಪರಿತಪಿಸಿದ ನಿರೂಪಕರು ಅವರ ಉದ್ಧಾರಕ್ಕಾಗಿ 'ಹೊಂಬೆಳಕು' ಎಂಬ ಸಂಸ್ಥೆಯನ್ನು ಹುಟ್ಟು ಹಾಕುತ್ತಾರೆ. "ಮರುವಿವಾಹದಲ್ಲಿ ಇಚ್ಛೆಯುಳ್ಳ ಸ್ತ್ರೀಯರು ಹಾಗೂ ಇಂಥವರನ್ನು ಕೈ ಹಿಡಿಯಲು ಆಸಕ್ತಿಯುಳ್ಳ ಪುರುಷರು ನಮ್ಮ ಸಂಸ್ಥೆಯಲ್ಲಿ ತಮ್ಮ ಹೆಸರನ್ನು ನೋಂದಾಯಿಸಿಕೊಳ್ಳಬಹುದಾಗಿದ್ದಿತು. ಪರಸ್ಪರ ಭೇಟಿ ಮಾಡಿಸಿ, ಮುಂದಿನ ಬದುಕಿಗೆ ದಾರಿ ಸುಗಮಗೊಳಿಸಿ ಕೊಡುವುದಷ್ಟೇ ನಮ್ಮ ಕೆಲಸ" (ಲೀಲಾ ಮಣ್ಣಾಲ; ತೆರೆ; ೧೯೯೮; ಪುಟ ೧೩೯) ಎಂಬ ಮಾತುಗಳಲ್ಲಿ ಸಂಸ್ಥೆಯ ಧ್ಯೇಯೋದ್ದೇಶ ವ್ಯಕ್ತವಾಗುತ್ತದೆ. ಸಾರ್ವಜನಿಕವಾಗಿ ನಿರೂಪಕರು ಹಲವು ತೊಂದರೆಗಳನ್ನು ಅನುಭವಿಸಿದರೂ, ವಿಧವೆಯರ ಬಾಳಿನಲ್ಲಿ ಬೆಳಕು ಮೂಡಿಸಿದ ಧನ್ಯತಾಭಾವ ಅವರ ಮಾತಿನಲ್ಲಿ ಕಂಡುಬರುತ್ತದೆ. "ನಮ್ಮ ಸಂಸ್ಥೆಯು ನಡೆಸುತ್ತಿರುವ ಸೇವಾಕಾರ್ಯದ ಕುರಿತು ಪತ್ರಿಕೆಗಳ ಮೂಲಕ ವ್ಯಾಪಕ ಪ್ರಚಾರ ದೊರೆತಿದ್ದಿತು. ಕೆಲಜನರ ಬದುಕನ್ನಾದರೂ ಹಸನುಗೊಳಿಸಲು ಸಾಧ್ಯವಾಗುತ್ತಿರುವುದು ನಮ್ಮಲ್ಲಿ ಸಾರ್ಥಕತೆಯನ್ನು ಮೂಡಿಸಿತ್ತು. ವಿಶೇಷವೆಂದರೆ ಹಲವು ಜನರ ಧೋರಣೆಯನ್ನು ಬದಲಿಸುವುದರಲ್ಲಿಯೂ ನಾವು

ಸಫಲರಾಗಿದ್ದೆವು". (ಲೀಲಾ ಮಣ್ಣಾಲ; ತೆರೆ; ೧೯೯೮; ಪುಟ ೧೪೬). ವಿಧವೆಯರ ಉದ್ಧಾರಕ್ಕಾಗಿ ಸಂಸ್ಥೆಯನ್ನು ಸ್ಥಾಪಿಸಿ ಅವರನ್ನು ಉದ್ಧರಿಸಿದ ನಿರೂಪಕರ ಕೆಲಸ ಉಳಿದವರಿಗೆ ಮಾದರಿಯಾಗಬಲ್ಲುದು.

ಮನೋರಮಾ ಎಂ. ಭಟ್ ಅವರ 'ಮುಖವಾಡ' ಕತೆಯಲ್ಲಿ ಸಮಾಜಸೇವಕಿಯಾದ ಸುನಂದಮ್ಮ ಓರ್ವ ಬಾಲ ವಿಧವೆಯ ಮದುವೆಯನ್ನು ಮಾಡಿಸಿ ಸಮಾಜ ಸೇವಕರೆಂಬ ಹೆಗ್ಗಳಿಕೆಯನ್ನು ಪಡೆಯುತ್ತಾರೆ. ಆದರೆ ತಮ್ಮದೇ ಮೊಮ್ಮಗಳ ಮದುವೆಗೆ ಆ ವಿಧವೆಗೆ ಆಮಂತ್ರಣವನ್ನೇ ಕೊಡದ ಚಿತ್ರಣ ಕಂಡುಬರುತ್ತದೆ. ಕಥಾ ನಿರೂಪಕಿ ಸ್ವಾತಿಯ ಬಾಲ್ಯದ ಗೆಳತಿ ಮಂಗಳೆಯ ಗಂಡ ಅಪಘಾತಕ್ಕೆ ತುತ್ತಾಗಿ ಮರಣ ಹೊಂದಿದಾಗ ಅವಳ ಗಂಡ ಸುನೀಲ ಮಂಗಳೆಯ ಜವಾಬ್ದಾರಿಯನ್ನು ವಹಿಸಕೊಳ್ಳುತ್ತಾನೆ. ಸಮಾಜ ಸೇವಕಿ ಸುನಂದಮ್ಮನ ಮೂಲಕವಾಗಿ ಮುರಲಿಯೊಂದಿಗೆ ಮಂಗಳಳ ಮರುವಿವಾಹ ನೆರವೇರುತ್ತದೆ. ಮಹಿಳಾ ಜಾಗೃತಿ ಸಮಿತಿಯ ಸುನಂದಮ್ಮನ ಮಾತುಗಳಲ್ಲಿ ವಿಧವಾ ಪುನರ್‌ವಿವಾಹದ ಕುರಿತ ಅವರ ನಿಲುವು ಸ್ಪಷ್ಟವಾಗುತ್ತದೆ. "ಮಹಿಳೆಗೂ ಬದುಕುವ ಹಕ್ಕಿದೆ. ಪತ್ನಿಯನ್ನು ಕಳಕೊಂಡ ಪುರುಷ ಮರುಮದುವೆ ಆಗುವುದಾದರೆ ಎಳೆಯ ವಯಸ್ಸಿನ ಯುವತಿ ಯಾಕೆ ಅಜೀವ ಪರ್ಯಂತ ಏಕಾಂಗಿಯಾಗಿ ಇರಬೇಕು...... ಗಂಡಿಗೊಂದು ನೀತಿ– ಹೆಣ್ಣಿಗೊಂದು ನೀತಿಯೇ........ ಮನುಧರ್ಮ ಶಾಸ್ತ್ರದಲ್ಲಿಯೇ ಹೇಳಿದೆ....... ಯುವತಿಗೆ ಪತಿವಿಯೋಗವಾದರೆ – ಮಕ್ಕಳಿಲ್ಲದಿದ್ದರೆ – ಆಕೆ ಅನಾಥೆಯಾಗುವ ಬದಲು........ ಆಕೆಯ ಪತಿಯ ತಮ್ಮನಿಗೆ......... ಅಕೆಯನ್ನು ಮದುವೆ ಮಾಡಬಹುದು ಅಂತ." (ಮನೋರಮಾ ಎಂ. ಭಟ್; ಸ್ವಯಂವರ; ೧೯೯೪; ಪುಟ ೧೦೯). ಆದರೆ ಅದೇ ಸುನಂದಮ್ಮ ತಮ್ಮ ಮೊಮ್ಮಗಳ ಮದುವೆಯ ಸಂದರ್ಭದಲ್ಲಿ ಸ್ವಾತಿಯು ಮಂಗಳೆಯ ಬಗೆಗೆ ವಿಚಾರಿಸಿದಾಗ ಅವಳು ಪ್ರತಿಕ್ರಿಯಿಸುವ ರೀತಿ ಅವಳ ದ್ವಿಮುಖ ನೀತಿಯನ್ನು ಚಿತ್ರಿಸುತ್ತದೆ. "ಛೆ ನಿಂಗೆ ಅಷ್ಟೂ ಗೊತ್ತಾಗೋದಿಲ್ವೇ, ಮದುವೆ ಅಂದ್ರೆ ಅತ್ಯಂತ ಪವಿತ್ರವಾದ ಕಾರ್ಯ......... ಒಬ್ಬಾಕೆಯ ಜೀವಮಾನಕ್ಕೆ ಸಂಬಂಧಿಸಿದ್ದು........ ಆದ್ದರಿಂದ ದೈವ ದೇವರುಗಳ ಇಷ್ಟ ಆಗದೇ ಇರೋದನ್ನು ಮಾಡೋಕಾಗುತ್ತಾ ಹೇಳು. ಇದು ನನ್ನ ಮೊಮ್ಮಗಳ ಮದುವೆ......" (ಮನೋರಮಾ ಎಂ. ಭಟ್; ಸ್ವಯಂವರ; ೧೯೯೪; ಪುಟ ೧೧೧).

ವಿಧವಾ ವಿವಾಹದ ಕುರಿತು ಇಬ್ಬಗೆಯ ಧೋರಣೆಯನ್ನು ಹೊಂದಿರುವ ಸುನಂದಮ್ಮನಂತಹ ವ್ಯಕ್ತಿಗಳನ್ನು ಲೇಖಕಿ ಇಲ್ಲಿ ವಿಡಂಬಿಸಿದ್ದಾರೆ.

ಹಿಂದೂ ವಿಧವೆಯರ ಪುನರ್ವಿವಾಹಕ್ಕೆ ಸಂಬಂಧಿಸಿದ ಕಾನೂನು ೧೮೫೬ನೇ ಜುಲೈ ೨೫ರಂದು ಜಾರಿಗೆ ಬಂದಿತು. ಈ ಕಾನೂನನ್ನು ಈಸ್ಟ್ ಇಂಡಿಯಾ ಕಂಪೆನಿ ಸರ್ಕಾರವೇ ಜಾರಿಗೆ ತಂದರೂ, ಇದರ ಹಿಂದೆ ರಾಜಾರಾಂ ಮೋಹನರಾಯ್ ಮತ್ತು ಈಶ್ವರ ಚಂದ್ರ ವಿದ್ಯಾಸಾಗರ್ ಅವರ ಅತುಲ ಪರಿಶ್ರಮವಿರುವುದನ್ನು ಮರೆಯುವಂತಿಲ್ಲ.

ಈ ಕಾನೂನಿನ ಪ್ರಕಾರ –

೧. ಹಿಂದೂ ವಿಧವೆಯರ ವಿವಾಹವು ಕಾನೂನು ಸಮ್ಮತವಾಯಿತು.

೨. ಅವಳು ಪ್ರಥಮ ವಿವಾಹವಾಗಿದ್ದರೆ ಹೇಗೆ ಗಂಡನ ಎಲ್ಲಾ ಆಸ್ತಿಗೂ ವಿಷಯಗಳಿಗೂ ಬಾಧ್ಯಳಾಗುತ್ತಿದ್ದಳೋ, ಹಾಗೆಯೇ, ಈ ಎರಡನೇ ಗಂಡನ ಎಲ್ಲ ಜವಾಬ್ದಾರಿಗಳಿಗೂ ಆಸ್ತಿಗೂ ಹಕ್ಕುದಾರಳಾಗುವಳು.

೩. ಬಾಲವಿಧವೆಯಾಗಿದ್ದಲ್ಲಿ ಹಿರಿಯರ ಸಮ್ಮತಿ ಪುನರ್ವಿವಾಹಕ್ಕೆ ಅಗತ್ಯವಾಗಿದೆ.

೪. ಯುವತಿ ವಿಧವೆಯರಿಗೆ ಶೋಭನವಾಗಿದ್ದರೂ ಅವಳ ಪುನರ್ವಿವಾಹವು ನ್ಯಾಯ ಸಮ್ಮತ ಎನಿಸಿತು.[೧]

ಇಂಥ ವಿಧವಾ ವಿವಾಹ ರಕ್ಷಣಾ ಕಾನೂನು ೧೮೫೬ರಷ್ಟು ಹಿಂದೆಯೇ ಜಾರಿಗೆ ಬಂದುದರಿಂದಾಗಿಯೇ ಲೇಖಕರಲ್ಲಿ ವಿಧವಾ ಸಮಸ್ಯೆ ಕುರಿತು ಇಷ್ಟು ದೀರ್ಘ ಚರ್ಚೆ ನಡೆಯಲು, ಕತೆಗಳು ಹುಟ್ಟಿಕೊಳ್ಳಲು ಕಾರಣವಾಯಿತು. ಈ ವಿಷಯಕ್ಕೆ ಸ್ಪಂದಿಸಿದ ಲೇಖಕಿಯರ ಧೋರಣೆಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಗಳು ನಿಚ್ಚಳವಾಗಿ ಕಂಡುಬರುತ್ತದೆ. ಲೇಖಕಿಯರು ವಿಧವಾ ಸಮಸ್ಯೆ ಕುರಿತಂತೆ ಒಂದು ಹೆಜ್ಜೆ ಮಾತ್ರ ಮುಂದೆ ಬಂದು ಯೋಚಿಸಿದ್ದಾರೆ. 'ವಿಧವೆಗೆ ವಿವಾಹವೇ ಅಂತಿಮವಲ್ಲ' ಅದರಿಂದ ಹೊರತಾದ, ಸುರಕ್ಷಿತವೂ, ಸುಭದ್ರವೂ ಆದ ಒಂದು ರಕ್ಷಣೆಯನ್ನು ಒದಗಿಸುವುದು ಮುಖ್ಯ ಎಂಬುದೇ ಅವರ ಆಲೋಚನೆಗಳ ಸಂಗ್ರಹ. ಸ್ತ್ರೀ ಸಮಸ್ಯೆಗಳ ಕುರಿತು ಬರೆಯುವಾಗ ಸಾಂಪ್ರದಾಯಿಕ ನಿಲುವಿನಿಂದ ಸಂಪೂರ್ಣ ಹೊರಬಂದು ಯೋಚಿಸಲು ಹವ್ಯಕ

**೧ ಹೆಚ್ಚಿನ ವಿವರಕ್ಕಾಗಿ ನೋಡಿ :**

**ನಂದಿನಿ : ವಿಧವೆಯರ ಸಮಸ್ಯೆಗಳು : ಪುಟ ೩೫**

ಮಹಿಳೆಯರಿಂದ ಸಾಧ್ಯವಾಗಲಿಲ್ಲ. ವಿಧವಾ ವಿವಾಹ ಸಮಸ್ಯೆಯು ಬ್ರಾಹ್ಮಣರಲ್ಲಿ ತೀವ್ರವಾಗಿ ಚರ್ಚೆಯಾಗಿದ್ದು ಕಂಡುಬರುತ್ತದೆ. ವಿಧವೆಗೆ ಮರು ವಿವಾಹದ ಹಕ್ಕನ್ನು ಕೊಡದ, ಶೃಂಗಾರ ಸಾಮಾಗ್ರಿ ಬಳಸಲು ಅಯೋಗ್ಯಳನ್ನಾಗಿಸಿದ, ಎಲ್ಲಕ್ಕೂ ಹೆಚ್ಚಾಗಿ ಕೇಶಮುಂಡನ ಮಾಡುವ ಕ್ರಿಯೆಗಳೆಲ್ಲ ಬ್ರಾಹ್ಮಣರಲ್ಲಿ ಕಾಣುವ ಅಂಶಗಳಾಗಿವೆ. ವೈದಿಕ ವ್ಯವಸ್ಥೆಯು ವಿಧವೆಯರ ಮೇಲೆ ಹೇರಿದ ಪುನರ್ವಿವಾಹ ನಿಷೇಧ, ವೈಧವ್ಯದ ನಿಷ್ಠುರತೆ, ಕೇಶಮುಂಡನ ಇತ್ಯಾದಿ ಅಮಾನುಷ ನೀತಿ ನಿಯಮಗಳು ಸ್ತ್ರೀಯರ ಅಸ್ತಿತ್ವ ಮತ್ತು ಆತ್ಮಾಭಿಮಾನವನ್ನು ಅತಂತ್ರವಾಗಿಸುವ ಸಾಮಾಜಿಕ ಕ್ರೌರ್ಯವನ್ನು ತಮ್ಮ ಬರಹಗಳಲ್ಲಿ ವ್ಯಕ್ತ ಪಡಿಸಿದ್ದಾರೆ. ಕೇಶ ಮುಂಡನ, ವೈಧವ್ಯದ ಕ್ರೂರ ಆಚರಣೆಗಳ ಹೆಸರಿನಲ್ಲಿ ಕುಟುಂಬದ ಹಿರಿಯರಿಂದಲೇ ಮಹಿಳೆಯ ಮೇಲೆ ನಡೆಯುತ್ತಿದ್ದ ಅನ್ಯಾಯಗಳ ವಿರುದ್ಧ ತಮ್ಮ ಬರವಣಿಗೆಯ ಮೂಲಕ ಪ್ರತಿಭಟನೆ ವ್ಯಕ್ತ ಪಡಿಸಿರುವುದು ಅವರ ಸಂವೇದನಾಶೀಲ ಪ್ರವೃತ್ತಿಗೆ ಸಂಕೇತವಾಗಿದೆ.

### ೬. ೨ ವರದಕ್ಷಿಣಾ ಸಮಸ್ಯೆ

"ವಿವಾಹಕ್ಕೂ ವರದಕ್ಷಿಣೆಗೂ ನೇರವಾದ ಸಂಬಂಧವಿದೆ. ಭಾರತದಲ್ಲಿ ವರದಕ್ಷಿಣ ಪದ್ಧತಿಯ ಉಗಮಕ್ಕೆ ಹಿಂದೂ ಧರ್ಮಗ್ರಂಥಗಳೇ ಕಾರಣವಾಗಿದೆ. ಹಿಂದೂ ಸಂಸ್ಕೃತಿಯ ನಂಬಿಕೆಯಂತೆ ಗೋದಾನ ಭೂದಾನಗಳಂತೆಯೇ ಕನ್ಯಾದಾನವೂ ಒಂದು ವಿಧದ ಮತ್ತು ಉಳಿದವುಗಳಿಗಿಂತ ಮಹತ್ತ್ವದ ದಾನ ಎಂದು ಪರಿಗಣಿತವಾಗಿತ್ತು. ದಾನ ಮಾಡುವಾಗ ವಿಧಿವತ್ತಾಗಿ ದಕ್ಷಿಣೆಯೊಂದಿಗೆ ಮಾಡಿದಾಗ ಮಾತ್ರ ದಾನದ ಪುಣ್ಯ ಲಭಿಸುತ್ತದೆ ಎಂಬ ನಂಬಿಕೆಯೂ ವರದಕ್ಷಿಣೆಯ ಸಮಸ್ಯೆಗೆ ಕಾರಣವಾಗಿದೆ ಎನ್ನುವ ವಿಚಾರ ಸಾಮಾನ್ಯವಾಗಿ ಎಲ್ಲ ವಿದ್ವಾಂಸರು ಒಪ್ಪಿಕೊಂಡ ಮಾತಾಗಿದೆ." (ಮುಳುಗುಂದ ಚ.ವಿ. (ಸಂ.); ಮಾತೋಶ್ರೀ; ೧೯೮೯; ಪುಟ ೪೬೯-೪೭೦).

ಈ ಕನ್ಯಾದಾನ ಪದ್ಧತಿಯು ಭಾರತದ ಎಲ್ಲ ಜಾತಿಯ ಜನರಲ್ಲಿ ಪ್ರಚಲಿತದಲ್ಲಿರಲಿಲ್ಲ ಎಂಬುದು ಗಮನಿಸುವಂತಹದು. 'ಕನ್ಯಾದಾನ' ಕೇವಲ ಮೇಲ್ಜಾತಿಯವರಲ್ಲಿ ಕಂಡುಬಂದರೆ, 'ಕನ್ಯಾಶುಲ್ಕ' ಅಥವಾ 'ತೆರ' ಪದ್ಧತಿಯು ಕೆಳಜಾತಿಯ ಜನರಲ್ಲಿ ಸಂಪ್ರದಾಯವಾಗಿತ್ತು. ವರದಕ್ಷಿಣ ಪದ್ಧತಿಯೇ ಆಗಲಿ, ಕನ್ಯಾಶುಲ್ಕ

ಪದ್ಧತಿಯೇ ಆಗಲಿ ಪ್ರಾಚೀನವಾದುದು ಎಂಬುದು ವೇದ, ಧರ್ಮಶಾಸ್ತ್ರ, ಸ್ಮೃತಿ, ಮಹಾಕಾವ್ಯಗಳ ಹಿನ್ನಲೆಯಲ್ಲಿ ಸ್ಪಷ್ಟವಾಗುತ್ತದೆ. ವರದಕ್ಷಿಣೆಯು ೧೯ನೇ ಶತಮಾನದ ಮಧ್ಯಭಾಗದವರೆಗೆ ಅರಸು ಮನೆತನಗಳಲ್ಲಿ, ಶ್ರೀಮಂತ ಕುಟುಂಬಗಳಲ್ಲಿ ಮತ್ತು ಬ್ರಾಹ್ಮಣರಲ್ಲಿ ಹೆಚ್ಚಾಗಿಯೂ ಜನಸಾಮಾನ್ಯರಲ್ಲಿ ಸಾಂಕೇತಿಕವಾಗಿಯೂ ಇದ್ದರೆ, ಕೆಳವರ್ಗದಲ್ಲಿ ಕನ್ಯಾಶುಲ್ಕ ಪ್ರಚಲಿತದಲ್ಲಿತ್ತು. ಅನಂತರ ವರದಕ್ಷಿಣೆಯ ಸಮಸ್ಯೆ ಕೇವಲ ಮೇಲ್ವರ್ಗವನ್ನು ಮಾತ್ರವಲ್ಲದೆ, ಜನಸಾಮಾನ್ಯರನ್ನೂ ಗಾಢವಾಗಿ ತಟ್ಟಿರುವುದು ವ್ಯಕ್ತವಾಗುತ್ತದೆ. ಇಂದಿಗೂ ಇದು ಸಾಮಾಜಿಕ ಪಿಡುಗಾಗಿ ಉಳಿದಿದೆ.

ಹೀಗೆ ಧಾರ್ಮಿಕ ಆಚರಣೆಯೊಂದು ಸಾಮಾಜಿಕ ಸಮಸ್ಯೆಯಾಗಿ ರೂಪಾಂತರಗೊಂಡಾಗ ಇದಕ್ಕೆ ಬರಹಗಾರ ಅನಿವಾರ್ಯವಾಗಿ ಪ್ರತಿಕ್ರಿಯಿಸಿದ್ದಾನೆ. ಹೀಗಾಗಿ ವರದಕ್ಷಿಣೆ ಸಮಸ್ಯೆಯ ನಾನಾ ಮುಖಗಳ ಚಿತ್ರಣ ಅಂದಿನ ಕತೆಗಳಲ್ಲಿ ಬಂದಿವೆ. ವರದಕ್ಷಿಣೆ ಎಂದರೆ, ಮಧುವಿನ ಕಡೆಯವರು ವರನಿಗೆ, ವರನ ತಂದೆತಾಯಿಗಳಿಗೆ ಅಥವಾ ಸಂಬಂಧಿಕರಿಗೆ ಪೂರ್ವ ನಿಶ್ಚಿತವಾದಂತೆ ಕೊಡುವ ದ್ರವ್ಯ ಎಂದು ಸರಳವಾಗಿ ಹೇಳಬಹುದು. ಈ ವರದಕ್ಷಿಣೆ ಮೊದಲು ಕಾಣಿಕೆಯಾಗಿ, ಕೊನೆಕೊನೆಗೆ ಶುಲ್ಕವಾಗಿ, ಈಗ ವಿವಾಹಕ್ಕೂ ವರದಕ್ಷಿಣೆಯೇ ಪ್ರಧಾನ ವಿಷಯವಾಗಿದೆ. ಇದರ ಬೆಳವಣಿಗೆಗೆ ವರ–ವರನ ಮನೆಯವರು ಹೇಗೆ ಕಾರಣರೋ, ಹಾಗೆಯೇ ವಧು ಮತ್ತು ಆಕೆಯ ಮನೆಯವರೂ ಅನೇಕ ಸಂದರ್ಭಗಳಲ್ಲಿ ಕಾರಣರಾಗುತ್ತಾರೆ. ಇಂಥ ವಿವಿಧ ನೆಲೆಯ ಚಿತ್ರಣ ಕತೆಗಳಲ್ಲಿ ಮೂಡಿಬಂದಿದೆ. ವರದಕ್ಷಿಣೆ ಪದ್ಧತಿಯಲ್ಲಿ ವರನ ತಂದೆ–ತಾಯಿಯವರ ಪಾತ್ರವೇ ಹಿರಿದಾದುದು. ವರದಕ್ಷಿಣೆ ಪಡೆಯಲು ಹಲವು ಕಾರಣಗಳಿವೆ. ಮಗನ ವಿದ್ಯಾಭ್ಯಾಸ ಮುಂದುವರಿಸಲು, ಹೆಚ್ಚಿನ ಶಿಕ್ಷಣಕ್ಕೆ ವಿದೇಶಕ್ಕೆ ಕಳುಹಿಸಲು, ಸಾಕಷ್ಟು ಆರ್ಥಿಕ ಅನುಕೂಲತೆಗಳಿಲ್ಲದಾಗ, ವರದಕ್ಷಿಣೆಯ ಮೂಲಕ ಅದನ್ನು ನೆರವೇರಿಸುವಿಕೆ, ವರದಕ್ಷಿಣೆಗೆ ಇದ್ದ ಸಾಮಾನ್ಯ ಮತ್ತು ಪ್ರಮುಖವೂ ಆದ ಕಾರಣವಾಗಿದೆ. ಬಡತನ, ಅಸಹಾಯಕತೆ, ಪರಾಧೀನತೆಯು ಕಾರಣವಾಗಿಯೇ ಸ್ತ್ರೀಯರು ಅನುಭವಿಸಬೇಕಾಗಿರುವ ಕೌಟುಂಬಿಕ ಮತ್ತು ಸಾಮಾಜಿಕ ಹಿಂಸೆ ಅವಮಾನಗಳ ನಾನಾ ಮುಖಗಳನ್ನು ತಿರುಮಲಾಂಬಾ 'ಮಾತೃನಂದಿನಿ', ಕೊಡಗಿನ ಗೌರಮ್ಮ 'ಆಹುತಿ', ಸರಸ್ವತಿಬಾಯಿ ರಾಜವಾಡೆ 'ಪ್ರತೀಕಾರ', 'ಕಾಲವಧು', ಶಾಂತಾದೇವಿ

ಮಾಳವಾಡ 'ಹೆಜ್ಜೆ ಇಡುವ ಮುನ್ನ', 'ಹಾಲುಜೇನು ಸುರಿಯಿತು', ಶ್ಯಾಮಲಾದೇವಿ ಬೆಳಗಾಂವಕರ್ 'ಸವತಿಯರು' ಮುಂತಾದ ತಮ್ಮ ಕಥೆಗಳಲ್ಲಿ ಚಿತ್ರಿಸಿದ್ದಾರೆ.

ಹವ್ಯಕ ಲೇಖಕಿಯರು ಬರೆದ ಕತೆಗಳನ್ನು ಗಮನಿಸುವಾಗ ಇಲ್ಲಿ ವರದಕ್ಷಿಣೆ ಪಿಡುಗಾಗಿ ಕಾಡಿದಂತೆ ವಧುದಕ್ಷಿಣೆ ಒಂದು ಸಮಸ್ಯೆಯಾಗಿ ಕಾಣಿಸಿಕೊಂಡಿಲ್ಲ. ದೇವಾಂಗನಾ ಶಾಸ್ತ್ರಿಯವರ 'ವರದಕ್ಷಿಣೆ', 'ನಾಲ್ಕುನೂರು', ಕೊಡಗಿನ ಗೌರಮ್ಮನವರ 'ಆಹುತಿ', 'ನನ್ನ ಮದುವೆ'. ಜಯಾ ಯಾಜಿ ಶಿರಾಲಿಯವರ 'ಗಡಿದಾಟಿದವರು', 'ಪ್ರತೀಕಾರ', ಮನೋರಮಾ ಭಟ್ ಅವರ 'ಸ್ವಯಂವರ', ಗಂಗಾ ಪಾದೇಕಲ್‌ರವರ 'ಸುಕನ್ಯಳ ಹುಟ್ಟು ಹಬ್ಬ' ಕತೆಗಳಲ್ಲಿ ಹವ್ಯಕ ಬರಹಗಾರರು ವರದಕ್ಷಿಣೆ ಸಮಸ್ಯೆಯ ವಿವಿಧ ಮುಖಗಳನ್ನು ಚಿತ್ರಿಸಿದ್ದಾರೆ.

ಕೊಡಗಿನ ಗೌರಮ್ಮನವರು 'ಆಹುತಿ', 'ನನ್ನ ಮದುವೆ' ಈ ಎರಡು ಕತೆಗಳಲ್ಲಿ ವರದಕ್ಷಿಣೆಯ ಆಸೆಗೆ ಕಟ್ಟು ಬಿದ್ದು, ನಂತರ ಪಶ್ಚಾತ್ತಾಪ ಪಡುವ ಬಡ ವಿದ್ಯಾವಂತ ಯುವಕರ ಚಿತ್ರಣವಿದೆ. 'ಆಹುತಿ' ಕತೆಯಲ್ಲಿ ಎಂ.ಎ. ಪಾಸಾದ ತರುಣನು ಇಂಗ್ಲೆಂಡಿಗೆ ಹೋಗಿ ಬ್ಯಾರಿಸ್ಟರನಾಗಬೇಕೆಂಬ ಉತ್ಕಟ ಆಸೆಯನ್ನಿಟ್ಟುಕೊಂಡಿದ್ದಾನೆ. ತನ್ನ ಮನೆಯ ಆರ್ಥಿಕ ಪರಿಸ್ಥಿತಿಯ ಅರಿವಿರುವ ಆತನಿಗೆ ಹೊಳೆದ ದಾರಿ ಒಂದೇ! ಐಶ್ವರ್ಯವಂತರ ಅಳಿಯನಾಗಿ ಇಂಗ್ಲೆಂಡಿಗೆ ಹೋಗುವುದು. ತನ್ನ ತಂದೆ ತಾಯಿಗಳು ಒಪ್ಪಿದ ಸುರೂಪಿ ಹುಡುಗಿಯನ್ನು, ಅವಳು ಬಡವರ ಹುಡುಗಿ ಹಾಗೂ ವರದಕ್ಷಿಣೆ ಸಿಗಲಾರದೆಂಬ ಕಾರಣದಿಂದ ನಿರಾಕರಿಸುತ್ತಾನೆ. ಹಣ ಸಂಪಾದನೆಗಾಗಿ ಮದ್ರಾಸಿಗೆ ನೌಕರಿಗಾಗಿ ಹೋಗುತ್ತಾನೆ. ಅಲ್ಲಿ ಅವನಿಗೆ ನಿರುದ್ಯೋಗದ ಅನುಭವವಾಗಿ ನಿತ್ಯದ ಅವಶ್ಯಕತೆಗಳ ಪೂರೈಕೆಗಾಗಿ ಪಾಠದ ಮನೆ ಗೊತ್ತು ಮಾಡಿಕೊಳ್ಳುತ್ತಾನೆ ಎಂಬಲ್ಲಿ ಪರಿಸ್ಥಿತಿಯು ಮಾನವನಿಗೆ ಪಾಠ ಕಲಿಸುತ್ತದೆ ಎಂಬುದರ ಕಡೆಗೆ ಒತ್ತುನೀಡಿದ್ದಾರೆ. ಪಾಠ ಹೇಳಿಸಿಕೊಳ್ಳುವ ಹುಡುಗಿ ಶಾಂತಿ ಚೆಲುವೆ, ಜಾಣೆ. ಅವಳನ್ನು ತಾನರಿಯದಂತೆ ಪ್ರೀತಿಸತೊಡಗುತ್ತಾನೆ. ಆದರೆ ವರದಕ್ಷಿಣೆಯ ಮೋಹವನ್ನೂ ಬಿಟ್ಟಿರುವುದಿಲ್ಲ. ಅಷ್ಟರಲ್ಲಿಯೇ ಆಕೆ ಮದ್ರಾಸ್ ಬಿಟ್ಟು ಹೊರಟು ಹೋಗುತ್ತಾಳೆ. ನಂತರ ತನ್ನ ಜೊತೆಯ ಪಾಠದ ಗೆಳತಿಗೆ ತನ್ನ ಆತ್ಮಹತ್ಯೆಯ ನಿರ್ಧಾರವನ್ನು ತಿಳಿಸಿ ಪತ್ರ ಬರೆಯುತ್ತಾಳೆ. ಸೀತಾಗೆ ಬರೆದ ಪತ್ರದ ಮೂಲಕ ಶಾಂತಿಯ ವಿಷಯ ಅವನಿಗೆ ತಿಳಿದು, ಅವನ ಮೇಲೆಯೇ ಅವನಿಗೆ ಜಿಗುಪ್ಸೆ ಹುಟ್ಟುವುದು. ಅಂದಿನ ದಿನವೇ ತನ್ನೂರಿಗೆ ಮರಳಿದಾಗ,

ಅಲ್ಲಿ ಅವನಿಗೆ ಮತ್ತೊಂದು ಆಘಾತ ಕಾಯ್ದಿರುವುದು. ತಂಗಿ ಅವನನ್ನು ಸಿಟ್ಟಿನಿಂದ ನೋಡಿ ಪೇಪರನ್ನು ಎಸೆದು "ನೋಡುತ್ತಿದ್ದುದು ನೀನು ಕೊಂದ ಹುಡುಗಿಯನ್ನು" (ಕಾಳೇಗೌಡ ನಾಗವಾರ(ಸಂ.); ಜೀವನಪ್ರೀತಿ; ೨೦೦೨; ಪುಟ ೧೪೯) ಎನ್ನುತ್ತಾಳೆ. ಅದರಲ್ಲಿ ಶಾಂತಿಯ ಚಿತ್ರ. ಅದರ ಕೆಳಗಡೆ 'ವರದಕ್ಷಿಣೆಗೆ ಆಹುತಿ' ಎಂದಿರುತ್ತದೆ. ಈ ಎಲ್ಲ ಆಕಸ್ಮಿಕ ಘಟನೆಗಳು ಸುಸಂಸ್ಕೃತ ತರುಣನ ಮನಸ್ಸಿನ ಮೇಲೆ ತೀವ್ರ ಪರಿಣಾಮವನ್ನುಂಟು ಮಾಡುತ್ತದೆ. ಅವನ ಹೃದಯವು ಮೂಕವಾಗಿ ನರಳಿ, ಪಶ್ಚಾತ್ತಾಪದಿಂದ ಪರಿತಪಿಸುತ್ತದೆ. ಗೌರಮ್ಮನವರ 'ನನ್ನ ಮದುವೆ' ಕತೆಯ ರಾಮೂ, ಬಡತನದಲ್ಲಿ ನೊಂದವನು. ಶ್ರೀಮಂತ ನೆರೆಹೊರೆಯಿಂದ ಪ್ರಭಾವಿತನಾದವನು. ಅವರಂತೆಯೇ ಐಶ್ವರ್ಯವಂತನಾಗಬೇಕು, ವಿದೇಶಕ್ಕೆ ಹೋಗಬೇಕೆಂದು ಹಂಬಲವಿಟ್ಟುಕೊಂಡವನು. ಆದರೆ ಬೌದ್ಧಿಕವಾಗಿ ವರದಕ್ಷಿಣೆಯ ವಿರೋಧಿ, ಆದರ್ಶ ವಿದ್ಯಾರ್ಥಿ. ಬದಲಾವಣೆಯ ಕಾಲದಲ್ಲಿ ಮೊದಲಿನ ಆದರ್ಶ ಶೂನ್ಯವೆನಿಸಿ, ಸ್ವಾರ್ಥವೇ ಮುಖ್ಯವೆನಿಸುತ್ತದೆ. ಅಂತೆಯೇ ಹೆತ್ತವರು ನೋಡಿ ಒಪ್ಪಿದ ಶ್ರೀಮಂತ ಕನ್ಯೆಯನ್ನು ಕೈಹಿಡಿಯುತ್ತಾನೆ. ಇಲ್ಲಿ ಅವನ ದೃಷ್ಟಿಯಲ್ಲಿ ಹುಡುಗಿ ಮುಖ್ಯವಲ್ಲ, ಹಣ ಮುಖ್ಯ. ಆದರೆ ಅವನು ಕೈ ಹಿಡಿದ ಹುಡುಗಿ 'ಕುರುಡಿ'ಯಾಗಿರುವುದೊಂದು ಪರಿಸ್ಥಿಯ ವ್ಯಂಗ್ಯವನ್ನು ಸೂಚಿಸುತ್ತದೆ.

ಮೇಲಿನ ಎರಡೂ ಕತೆಗಳಲ್ಲಿ ಕಂಡುಬರುವ ಸಾಮಾನ್ಯ ಅಂಶಗಳು : ಬಡ ಮಧ್ಯಮ ವರ್ಗದ ವಿದ್ಯಾವಂತ ಯುವಕರು ವಿದೇಶಕ್ಕೆ ಹೋಗಿ ಉಚ್ಚ ಪದವಿ ಪಡೆಯಬೇಕು, ಹಣ ಸಂಪಾದಿಸಬೇಕು. ತನ್ನ ವರ್ಗಶ್ರೇಣಿಯನ್ನು ಎತ್ತರಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯನ್ನಿಟ್ಟುಕೊಂಡವರು. ವರದಕ್ಷಿಣೆ ಪದ್ಧತಿಯಿಂದ ಹಿಂಸೆಗೆ, ಅನ್ಯಾಯಕ್ಕೆ ಬಲಿಯಾಗುವವರು, ಅದರ ಆಘಾತಕ್ಕೆ ಒಳಗಾಗಿ ಅಗ್ನಿ ಪರೀಕ್ಷೆಯಲ್ಲಿ ಸಿಲುಕುವರು ಬಡವರು ಎಂದು ತಿಳಿಯಪಡಿಸುವುದು ಲೇಖಕಿಯ ಉದ್ದೇಶವಾಗಿದೆ. 'ಆಹುತಿ' ಕತೆಯನ್ನು ಓದಿದಾಗ ಶಾಂತಿಯ ಬಗ್ಗೆ ಸಹಾನುಭೂತಿ, ಅವಳನ್ನು ವರದಕ್ಷಿಣೆಯ ಕಾರಣಕ್ಕಾಗಿ ಮದುವೆಯಾಗದ ನಾಯಕನ ಬಗ್ಗೆ ಸಿಟ್ಟು ಬರುತ್ತದೆ. ವರದಕ್ಷಿಣೆ ಪದ್ಧತಿಯ ಹಿಂದಿನ ಕ್ರೌರ್ಯ ಮನದಟ್ಟಾಗುತ್ತಾ ಹೋಗುತ್ತದೆ. ಒಬ್ಬ ಮುದುಕನ ಮೂರನೆಯ ಮದುವೆಗೆ ವಧುವಾಗಲು ಒಪ್ಪದೆ ತರುಣಿ ಶಾಂತಿ ಆತ್ಮಹತ್ಯೆ ಮಾಡಿಕೊಳ್ಳುವುದಕ್ಕೆ ಮೊದಲು ಬರೆದ ಪತ್ರದಲ್ಲಿ ಲೇಖಕಿಯ ಧೋರಣೆಯೂ

ಸೂಚಿತವಾಗುತ್ತದೆ. "ಆ ಮದುಕನ ಮದುವೆಯಾಗಿ ಸತ್ತ ಹೆಣದಂತೆ ಜೀವನವನ್ನು ಕಳೆಯುವುದಕ್ಕಿಂತ ನನಗೆ ಸಾವೇ ಲೇಸೆಂದು ತೋರುವುದು. ಲೇಸಾದ ಕಾರ್ಯವನ್ನೇಕೆ ಮಾಡಬಾರದು ? ಆತ್ಮಹತ್ಯೆಯು ಪಾಪವೆಂದು ಜನರೆನ್ನುವರು ಮುದುಕನ ಕೊರಳಿಗೆ ಚಿಕ್ಕ ಬಾಲಿಕೆಯನ್ನು ಕಟ್ಟುವುದು ಪುಣ್ಯವಾದರೆ ನನಗಾ ಪುಣ್ಯಕ್ಕಿಂತಲೂ ಆತ್ಯಹತ್ಯೆಯ ಪಾಪವೇ ಲೇಸೆಂದು ತೋರುವುದು" (ಕಾಳೇಗೌಡ ನಾಗವಾರ (ಸಂ.); ಜೀವನಪ್ರೀತಿ; ೨೦೦೨; ಪುಟ ೧೪೫). "ತುಂಬಾ ಸರಳವಾಗಿ, ಆವೇಶ ಅಬ್ಬರಗಳಿಲ್ಲದೆ ಮಂಡಿತವಾಗುವ ವಾದ, ಮುಸುಕಿನಲ್ಲೇ ಗುದ್ದು ಕೊಡುವ ವ್ಯಂಗ್ಯ, ರೂಢಿಗತ ಮೌಲ್ಯ ವ್ಯವಸ್ಥೆಯನ್ನು ತಗ್ಗಿದ ದನಿಯಲ್ಲೇ ಎದುರಿಸುವ ಬಂಡಾಯ ಮನೋಧರ್ಮ ಗೌರಮ್ಮನ ಕಥೆಗೆ ಒಂದು ವೈಶಿಷ್ಟ್ಯವನ್ನು ತಂದು ಕೊಡುತ್ತವೆ" (ಟಿ.ಪಿ. ಅಶೋಕ; ಸಾಹಿತ್ಯ ಸಂದರ್ಭ; ೧೯೮೩; ಪುಟ ೧೦೯) ಎಂಬುದು ಟಿ.ಪಿ. ಅಶೋಕರ ಅಭಿಪ್ರಾಯ.

ವರದಕ್ಷಿಣೆಯ ಸಮಸ್ಯೆಯನ್ನು ಕೇಂದ್ರವಾಗಿಟ್ಟುಕೊಂಡಿರುವ 'ನನ್ನ ಮದುವೆ'ಯಲ್ಲಿ ವರದಕ್ಷಿಣೆಯ ಆಸೆಗಾಗಿ ಶ್ರೀಮಂತರ ಮಗಳನ್ನು ಮದುವೆಯಾಗ ಬಯಸುವ ರಾಮೂಗೆ ಹೆಣ್ಣಿನ ಮನೆಯವರ ವರ್ತನೆ ಹೀಗೆನಿಸುತ್ತದೆ, "ನಾವು ಊಟ ತೀರಿಸಿ ಕುಳಿತದ್ದೇ ತಡ, ಇದಿರು ಮನೆಯಿಂದ ಹೆಂಗಸರ ಗುಂಪೊಂದು ಬಂದು ನನ್ನನ್ನು ಬಾಗಿಲು, ಕಿಟಿಕಿಗಳ ಸಂದಿಯಿಂದ ಇಣುಕಿ ನೋಡಲಾರಂಭಿಸಿತು. ಕಳೆದ ವರ್ಷ ಅಣ್ಣ ಹೊಸ ಮೋಟಾರ್ ಸೈಕಲ್ ಕೊಂಡುಕೊಂಡಾಗ ಪಕ್ಕದ ಮನೆಯವರು ನೋಡಲಿಕ್ಕೆ ಬಂದುದರ ನೆನಪು ಬಂತು ನನಗೆ. ಅಲ್ಲಿಂದೆದ್ದು ಹೋಗಿ ಒಂದು ಶಾಲು ಮುಸುಕಿಹಾಕಿ ಮಲಗಿದೆ; ಆದರೆ ಮನಸ್ಸು ಒಳಗೊಳಗೇ ಚುಚ್ಚುತ್ತಿತ್ತು – 'ನಿನ್ನ ಮಾರಾಟವಾಗಿ ಹೋಯಿತು' ಎಂತ" (ಕಾಳೇಗೌಡ ನಾಗವಾರ (ಸಂ.); ಜೀವನಪ್ರೀತಿ; ೨೦೦೨; ಪುಟ ೧೯೧). ಇಷ್ಟು ಸಾಲದೆಂಬಂತೆ ಗೌರಮ್ಮ ರಾಮೂನ ಕೈಯಿಂದ ಒಬ್ಬ ಕುರುಡಿಗೆ ಮಾಲೆ ಹಾಕಿಸುತ್ತಾರೆ. ವರದಕ್ಷಿಣೆ ತೆಗೆದುಕೊಳ್ಳುವ ಯುವಕರ ಬಗ್ಗೆ ಎಂಥ ಭಾವನೆಯಿತ್ತು ಎಂಬುದಕ್ಕೆ ಇದಕ್ಕಿಂತ ಬೇರೆ ಉದಾಹರಣೆ ಬೇಕಿಲ್ಲ. ಉಚ್ಚಶಿಕ್ಷಣವನ್ನು ಪಡೆಯಬೇಕು, ಸಮಾಜದ ಪ್ರತಿಷ್ಠಿತ ವರ್ಗದವರೊಂದಿಗೆ ಸೇರಬೇಕು, ಹಣ ಸಂಪಾದಿಸಬೇಕು ಇವೇ ಮೊದಲಾದ ಆಕಾಂಕ್ಷೆಗಳು ಆ ಕಾಲದ ತರುಣರಲ್ಲಿತ್ತು. ಅಂದಿನ

ಕಾಲದ ಈ ಬಗೆಯ ಮನೋಭಾವವನ್ನು ಗುರುತಿಸಿ ಹೇಳಿರುವುದು ಗೌರಮ್ಮನವರ ಸಾಮಾಜಿಕ ಪ್ರಜ್ಞೆಗೆ ಸಾಕ್ಷಿಯಾಗಿದೆ.

ಜಯಾ ಯಾಜಿ ಶಿರಾಲಿಯವರ 'ಗಡಿದಾಟಿದವರು' ಕತೆಯಲ್ಲಿ ಗಿರೀಶ ಪ್ರಮೀಳಾಳನ್ನು ಪ್ರೀತಿಸಿದರೂ ವರದಕ್ಷಿಣೆಯ ಕಾರಣದಿಂದ ಮದುವೆ ಸಾಧ್ಯವಾಗುವುದಿಲ್ಲ. ಪ್ರಮೀಳಾಳ ಆಕರ್ಷಣೆಗೆ ಒಳಗಾದ ಗಿರೀಶ ಅವಳನ್ನು ಮದುವೆಯಾಗಲು ನಿರ್ಧರಿಸುತ್ತಾನೆ. ಆದರೆ ಗಿರೀಶನ ತಂದೆ ವರದಕ್ಷಿಣೆಯ ಹಣವನ್ನು ಕೇಳಿದಾಗ ಆ ಮದುವೆ ಮುರಿದು ಬೀಳುತ್ತದೆ. "ಅಪ್ಪ ವರದಕ್ಷಿಣೆಗಾಗಿ ಪತ್ರ ಬರೆದ ವಿಷಯ ನನಗೆ ಮೊದಲು ತಿಳಿದಿರಲಿಲ್ಲ. ನಂತರ ತಿಳಿದೊಡನೆ ನಿನ್ನ ತಂದೆಗೆ, ಅಣ್ಣನಿಗೆ ಪತ್ರಿಸಿದೆ. ಐವತ್ತು ಸಾವಿರ ನಿಮಗೇ ನೀಡುವೆ ಮತ್ತು ಮದುವೆ ಮಂಟಪದಲ್ಲಿ ಆ ಹಣವನ್ನೇ ನಮ್ಮ ತಂದೆಗೆ ನೀಡಿರೆಂದೂ........... ಪಮ್ಮಿಯನ್ನು ತಾನೇ ಮದುವೆಯಾಗುತ್ತೇನೆಂದೂ......." (ಜಯಾ ಯಾಜಿ ಶಿರಾಲಿ; ಶಂಕ್ರಿ; ೨೦೦೦; ಪುಟ ೪೩). ವರದಕ್ಷಿಣೆಯ ಹಣವನ್ನು ಗಿರೀಶನೇ ನೀಡುವುದಾಗಿ ಬರೆದ ಪತ್ರದಲ್ಲಿ ಅವನಿಗೆ ಪ್ರಮೀಳಾಳಲ್ಲಿರುವ ಪ್ರೀತಿ ವ್ಯಕ್ತವಾಗುತ್ತದೆ. ಆದರೆ ವರದಕ್ಷಿಣೆಯ ನೆವದಿಂದ ಈ ಮದುವೆ ಮುರಿದು ಬೀಳುತ್ತದೆ. ಇಲ್ಲಿ ಪ್ರೀತಿ ಪ್ರೇಮಕ್ಕಿಂತ 'ವರದಕ್ಷಿಣೆ'ಯೇ ಮುಖ್ಯ ಎಂಬ ಆಶಯ ವ್ಯಕ್ತವಾಗಿದೆ.

ದೇವಾಂಗನಾ ಶಾಸ್ತ್ರಿಯವರ 'ನಾಲ್ಕುನೂರು' ಕತೆಯಲ್ಲಿ ಸಾಮಾಜಿಕ ಪ್ರತಿಷ್ಠೆಯುಳ್ಳ ವೈದಿಕ ಕುಟುಂಬವೊಂದರ ಚಿತ್ರವಿದೆ. ಧನದಾಹಿಗಳಾದ ಕುಟುಂಬದ ಸದಸ್ಯರಿಂದ ಮೂಕವೇದನೆ ಅನುಭವಿಸುವ ಮುಗ್ಧ ಸೊಸೆಯರ ದುಃಖದುಮ್ಮಾನದ ಚಿತ್ರಣ ಇಲ್ಲಿದೆ. ವರ್ಗ-ಜಾತಿ-ಭೇದವಿಲ್ಲದೆ ಸುಶಿಕ್ಷಿತರೆನ್ನದೇ ಸಮಸ್ತ ಸಮಾಜವನ್ನು ಆವರಿಸಿಕೊಂಡಿರುವ ವರದಕ್ಷಿಣೆಯ ದಾಹವು ಹೆಣ್ಣು ಮಕ್ಕಳ ಸುಖ-ಸಂತೋಷನ್ನು ಬೂದಿ ಮಾಡುವುದನ್ನು ತೀವ್ರ ವಿಷಾದದಿಂದ ಇಲ್ಲಿ ಚಿತ್ರಿಸಲಾಗಿದೆ. 'ವರದಕ್ಷಿಣೆ'ಯ ದುರಾಸೆಗಾಗಿಯೇ ಮೊದಲ ಹೆಂಡತಿಯನ್ನು ಬಿಟ್ಟು ಮತ್ತೊಂದು ಮದುವೆಯಾಗುವ, ವಿವಾಹವನ್ನು ಹಣಗಳಿಕೆಯ ವೃತ್ತಿಯಾಗಿಸಿಕೊಂಡಿರುವ ವ್ಯಕ್ತಿಯ, ಕ್ರೌರ್ಯವನ್ನು ತೆರೆದಿಡುತ್ತದೆ 'ನಾಲ್ಕು ನೂರು' ಕತೆ. ಇಲ್ಲಿ ಗಂಡಿನ ಸ್ವೇಚ್ಛೆಯನ್ನು, ವ್ಯವಸ್ಥೆಯ ದ್ವಿಮುಖ ನೀತಿಯನ್ನು ಪ್ರಶ್ನಿಸುವಂತಿದೆ. ದೇವಾಗನಾ ಶಾಸ್ತ್ರಿಯವರು ವೈದಿಕ ಸಮಾಜವನ್ನೇ

ಕೇಂದ್ರವಾಗಿರಿಸಿಕೊಂಡು ಈ ಸಮಸ್ಯೆಯ ವಿಭಿನ್ನ ಆಯಾಮಗಳನ್ನು ಚಿತ್ರಿಸಿದ್ದಾರೆ. ವೃತ್ತಿಯಿಂದ ಶ್ರೋತ್ರಿಗಳಾಗಿದ್ದ ಮಾವ ಜಯರಾಮ ಜೋಯಿಸರ ನೀಚತನ, ವಿವಾಹ ಸಂಬಂಧಗಳನ್ನೂ ಕಾಲಕಸವಾಗಿಸುವ ಗಂಡಿನ ಸ್ವಾರ್ಥ ಚಿಂತನೆ, ಧನದಾಹಗಳು ಇಂದಿರೆಯ ಬಾಳನ್ನು ಹೊಸಕಿ ಹಾಕುವ ದಾರುಣತೆಯನ್ನು ಈ ಕಥೆ ಬಿಂಬಿಸುತ್ತದೆ. ಕೌಟುಂಬಿಕ ಯಾತನೆ, ಅಭದ್ರತೆಗಳು ಹೆಣ್ಣಿನ ಆತ್ಮಹತ್ಯೆಯ ದುರಂತಳಿಗೆ ಕಾರಣವಾಗುವ ವಾಸ್ತವವನ್ನು 'ನಾಲ್ಕು ನೂರು' ಜೀವಂತವಾಗಿ ಚಿತ್ರಿಸುತ್ತದೆ. ದೇವಾಗನಾ ಶಾಸ್ತ್ರಿಯವರ 'ವರದಕ್ಷಿಣೆ' ವಿಫಲ ಪ್ರೇಮದ ದುರಂತ ಕತೆ. 'ವರದಕ್ಷಿಣೆ' ಯಮಪಾಶವು ಎಳೆಯ ಜೀವಿಗಳಿಬ್ಬರ ಸಾವಿಗೆ ಕಾರಣವಾಗುವುದೇ ಇಲ್ಲಿಯ ವಸ್ತು. ಧನದಾಹಿ ಶ್ರೀಮಂತ ತಂದೆಯ ಮಗ ರಾಮು ವಿದ್ಯಾವಂತ, ಬಿ.ಎ. ಪಧವೀದರ. ಕಾಲೇಜಿನ ಸಹಪಾಠಿ ಲೀಲಾಳಲ್ಲಿ ಅನುರಕ್ತನಾಗುತ್ತಾನೆ. ರೂಪವತಿ, ಪಧವೀದರೆ ಲೀಲೆಯೊಂದಿಗಿನ ತನ್ನ ವಿವಾಹದ ಇಚ್ಛೆಯನ್ನು ತಂದೆಗೆ ತಿಳಿಸುತ್ತಾನೆ. ಆದರೆ ರಾಮುವಿನ ತಂದೆಯು ವರದಕ್ಷಿಣೆಯ ಬೇಡಿಕೆಯನ್ನು ಲೀಲಾಳ ಬಡತಂದೆ ಭರಿಸಲಾಗದೇ ಮದುವೆ ಮುರಿಯುತ್ತದೆ. ತಂದೆಯನ್ನು ತಿದ್ದಲಾಗದ ರಾಮು ತಂದೆಯಿಂದಲೇ ಅಪಮಾನಿತನಾಗುತ್ತಾನೆ. ಭಗ್ನಪ್ರೇಮಿ ರಾಮು ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ರಾಮುವಿನ ಸಾವಿನಿಂದ ನೊಂದ ಲೀಲಾ ವಿಷ ಸೇವಿಸುತ್ತಾಳೆ. ಹೀಗೆ ಹಿರಿಯರ ಹಣದ ಆಮಿಷ, ಸಂಪ್ರದಾಯವನ್ನು ಮೀರಲಾಗದ ಯುವಜನತೆಯ ದೌರ್ಬಲ್ಯ, ಹೆತ್ತವರ ಒಣ ಪ್ರತಿಷ್ಠೆಗಳಿಂದ ಯುವಜನತೆಯ ಬದುಕು ಹಾಳಾಗುವುದನ್ನು 'ವರದಕ್ಷಿಣೆ' ಕತೆ ಬಿಂಬಿಸುತ್ತದೆ. ಕಂದಾಚಾರಗಳೀಗೆ ಕಟ್ಟು ಬೀಳುವ, ಹಿರಿಯರ ವಿವೇಕ ಶೂನ್ಯತೆ, ವಿದ್ಯಾವಂತರನ್ನು ಆಪೋಷನಗೊಳ್ಳುವ 'ವರದಕ್ಷಿಣೆ' ಪದ್ಧತಿಯ ಬಿಗಿ ಹಿಡಿತವನ್ನು ಪ್ರಶ್ನಿಸುವ ಕಥೆಯು ವರದಕ್ಷಿಣೆಯು ಕೇಂದ್ರ ಮತ್ತು ಪರಿಹಾರಗಳೆರಡನ್ನು ಕುರಿತು ಗಂಭೀರ ಚಿಂತನೆಗೆ ಪ್ರೇರೇಪಿಸುತ್ತದೆ. ವಿದ್ಯಾವಂತ ಯುವಜನತೆಯ ಜವಾಬ್ದಾರಿಯನ್ನು ಪ್ರಶ್ನಿಸುತ್ತದೆ. ವಿದ್ಯಾವಂತ ಸಮಾಜದ ಅನಾಗರಿಕ ಪ್ರವೃತ್ತಿಯತ್ತ ಬೆರಳು ಮಾಡುವ ಕಥೆಯು ವಿದ್ಯೆ-ವಿವೇಕ, ಸಂಸ್ಕೃತಿ-ಮಾನವೀಯತೆಯ ಆಂತರಿಕ ಸಂಬಂಧವನ್ನು ಪುನರಾಲೋಚನೆಗೆ ಒಡ್ಡುತ್ತದೆ.

ಗಂಗಾ ಪಾದೇಕಲ್‌ರವರ 'ಸುಕನ್ಯಳ ಹುಟ್ಟು ಹಬ್ಬ' ಕತೆಯಲ್ಲಿ ಸುಕನ್ಯಳು ವರದಕ್ಷಿಣೆಯನ್ನು ವಿರೋಧಿಸಿ ಸ್ವತಂತ್ರವಾಗಿ ಬದುಕುವ ನಿರ್ಧಾರವನ್ನು ಕೈಗೊಳ್ಳುವ

ಚಿತ್ರಣವಿದೆ. ಸುಕನ್ಯಳನ್ನು ನೋಡಿದ ವರನ ಕಡೆಯವರು ವರದಕ್ಷಿಣೆಯ ಬೇಡಿಕೆಯನ್ನು ಮುಂದಿಟ್ಟಾಗ, ಅವಳ ಹೆತ್ತವರು ಆಸ್ತಿ ಮಾರಿ ವರದಕ್ಷಿಣೆಯನ್ನು ಕೊಟ್ಟು ಅವಳಿಗೆ ಮದುವೆ ಮಾಡುವ ನಿರ್ಧಾರಕ್ಕೆ ಬರುತ್ತಾರೆ. ಆದರೆ ಇದನ್ನು ತಿಳಿದ ಸುಕನ್ಯ ತಾನು ಉದ್ಯೋಗವನ್ನು ಕೈಗೊಂಡು, ವರದಕ್ಷಿಣೆ ರಹಿತವಾದ ಮದುವೆಯ ನಿರ್ಧಾರಕ್ಕೆ ಬರುತ್ತಾಳೆ. "ಆಸ್ತಿ ಮಾರಿದರೆ ಕಷ್ಟ ನಿಜ. ಆದರೆ ಹಾಗೆಂದು ಬಂದ ಸಂಬಂಧ ಬಿಡಲು ಉಂಟೇ?" (ಗಂಗಾ ಪಾದೇಕಲ್; ವಾಸ್ತವ; ೧೯೯೬; ಪುಟ ೧೨೬). ಎಂಬ ಮಾತಿನಲ್ಲಿ ಹೆಣ್ಣು ಹೆತ್ತವರು ಆಸ್ತಿ ಮಾರಿಯಾದರೂ ಮಗಳ ಮದುವೆಯನ್ನು ಮಾಡಬೇಕಾದ ಅನಿವಾರ್ಯ ಪರಿಸ್ಥಿತಿ ಕಂಡು ಬರುತ್ತದೆ. "ಹೌದಪ್ಪಾ ಕೆಲಸ ಸಿಗುತ್ತದೋ ಇಲ್ಲವೋ, ಅದು ಬೇರೆ ಮಾತು. ಪ್ರಯತ್ನವಂತೂ ಮಾಡಬಹುದಲ್ಲ? ಆಗ, ನನ್ನ ಇಪ್ಪತ್ತಮೂರನೇ ವಯಸ್ಸಲ್ಲಾದರೂ ಅಪ್ಪನ ಕಷ್ಟಕ್ಕೆ ಹೆಗಲು ನೀಡಲು ಯತ್ನಿಸಿದೆಯೆಂಬ ಸಮಾಧಾನ ನನ್ನ ಪಾಲಿಗೆ ಇದ್ದೀತು" (ಗಂಗಾ ಪಾದೇಕಲ್; ವಾಸ್ತವ; ೧೯೯೬; ಪುಟ ೧೨೮). ವರದಕ್ಷಿಣೆಯನ್ನು ವಿರೋಧಿಸಿ ಬದುಕುವ ಛಲವನ್ನು ಹೊಂದಿದ ಸುಕನ್ಯಳಂಥ ಹುಡುಗಿಯರು ಆಧುನಿಕ ಯುಗದಲ್ಲಿ ಜೀವಿಸಲು ಸಾಧ್ಯ ಎಂಬ ಆಶಯವನ್ನು ಕತೆಗಾರರು ವ್ಯಕ್ತಪಡಿಸಿದ್ದಾರೆ.

ಜಯಾ ಯಾಜಿ ಶಿರಾಲಿಯವರ 'ಪ್ರತೀಕಾರ' ವರದಕ್ಷಿಣೆಯೆಂಬ ಪಿಡುಗಿಗೆ ಸಿಲುಕಿದ ಸುಮಾ ತನ್ನ ಅತ್ತೆಯನ್ನೇ ಕೊಲ್ಲುವ ಮೂಲಕ ಪ್ರತೀಕಾರ ತೀರಿಸುವ ಚಿತ್ರವಿದೆ. ಸುಮಾ ವಿವಾಹವು ವರದಕ್ಷಿಣೆ ಸಹಿತವಾಗಿ ಗೋಪಾಲನೊಂದಿಗೆ ನೆರವೇರುತ್ತದೆ. ಆದರೆ ಧನದಾಹಿಯಾದ ಅತ್ತೆ (ಸರಸೂ) ಸುಮಾಳನ್ನು ವರದಕ್ಷಿಣೆಗಾಗಿ ಪೀಡಿಸುತ್ತಾಳೆ. ಕೊನೆಗೆ ಸುಮಾ ತನ್ನ ಅತ್ತೆಯನ್ನೇ ಕೊಲ್ಲುವ ನಿರ್ಧಾರಕ್ಕೆ ಬರುತ್ತಾಳೆ. ಅತ್ತೆ ಸುಮಾಳ ಮೈಮೇಲೆ ಸೀಮೆ ಎಣ್ಣೆ ಸುರಿದು ಬೆಂಕಿಕೊಟ್ಟಾಗ, ಅವಳು ಅತ್ತೆಯನ್ನು ಗಟ್ಟಿಯಗಿ ತಬ್ಬಿಕೊಂಡು ಸಾವಿಗೆ ಶರಣಾಗಿ ತನ್ನ ಅತ್ತೆಯನ್ನು ಕೊಲ್ಲುತ್ತಾಳೆ. "ತನ್ನನ್ನು ಬಲಿಕೊಟ್ಟು ವರದಕ್ಷಿಣೆಯ ಬೆಂಕಿಯ ಒಂದು ಕಿಡಿಯನ್ನು ಆರಿಸುವಲ್ಲಿ ಆಕೆ ಸಫಲಗೊಂಡಿದ್ದಳು. ನೆಮ್ಮದಿಯಿಂದ ಚಿರನಿದ್ರೆಗೈದಳು ಸುಮಾ" (ಜಯಾ ಯಾಜಿ ಶಿರಾಲಿ; ಶಂಕ್ರಿ; ೨೦೦೦; ಪುಟ ೬೩) ಎಂಬ ಲೇಖಕಿಯ ಮಾತು ಅರ್ಥಪೂರ್ಣವಾಗಿದೆ. "ಮನಸ್ಸಿನ ಮೂಲೆಗಳನ್ನು ತಡವಿ ಬಿಡುವ ಕಥೆ. ಕಥೆಯ ಕೊನೆಯಂತೆ ವಾಸ್ತವದಲ್ಲೂ ನತದೃಷ್ಟ ಸಹೋದರಿಯರು ನಾಲ್ಕಾರು ಅತ್ತೆಯವರಿಗೆ ತಮ್ಮ ಮೈಮೇಲಿನ ಸೀಮೆ ಎಣ್ಣೆಯ ಬೆಂಕಿಯನ್ನು

ಬಳುವಳಿಯಾಗಿ ಕೊಟ್ಟು ಬಿಟ್ಟು ಅವರ ಹೆಣ ಮಲಗಿಸಿ ಬಿಟ್ಟರೆ ವರದಕ್ಷಿಣೆ ಭೂತವನ್ನು ಕತ್ತರಿಸಲು ಖಡ್ಗ ಬೇಕಿಲ್ಲ. ಇಂಥ ಸಣ್ಣ ಧೈರ್ಯವೇ ಸಾಕು" (ಜಯಾ ಯಾಜಿ ಶಿರಾಲಿ; ಶಂಕ್ರಿ, ಓದುಗರ ಅನಿಸಿಕೆಗಳು; ೨೦೦೦; ಪುಟ ೧೦೮) ಎಂಬ ಕೃಷ್ಣಮೂರ್ತಿಯವರ ಮಾತು ಅರ್ಥಗರ್ಭಿತವಾಗಿದೆ.

ಮನೋರಮಾ ಎಂ. ಭಟ್‌ರವರ 'ಸ್ವಯಂವರ' ಕತೆಯು ವರದಕ್ಷಿಣೆಯಿಲ್ಲದೆ ಆಧುನಿಕ ಸ್ವಯಂವರದ ಮೂಲಕ ಗಂಡು ಹೆಣ್ಣು ವಿವಾಹವಾಗುವ ಚಿತ್ರಣವನ್ನು ನೀಡುತ್ತದೆ. 'ವಧು ಪರೀಕ್ಷೆ'ಗೆ ಒಳಗಾಗಿ ನೋವು ಅನುಭವಿಸಿದ ಹರಿಣಿಗೆ ಅವಳ ಗೆಳತಿ ಉಮಾ ತಾನು ವಿವಾಹವಾಗುವ ಸಂಗತಿಯನ್ನು ತಿಳಿಸುತ್ತಾಳೆ. ವರದಕ್ಷಿಣೆಯ ಕಾರಣದಿಂದ ವಿವಾಹ ಮುರಿದು ಬಿದ್ದು ಎರಡು ವರ್ಷಗಳ ನಂತರ ಆಕಸ್ಮಿಕವಾಗಿ ಒಂದು ವಿವಾಹ ಸಮಾರಂಭದಲ್ಲಿ ಭೇಟಿಯಾದ ಪುರುಷನನ್ನು ಮೆಚ್ಚಿ ಆಧುನಿಕ ಸ್ವಯಂವರದ ಮೂಲಕ ಉಮಾ ವಿವಾಹವಾಗುತ್ತಾಳೆ. "ಅಯ್ಯೋ, ಅದೊಂದು ದೊಡ್ಡ ಸಂಗತಿಯಾ– ಹುಡುಗ ಹುಡುಗಿ ಮೆಚ್ಚಿಕೊಂಡಾಗ – ಅಲ್ಲಿ ಆತನ ಹೆತ್ತವರು ಇಲ್ಲದೆ ಇದ್ದರೆ ಸೈ– ಪ್ರೀತಿಗೆ ಪ್ರೇಮಕ್ಕೆ ಎಷ್ಟು ಸೆಳೆತ ಇದೆ ಗೊತ್ತಾ...... ಹೆಚ್ಚಿನ ವೈವಾಹಿಕ ತೊಂದರೆಗಳಿಗೆ ಕಾರಣರಾಗುವವರು ಗಂಡಿನ ತಾಯಿ ತಂದೆಯರು" (ಮನೋರಮಾ ಎಂ. ಭಟ್; ಸ್ವಯಂವರ; ೧೯೯೪; ಪುಟ ೧೨೦) ಎಂಬ ಉಮಾಳ ಮಾತಿನಲ್ಲಿ ಗಂಡು ಹೆಣ್ಣು ಪರಸ್ಪರ ಮೆಚ್ಚಿ ಮದುವೆಯಾದರೆ ವರದಕ್ಷಿಣೆಯ ಸಮಸ್ಯೆ ನಿವಾರಣೆಯಾಗಬಹುದು ಎಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ. "ಯಾಕೆ....... ಯಾಕೆ....... ಸಾಧ್ಯವಿಲ್ಲ. ಇಕೋ ನಿಂಗೆ ಮದುವೆ ಆಗಿ ಸೆಟಲ್ ಆಗಬೇಕಾ ಹೇಳು........ ಹಾಗಾದರೆ, ಅಪ್ಪ ಅಮ್ಮನನ್ನು ಕಾದು ಕೂತರೆ ನಿನ್ನ ಮದುವೆ ಗಣಪತಿ ಮದುವೆಯೇ ಸರಿ........ ಹಾಂ...... ನಿಜಾ ಹರಿಣೀ...... ಎಲ್ಲಿಯಾದರೂ ಪ್ರಕೃತಿಯೇ......... ಅವಕಾಶ ಮಾಡಿಸಿಕೊಡುವಾಗ...... ಧೈರ್ಯದಿಂದ 'ಸ್ವಯಂವರ' ಮಾಡಿಕೋ ತಿಳಿಯಿತಾ..... ಇಕೋ ಹರಿಣಿ........ ಸ್ವಯಂವರವೆಂದರೆ ಅಚ್ಚ ಭಾರತೀಯ ಪದ.....ಅದಕ್ಕೆ ಇತಿಹಾಸವಿದೆ. ಪರಂಪರೆ ಇದೆ. ನೆನಪಿಟ್ಟುಕೋ.."(ಮನೋರಮಾ ಎಂ. ಭಟ್; ಸ್ವಯಂವರ; ೧೯೯೪; ಪುಟ ೧೩೦, ೧೩೧) ಎಂಬ ಮಾತಿನಲ್ಲಿ ಪರಂಪರೆಯಿಂದ ಬಂದ ಸ್ವಯಂವರ ಪದ್ಧತಿಯೇ 'ವರದಕ್ಷಿಣೆ' ಇಲ್ಲದೇ ವಿವಾಹವಾಗುವ ಪರ್ಯಾಯ

ಕ್ರಮ ಎಂಬುದಾಗಿ ಲೇಖಕರು ತಿಳಿಸಿದ್ದಾರೆ. ಲೇಖಕರ ನಿಲುವಿನಲ್ಲಿ ವ್ಯಂಗ್ಯ ಕಂಡುಬಂದರೂ 'ವರದಕ್ಷಿಣೆ' ಸಮಸ್ಯೆಯ ನಿವಾರಣೆಗೆ ಚಿಂತನೆಗೆ ಹೆಚ್ಚಿನ ಮಹತ್ತ್ವವಿದೆ.

ವರದಕ್ಷಿಣೆಯ ಬೇಡಿಕೆಯನ್ನು ಪೂರೈಸಲಾಗದ ಹೆಣ್ಣು ಹೆತ್ತವರ ಸಂಕಟ, ವರದಕ್ಷಿಣೆ ಭರಿಸಲಾಗದ್ದರಿಂದ ಪ್ರೀತಿಸಿದವರನ್ನು ವಿವಾಹವಾಗದ ಗಂಡು-ಹೆಣ್ಣುಗಳ ದುಃಖ, ಅತ್ತೆ ಮನೆಯಲ್ಲಿ ವರದಕ್ಷಿಣೆಗಾಗಿ ಸೊಸೆಯಂದಿರು ಅನುಭವಿಸುವ ಮಾನಸಿಕ – ದೈಹಿಕ ಕಿರುಕುಳ, ಹಿರಿಯರ ವರದಕ್ಷಿಣೆ ಆಮಿಷಕ್ಕೆ ಆಹುತಿಯಾಗುವ ಒಲಿದ ಜೀವಿಗಳ ದುರಂತ, ಹೀಗೆ ವರದಕ್ಷಿಣೆಯ ಭಯಾನಕ ಚಿತ್ರಗಳನ್ನು ಹವ್ಯಕ ಲೇಖಕಿಯರು ಹಲವು ನೆಲೆಗಳಲ್ಲಿ ವೀಶ್ಲೇಷಿಸಿದ್ದಾರೆ. ವರದಕ್ಷಿಣೆ ಲೇಖಕಿಯರನ್ನು ಕಾಡಿರುವ ಪ್ರಮುಖ ಸಾಮಾಜಿಕ ಸಮಸ್ಯೆಯಾಗಿದ್ದರೂ, ಸಮಾಜದ ದ್ವಿಮುಖ ನೀತಿಯಿಂದಾಗಿ ಮಹಿಳೆಯರು ಅನುಭವಿಸುತ್ತಿದ್ದ ಕೌಟುಂಬಿಕ ಯಾತನೆ, ಹತಾಶೆಗಳ ಸ್ವರೂಪವನ್ನು ಅವರು ಗ್ರಹಿಸಿದ್ದಾರೆ. ಸಮಸ್ಯೆಗಳಿಗೆ ಪರಿಹಾರವನ್ನು ಶೋಧಿಸುವಲ್ಲಿ ಲೇಖಕಿಯರ ಧೋರಣೆಗಳು ವಿಭಿನ್ನವಾಗಿದ್ದರೂ ಸ್ತ್ರೀಪರ ಸಂವೇದನಾಶೀಲತೆಯುಳ್ಳ ಮಾನವೀಯ ಸಮಾಜದ ನಿರ್ಮಾಣದಲ್ಲಿ ಹವ್ಯಕ ಲೇಖಕಿಯರಿಗಿರುವ ಒಲವು ಅವರ ಬರಹಗಳ ಮುಖ್ಯ ಕಾಳಜಿಯೆನ್ನುವುದು ನಿರ್ವಿವಾದ.

### ೧೦.೩ ವೇಶ್ಯಾ ಸಮಸ್ಯೆ

ಬಾಲ್ಯ ವಿವಾಹ, ಕೇಶಮುಂಡನ, ವರದಕ್ಷಿಣೆ ಸಮಸ್ಯೆ, ವಿಧವಾ ಸಮಸ್ಯೆ ಮುಂತಾದವುಗಳ ಬೆಳವಣಿಗೆಯೇ ವೇಶ್ಯಾ ಹುಟ್ಟಿಗೆ ಕಾರಣ ಎಂಬ ಅಂಶವನ್ನು ತೋರಿಸುವ ಕೆಲಸವೂ ಸಾಕಷ್ಟು ವಿಸ್ತೃತವಾಗಿಯೇ ಆಗಿದೆ. ವೈಯಕ್ತಿಕ ನೆಲೆಯಲ್ಲಿ ಅಸಹಾಯಕರಾಗಿಯೇ, ಅನಾಥರಾಗಿಯೇ, ಬಡತನ ಹಿಂಸೆ ತಾಳದೆಯೇ, ಮೋಸಕ್ಕೆ ಒಳಗಾಗಿಯೋ ಒಮ್ಮೆ ಅನೈತಿಕ ಸಂಬಂಧ ಹೊಂದಿ, ಅನಂತರ ಆ ವಿಷವರ್ತುಲಕ್ಕೆ ಸಿಲುಕಿ ಹೊರಬರಲಾಗದೆ ನರಳಿದವರೇ ಅಧಿಕ. ಹೀಗಾಗಿ ಇಂಥ ವೈಯುಕ್ತಿಕ ನೆಲೆಯಿಂದ ಸಮಸ್ಯೆ ಹುಟ್ಟಿ, ಬರಬರುತ್ತ ಇದು ಸಮಾಜಕ್ಕೆ ದೊಡ್ಡ ತಲೆನೋವಾಗಿ, ಅಪರಿಹಾರ್ಯ ಸಮಸ್ಯೆಯಾಗಿ ಕಂಡುಬಂದಿದೆ. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧ ಮತ್ತು ಇಪ್ಪತ್ತನೆಯ ಶತಮಾನದ ಆರಂಭದ ಕಾಲದಿಂದ ವೇಶ್ಯಾ ಸಮಸ್ಯೆಯು ಲೇಖಕಿಯರನ್ನು ತೀವ್ರವಾಗಿ ಕಾಡಿದೆ. ಈ ಅವಧಿಯಲ್ಲಿ ಬಂದ ಕತೆಗಳ

ಮೂಲಕ ವೇಶ್ಯಾ ಸಮಸ್ಯೆಯ ಬಗೆಗೆ ಲೇಖಕಿಯ ಮನೋಧರ್ಮ ವ್ಯಕ್ತವಾದ ರೀತಿಯನ್ನು ಇಲ್ಲಿ ವಿವೇಚಿಸಬಹುದು.

ವೇಶ್ಯೆರಾಗುವುದಕ್ಕೆ ಬಡತನ, ಹಣದ ಆಸೆ, ನಿರಾಶ್ರಿತ ಬದುಕು ಮುಂತಾದವುಗಳು ಕಾರಣವಾದಂತೆ, ವೃದ್ಧನೊಡನೆ ವಿವಾಹ, ಒಲ್ಲದ ಮದುವೆಯನ್ನು ತಿರಸ್ಕರಿಸಿ, ಪ್ರೇಮಿಯೊಂದಿಗೆ ಓಡಿ, ಆತನ ಆಕಸ್ಮಿಕ ಅಗಲುವಿಕೆಯಿಂದ ಒಬ್ಬಂಟಿಯಾಗುವುದು, ಹೆಣ್ಣಿನ ಅಸಹಾಯಕತೆ ಹಾಗೂ ಮುಗ್ಧತೆಯನ್ನು ದುರುಪಯೋಗ ಪಡಿಸಿಕೊಳ್ಳುವ ಪುರುಷ, ಒಮ್ಮೆ ದಾರಿ ತಪ್ಪಿ ತಿದ್ದಿಕೊಳ್ಳಲು ಪ್ರಯತ್ನಿಸಿದರೂ ಅದಕ್ಕೆ ಅವಕಾಶ ನೀಡದ ಸಮಾಜದ ಧೋರಣೆಗಳೂ ಕಾರಣಗಳಾಗಿವೆ ಎಂಬುದನ್ನು ಕತೆಗಳು ಸೂಚಿಸುತ್ತವೆ. ದೇವಾಂಗನಾ ಶಾಸ್ತ್ರಿಯವರ 'ಆಣೆ-ಪಾವಲಿ' ವೇಶ್ಯಾ ಸಮಸ್ಯೆಯ ಕಾರಣಗಳನ್ನು ಹೇಳುವ ಕತೆಯಾದರೆ, ಕೊಡಗಿನ ಗೌರಮ್ಮನವರ 'ಮನುವಿನ ರಾಣಿ' ಮತ್ತು ಲೀಲಾ ಮಣ್ಣಾಲರ 'ಅನಾಹುತ' ವೇಶ್ಯಾ ಸಮಸ್ಯೆಯ ಪಾರ್ಶ್ವ ನೋಟವನ್ನು ಬೀರುವ ಕತೆಗಳಾಗಿವೆ.

ಪ್ರಗತಿಶೀಲ ಕಥೆಗಾರ ನಿರಂಜನರ ಪ್ರಸಿದ್ಧ ಕತೆ 'ಕೊನೆಯ ಗಿರಾಕಿ'ಯನ್ನು ನೆನಪಿಸುವ ಕಥೆ ದೇವಾಂಗನ ಶಾಸ್ತ್ರಿಯವರ 'ಆಣೆ-ಪಾವಲಿ'. ಹೆಣ್ಣನ್ನು ಭೋಗದ ವಸ್ತುವನ್ನಾಗಿಸಿ ಗಂಡಿನ ಸ್ವೇಚ್ಛೆ-ಲಂಪಟತನಕ್ಕೆ ಆಹಾರವಾಗಿಸುವ ಪುರುಷನ ನೈತಿಕತೆಯ ಕ್ರೌರ್ಯವನ್ನು ಬಿಂಬಿಸುವ ಕತೆಯಾಗಿದೆ. ರಕ್ಷಣಾ ಬೇಲಿಯಾಗಿದ್ದ ಕುಟುಂಬವೇ ಹೆಣ್ಣಿಗೆ ಶೋಷಣೆಯ ವ್ಯೂಹವಾದಾಗ, ಬಿಡುಗಡೆಯ ದಾರಿಗಾಣದೇ ಲೈಂಗಿಕ ಆಕ್ರಮಣಗಳ ಸರಣಿಗಳಿಗೆ ತುತ್ತಾಗುವ ಯುವತಿಯ ಕರುಣಾಜನಕ ಕತೆಯಿದು. ನಾಪ್ಪಯ್ಯನ ಮಗಳು ನತದೃಷ್ಟೆ ಸುಮತಿ ಬಾಲ್ಯದಲ್ಲಿಯೇ ಹೆತ್ತವರನ್ನು ಕಳೆದುಕೊಂಡು ದಾಯಾದಿ ತಿಮ್ಮಯ್ಯನ ಹಂಗಿನಲ್ಲಿ ಬೆಳೆದು ದೊಡ್ಡವಳಾಗುತ್ತಾಳೆ. ಮಂದಬುದ್ಧಿಯ ದುರ್ಬಲ ಗಂಡಿನೊಂದಿಗೆ ಹಿರಿಯರ ಅಪೇಕ್ಷೆಯಂತೆ ಮದುವೆಯಾಗುತ್ತಾಳೆ. ಬುದ್ಧಿಹೀನ ಗಂಡಿನಿಂದಾಗಿ ಗಂಡನ ಮನೆ ನರಕವಾಗುತ್ತದೆ. ಕಾಮುಕನಾದ ಭಾವ (ಗಂಡನ ಅಣ್ಣ)ನಿಂದ ಲೈಂಗಿಕ ಆಕ್ರಮಣಕ್ಕೊಳಗಾಗುತ್ತಾಳೆ. ವಿಷಯ ಗೊತ್ತಿದ್ದರೂ ದುರ್ಬಲನಾದ ಗಂಡ ಅಣ್ಣನನ್ನು ಎದುರಿಸಲಾಗದೆ ಮನೆಬಿಟ್ಟು ಹೊರಟುಹೋಗುತ್ತಾನೆ. ಗಂಡನಿಲ್ಲದ ಸುಮತಿಯನ್ನು ಭಾವ ಬಳಸಿ ಬಿಸಾಕುತ್ತಾನೆ. ನೆಲೆಕಳೆದುಕೊಂಡ ಸುಮತಿ ಕಾಲಿಟ್ಟ ಸ್ಥಳಗಳಲ್ಲೆಲ್ಲ ಗಂಡಿನ

ಲಂಪಟತನಕ್ಕೆ ಆಹಾರವಾಗುತ್ತಾಳೆ. ಗೆಳೆಯನೊಬ್ಬನೊಡನೆ ಊರು ಬಿಡುತ್ತಾಳೆ. ಊರವರಿಂದ 'ಕುಲಕಂಟಕಿ', 'ಮಾನಗೆಟ್ಟ ಹೆಣ್ಣು' ಎನ್ನುವ ನಿಂದನೆಗೆ ಗುರಿಯಾಗುತ್ತಾಳೆ. ಹೀಗೆ ಬದುಕಿನ ಹೋರಾಟದಲ್ಲಿ ಸೋತು, ಸುಣ್ಣವಾದ ಸುಮತಿಯ ಬದುಕು ಊರವರಿಗೆ ಹಾಸ್ಯದ ವಸ್ತುವಾಗುತ್ತದೆ. ಕುಟುಂಬದ ಸದಸ್ಯರಿಂದಲೇ ಹೆಣ್ಣು ಲೈಂಗಿಕ ಕಿರುಕುಳ ಅನುಭವಿಸುವ ಅತ್ಯಂತ ದಾರುಣ ಚಿತ್ರ ಇಲ್ಲಿದೆ. ಸಾಮಾಜಿಕ ಪ್ರತಿಷ್ಠೆಯಿರುವ ಕುಟುಂಬದೊಳಗೆ ಸೊಸೆಯ ಮೇಲೆ ನಡೆಯುವ ಲೈಂಗಿಕ ಆಕ್ರಮಣವನ್ನು, ಗಂಡಿನ ಕಾಮುಕತೆ ನಿರ್ದಯತೆ, ಸ್ತ್ರೀ ವಿರೋಧಿ ನೀತಿಯಿಂದಾಗಿ ಮುಗ್ಧ ಹೆಣ್ಣು ಮಕ್ಕಳು ವೇಶ್ಯಾ ವೃತ್ತಿಯ ಪಾಪಕೂಪಕ್ಕೆ ಜಾರುವುದನ್ನು ಲೇಖಕಿ ತೀವ್ರ ನೋವಿನಿಂದ ಚಿತ್ರಿಸಿದ್ದಾರೆ. ಹೀಗೆ ಹೆಣ್ಣನ್ನು ಸ್ವಾರ್ಥಕ್ಕಾಗಿ ಬಳಸಿಕೊಂಡು ಎಸೆಯುವ ನಿರ್ದಯತೆಯನ್ನು ಧ್ವನಿಸುವ ಕತೆಯು, ಮಾನವ ಸ್ವಭಾವದೊಳಗಿನ ಕ್ರೌರ್ಯವನ್ನು ಬಿಂಬಿಸುತ್ತದೆ. ಗಂಡಿನ ಕಾಮುಕತನಕ್ಕೆ ಬಲಿಯಾಗಿ ಕೌಟುಂಬಿಕ ರಕ್ಷಣೆಯನ್ನು ಕಳೆದುಕೊಂಡು ನಿರ್ಗತಿಕರಾಗಿ 'ವ್ಯಭಿಚಾರ'ದ ಪಟ್ಟಕಟ್ಟಿಸಿಕೊಂಡು ಅವಮಾನಗಳಿಗೆ ಗುರಿಯಾಗುವ ಸ್ತ್ರೀ ಶೋಷಣೆಯ ಬಗೆಗೆ ಲೇಖಕಿಯ ವ್ಯಥೆಯೇ ಆಕ್ರೋಶವಾಗಿ ಈ ಕತೆಯಲ್ಲಿ ವ್ಯಕ್ತವಾಗಿದೆ.

ಕೊಡಗಿನ ಗೌರಮ್ಮನವರು ಬರೆದ 'ಮನುವಿನ ರಾಣಿ' ಕಥೆಯಲ್ಲಿ ವೇಶ್ಯಾ ಸಮಸ್ಯೆಯ ಪಾರ್ಶ್ವನೋಟವನ್ನು ಕಾಣುತ್ತೇವೆ. ಈ ಕತೆಯಲ್ಲಿ ಬಂದಿರುವ 'ರಾಜಮ್ಮ' ವೇಶ್ಯೆಯಾದರೂ ತನ್ನನ್ನು ಪ್ರೀತಿಸಿ ಬಂದವನಿಗೆ, ತನ್ನನ್ನು ಸಮರ್ಪಿಸಿಕೊಳ್ಳುತ್ತಾಳೆ. ಅವನು ಬದುಕಿರುವವರೆಗೆ ತನ್ನ ಕಣ್ಣಂತೆ ಕಾಣುತ್ತಾಳೆ. ಅವನ ಮರಣಾನಂತರ, ಆ ಪೂರ್ವದಲ್ಲಿ ಸಮಾಜವು ತನ್ನನ್ನು ಕಂಡ ಅಸಹನೀಯ ವರ್ತನೆಯನ್ನು ಮಾನವೀಯ ದೃಷ್ಟಿಯಿಂದ, ಕರ್ತವ್ಯದ ದೃಷ್ಟಿಯಿಂದ, ಸೇವೆ ಸಲ್ಲಿಸಿದ ಡಾಕ್ಟರನಲ್ಲಿ ಪತ್ರದ ಮೂಲಕ ಅರಕೆ ಮಾಡಿಕೊಡುತ್ತಾಳೆ. ಆ ಅರಿಕೆಯಲ್ಲಿ ಸಮಾಜದಿಂದ ತಿರಸ್ಕೃತಳಾದ, ಹೆಣ್ಣಿನ ಒಳನೋವು, ಮೂಕರೋದನ ವ್ಯಕ್ತವಾಗಿದೆ.

ಈ ಕತೆಯ ಕೇಂದ್ರ ಪಾತ್ರ ರಾಜಮ್ಮ ಎಂಬ ವೇಶ್ಯೆಯಾದರೂ ಕಥೆ ವೇಶ್ಯಾ ಸಮಸ್ಯೆಯ ತೆಳು ಸಾಮಾಜಿಕ ಅಧ್ಯಯನವಷ್ಟೇ ಆಗದೆ ಪ್ರೇಮದ ತೀವ್ರತೆಯನ್ನು ಚಿತ್ರಿಸುವ ಕಥೆಯಾಗುತ್ತದೆ. ವೈದ್ಯನಾದ ನಿರೂಪಕ ಮೊದಲು ರಾಜಮ್ಮನ ಬಗ್ಗೆ ಸಾಂಪ್ರದಾಯಿಕ ದೃಷ್ಟಿಯನ್ನೇ ಇಟ್ಟುಕೊಂಡಿದ್ದು, ವೇಶ್ಯೆಯ ಮನೆಗೆ ರೋಗಿಯನ್ನು

ನೋಡಲು ಹೇಗೆ ಹೋಗುವುದು ಎಂಬ ಮಡಿವಂತಿಕೆಯನ್ನಿಟ್ಟುಕೊಂಡಿದ್ದು, ಕ್ರಮೇಣ ತನ್ನ ಅಭಿಪ್ರಾಯಗಳನ್ನು ಬದಲಿಸಿಕೊಳ್ಳುತ್ತ ಮಾನವೀಯ ಮೌಲ್ಯಗಳನ್ನು ಪಡೆದುಕೊಳ್ಳುತ್ತ ಹೋಗುವುದನ್ನು ನೋಡಬಹುದು. ಕೇವಲ ಪ್ರಜ್ಞೆಯ ಮಟ್ಟದಲ್ಲಿ ಮಾತ್ರವಲ್ಲ ಇರುವಿಕೆಯ ಮಟ್ಟದಲ್ಲಿಯೂ ಮನುಷ್ಯನಾಗುತ್ತ ಬೆಳೆಯುವುದನ್ನು ಕಾಣಬಹುದು. ವಿಟ- ವೇಶ್ಯೆಯರ ವ್ಯವಹಾರಿಕ ನೆಲೆಗಳನ್ನು ಮೀರಿ ಪ್ರೇಮ ಸಂಬಂಧವಾಗಿ ಬೆಳೆದ ಮನು-ರಾಜಮ್ಮರ ಪ್ರಣಯ ರಾಜಮ್ಮನ ತಾಯಿಯ ಕುಟಿಲತೆಯಿಂದಾಗಿ ವಿಲಕ್ಷಣ ರೀತಿಯಲ್ಲಿ ಭಂಗಗೊಂಡು ಮನುವಿಗೆ ಹುಚ್ಚು ಹಿಡಿದರೂ ಕೊನೆಗೆ ಅವನು ರಾಜಮ್ಮನ ಆಶ್ರಯದಲ್ಲೇ ಕೆಲಕಾಲ ಬಾಳಿ ಮರಣವನ್ನು ಅಪ್ಪುವುದು, ಮನುವಿನ ಮರಣದ ನಂತರ ರಾಜಮ್ಮನೂ ಕಾಣೆಯಾಗುವುದು ಗಂಡು – ಹೆಣ್ಣಿನ ಪ್ರೇಮದ ಸೆಳೆತಗಳನ್ನು ತೀವ್ರವಾಗಿ ಬಿಂಬಿಸುತ್ತದೆ.

ಲೀಲಾ ಮಣ್ಣಾಲರ 'ಅನಾಹುತ' ಕತೆಯಲ್ಲಿ ಕಥಾನಾಯಕನ ದಾಂಪತ್ಯದಲ್ಲಿ ಬಿರುಕುಂಟಾದಾಗ ವೇಶ್ಯೆಯ ಸಹವಾಸವನ್ನು ಬಯಸುವ ಚಿತ್ರಣ ಕಂಡುಬರುತ್ತದೆ. ರೂಪಾ ಮತ್ತು ಶ್ರೀನಿವಾಸ ಅನ್ಯೋನ್ಯ ದಾಂಪತ್ಯ ಜೀವನ ನಡೆಸುತ್ತಿರುವ ಸಂದರ್ಭದಲ್ಲಿ "ಮಾನಸಿಕವಾಗಿಯಾದರೂ ವ್ಯಭಿಚಾರ ಮಾಡದ ಗಂಡಸರೇ ಈ ಲೋಕದಲ್ಲಿಲ್ಲ" (ಲೀಲಾ ಮಣ್ಣಾಲ; ತೆರೆ; ೧೯೯೮; ಪುಟ ೪೩) ಎಂಬ ಪುಸ್ತಕದ ಒಂದು ವಾಕ್ಯ ಅವಳ ಮನಸ್ಸಿನಲ್ಲಿ ಸಂಶಯದ ಬೀಜವನ್ನು ಬಿತ್ತುತ್ತದೆ. ಅಂದಿನಿಂದ ಅವಳಿಗೆ ಗಂಡನ ನಡವಳಿಕೆಯ ಮೇಲೆ ಸಂಶಯ ಬರುತ್ತದೆ. ಕೊನೆಗೆ ಅವರ ಪಕ್ಕದ ಮನೆಗೆ ಶೀಲಾ ಎಂಬ ವೇಶ್ಯೆ ಬಂದಾಗ ಅವಳ ಸಂಶಯ ಬಲಗೊಳ್ಳುತ್ತದೆ. ರೂಪಾ ಶೀಲಳ ಹೆಸರೆತ್ತಿ ಮೂದಲಿಸಿದಾಗ, ಅವಳ ಬಗ್ಗೆ ಆಸಕ್ತಿ ಹೊಂದಿದ ಶ್ರೀನಿವಾಸ ಅವಳನ್ನು ಹೋಟೆಲಿನಲ್ಲಿ ಭೇಟಿಯಾಗುತ್ತಾನೆ. ಆ ಸಂದರ್ಭದಲ್ಲಿ ಅಲ್ಲಿಗೆ ಆಗಮಿಸಿದ ರೂಪಾ, ತನ್ನ ಗಂಡ ಶೀಲಾಳೊಂದಿಗಿರುವ ದೃಶ್ಯವನ್ನು ಕಂಡಾಗ ಅವಳ ಸಂಸಾರ ಛಿದ್ರವಾಗುತ್ತದೆ. "ಆದರೆ ಅಲ್ಲಿ ಅವನಿಗೊಂದು ಅಚ್ಚರಿಯ ಆಘಾತ ಕಾದಿತ್ತು. ಆತನೆಡೆಗೆ ಉರಿನೋಟ ಬೀರುತ್ತಾ ರೂಪ ನಿಂತಿದ್ದಳು ! ಶ್ರೀನಿ ನೋಡಿದ ತಕ್ಷಣ ಹಿಂದಿರುಗಿ ಸರಸರನೆ ನಡೆದಳು. ಏನೂ ಇಲ್ಲದಾಗಲೂ ಏನೋ ಇದೆ ಎಂದಂದುಕೊಳ್ಳುತ್ತಿದ್ದ ರೂಪ..... ಈಗ ಪ್ರತ್ಯಕ್ಷ ನೋಡಿದ ಭಾವದೊಡನೆ, ಪರಾಂಬರಿಸುವ ಗೋಜಿಲ್ಲದೆ ಬಿರಬಿರನೆ ನಡೆಯುತ್ತಲೇ ಇದ್ದಳು".

(ಲೀಲಾ ಮಣ್ಣಾಲ; ತೆರೆ; ೧೯೯೮; ಪುಟ ೫೨). ಹೀಗೆ ವೇಶ್ಯೆಯ ಕಾರಣವಾಗಿ ಒಂದು ಸಂಸಾರ ಮುರಿದು ಬೀಳುವ ದೃಶ್ಯವನ್ನು ಕತೆಗಾರರು ಚಿತ್ರಿಸಿದ್ದಾರೆ.

ಸಾಮಾಜಿಕ ವಿಸಂಗತಿಯಾಗಿದ್ದ ವೇಶ್ಯಾ ಪದ್ಧತಿಯಂತಹ ಆಚರಣೆಗಳ ವಿರುದ್ಧ ಹವ್ಯಕ ಕತೆಗಾರ್ತಿಯರು ಧ್ವನಿ ಎತ್ತಿದ್ದಾರೆ. ವೇಶ್ಯಾ ಸಮಸ್ಯೆಯು ಸರಳ ಕಾರಣವೊಂದರಿಂದ ಹುಟ್ಟಿಕೊಂಡದ್ದಲ್ಲ. ಅದು ಸಮಾಜ ನಿರ್ಮಿಸಿದ ಒಂದು ಸಂಕೀರ್ಣ ವ್ಯವಸ್ಥೆ ಎನ್ನುವ ಕಡೆಗೆ ಗಮನವನ್ನು ಸೆಳೆಯುವ ದೃಷ್ಟಿಯಿಂದ ಈ ಕತೆಗಳು ಮುಖ್ಯವಾಗುವುದು.

## ೧೦.೪ ಸ್ತ್ರೀ ಶೋಷಣೆ

ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಹಲವು ಹೊಸತನಗಳಿಗೆ ಕಾರಣವಾಗಿರುವ ಇಪ್ಪತ್ತನೆಯ ಶತಮಾನವು ಆಧುನಿಕ ಮಹಿಳಾ ಸಾಹಿತ್ಯ ಚರಿತ್ರೆಯ ಆರಂಭ ಕಾಲವೂ ಹೌದು. ಹೊರ ಜಗತ್ತಿನ ಮಹಿಳಾ ಪರ ವಿದ್ಯಾಮಾನಗಳು, ರಾಷ್ಟ್ರೀಯ ನೆಲೆಯ ಸುಧಾರಣಾವಾದಿ ಆಶಯಗಳಿಂದ ಪ್ರೇರಣೆಗೊಂಡ ಮಹಿಳೆಯರು ಆಧುನಿಕತೆಗೆ ಮುಖ ಮಾಡುತ್ತಿದ್ದ ಸಂದರ್ಭದಲ್ಲಿಯೇ ಕನ್ನಡ ಲೇಖಕಿಯರೂ ಮಹಿಳೆಯರ ಅತಂತ್ರತೆ, ಅಸ್ತಿತ್ವದ ಪ್ರಶ್ನೆ ಮತ್ತು ವಾಸ್ತವ ಬದುಕಿನ ವೈರುಧ್ಯಗಳ ಬಗೆಗೆ ಜಾಗೃತರಾದರು. ಸಾಮಾಜಿಕ ವಿಸಂಗತಿಗಳು ಪುರುಷನ ಲಿಂಗ ತಾರತಮ್ಯದ ಧೋರಣೆಗಳು ಮಹಿಳೆಯರಲ್ಲಿ ತಮ್ಮತನದ ಎಚ್ಚರ ಮೂಡಿಸಿದವು. ಆಧುನಿಕ ವಿದ್ಯಾಭ್ಯಾಸ, ಸಮಾಜ ಸುಧಾರಕರ ಸ್ತ್ರೀಪರ ವಿಚಾರಗಳು ಮಹಿಳೆಯರಲ್ಲಿ ಸ್ತ್ರೀ ವಿಶಿಷ್ಟ ಸಂವೇದನೆಯ ಜಾಗೃತಿಗೆ ಪೂರಕವಾದವು. ಅಂದಿನ ಸಾಂಪ್ರದಾಯಿಕ ಸಮಾಜದಲ್ಲಿ ರೂಢಿಯಲ್ಲಿದ್ದ ಸ್ತ್ರೀ ವಿರೋಧಿ ವಿಧಿನಿಷೇಧಗಳನ್ನು ಮತ್ತು ಸನಾತನ ಶಾಸ್ತ್ರ ಪುರಾಣಗಳು ಗಟ್ಟಿಗೊಳಿಸಿದ ಜೀವ ವಿರೋಧಿ ಆಚರಣೆಗಳಾದ ವರದಕ್ಷಿಣೆ, ಸಹಗಮನ, ಬಾಲ್ಯವಿವಾಹ, ಕೇಶಮುಂಡನ, ವಿಧವೆಯರಿಗೆ ಸಂಬಂಧಿಸಿದ ಅಮಾನವೀಯ ಧೋರಣೆಗಳನ್ನು ಲೇಖಕಿಯರು ತಮ್ಮ ಕತೆಗಳಲ್ಲಿ ಚಿತ್ರಿಸಿದ್ದಾರೆ. ಬಾಲ್ಯವಿವಾಹ, ವರದಕ್ಷಿಣೆ, ಬಹುಪತ್ನಿತ್ವದ ಪದ್ಧತಿಗಳು ಸ್ತ್ರೀಯರ ಬದುಕನ್ನು ಛಿದ್ರಗೊಳಿಸಿದ ದುರಂತ ವಾಸ್ತವವನ್ನು ಹಲವು ನಿಟ್ಟಿನಿಂದ ಬಿಚ್ಚಿಟ್ಟರು. ಸಾಮಾಜಿಕ–ಕೌಟುಂಬಿಕ ಹಿಂಸೆಗಳನ್ನು ಕೇಂದ್ರವಾಗಿರಿಸಿಕೊಂಡು ಮಹಿಳೆಯರು ಬರೆದ ಕತೆಗಳಲ್ಲಿ ಅವರ ಮೇಲಿನ ದಬ್ಬಾಳಿಕೆಯ ವಿಕೃತ ಸ್ವರೂಪವನ್ನು

ತೆರೆದಿಟ್ಟರು. ಮಹಿಳೆಯರ ಮೇಲೆ ನಡೆಯುತ್ತಿದ್ದ ಅತ್ಯಾಚಾರ, ಅನ್ಯಾಯಗಳ ವಿರುದ್ಧ ತಮ್ಮ ಬರವಣಿಗೆಯ ಮೂಲಕ ಪ್ರತಿಭಟನೆಗಳನ್ನು ವ್ಯಕ್ತಪಡಿಸಿರುವುದು ಅವರ ಸಂವೇದನಾಶೀಲ ಪ್ರಗತಿಪರ ನಿಲುವಿನ ಸಂಕೇತವಾಗಿದೆ. ಹೆಣ್ಣಿನ ಅಸಹಾಯಕತೆ, ಅಧೀನತೆಯನ್ನು ತನ್ನ ಸ್ವಾರ್ಥ, ಕಾಮುಕತನಕ್ಕೆ ಆಹಾರವಾಗಿಸಿಕೊಳ್ಳುವ ಪುರುಷ ಸಮಾಜದ ಕ್ರೌರ್ಯ–ಕ್ಷುದ್ರತೆಗಳನ್ನು ತುಂಬ ನಿಷ್ಠುರವಾಗಿ ತಮ್ಮ ಕತೆಗಳಲ್ಲಿ ನಿರೂಪಿಸಿದ್ದಾರೆ. ಹವ್ಯಕ ಲೇಖಕಿಯರು ಹೆಣ್ಣಿನ ಶೋಷಣೆ, ಅವಳ ಮೇಲೆ ನಡೆಯುವ ದೌರ್ಜನ್ಯ, ಲೈಂಗಿಕತೆ, ಹೆಣ್ಣಿನ ವೈಧವ್ಯ ಮುಂತಾದ ವಿಷಯಗಳನ್ನು ಕುರಿತು ಬೆಳಕು ಚೆಲ್ಲಿದ್ದಾರೆ.

ದೇವಾಂಗನಾ ಶಾಸ್ತ್ರಿಯವರ 'ಹಾರೆಗೋಲು', 'ಅಡ–ಕತ್ತರಿ', ಸವಿತಾ ಅಡ್ವಾಯಿಯವರ 'ಭ್ರೂಣ', ಲೀಲಾ ಮಣ್ಣಾಲರ 'ಒಂದು ಘಟನೆಯ ನಂತರ', ಎ.ಪಿ. ಮಾಲತಿಯವರ 'ವಸಂತದ ಹೂವುಗಳು', ಮನೋರಮಾ ಎಂ.ಭಟ್‌ರವರ 'ಹೆಣ್ಣು.....ಶೋಷಣೆ.....ಇತ್ಯಾದಿ ಇತ್ಯಾದಿ', ಗಂಗಾ ಪಾದೇಕಲ್‌ರವರ 'ಹದ್ದುಗಳು', 'ಪುಲಪೇಡಿ', 'ಒಂದು ಪ್ರಕರಣದ ಕೊನೆ', 'ಜಾನಕಿಯ ಡೈರಿಯ ಕೆಲವು ಪುಟಗಳು', 'ಈ ನಮ್ಮ ನಾಡಿನಲ್ಲಿ', 'ಒಂದು ಸಾವಿನ ಕಥೆ', 'ಸ್ಫೋಟ', 'ದಿಕ್ಸೂಚಿ', 'ಇದು ಬರಿ ಬೆಳಗಲ್ಲೋ ಅಣ್ಣಾ', 'ಹೊಸಹೆಜ್ಜೆ' ಮುಂತಾದ ಕತೆಗಳಲ್ಲಿ ಸ್ತ್ರೀ ಶೋಷಣೆಯ ವಿವಿಧ ಮುಖಗಳನ್ನು ಲೇಖಕಿಯರು ಗುರುತಿಸಿದ್ದಾರೆ.

ದೇವಾಂಗನಾ ಶಾಸ್ತ್ರಿಯವರು ಬರೆದ 'ಹಾರೆಗೋಲು' ಕತೆಯಲ್ಲಿ ಅರವತ್ತರ ವಿಧುರನಿಗೆ ಹದಿನೇಳರ ತರುಣಿಯನ್ನು ಮದುವೆ ಮಾಡುವುದನ್ನು ಧರ್ಮಸಮ್ಮತವಾಗಿಸಿರುವ ಕ್ರೂರ ಸಮಾಜದಲ್ಲಿ ಅಸಮ–ವಿಷಮ ವಿವಾಹಗಳ ವಿಕೃತ ಪದ್ಧತಿಗಳಿಂದಾಗಿ ಸ್ತ್ರೀಯರ ಬದುಕು ಬೀದಿಪಾಲಾಗುವ ದಾರುಣತೆಯನ್ನು ಬಿಂಬಿಸುತ್ತಾರೆ. ನಾಲ್ಕು ಮಕ್ಕಳ ತಂದೆ ಶಾಂಭಟ್ಟರ ಹಿರಿಯ ಮಗಳು ಹದಿನೇಳರ ಭುವನೇಶ್ವರಿ, ವರದಕ್ಷಿಣೆ ತೆತ್ತು ಮದುವೆ ಮಾಡಲು ಶಕ್ಯವಿಲ್ಲದ ಬಡ ಭಟ್ಟರು ಮಗಳನ್ನು ಶ್ರೀಮಂತನಾದ ಅವಧಾನಿಗಳಿಗೆ ಧಾರೆಯರೆಯುತ್ತಾರೆ. 'ಹತ್ತು ಖಂಡುಗದ ಆಸ್ತಿಯನ್ನು ಸಾವಿರಾರು ರೂಪಾಯಿಗಳ ಒಡವೆಗಳನ್ನು' ಕನ್ಯೆಗೆ ಕೊಡುವುದಾಗಿ ಅವಧಾನಿಗಳು ಒಡ್ಡಿದ ಆಮಿಷಕ್ಕೆ ಬಲಿಯಾದ ಶಾಂಭಟ್ಟರು, ಮಗಳು ಸುಖವಾಗಿರುತ್ತಾಳೆಂಬ ನಂಬಿಕೆಯಿಂದ ನಾಲ್ಕನೆಯ ಸಂಬಂಧಕ್ಕೆ ಒಪ್ಪುತ್ತಾರೆ. ಬಡತನದ ಕಾರಣವಾಗಿಯೇ

ಭುವನೇಶ್ವರಿ ತಂದೆಗಿಂತಲೂ ಹಿರಿಯರಾಗಿದ್ದ ರಾಮಾವಧಾನಿಗಳಿಗೆ ನಾಲ್ಕನೆಯ ಮಡದಿಯಾಗುತ್ತಾಳೆ. ವಾತರೋಗದಿಂದ ಮರುವರ್ಷವೇ ಅವಧಾನಿಗಳು ಮರಣ ಹೊಂದುತ್ತಾರೆ. ಮದುವೆಯ ಕಾಲಕ್ಕೆ ಜಾಹಿರಾತು ಪಡಿಸಿದ್ದನ್ನು ಮರೆತು ಮರೆಯಾದ ಅವಧಾನಿಗಳ ಮನೆಯಲ್ಲಿ ಭುವನೇಶ್ವರಿ ನಿರ್ಗತಿಕಳಾಗುತ್ತಾಳೆ. ಮಲಮಕ್ಕಳ ಹಂಗಿನಲ್ಲಿ ಬದುಕಲೊಪ್ಪದೇ ಬರಿಗೈಯಿಂದ ತವರಿಗೆ ಮರಳುತ್ತಾಳೆ. ರಟ್ಟೆಯನ್ನು ನಂಬಿ ಬದುಕುವ ಮಾರ್ಗ ಕಂಡುಕೊಳ್ಳುತ್ತಾಳೆ. ನಂಬಿದವರೆಲ್ಲ ಕೈ ಬಿಟ್ಟಾಗ, ಭತ್ತ ಅವಲಕ್ಕಿ ಕುಟ್ಟುವ 'ಹಾರೆಗೋಲು' ಅವಳ ಹೊಟ್ಟೆ ತುಂಬಿಸುವ ಆಸರೆಯಾಗುತ್ತದೆ. ಶೀಲ ರಕ್ಷಣೆಯ ಆಯುಧವೂ ಆಗುತ್ತದೆ.

ತನ್ನ ಬದುಕಿನ ಆಗು ಹೋಗುಗಳನ್ನು ನಿಯಂತ್ರಿಸುವ ಹೆಣ್ಣಿನ ಅಸಹಾಯಕತೆ – ಅತಂತ್ರ ಸ್ಥಿತಿಯನ್ನು ಹೇಳುವ ಈ ಕಥೆಯು ವಿಷಮ ವಿವಾಹ ಮತ್ತು ದಾಂಪತ್ಯದ ಸಮಸ್ಯೆಯನ್ನು ವಿಶ್ಲೇಷಿಸುತ್ತದೆ. "ಮದುವೆಯಂತಹ ಜೀವನ-ಮರಣಗಳ ಸಮಸ್ಯೆಗಳಲ್ಲಿಯೂ ಹೆಣ್ಣಿನ ನಿಜವಾದ ಅಭಿಮತಕ್ಕೆ ಕಾಸಿನ ಬೆಲೆಯಿದ್ದರಷ್ಟೆ !" (ದೇವಾಂಗನಾ ಶಾಸ್ತ್ರಿ; ವೇಣೀ ಸಂಹಾರ; ೨೦೦೫; ಪುಟ ೩೪) ಎನ್ನುವ ಲೇಖಕಿಯ ಮಾತಿನ ವ್ಯಂಗ್ಯ ಗಮನಾರ್ಹ. ಗಂಡಿನ ಸ್ವಾರ್ಥ, ಅಹಂಕಾರ, ಅಟ್ಟಹಾಸವನ್ನು ಸೂಚ್ಯವಾಗಿಯೇ ಲೇಖಕರು ಚುಚ್ಚಿದ್ದಾರೆ. ಅರ್ಚಕ ಅವಧಾನಿಗಳು ವೃತ್ತಿಯಲ್ಲಿ ಮಾತೃತತ್ತ್ವದ ಆರಾಧಕರಾಗಿದ್ದರೂ ಪ್ರವೃತ್ತಿಯಲ್ಲಿ ಸ್ತ್ರೀಯ ಭೋಗದ ಸಾಧನವಾಗಿರಿಸಿಕೊಂಡಿರುವ ವೈರುಧ್ಯವನ್ನು ಲೇಖಕರು ವಿಡಂಬಿಸಿದ್ದಾರೆ. "ಅಪಮಾನ ಅಧೀನತೆಯಿಂದ ಸ್ವಾವಲಂಬನೆಯ ಬದುಕಿಗೆ ಹೆಜ್ಜೆಹಾಕುವ ಭುವನೇಶ್ವರಿಯ ನಿರ್ಣಯವು ಹೊಸ ಸ್ತ್ರೀ ಸಮಾಜದ ಆತ್ಮವಿಶ್ವಾಸದ ಬದುಕನ್ನು ಧ್ವನಿಸಿದೆ" (ದೇವಾಂಗನಾ ಶಾಸ್ತ್ರಿ; ವೇಣೀ ಸಂಹಾರ; ೨೦೦೫; ಪುಟ ೫೪) ಎಂಬುದಾಗಿ ಡಾ। ಶಾಂತಾ ಇಮ್ರಾಪುರ ಅಭಿಪ್ರಾಯಪಟ್ಟಿದ್ದಾರೆ.

ದೇವಾಂಗನಾ ಶಾಸ್ತ್ರಿಯವರ ಇನ್ನೊಂದು ಕತೆ 'ಅಡ–ಕತ್ತರಿ'ಯಲ್ಲಿ 'ಕೌಟುಂಬಿಕ ಹಿಂಸೆ'ಯ ಚಿತ್ರಣವಿದೆ. ಶೋಷಣೆಯನ್ನು ಅಸಹಾಯಕಳಾಗಿ ಒಪ್ಪಿ ಸ್ವೀಕರಿಸುವ ಹೆಣ್ಣಿನ ಅತಂತ್ರ ಬದುಕಿನ ದಯನೀಯತೆಯತ್ತ ಲೇಖಕಿ ಇಲ್ಲಿ ಗಮನ ಸೆಳೆಯುತ್ತಾರೆ. ಕ್ರೂರ 'ಅತ್ತೆ'ಯರಿಂದ ಘಾಸಿಗೊಳ್ಳುವ ಸೊಸೆಯಂದಿರ ಸಾಂಪ್ರದಾಯಿಕ ಚಿತ್ರಕ್ಕಿಂತ ಭಿನ್ನವಾಗಿ ಕಾಮುಕ ಮಾವನ ಲೈಂಗಿಕ ಆಕ್ರಮಣ, ನಿರ್ದಯಿ ಗಂಡನ ಹಿಂಸೆಯಲ್ಲಿ ಜಜ್ಜಿಹೋಗುವ

ಸೊಸೆಯ ಸಂದಿಗ್ಧತೆಯನ್ನು 'ಅಡ-ಕತ್ತರಿ' ಸಶಕ್ತವಾಗಿ ಚಿತ್ರಿಸಿದೆ. ಅನುಕೂಲಸ್ಥ ಪುರೋಹಿತ ಧತ್ತಂಭಟ್ಟರ ಮಗನೊಂದಿಗೆ ರೂಪವತಿ ತರುಣಿ ಗೌರಿಯ ವಿವಾಹವು ಹಿರಿಯರ ಯೋಜನೆಯಂತೆ ನಡೆಯುತ್ತದೆ. ಆದರೆ ಬೇರೊಬ್ಬಳಲ್ಲಿ ಅನುರಕ್ತನಾಗಿದ್ದ ತಿಮ್ಮಯ್ಯನಿಗೆ ಗೌರಿ ಬೇಡದ ಹೆಂಡತಿಯಾಗುತ್ತಾಳೆ. ಅದೇ ಸಂದರ್ಭದಲ್ಲಿ ಗೌರಿಯ ರೂಪ ತಾರುಣ್ಯ ಇಳಿವಯಸ್ಸಿನ ಮಾವನ ಕಣ್ಣು ಕುಕ್ಕುತ್ತದೆ. ನಿರ್ದಯಿ ಗಂಡನ ಹಿಂಸೆ, ಅನಾದರ, ಅತ್ತೆಯ ಕಿರುಕುಳ, ಅಭದ್ರ ಬದುಕಿನ ಭಯದ ಕಾರಣದಿಂದ ಮಾವನ ಕಾಮ ಪಿಪಾಸೆಗೆ ಗೌರಿ ಬಲಿಯಾಗುತ್ತಾಳೆ. ತವರಿನ ಬಡತನ ಆಕೆಯ ಪ್ರತಿಭಟನೆಯ ಶಕ್ತಿಯನ್ನು ನುಂಗಿ ಹಾಕುತ್ತದೆ. ಹೀಗೆ ಗಂಡ-ಮಾವನ ಬೇಕು ಬೇಡಗಳ 'ಅಡ-ಕತ್ತರಿ'ಯಲ್ಲಿ ಗೌರಿಯ ಬದುಕು ಛಿದ್ರಗೊಳ್ಳುವುದನ್ನು ಕತೆ ಪರಿಣಾಮಕಾರಿಯಾಗಿ ಧ್ವನಿಸುತ್ತದೆ. "ಧರ್ಮ ನಡಾವಳಿಗಳ ಹೆಸರಿನಲ್ಲಿ ನಮ್ಮಲ್ಲಿ ಹೆಣ್ಣಿನ ವಿಡಂಬನೆ ಅವ್ಯಾಹತವಾಗಿ ನಡೆದಿದೆಯಾದರೂ ಹೆಣ್ಣು ಜಾತಿ ವಿರೋಧಿಸುವುದನ್ನು ಬಿಟ್ಟು ಇಂಥ ಸಂದರ್ಭಗಳನ್ನು ಕಾದು ಸಂತೋಷದಿಂದ ನೆರವಾಗಲೊಪ್ಪಿ ಉತ್ಸಾಹದಿಂದ ಸಾಗುವುದು ಖೇದವನ್ನುಂಟು ಮಾಡದಿರದು" (ದೇವಾಂಗನಾ ಶಾಸ್ತ್ರಿ; ವೇಣೀ ಸಂಹಾರ; ೨೦೦೫; ಪುಟ ೭೨) ಎನ್ನುವ ಮಾತುಗಳಲ್ಲಿ ಹೆಂಗಸರ ಅಜ್ಞಾನಕ್ಕೆ ವಿಷಾದಿಸುವ ಲೇಖಕಿಯ ಮನೋಭಾವ ವ್ಯಕ್ತವಾಗಿದೆ. ಮಹಿಳೆಯರ ದುರಂತಕ್ಕೆ ಮೂಕ ಸಾಕ್ಷಿಯಾಗಿ ನಿಲ್ಲುವ ಹೆಂಗಸರ ಮೌಢ್ಯಕ್ಕೆ ಅಸಡ್ಡೆ, ಆಕ್ರೋಶವನ್ನು ವ್ಯಕ್ತಪಡಿಸುವ ಮಾತುಗಳು ದೇವಾಂಗನಾ ಶಾಸ್ತ್ರಿಯವರ ಸ್ತ್ರೀಪರ ಆಲೋಚನೆಗಳನ್ನು ಪರಿಚಯಿಸುತ್ತದೆ. ಮೇಲಿನ ಎರಡೂ ಕತೆಗಳಲ್ಲಿ ಮಹಿಳೆಯರ ವೈವಾಹಿಕ ಜೀವನದ ಯಾತನೆಯನ್ನು ಲೇಖಕಿ ಚಿತ್ರಿಸಿದ್ದಾರೆ. ಈ ಕಥೆಗಳ ನಾಯಕಿಯರು ಅಂದಿನ ಸಾಮಾಜಿಕ ವಾಸ್ತವವನ್ನು ಪ್ರಶ್ನಿಸಿ, ಪ್ರತಿಭಟಿಸಲಾಗದೆ ಅಸಹಾಯಕರಾಗಿ ನರಳಿದ್ದರೂ ಬದುಕಿಗೆ ವಿಮುಖರಾಗಿರಲಿಲ್ಲವೆನ್ನುವುದು ಗಮನಾರ್ಹ.

ಗಂಗಾ ಪಾದೇಕಲ್‌ರವರ 'ಹದ್ದುಗಳು', 'ಒಂದು ಪ್ರಕರಣದ ಕೊನೆ', 'ಈ ನಮ್ಮ ನಾಡಿನಲ್ಲಿ', 'ಒಂದು ಸಾವಿನ ಕಥೆ' ಕಥೆಗಳಲ್ಲಿ ಪುರುಷರ ದಬ್ಬಾಳಿಕೆ ಮತ್ತು ಅತ್ಯಾಚಾರಗಳಿಗೆ ಒಳಗಾಗಿ ಶೋಷಣೆಯನ್ನು ಅನುಭವಿಸುವ ಸ್ತ್ರೀಯರ ಚಿತ್ರಣವಿದೆ. ಗಂಗಾ ಪಾದೇಕಲ್‌ರವರ 'ಹದ್ದುಗಳು' ಕತೆಯಲ್ಲಿ ನಿರೂಪಕಿ ಗಂಡ ಎದೆನೋವಿನಿಂದಾಗಿ ಸರ್ಕಾರಿ ಆಸ್ಪತ್ರೆಗೆ ದಾಖಲಾಗುತ್ತಾನೆ. ಆಸ್ಪತ್ರೆಯಲ್ಲಿನ ತರುಣ ವೈದ್ಯನ ಕಾಮುಕ ದೃಷ್ಟಿ

ಆಕೆಯ ಮೇಲೆ ಬೀಳುತ್ತದೆ. ತನ್ನ ಪತಿಯ ಅನಾರೋಗ್ಯದ ನಿಮಿತ್ತ ವೈದ್ಯರ ಕೊಠಡಿಗೆ ನಿರೂಪಕಿ ಹೋದಾಗ ತರುಣ ಡಾಕ್ಟರ್ ಅವಳನ್ನು ಬಲಾತ್ಕರಿಸುತ್ತಾನೆ. ಈ ಕತೆಯು ಸರ್ಕಾರಿ ಆಸ್ಪತ್ರೆ(ಧರ್ಮಾಸ್ಪತ್ರೆ) ಹೇಗೆ ಬಡವರ ಪಾಲಿಗೆ ಶೋಷಣೆಯ ಕೇಂದ್ರವಾಗಿದೆ ಎಂಬ ಚಿತ್ರಣವನ್ನು ನೀಡುತ್ತದೆ. ಬಡ ಹೆಣ್ಣುಮಕ್ಕಳ ಶೋಷಣೆಯ ವಿರುದ್ಧ ಪ್ರತಿಭಟಿಸಲಾಗದ ಅಸಹಾಯಕ ಸ್ಥಿತಿಯನ್ನು ಚಿತ್ರಿಸಿದ್ದಾರೆ. ಪಾದೇಕಲ್‌ರವರ 'ಒಂದು ಪ್ರಕರಣದ ಕೊನೆ' ಕತೆಯಲ್ಲಿ ಮುಗ್ಧ ಬಾಲಕಿ ಹಾಸ್ಟೆಲ್ ವಾರ್ಡ್‌ನ್‌ನ ಅವ್ಯವಹಾರಕ್ಕೆ ಬಲಿಯಾದ ಕ್ರೂರ ಚಿತ್ರಣವಿದೆ. ಹಿಂದುಳಿದ ವರ್ಗದವರಿಗಾಗಿ ಇರುವ ಹಾಸ್ಟೆಲ್‌ನಲ್ಲಿ ನಿರೂಪಕಿ ಮತ್ತು ಕಮಲಾ ಸ್ನೇಹಿತೆಯರಾಗಿದ್ದರು. ಅಲ್ಲಿನ ವಾರ್ಡ್‌ನ್ ವಿದ್ಯಾರ್ಥಿನಿಯರನ್ನು ವೇಶ್ಯಾಟಿಕೆಗೆ ಬಳಸಿಕೊಳ್ಳುತ್ತಿದ್ದಳು. ಇದನ್ನು ತಿಳಿದ ಕಮಲಾ ಆರಂಭದಲ್ಲಿ ಪ್ರತಿಭಟಿಸಿದರೂ ಕೊನೆಗೆ ಬಡತನದಿಂದಾಗಿ ವಾರ್ಡ್‌ನ್‌ನ ಕಪಿಮುಷ್ಠಿಗೆ ಸಿಲುಕಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ವ್ಯವಸ್ಥೆಯ ವಿರುದ್ಧ ಹೋರಾಡಲು ಸಾಧ್ಯವಿಲ್ಲದ ಮುಗ್ಧ ಬಾಲಕಿ ಬಲಿಪಶುವಾಗುತ್ತಾಳೆ. "ಬಡವರಾಗಿ, ಅದ್ರಲ್ಲೂ ಹಿಂದುಳಿದವರಾಗಿ ಹುಟ್ಟಲೇ ಬಾರದು ಲಕ್ಷ್ಮಿ. ಬಡವ್ರಿಗೆ ಮಾನ, ಮರ್ಯಾದೆ ಯಾವ್ದೂ ಇಲ್ಲಾಂತಲೇ ಅವರ ಭಾವನೆ" (ಗಂಗಾಪಾದೇಕಲ್; ಪುಲಪೇಡಿ ಮತ್ತು ಇತರ ಕತೆಗಳು; ೧೯೮೨; ಪುಟ ೫೫) ಎಂಬ ಕಮಲಾಳ ಮಾತಿನಲ್ಲಿ ಸಮಾಜದ ಕ್ರೂರವಾದ ಮುಖ ವ್ಯಕ್ತವಾಗುತ್ತದೆ. "ಕಮಲಾಳಂಥ ಬಲಿಪಶುಗಳು, ಅದಕ್ಕಾಗಿ ಹೊಂಚುಹಾಕುವ ಗೋಮುಖವ್ಯಾಘ್ರಗಳು ಇರುವ ತನಕ ಇಂಥವುಗಳು ನಡೆದೇ ತೀರುತ್ತವೆ ಎನಿಸಿದಾಗ ಹೃದಯ ಹಿಸುಕಿದಂತಾಗಿ ಕಣ್ಣೀರು ಚಿಮ್ಮಿತು" (ಪಾದೇಕಲ್; ಪುಲಪೇಡಿ ಮತ್ತು ಇತರ ಕತೆಗಳು; ೧೯೮೨; ಪುಟ ೫೯) ಎಂಬ ನಿರೂಪಕಿಯ ಮಾತಿನಲ್ಲಿ ಮಹಿಳೆಯ ಮೇಲೆ ನಡೆಯುವ ಅತ್ಯಾಚಾರದ ಅವ್ಯಕ್ತ ಸಂಕಟಗಳನ್ನು ಬಯಲು ಮಾಡಿದ್ದಾರೆ.

ಗಂಗಾ ಪಾದೇಕಲ್‌ರವರ 'ಈ ನಮ್ಮ ನಾಡಿನಲ್ಲಿ' ಕತೆಯು ರಕ್ಷಕರಾಗಬೇಕಿದ್ದ ಪೊಲೀಸರೇ ಅಬಲೆಯೋರ್ವಳ ಮೇಲೆ ಅತ್ಯಾಚಾರ ನಡೆಸಿದ ಸನ್ನಿವೇಶವನ್ನು ಚಿತ್ರಿಸುತ್ತದೆ. ವಿವಾಹವಾಗಬೇಕಿದ್ದ ರಜನಿ ಮತ್ತು ಮಾದವರು ರಾತ್ರಿ ವೇಳೆಯಲ್ಲಿ ಸಿನಿಮಾ ಮುಗಿಸಿ ಬರುತ್ತಿರುವ ಸಂದರ್ಭದಲ್ಲಿ ಪೊಲೀಸರ ಬಂಧನಕ್ಕೆ ಒಳಗಾಗುತ್ತಾರೆ. ಪೊಲೀಸ್ ಸ್ಟೇಷನ್‌ನಲ್ಲಿ ರಜನಿ ಧಫೇದಾರನ ಅತ್ಯಾಚಾರಕ್ಕೆ ಒಳಗಾಗುತ್ತಾಳೆ. ಇದರಿಂದ ನೊಂದ ಮಾಧವ "ಅವಳ ಭವಿಷ್ಯಕ್ಕಾಗಿ ನನ್ನ ಭವಿಷ್ಯವನ್ನು, ನಾಳೆ ಹುಟ್ಟಲಿರುವ ನನ್ನ ಮಕ್ಕಳ

ಭವಿಷ್ಯವನ್ನು ಹಾಳು ಮಾಡಿಕೊಳ್ಳಲೇ? ಶೀಲಗೆಟ್ಟವಳನ್ನು ಮದುವೆ ಆದವನು ಎಂದು ಜೀವನವಿಡೀ ಹೇಳಿಕೊಳ್ಳುತ್ತ ಬದುಕುವ ಆಸೆ ನನಗಿಲ್ಲ. ಅಂತಹದೊಂದೇ ದೊಡ್ಡ ಕಪ್ಪುಕಲೆಯನ್ನು ನನ್ನ ಬಾಳ ಬಟ್ಟೆಯಲ್ಲಿ ಇರಿಸಿಕೊಳ್ಳುವಷ್ಟು ಮೂರ್ಖ ನಾನಲ್ಲ" (ಗಂಗಾ ಪಾದೇಕಲ್; ಹೆಜ್ಜೆ ಮೂಡದ ಹಾದಿಯಲ್ಲಿ; ೧೯೮೮; ಪುಟ ೬೬) ಎಂದು ಹೇಳುತ್ತಾನೆ. ಕೊನೆಗೂ ಮಾಧವನಿಂದ ತಿರಸ್ಕೃತಳಾದ ರಜನಿ ತನ್ನ ತಂದೆಗೆ ಪತ್ರವನ್ನು ಬರೆದು : "ಹೊಸ ಪರಿಸರದಲ್ಲೂ 'ಎಲ್ಲ'ವನ್ನು ಮರೆತು ಬಾಳಲಿಚ್ಛಿಸುವ ಈ ನಿಮ್ಮ ಮಗಳನ್ನು ಆಶೀರ್ವದಿ ಅಪ್ಪ, ಹೋಗಿ ಬರಲೆ?" (ಗಂಗಾ ಪಾದೇಕಲ್; ಹೆಜ್ಜೆ ಮೂಡದ ಹಾದಿಯಲ್ಲಿ; ೧೯೮೮; ಪುಟ ೬೭) ಎಂದು ಬದುಕನ್ನು ಎದುರಿಸುವ ದಿಟ್ಟ ಹೆಣ್ಣಿನ ಪ್ರತೀಕವಾಗಿ ಕಂಡುಬರುತ್ತಾಳೆ. ಹಿಂದಿನ ಕತೆಗಳಲ್ಲಿ ಶೋಷಣೆಗೆ ಒಳಗಾದ ಹೆಣ್ಣು ಮಕ್ಕಳು ಸಾವನ್ನಪ್ಪಿದರೆ ಈ ಕತೆಯ ರಜನಿ ಸಮಾಜವನ್ನು ಎದುರಿಸಿ ಬದುಕುವ ದಿಟ್ಟ ನಿರ್ಧಾರವನ್ನು ಕೈಗೊಳ್ಳುತ್ತಾಳೆ.

ಪಾದೇಕಲ್‌ರವರ 'ಒಂದು ಪ್ರಕರಣದ ಕೊನೆ' ಕತೆಯಲ್ಲಿ ಹೆಣ್ಣಿನ ಶೋಷಣೆಗೆ ಹೆಣ್ಣೇ ಕಾರಣವಾಗುವ ಚಿತ್ರಣವಿದೆ. ಹೈಸ್ಕೂಲಿನಲ್ಲಿ ಓದುತ್ತಿರುವ ಸಾವಿತ್ರಿ ಬಡತನದಿಂದಾಗಿ ಅಕ್ಕನ ಮನೆಯಲ್ಲಿ ವಾಸ್ತವ್ಯ ಹೂಡುತ್ತಾಳೆ. ಹೋಟೆಲ್ ಮತ್ತು ಮನೆಗೆಲಸಗಳನ್ನು ನಿಭಾಯಿಸಿಕೊಂಡು ಕಲಿಯುವಿಕೆಯಲ್ಲೂ ಮೊದಲಿಗಳಾಗುತ್ತಾಳೆ. ಅಕ್ಕನ ಮನೆಯಲ್ಲಿದ್ದ ಅವಳು ಭಾವನ ಅತ್ಯಾಚಾರಕ್ಕೆ ಒಳಗಾಗಿ ಗರ್ಭವತಿಯಾಗುತ್ತಾಳೆ. ಕೊನೆಗೆ ವಿದ್ಯಾಭ್ಯಾಸವನ್ನು ಮೊಟಕುಗೊಳಿಸಿ ಎರಡನೆಯ ವಿವಾಹವಾಗುತ್ತಾಳೆ. "ಲಾಗಾಯ್ತಿಂದಲೂ ಹೆಣ್ಣಿನ ಮೇಲೆ ನಡೆಯುವ, ನಡೆಯುತ್ತಿರುವ, ಬಹುಶಃ ಇನ್ನೂ ನಡೆಯಲಿವಿರುವ ಶೋಷಣೆಗೆ, ದೌರ್ಜನ್ಯಕ್ಕೆ ಗಂಡೇ ಕಾರಣ. ಅವಳನ್ನು ಭೋಗ ವಸ್ತುವನ್ನಾಗಿ, ಕೇವಲ ಕಾಮದ ಬೊಂಬೆಯನ್ನಾಗಿ ಮಾಡಿದ್ದೇ ಅವನು ಎಂಬ ವಾದ ಪೂರ್ತಿ ಸುಳ್ಳಲ್ಲವಾದರೂ, ಪೂರ್ತಿ ನಿಜವೂ ಅಲ್ಲ ಎಂದು ನನಗೆ ಯಾವಾಗಲೂ ಅನ್ನಿಸುತ್ತಿದ್ದುದು, ಮೊನ್ನೆ ಸಾವಿತ್ರಿಯನ್ನು ಕಂಡ ಮೇಲೆ ಇನ್ನಷ್ಟು ತೀವ್ರವಾಗಿ ಅನ್ನಿಸಲಾರಂಭಿಸಿದೆ. ಹದಿನಾರಕ್ಕೇ ಅವಳ ಬಾಳಿನ ಸಂತೋಷಕ್ಕೆ ಗೋರಿ ಕಟ್ಟಿದ್ದರಲ್ಲಿ, ಗಂಡಸರಂತೆ ಹೆಂಗಸರ ಪಾತ್ರವೂ ಅಧಿಕವಾಗಿತ್ತೆಂದು ಆಗಲ್ಲವಾದರೂ, ಈಗ ಹೊಳೆಯುತ್ತಿದೆ" (ಗಂಗಾ ಪಾದೇಕಲ್; ಹೊಸಹೆಜ್ಜೆ; ೧೯೯೬; ಪುಟ ೧೩) ಎಂಬ ಕತೆಯ ಆರಂಭದ ಸಾಲುಗಳಲ್ಲಿ ಸಮಾಜದಲ್ಲಿ ಹೇಗೆ ಹೆಣ್ಣು ಹೆಣ್ಣಿನಿಂದಲೇ ಶೋಷಣೆಗೆ

ಒಳಗಾಗುತ್ತಾಳೆ ಎಂಬುದನ್ನು ಲೇಖಕರು ತಿಳಿಸಿದ್ದಾರೆ. ವಿದ್ಯಾವಂತಳಾಗಿ ಬದುಕನ್ನ ರೂಪಿಸುವ ಕನಸು ಕಂಡಿದ್ದ ಸಾವಿತ್ರಿ, ಭಾವನಿಂದ ಅತ್ಯಾಚಾರಕ್ಕೆ ಒಳಗಾಗಿ ತನ್ನ ಆಸೆ, ಆಕಾಂಕ್ಷೆಗಳಿಗೆ ತಿಲಾಂಜಲಿ ನೀಡುತ್ತಾಳೆ. "ಸಾವಿತ್ರಿಯ ಶೋಷಣೆ ಅವಳ ಭಾವನಿಂದ ಆರಂಭವಾಗಿತ್ತಾದರೂ, ಮುಂದುವರಿಸಿದವರಲ್ಲಿ ಅವಳಕ್ಕ, ತಂದೆ, ತಾಯಿ, ಶಕುಂತಲಾ ಟೀಚರ್, ಇಂಗ್ಲಿಷ್ ಟೀಚರ್ ಇವರೆಲ್ಲ ಇದ್ದರಲ್ಲವೇ? ಇವರೆಲ್ಲ ಮನಸ್ಸು ಮಾಡಿದ್ದರೆ, ಆ ಸಮಸ್ಯೆಗೆ ಕೇವಲ ಲಗ್ನವೊಂದೇ ಪರಿಹಾರವಾಗುತ್ತಿರಲಿಲ್ಲ ಅಲ್ಲವೇ? ಹಾಗೆ ನೋಡಿದರೆ ಅವಳ ಆತ್ಮೀಯ ಸ್ನೇಹಿತೆಯರೆನ್ನಿಸಿದ್ದು ನಾನು, ಶಶಿ ಕೂಡಾ ಅವಳಲ್ಲಿ ಮಾತಾಡದೇ ಒಂದು ರೀತಿಯ ಮಾನಸಿಕ ಶೋಷಣೆ ನಡೆಸಿರಲಿಲ್ಲವೇ? ಇವೆಲ್ಲವನ್ನು ಯೋಚಿಸಿದಾಗ ನನ್ನ ಮೇಲೆಯೇ ಹೆಣ್ಣು ಜಾತಿಯ ಮೇಲೆಯೇ ರೋಷ ಉಕ್ಕುತ್ತದೆ. ಒಬ್ಬಳು ಹೆಣ್ಣು ಇನ್ನೊಬ್ಬಳಿಗೆ ಗೌರವ ಕೊಡುವ, ಅವಳ ನೋವನ್ನು ಅರ್ಥೈಸಿಕೊಳ್ಳುವ ಕಾಲ ಬರುವವರೆಗೂ ಸಾವಿತ್ರಿಯಂತಹ ಮುಗ್ಧೆಯರ ಶೋಷಣೆ ನಡೆದೇ ತೀರುತ್ತದೆ ಎನ್ನಿಸುತ್ತದೆ. ಆ ಕಾಲ ಎಂದು ಬಂದಿತೋ" (ಗಂಗಾ ಪಾದೇಕಲ್; ಹೊಸಹೆಜ್ಜೆ; ೧೯೯೬; ಪುಟ ೨೦, ೨೧). ಕತೆಯ ಕೊನೆಯಲ್ಲಿ ನಿರೂಪಕಿಯನ್ನು ಕಾಡುವ ಪ್ರಶ್ನೆ ಅಸಹಾಯಕ ಮುಗ್ಧ ಹೆಣ್ಣಿನ ಶೋಷಣೆಗೆ ಹೆಣ್ಣೇ ಬಹುಪಾಲು ಕಾರಣ ಎಂಬುದು ಗಮನಿಸಬೇಕಾದ ಸಂಗತಿ. ಸ್ತ್ರೀ ಶೋಷಣೆಯನ್ನು ಹೊಸ ದೃಷ್ಟಿಕೋನದಿಂದ ನೋಡುವ ಪ್ರಯತ್ನ ಇದಾಗಿದೆ.

ಲೀಲಾಮಣ್ಣಾಲರ 'ಒಂದು ಘಟನೆಯ ನಂತರ' ಕತೆಯು ಮಾವನಿಂದ ಅತ್ಯಾಚಾರಕ್ಕೊಳಗಾದ ಸುನಂದೆ ಅವನನ್ನು ವಿವಾಹವಾಗದೇ ಸಮಾಜವನ್ನು ಎದುರಿಸಿ ಬದುಕುವ ಚಿತ್ರಣವನ್ನು ನೀಡುತ್ತದೆ. ರಾಹುಲ ತನ್ನ ಅಕ್ಕನ ಮಗಳಾದ ಸುನಂದೆಯನ್ನು ಅತ್ಯಾಚಾರ ಮಾಡಿದಾಗ ಅವಳು ಅವನನ್ನು ತಿರಸ್ಕರಿಸಿ ಬದುಕುವ ದಿಟ್ಟತನವನ್ನು ತೋರುತ್ತಾಳೆ. ರಾಹುಲ ತನ್ನ ಅಕ್ಕನ ಮಗಳನ್ನು ವಿವಾಹವಾಗಬೇಕೆಂಬ ಬಯಕೆಯನ್ನು ವ್ಯಕ್ತಪಡಿಸಿದಾಗ "ಗುಲಾಬಿಯ ಉದಾಹರಣೆ ಮಾತ್ರ ಸಾಕೋ? ಮಣ್ಣಿಗೆ ಬಿದ್ದ ಹಣ್ಣು, ನಾಯಿ ಮುಟ್ಟಿದ ಮಡಕೆ, ಹುಳಿ ಬಿದ್ದ ಹಾಲು ಎಲ್ಲಾ ಬೇಡವೇ? ರಾಹುಲಾ ಗುಲಾಬಿಯ ಹೋಲಿಕೆ ಕೊಟ್ಟ ಮಾತ್ರಕ್ಕೆ ಹೆಣ್ಣು ಹೂವಾಗುವುದಿಲ್ಲ, ನನ್ನನ್ನು ಸ್ಪರ್ಶಿಸಿ, ನಿನಗೆ ಮೈಲಿಗೆ ಆಗಿಲ್ಲವಾದರೆ ನನಗೆ ಏಕೆ ಆಗಬೇಕು?" (ಲೀಲಾಮಣ್ಣಾಲ; ಹೊಣೆ ಮತ್ತು ಇತರ ಕತೆಗಳು; ೧೯೮೨; ೨೪೦) ಎಂಬ ಸುನಂದೆಯ ಮಾತಿನಲ್ಲಿ ಹೆಣ್ಣಿನ

ಕುರಿತ ಪುರುಷ ದೃಷ್ಟಿಕೋನದ ಬಗೆಗೆ ಆಕ್ರೋಶ ಕಂಡುಬರುತ್ತದೆ. "ಹೆದರಿಸುತ್ತಿಯಾ ರಾಹುಲ? ನಿನ್ನನ್ನು ಮದುವೆಯಾಗಿ ಗುಲಾಮಳಾಗುವ ಬದಲು ಆಕೆ ಅವಿವಾಹಿತಳಾಗಿಯೇ ಉಳಿದರೂ ಚಿಂತೆಯಿಲ್ಲ. ಅಷ್ಟಕ್ಕೂ ಜಗತ್ತು ಭಿನ್ನವ್ಯಕ್ತಿಗಳಿಂದ ಕೂಡಿದೆ. ಹೆಣ್ಣನ್ನು ಅರ್ಥ ಮಾಡಿಕೊಳ್ಳುವವರಿಗೂ ಜನ್ಮ ಕೊಡುತ್ತಾಳೆ ಭೂಮಿತಾಯಿ" (ಲೀಲಾಮಣ್ಣಾಲ; ಹೊಣೆ ಮತ್ತು ಇತರ ಕತೆಗಳು; ೧೯೮೨ ಪುಟ ೪೧). ಸುನಂದೆಯ ತಾಯಿ, ಅಹಲ್ಯೆಯ ಮಾತಿನಲ್ಲಿ ಶೋಷಣೆಗೆ ಒಳಗಾದ ಹೆಣ್ಣು ಸಮಾಜವನ್ನು ಎದುರಿಸುವ ಮನೋಸ್ಥಿತಿಯ ಸೂಕ್ಷ್ಮ ಚಿತ್ರಣವಿದೆ.

ಹೆಣ್ಣು ಶೋಷಣೆಗೆ ಒಳಗಾಗಿಯೂ ಅದರ ವಿರುದ್ಧ ಪ್ರತಿಭಟನೆಯನ್ನು ನಡೆಸಿ ಸಮಾಜದಲ್ಲಿ ತಲೆ ಎತ್ತಿ ಬದುಕುವ ಪರಿಯನ್ನು ಗಂಗಾ ಪಾದೇಕಲ್‌ರವರ 'ದಿಕ್ಸೂಚಿ', 'ಇದು ಬರಿ ಬೆಳಗಲ್ಲೋ ಅಣ್ಣಾ' ಹಾಗೂ 'ಹೊಸಹೆಜ್ಜೆ' ಕತೆಗಳಲ್ಲಿ ಗುರುತಿಸಬಹುದು. 'ದಿಕ್ಸೂಚಿ' ಕತೆಯಲ್ಲಿ ಗಂಡನಿಂದ ಶೋಷಣೆಗೆ ಒಳಗಾದ ಸರಸ ದಾದಿಯಾಗಿ ಸ್ವತಂತ್ರ ಜೀವನ ನಡೆಸುವ ಸನ್ನಿವೇಶವನ್ನು ಲೇಖಕರು ಚಿತ್ರಿಸಿದ್ದಾರೆ. ಅನಾಥಳಾದ ಸರಸಿಯನ್ನು ನಾಗೇಗೌಡ ಸಾಕಿ, ಪಕ್ಕದೂರಿನ ಪ್ರೈಮರಿ ಶಾಲೆಯ ಮೇಷ್ಟ್ರಿನೊಂದಿಗೆ ವಿವಾಹ ಮಾಡುತ್ತಾರೆ. ಆದರೆ ಲಗ್ನವಾದಾಗಲೆ ಸಾಧು-ಸಂತರಲ್ಲಿ, ದೇವರಲ್ಲಿ ಅತಿಯಾದ ನಂಬಿಕೆ ಇರಿಸಿದ್ದ ಅವಳ ಪತಿ, ಸಾಧುವೊಬ್ಬನ ಭಕ್ತನಾಗುತ್ತಾನೆ. ಮಾತ್ರವಲ್ಲದೆ ಅವನ ವರ್ತನೆ ವಿಪರೀತ ಸ್ಥಿತಿಗೆ ಹೋಗುತ್ತದೆ. ಒಂದು ದಿನ ಆ ಸಾಧು "ದೇವರ ಸೇವೆಯನ್ನು ದಂಪತಿಗಳಿಬ್ಬರೂ ಮಾಡಿದರೇ ಮೋಕ್ಷ ಪ್ರಾಪ್ತಿ, ಹೋಗು ಅವಳನ್ನು ಕರೆದು ತಾ" (ಗಂಗಾ ಪಾದೇಕಲ್; ಹೊಸಹೆಜ್ಜೆ; ೧೯೯೬; ಪುಟ ೯೬) ಎಂಬ ಮಾತನ್ನು ಹೇಳಿದಾಗ ಅದರ ಹಿಂದಿನ ಉದ್ದೇಶವನ್ನು ಅರಿತ ಸರಸ ಗಂಡನನ್ನು ಬಿಟ್ಟು ತವರು ಮನೆಗೆ ಬರುತ್ತಾಳೆ. ಸರಸಾಳ ಸಾಕುತಂದೆ ನಾಗೇಗೌಡರು ಕಾಯಿಲೆಯಿಂದ ಹಾಸಿಗೆ ಹಿಡಿದಾಗ, ಡಾಕ್ಟರರ ಸಲಹೆಯಂತೆ ಸರಸ ನರ್ಸ್ ಟ್ರೈನಿಂಗ್‌ಗೆ ಹೋಗುವ ನಿರ್ಧಾರಕ್ಕೆ ಬರುತ್ತಾಳೆ. ಈ ಕತೆಯಲ್ಲಿ ಸರಸಳಿಗೆ ದಿಕ್ಸೂಚಿಯಾದವರು ಹಳ್ಳಿಯ ವೈದ್ಯರು. ಈ ಕತೆಯಲ್ಲಿ ಶೋಷಣೆಗೆ ಒಳಗಾದ ಸರಸಳ ಬದುಕನ್ನು ಹಸನು ಮಾಡಲು ಶ್ರಮಿಸುವ ವ್ಯಕ್ತಿ ಪುರುಷನಾದ ವೈದ್ಯರಾಗಿದ್ದಾರೆ. ಪುರುಷನಿಂದ ಶೋಷಣೆಗೆ ಒಳಗಾದ ಸ್ತ್ರೀಗೆ ಪುರುಷರೇ

ಸಹಾಯ ಮಾಡುವ ಹಿನ್ನೆಲೆಯಲ್ಲಿ ಮಹಿಳೆಯರ ಸಮಸ್ಯೆಗಳನ್ನು ಹೊಸರೀತಿಯಲ್ಲಿ ನೋಡಲು ಸಾಧ್ಯವಾಗಿದೆ ಅನಿಸುತ್ತದೆ.

ಗಂಗಾ ಪಾದೇಕಲ್‌ರವರ 'ಇದು ಬರಿ ಬೆಳಗಲ್ಲೋ ಅಣ್ಣಾ' ಕತೆಯಲ್ಲಿ ಗೌರ ಶೋಷಣೆಯ ವಿರುದ್ಧ ಹೋರಾಟದ ಬದುಕನ್ನು ನಡೆಸಿ ತಾನು ಉದ್ಧಾರವಾಗುವುದರೊಂದಿಗೆ, ತನ್ನ ಅಕ್ಕನನ್ನೂ ಉದ್ಧರಿಸುವ ಚಿತ್ರಣವಿದೆ. ಬಡತನದ ಬೇಗೆಯಿಂದ ನರಳುತ್ತಿದ್ದ ಗೌರ ಅನ್ನಪೂರ್ಣ ಟೀಚರ ಸಹಾಯದಿಂದ ಪಟ್ಟಣಕ್ಕೆ ಹೋಗಿ, ವಿದ್ಯಾವಂತಳಾಗಿ, ಉದ್ಯೋಗಸ್ಥಳಾಗಿ, ತನ್ನ ಅಕ್ಕಳನ್ನು ಸ್ವಾವಲಂಬಿಯಾಗಿಸುತ್ತಾಳೆ. "ಮನುಷ್ಯ ಮನುಷ್ಯನಂತೆ ಬದುಕಬೇಕಿದ್ದರೆ ಮೊದಲಿಗೆ ಸ್ವಾತಂತ್ರ್ಯ ಮುಖ್ಯ. ನಮ್ಮ ಸಮಾಜದಲ್ಲಿ ಅಂತೂ ಅದು ಹೆಣ್ಣಿಗೆ ಅದು ತೀರಾ ಅವಶ್ಯ. ಎಲ್ಲ ರಂಗಗಳಲ್ಲೂ ಗಂಡಿನ ಸಮ ಸಮ ದುಡಿಯಬಲ್ಲ, ದುಡಿಯುತ್ತಲೂ ಇರುವ ಹೆಂಗಸರು ತಂತಮ್ಮ ಕುಟುಂಬಗಳಲ್ಲಿ ಎರಡನೇ, ಮೂರನೇ, ಕೆಲವೊಮ್ಮೆ ತೀರಾ ನಿಕೃಷ್ಟ ಸ್ಥಾನ ಪಡೆಯುವುದು ಆರ್ಥಿಕ ಸ್ವಾತಂತ್ರ್ಯ ಇಲ್ಲದ್ದರಿಂದಲೇ. ಈ ಸ್ಥಾನಗಳು ಕೂಡಾ ಸಂಸಾರದ ಸದಸ್ಯರಿಗೆ ಅವಳ ಅವಶ್ಯಕತೆ ಹೇಗಿದೆ ಎಂಬುದನ್ನು ಹೊಂದಿಕೊಂಡಿರುತ್ತದೆ. ಆದ್ದರಿಂದಲೇ ಗೌರ ಮೊದಲಿಗೆ ನೀನು ಸ್ವಾವಲಂಬಿಯಾಗಬೇಕು" (ಗಂಗಾ ಪಾದೇಕಲ್; ಹೊಸಹೆಜ್ಜೆ; ೧೯೯೬; ಪುಟ ೧೦೫) ಎಂಬ ಟೀಚರನ ಮಾತಿನಲ್ಲಿ ಸ್ತ್ರೀಯರು ಆರ್ಥಿಕವಾಗಿ ಸ್ವತಂತ್ರರಾಗಬೇಕೆಂಬ ಆಶಯವಿದೆ. "ಇಲ್ಲಿ ಬೆಳಗಿನಿಂದ ಬೈಗಿನ ತನಕ ಎರಡಾಳಿನ ಕೆಲಸವನ್ನು ಅಕ್ಕ ಒಬ್ಬಳೇ ಮಾಡುತ್ತಿದ್ದಳಾದರೂ ಅದರ ನೆನಪೇ ಇಲ್ಲದವರಂತೆ ಇವರೆಲ್ಲ ವರ್ತಿಸುತ್ತಿದ್ದಾರಲ್ಲ? ಅಷ್ಟು ದುಡಿದರೂ ಆರ್ಥಿಕ ಬಲ ಇಲ್ಲದ್ದರಿಂದ ತಾನೇ ಎಮ್ಮೆಗಿಂತಲೂ ಅಕ್ಕ ಕೀಳಾದದ್ದು? ಹ್ಞೆ, ಎಮ್ಮೆಗಾದರೂ ಮಾರಿದ ಹಣ ಎಣಿಸಬಹುದು. ಅಕ್ಕನನ್ನು ಮಾರುವಂತಿಲ್ಲವಲ್ಲ" (ಗಂಗಾ ಪಾದೇಕಲ್; ಹೊಸಹೆಜ್ಜೆ; ೧೯೯೬; ಪುಟ ೧೦೫). ಶತಮಾನಗಳಿಂದ ಶೋಷಣೆಗೆ ಒಳಗಾದ ಸ್ತ್ರೀಯ ಬದುಕು ಎಷ್ಟು ದುಸ್ಥರವಾದದ್ದು ಎಂಬುದರ ಚಿತ್ರಣವಿದೆ. ಹೆಣ್ಣಿನ ಸ್ವಾಭಿಮಾನ ಮತ್ತು ಬದುಕಬೇಕೆಂಬ ಛಲ ಈ ಕಥೆಯ ಆಂತರ್ಯದಲ್ಲಿ ಅಡಗಿರುವ ದನಿಯಾಗಿದೆ. ಸ್ತ್ರೀಯರ ಎಷ್ಟೋ ಸಮಸ್ಯೆಗಳು 'ಆರ್ಥಿಕ ಸ್ವಾತಂತ್ರ್ಯ' ಅನೇಕ ಪರಿಹಾರಗಳನ್ನು ಒದಗಿಸಿಕೊಟ್ಟು ಸಾಮಾಜಿಕ ಅಸಮಾನತೆಯ ಸಂದರ್ಭದಲ್ಲಿ ಹೆಣ್ಣಿಗೆ ಸಮಾನತೆಯನ್ನು ಕಲ್ಪಿಸಿಕೊಡುತ್ತದೆ ಎಂಬ ಆಶಯವನ್ನು ಕತೆಗಾರರು ವ್ಯಕ್ತಪಡಿಸಿದ್ದಾರೆ.

ಲಲಿತ ಸ್ವಾವಲಂಬಿಯಾಗಿ ಹೊಸಹೆಜ್ಜೆಯ ದಿಕ್ಕಿನತ್ತ ಮುನ್ನಡೆಯುವ ಚಿತ್ರಣ ಗಂಗಾ ಪಾದೇಕಲ್‌ರವರ 'ಹೊಸಹೆಜ್ಜೆ' ಕತೆಯಲ್ಲಿ ಮೂಡಿಬಂದಿದೆ. ಸಂಪ್ರದಾಯಸ್ಥ ಬ್ರಾಹ್ಮಣ ಮನೆತನದ ಲಲಿತ 'ಮೂಲನಕ್ಷತ್ರ'ದಲ್ಲಿ ಹುಟ್ಟಿದ ಕಾರಣದಿಂದ ವಿವಾಹವಾಗದೇ ಉಳಿದಿರುತ್ತಾಳೆ. ಶೋಭಾ ಟೀಚರ್‌ನ ಸಂಪರ್ಕದಿಂದಾಗಿ ಲಲಿತಾಳಿಗೆ ಆರ್ಥಿಕ ಸ್ವಾತಂತ್ರದ ಕಲ್ಪನೆ ಉಂಟಾಗುತ್ತದೆ. ಆರಂಭದಲ್ಲಿ ಲಲಿತೆಗೆ ತಂದೆಯಿಂದ ವಿರೋಧ ವ್ಯಕ್ತವಾದರೂ, ಕೊನೆಯಲ್ಲಿ ತಂದೆ ಲಲಿತಳ ಆರ್ಥಿಕ ಸ್ವಾವಲಂಬನೆಯ ಬದುಕನ್ನು ಪ್ರೋತ್ಸಾಹಿಸುತ್ತಾರೆ. ಹೊಸದಾರಿ ಮೂಡಬೇಕಾದದ್ದು ಮಹಿಳೆಯರ ಒಳಗಿನಿಂದ, ಅವರು ಮುನ್ನಡೆಯಬೇಕಾದದ್ದು ಅವರದೇ ಕಾಲಬಲದಿಂದ ಎಂಬುದು ಗಂಗಾ ಪಾದೇಕಲ್ ಅವರ ಕತೆಯ ಆಶಯವಾಗಿದೆ. ನಮ್ಮ ಸಮಾಜದಲ್ಲಿ ಅವಿವಾಹಿತೆಯರ ಬದುಕೆಂಬುದು ತೀರ ಇಕ್ಕಟ್ಟಿನ, ಸಂಕಟದ ಬದುಕು. ಅವಿವಾಹಿತೆಯರಲ್ಲಿ ಬಹಳ ಜನರಿಗೆ ತಮ್ಮದೆಂಬ ಸಂಸಾರವಿಲ್ಲದಿದ್ದರೂ ದೂರದ್ದಾದರೂ ಒಂದು ಸಂಸಾರ ಅವರ ಜೊತೆಗಿರುತ್ತದೆ. ಅವಿವಾಹಿತರನೇಕರಿಗೆ ತವರಿನ ಬಂಧವೇ ಉರುಳಾಗಬಹುದು. ಇಂಥ ಹೆಂಗಸರ ಮುಖ ಕಂಡು ಹೊರೆ ಹೊರಬೇಕಾದವರು ಜಾರಿಕೊಳ್ಳುತ್ತಾರೋ ಆ ಹೊರೆಯನ್ನು ತಾವೆ ಹೊತ್ತು ನಲುಗುವುದರಲ್ಲಿ ಇವರು ಸುಖ ಕಾಣುತ್ತಾರೋ ಅಂತೂ ಆ ಹೊರೆಯಡಿಯಲ್ಲಿ ಅವರು ಜಜ್ಜಿ ಹೋಗುತ್ತಾರೆ. ಕತೆಯ ಕೊನೆಗೆ ಲಲಿತಾಳ ತಂದೆ ಅನಂತಯ್ಯ ಹೇಳುವ ಮಾತಿನಲ್ಲಿ : "ನಿಜ ಲಲಿತಾ, ನಾನು ಅಷ್ಟೆಲ್ಲ ಯೋಚಿಸಿರಲೇ ಇಲ್ಲ, ನಾಳೆಯೇ ನೀನು ಆ ದಿನ ಹೇಳಿದ್ದರ ಬಗ್ಗೆ ಏರ್ಪಾಟು ಮಾಡಿಕೋ. ಹೇಗೂ ಗಂಡಿನಂತೆ ಹೆಣ್ಣಿಗೂ ವಿವಾಹ ಒಂದು ಅಗತ್ಯ, ಅನಿವಾರ್ಯವಲ್ಲ ಎಂದು ನೀನು ಹೇಳಿದೆಯಲ್ಲ? ನೀವೆಲ್ಲ ಹೊಸಬರು, ನಮ್ಮಂತಹ ಹಳಬರ ವಿಚಾರಗಳು ನಿಮಗೆಲ್ಲಿ ಹಿಡಿಸೀತು?" (ಗಂಗಾ ಪಾದೇಕಲ್; ಹೊಸಹೆಜ್ಜೆ; ೧೯೯೬; ಪುಟ ೧೨೮). ಹೆಣ್ಣಿನ ಸ್ವಾವಲಂಬಿ ಬದುಕಿಗೆ ಬೆಂಬಲ ವ್ಯಕ್ತವಾಗುವ ಅಂಶವಿದೆ. "ಅರುವತ್ತರ ದಶಕದಿಂದಲೂ ನಮ್ಮ ಲೇಖಕಿಯರು ಅವಿವಾಹಿತರ ಬದುಕಿನ ಕೇಂದ್ರದಿಂದ ಬದುಕನ್ನು ನೋಡಿದ್ದಾರೆ. ಎಚ್.ವಿ. ಸಾವಿತ್ರಮ್ಮ, ಇಂದಿರಾಬಾಯಿ, ತ್ರಿವೇಣಿಯೇ ಮೊದಲಾದ ಲೇಖಕಿಯರು ಈ ಬಗೆಯ ಬಾಳಿನ ಒಳನೋಟವನ್ನು ಗುರುತಿಸಿದ್ದಾರೆ. ಗಂಗಾ ಅವರ ಕಥೆಗಳಲ್ಲಿ ಇಂಥವರು ಹುತಾತ್ಮತೆಯ ಪಟ್ಟವನ್ನು ಆರಿಸಿಕೊಳ್ಳದೆ ತಮ್ಮ ಬದುಕನ್ನು ಆರಿಸಿಕೊಳ್ಳುತ್ತಾರೆ ಎಂಬುದು ಗಮನಿಸಬೇಕಾದ ಸಂಗತಿ" (ಗಂಗಾಪಾದೇಕಲ್; ಹೊಸಹೆಜ್ಜೆ, ಮುನ್ನುಡಿ;

೧೯೯೬; ಪುಟ VIII,IX) ಎಂಬುದಾಗಿ ವಿಜಯ ದಬ್ಬೆಯವರು ಗಂಗಾ ಪಾದೇಕಲ್‌ರವರ ಕತೆಗಳಲ್ಲಿ ಕಂಡುಬರುವ ಸ್ತ್ರೀಪರ ನಿಲುವನ್ನು ಗುರುತಿಸಿದ್ದಾರೆ.

ಮನೋರಮಾ ಎಂ. ಭಟ್ ಅವರ 'ಹೆಣ್ಣು...... ಶೋಷಣೆ.......ಇತ್ಯಾದಿ ಇತ್ಯಾದಿ' ಕತೆಯಲ್ಲಿ ಅಸಹಾಯಕಳಾದ ಹೆಣ್ಣು ಮಗಳು ಶೋಷಣೆಗೆ ಒಳಗಾದಾಗ ಸಮಾಜ ಸೇವಕಿಯಿಂದ ರಕ್ಷಣೆಗೊಳಗಾಗುವ ಚಿತ್ರಣ ಕಂಡುಬರುತ್ತದೆ. ಪತಿಯಿಂದ ತಿರಸ್ಕೃತಳಾದ ನಳಿನಿ, ಅನಾಥೆಯರ ಆಶ್ರಯಧಾಮದಿಂದ ತಿರಸ್ಕೃತಳಾಗಿ ಪೋಲಿಸರ ಮೊರೆ ಹೋಗುತ್ತಾಳೆ. ಆ ಬಳಿಕ ಆರ್ಥಿಕ ಮುಗ್ಗಟ್ಟಿನಿಂದ ಶ್ರೀಮಂತ ವರನನ್ನು ಎರಡನೆಯ ಸಂಬಂಧವಾಗಿ ವಿವಾಹವಾಗುತ್ತಾಳೆ. ಅವರಿಗೆ ಸಂಸಾರದಲ್ಲಿ ಸಾಮರಸ್ಯ ಇರುವುದಿಲ್ಲ. ಒಂದು ದಿನ ತಪ್ಪಿಸಿಕೊಂಡ ಕರುವನ್ನು ಹುಡುಕುವ ಸಂದರ್ಭದಲ್ಲಿ ಕೆಲಸದ ಆಳಾದ ಸೋಮಪ್ಪನೊಂದಿಗೆ ನಳಿನಿಯನ್ನು ನೋಡಿದ ಗಂಡನಿಗೆ ಅವಳ ಶೀಲದ ಮೇಲೆ ಸಂಶಯ ಉಂಟಾಗಿ ಅವಳನ್ನು ದಂಡಿಸಿ ಮನೆಯಿಂದ ಹೊರ ಹಾಕುತ್ತಾನೆ. "ನಿನ್ನ ಕಷ್ಟಗಳು ನನಗೆ ಅರ್ಥವಾಗುತ್ತವೆ. ಆರ್ಥಿಕವಾಗಿ ಹೆಣ್ಣು ಮಗುವಿಗೆ ಸ್ವಾತಂತ್ರ್ಯ ಸಿಗುವ ತನಕ, ಕಾನೂನಿನ ಮೂಲಕ ಸಿಗುವ ತನಕ–ಹೆಣ್ಣ ಶೋಷಣೆಗೆ ಗುರಿಯಾಗುತ್ತಲೇ ಇರುತ್ತಾಳೆ. ಆದರೂ ಮಗು, ಶೋಷಣೆಯನ್ನು ಛಲದಿಂದ ಎದುರಿಸಬೇಕಮ್ಮ. ನೀನು ಹೀಗೆ ಕೈ ಚೆಲ್ಲುತ್ತಾ ಕುಳಿತು ಅತ್ತರೆ ನಿನ್ನ ಕಷ್ಟಗಳ ಪರಿಹಾರವಾಗುವುದು ಹೇಗೆ? ನೀನು ಸುಮ್ಮನಿರಬಾರದು. ಕ್ರಿಮಿನಲ್ ದಾವಾ ಹೂಡಬಹುದು. ಶಾರೀರಿಕವಾಗಿ ಹಿಂಸಿಸಲು ನಿನ್ನ ಗಂಡನಿಗೆ ಎಂದೂ ಹಕ್ಕು ಇಲ್ಲ ಮಗು.....!!" (ಮನೋರಮಾ ಎಂ. ಭಟ್; ಸ್ವಯಂವರ; ೧೯೮೪; ಪುಟ ೧೪೩). ಶೋಷಣೆಗೆ ಒಳಗಾದಾಗ ಹೆಣ್ಣಿನ ಬಗೆಗೆ ಮಾತಾನಿಕೇತನ ಕಛೇರಿಯ ಮುಖ್ಯಸ್ಥೆಯ ಮಾತಿನಲ್ಲಿ ಪ್ರತಿಭಟನೆಯ ಕಾವು ಕಂಡುಬರುತ್ತದೆ. "ಮದುವೆ ಆಯಿತು ಎಂದರೆ ಮುಗಿಯಿತು. ಇಪ್ಪತ್ತರ ಹುಡುಗಿಯಿಂದ ಎಪ್ಪತ್ತರ ನಡವಳಿಕೆಯನ್ನು ಅಪೇಕ್ಷಿಸುತ್ತದೆ ನಮ್ಮ ಸಮಾಜ. ಗಂಡ ಹೇಗೇ ಇರಲಿ, ಎಂಥವನೇ ಆಗಿರಲಿ, ಹೆಣ್ಣು ಸಹನೆಯಿಂದ ಸಹಕರಿಸಿಕೊಂಡು ಹೋಗಬೇಕಾದವಳು! ಹುಟ್ಟಿದ ಮನೆ ಆಕೆಯದಲ್ಲ. ಹೊಕ್ಕ ಮನೆಯಾದರೂ ಆಕೆಯದೇ . ಛೇ ....... ಅದು ಗಂಡನ ಮನೆ!!" (ಮನೋರಮಾ ಎಂ. ಭಟ್; ಸ್ವಯಂವರ; ೧೯೮೪; ಪುಟ ೧೪೫) ಎಂಬ ನಳಿನಿಯ ತಾಯಿಯ ಮಾತಿನಲ್ಲಿ ಮದುವೆಯಾದ ಹೆಣ್ಣು

ಸಾಮಾಜಿಕವಾಗಿ ಶೋಷಣೆಗೆ ಒಳಗಾಗುವ ಚಿತ್ರಣವಿದೆ. "ಛೇ..... ನೀನು ಹೀಗೆ ಅಳುತ್ತ ಕೂತರೆ ಏನಾದೀತಮ್ಮಾ..... ಸಮಾಜ ನಮ್ಮನ್ನು ಶೋಷಿಸುವಾಗ ಅದನ್ನು ಛಲದಿಂದ ಎದುರಿಸುವುದನ್ನು ಹೆಣ್ಣು ಕಲಿತರೆ ಮಾತ್ರ ಸಮಾಜ ಬದಲಾದೀತು. ಇಲ್ಲದಿದ್ದರೆ ನಾವು ಬಗ್ಗುತ್ತಲೇ ಬಂದಿದ್ದೇವೆ. ಇನ್ನೂ ನೂರು ವರ್ಷಗಳು ಕಳೆದರೂ ಹೆಣ್ಣು ಶೋಷಿತಳಾಗಿಯೆ ಇರುತ್ತಾಳೆ. ಬಾ ಹೊರಗೆ ಬಾ" (ಮನೋರಮಾ ಎಂ. ಭಟ್; ಸ್ವಯಂವರ; ೧೯೯೪; ಪುಟ ೧೪೮) ಎಂಬ ವನಿತಾನಿಕೇತನದ ಮ್ಯಾಡಂನ ಮಾತಿನಲ್ಲಿ ಬದಲಾದ ಮನೋಧರ್ಮದ ಲಕ್ಷಣ ಕಂಡುಬರುತ್ತದೆ. ಮೇಲಿನ ಕತೆಯಲ್ಲಿ ಸ್ತ್ರೀ ತನ್ನದೇ ಆದ ಒಂದು ಸ್ವತಂತ್ರ ವ್ಯಕ್ತಿತ್ವವನ್ನು ಬೆಳೆಸಬೇಕೆಂಬ ಹಂಬಲವಿದೆ.

ಗಂಗಾ ಪಾದೇಕಲ್‌ರವರ 'ಜಾನಕಿಯ ಡೈರಿಯ ಕೆಲವು ಪುಟಗಳು' ಕತೆಯಲ್ಲಿ ಬಡ ಅಸಹಾಯಕ ಹೆಣ್ಣು ಮಗಳು ಜಾನಕಿಯ ಶೋಷಣೆಯ ಚಿತ್ರಣವಿದೆ. ಕಡಲತಡಿಗೆ ಹೋಗುವ ಅಭ್ಯಾಸ ಇಟ್ಟುಕೊಂಡಿದ್ದ ದೇವಸ್ಥಾನದ ಅರ್ಚಕರ ಮಗಳಾದ ಜಾನಕಿಗೆ ಅದೇ ದೇವಸ್ಥಾನದ ಧಣಿಯ ಮಗ ಮಾಧವನ ಪರಿಚಯವಾಗುತ್ತದೆ. ಪರಿಚಯ ಸ್ನೇಹಕ್ಕೆ ತಿರುಗಿ ಜಾನಕಿ ಗರ್ಭವತಿಯಾಗುತ್ತಾಳೆ. ಕೊನೆಗೆ ಜಾನಕಿಯ ಒತ್ತಾಯದಂತೆ ಮಾಧವ ಅವಳನ್ನು ವಿವಾಹವಾಗುತ್ತಾನೆ. ಗಂಡನ ಮನೆಯವರ ಶೋಷಣೆಗೆ ಒಳಗಾದ ಜಾನಕಿ ಹೆಣ್ಣು ಮಗುವಿಗೆ ಜನ್ಮ ನೀಡುತ್ತಾಳೆ. ಆದರೆ ಎರಡೇ ದಿನದಲ್ಲಿ ಮಗು ತೀರಿಕೊಂಡಾಗ ಅವಳಿಗೆ ಮಾಧವನ ಕ್ರೂರ ಮನಸ್ಸಿನ ಪರಿಚಯವಾಗುತ್ತದೆ. ಕತೆಯ ಕೊನೆಯಲ್ಲಿ ಜಾನಕಿಗೆ 'ಹಿಸ್ಟೀರಿಯಾ' ಆದಾಗ ಮಾಧವನಿಗೆ ಬೇರೆ ಮದುವೆಯಾಗುತ್ತದೆ. ಇದರಿಂದ ಮನನೊಂದ ಅವಳು ಆತ್ಮಹತ್ಯೆಗೆ ಪ್ರಯತ್ನಿಸುತ್ತಾಳೆ. "ದಿನಾ ಕಲಡತೀರಕ್ಕೆ ಬರುವವಳು ನೀನು. ಯಾರಿಗೆ ಬಸುರಾದೆಯೋ ಏನೋ? ಈಗ ನಾನೊಬ್ಬ ಬಕಾರ ಸಿಕ್ಕಿದೆ ನಿನಗೆ. ಇವನನ್ನು ಹಿಡಿದರೆ ಸುಲಭವಾಗಿ ಅರಮನೆಯ ಒಡತಿ ಆಗಬಹುದೆಂದು ಲೆಕ್ಕ ಹಾಕಿದೆ ನೀನು. ಇಲ್ಲವಾದರೆ ನಮ್ಮ ಜಾತಿಯ ಹುಡುಗಿ ಅಷ್ಟು ಬೇಗನೆ ಸೆರಗು ಹಾಸಿದಳೆಂದರೆ? ಮೊದಲೇ ಅಭ್ಯಾಸ ಇತ್ತೆಂದೇ ಆ ಕೆಲಸ ಮಾಡಿದೆ" (ಗಂಗಾ ಪಾದೇಕಲ್; ಪುಲಪೇಡಿ ಮತ್ತು ಇತರ ಕತೆಗಳು; ೧೯೮೨; ಪುಟ ೭೮) ಎಂಬ ಮಾಧವನ ಮಾತಿನಲ್ಲಿ ಶ್ರೀಮಂತ ಹುಡುಗರು ಬಡಹುಡುಗಿಯರನ್ನು ಶೋಷಿಸುವ ಧ್ವನಿ ಇದೆ. "ಜಾನಕೀ, ಬಾ ಮಗು, ಮನೆಗೆ ಹೋಗೋಣ. ನನ್ನ ಮಗಳ ಸ್ವಭಾವ ನನಗೆ ತಿಳಿಯದೆ? ಈಗ ನೀನು ನೀರಿಗೆ ಬಿದ್ದರೆ ನಿನ್ನ ಮೇಲಿನ ಅಪವಾದ ಹೋಗುತ್ತದೆಯೇ?

ಈಸಬೇಕು, ಇದ್ದು ಜೈಸಬೇಕು. ಯಾರು ನಿನ್ನನ್ನು ನಂಬದಿದ್ದರೂ ನಾನು ನಿನ್ನನ್ನು ನಂಬುತ್ತೇನೆ" (ಗಂಗಾ ಪಾದೇಕಲ್; ಪುಲಪೇಡಿ ಮತ್ತು ಇತರ ಕತೆಗಳು; ೧೯೮೨; ಪುಟ ೮೨) ಎಂಬ ಜಾನಕಿಯ ಅಮ್ಮನ ಮಾತಿನಲ್ಲಿ ಶೋಷಿತ ಸ್ತ್ರೀಯರು ಸಾಮಾಜಿಕ ದಬ್ಬಾಳಿಕೆಯ ವಿರುದ್ಧ ಸೆಟೆದು ನಿಂತು, ಬದುಕನ್ನು ಸಹನೀಯವಾಗಿಸಿಕೊಳ್ಳಬಹುದೆಂಬ ಆಶಾಭಾವವಿದೆ.

ಎ.ಪಿ. ಮಾಲತಿಯವರ 'ವಸಂತದ ಹೂವುಗಳು' ಕತೆಯು ಶೋಷಣೆಗೆ ಒಳಗಾದ ಸ್ತ್ರೀಯ ಬಗೆಗೆ ಪುರುಷನು ಅನುಕಂಪದಿಂದ ಸಹಾನುಭೂತಿ ತೋರುವ ಚಿತ್ರಣವಿದೆ. ಪ್ರೊ. ಮಧುಸೂದನರ ತರಗತಿಯಲ್ಲಿ ವಿದ್ಯಾರ್ಥಿನಿಯರು ಗಲಭೆ ಎಬ್ಬಿಸಿದಾಗ ಅವರು ವಿದ್ಯಾರ್ಥಿನಿಯನ್ನು ತರಗತಿಯಿಂದ ಹೊರಹಾಕುತ್ತಾರೆ. ಈ ಘಟನೆಯಲ್ಲಿ ಪ್ರಾಂಶುಪಾಲರು ಮಧ್ಯೆ ಪ್ರವೇಶಿಸಿ ಪ್ರಕರಣವನ್ನು ಇತ್ಯರ್ಥಗೊಳಿಸುತ್ತಾರೆ. ತನ್ನ ಅಕ್ಕನ ಮಗಳ ಬದುಕಿನಲ್ಲಿ ನಡೆದ ಘೋರ ಅನ್ಯಾಯ ಪ್ರೊಫೆಸರರನ್ನು ಕಾಡುತ್ತದೆ. "ಕಾಲ ಬದಲಾಗಿದೆ, ಹುಡುಗಿಯರಿಗೂ ಸ್ವಾತಂತ್ರ್ಯವಿದೆ ನಿಜ. ಆದರೆ ಯಾರ "ಸ್ವಾತಂತ್ರ್ಯವೂ ಸ್ವಚ್ಛಂದತೆಗೆ ತಿರುಗಬಾರದು. ಸ್ವಚ್ಛಂದ ಪ್ರವೃತ್ತಿ ಕಂಡಾಗಲೆಲ್ಲ ತಾನು ಮೊದಲು ಹುಡುಗಿಯರಿಗೆ ಎಚ್ಚರಿಕೆ ಕೊಡುತ್ತೇನೆ. ಯೌವನದ ಬಿಸಿಯಲ್ಲಿ ಹೆಜ್ಜೆತಪ್ಪಿ ಪ್ರಪಾತಕ್ಕೆ ಬೀಳಬಾರದೆಂದು ತನ್ನ ಕಾಳಜಿ, ಕಳಕಳಿ" (ಎ.ಪಿ. ಮಾಲತಿ; ವಸಂತದ ಹೂವುಗಳು; ೧೯೯೮; ಪುಟ ೨೪) ಎಂಬ ಪ್ರೊ. ಮಧುಸೂದನರ ಮಾತಿನಲ್ಲಿ ಆಧುನಿಕ ಕಾಲದ ಹುಡುಗಿಯರ ಸ್ವಚ್ಛಂದ ಜೀವನ ಹೇಗೆ ಅನಾಹುತಕ್ಕೆ ಕಾರಣವಾಗುತ್ತದೆ ಎಂಬ ಅಂಶ ವ್ಯಕ್ತವಾಗಿದೆ. ಸ್ವಾತಂತ್ರ್ಯ ಸ್ವಚ್ಛಂದತೆಗೆ ತಿರುಗಿದಾಗ ಅನುಭವಿಸುವವರು ನೀವೇ. ನೀವು ಯಾರೂ ನಿಷಾಳಂತೆ ಮಣ್ಣುಗುರುಳಿದ ಪುಷ್ಪವಾಗಬಾರದೆಂದು ನನ್ನ ಕಳಕಳಿ (ಎ.ಪಿ. ಮಾಲತಿ; ವಸಂತದ ಹೂವುಗಳು; ೧೯೯೮; ಪುಟ ೨೮) ಎಂದು ತನ್ನ ಅಣ್ಣನ ಮಗಳು ನಿಷಾಳ ಭ್ರಷ್ಟಗೊಂಡ ಬದುಕನ್ನು ನೆನೆದು ಉಳಿದ ಹೆಣ್ಣು ಮಕ್ಕಳೂ ಹೀಗೆ ಶೋಷಣೆಗೆ ಒಳಗಾಗದಿರಲಿ ಎಂಬ ಆಶಯವನ್ನು ಪ್ರೊ. ಮಧುಸೂದನರ ಪಾತ್ರದ ಮೂಲಕ ಲೇಖಕಿ ನಿರೂಪಿಸಿದ್ದಾರೆ.

ಸವಿತಾ ಅಡ್ವಾಯಿಯವರ 'ಭ್ರೂಣ' ಕತೆ ಸ್ತ್ರೀ ಶೋಷಣೆಯ ವಿರುದ್ಧದ ಧ್ವನಿಯಾಗಿ ಚಿತ್ರಿತವಾಗಿದೆ. ಭಾರತಿ ಎಂಬ ಹೆಣ್ಣು ಮಗಳು ಸ್ತ್ರೀ ಭ್ರೂಣ ಹತ್ಯೆಯ ಪಾಪದಿಂದ ಬಳಲುತ್ತಿರುತ್ತಾಳೆ. ಭಾರತಿಯು ಎರಡನೆಯ ಬಾರಿ ಗರ್ಭಿಣಿಯಾದ

ಸಂದರ್ಭದಲ್ಲಿ ಅವಳ ಭ್ರೂಣವನ್ನು ಕಾಪಾಡುವ ಬರವಸೆಯನ್ನು ಡಾಕ್ಟರರು ನೀಡುತ್ತಾರೆ. ವರವಾಗಬೇಕಾಗಿರುವ ವಿಜ್ಞಾನ ಹೇಗೆ ಶಾಪವಾಗುತ್ತಿದೆ ಎಂಬ ಅಂಶವನ್ನು ಲೇಖಕರು ಸೂಕ್ಷ್ಮವಾಗಿ ವಿವರಿಸಿದ್ದಾರೆ. ಹೆಣ್ಣು ಮಗುವಿನ ಹೊರೆ ಹೊರಲು ಇಷ್ಟವಿಲ್ಲದ ಆಕೆಯ ಪತಿ ಒತ್ತಾಯದಿಂದಲೇ ಆಕೆಯ ಭ್ರೂಣವನ್ನು ಪರೀಕ್ಷಿಸಿ, ಹೆಣ್ಣು ಭ್ರೂಣವೆಂದು ತಿಳಿದಾಗ ನಿರ್ದಯವಾಗಿ ಹತ್ಯೆ ಮಾಡಿದ್ದ. ಇದರಿಂದ ಮನೋವೈಕಲ್ಯಕ್ಕೆ ಒಳಗಾದ ಭಾರತಿ "ಹಿಂದಿನ ಜನ್ಮದಲ್ಲಿ ಮಾಡಿದ ಪಾಪದ ಫಲವನ್ನು ಬೆನ್ನು ಹತ್ತುತ್ತದೆಯೆನ್ನುತ್ತಾರೆ. ಆದರೆ ನಾವು ಇದೇ ಜನ್ಮದಲ್ಲಿ ಕೈಯಾರೆ ಮಾಡಿದ ಪಾಪ ನಮ್ಮನ್ನು ಹೀಗೆ ಪೀಡಿಸುತ್ತದೆ." (ಸವಿತಾ ಎಸ್. ಭಟ್; ಅಡ್ವಾಯಿ; ಪಟ್ಟತ್ತೆ; ೧೯೯೨; ಪುಟ ೨೫) ಎಂಬ ಭಾರತಿಯ ಮಾತುಗಳಲ್ಲಿ ಭ್ರೂಣ ಹತ್ಯೆ ಮಹಾಪಾಪ ಎಂಬಂತೆ ಚಿತ್ರಿತವಾಗಿದೆ.

ಗಂಗಾ ಪಾದೇಕಲ್‌ರವರ 'ಪುಲಪೇಡಿ' ಎಂಬುದು ಒಂದು ವಿಶಿಷ್ಟ ಕಥೆ. ಪುಲಪೇಡಿ ಎನ್ನುವುದು ಕೇರಳದಲ್ಲಿ ಪ್ರಚಲಿತವಿರುವ ಒಂದು ಪದ್ಧತಿ. ಈ ಪದ್ಧತಿಯ ವೈಶಿಷ್ಟ್ಯವೇನೆಂದರೆ ಕೆಳವರ್ಗದ ಜನ ಒಂದು ನಿರ್ದಿಷ್ಟ ತಿಂಗಳಿನ ಇಪ್ಪತ್ತು ದಿನಗಳವರೆಗೆ ಮೇಲು ಜಾತಿಯವರಿಗಿರುವ ಎಲ್ಲಾ ಸವಲತ್ತುಗಳನ್ನು ಪಡೆಯಬಹುದು. ಈ ಅವಧಿಯಲ್ಲಿ ಕೆಳಜಾತಿಯವರಿಂದ ಮುಟ್ಟಿಸಿಕೊಂಡ ಕಾರಣಕ್ಕಾಗಿ ಅವನ ವಶವಾಗಬೇಕಾಗಿದ್ದ ಹೆಣ್ಣು ತನ್ನ ದುರವಸ್ಥೆಯಿಂದ ಕಂಗೆಡುತ್ತಾಳೆ. ಆದರೆ ಸಂಪ್ರದಾಯ, ಆಚರಣೆಗಳಿಗೆ ನಿಷ್ಠನಾಗಿ ಮಾನವೀಯತೆಯನ್ನು ಮರೆತ ಗಂಡನಿಗಿಂತ ತನ್ನನ್ನು ಮುಟ್ಟಿದ, ಕೆಳಜಾತಿಯ ಪರಯ ಜಾತಿಯ ಯುವಕನೇ ಮೇಲೆಂದು ಅವನಿಗೆ ಒಲಿಯುತ್ತಾಳೆ. ನಾಯರ್ ಕುಲದ ಪರಯ ಲಲಿತೆಯ ಬಲ ಹೆಗಲ ಮೇಲೆ ಕೈಯನ್ನಿರಿಸಿ ಆಡುವ ಮಾತುಗಳಲ್ಲಿ 'ಪುಲಪೇಡಿ' ಪದ್ಧತಿಯ ಚಿತ್ರಣವಿದೆ. "ಪುಲಪೇಡಿ, ಪುಲಪೇಡಿ ನಾಡನ್ನಾಡುವ ದೊರೆಯ ಆಜ್ಞೆಯಂತೆ ನಾನು ನಿಮ್ಮನ್ನು ಸೋಕಿದೆ. ಇಂದಿನಿಂದ ನೀವು ನನ್ನವರಾದಿರಿ" (ಗಂಗಾ ಪಾದೇಕಲ್; ಪುಲಪೇಡಿ ಮತ್ತು ಇತರ ಕತೆಗಳು; ೧೯೮೨; ಪುಟ ೧). "ಕಣ್ಣ ಲಲಿತೆ ಬಸುರಿಯಂತೆ ಅವಳು ಹೆರುವವರೆಗೆ ನೀನವಳನ್ನು ಸೋಕಲಾಗದು. ಹುಟ್ಟುವ ಮಗು ಗಂಡಾದಲ್ಲಿ, ಅವಳನ್ನು ಮಗುವಿನೊಂದಿಗೆ ಪುಣ್ಯಾಹದಿಂದ ಶುದ್ಧಗೊಳಿಸಿ ಮನೆಯೊಳಗೆ ಕರೆದುಕೊಳ್ಳಲಾಗುವುದು. ಹೆಣ್ಣಾದಲ್ಲಿ ಮಗುವಿನೊಂದಿಗೆ ಅವಳು ನಿನ್ನೊಂದಿಗೆ ಬರುವಳು. ಹೋಗು" (ಗಂಗಾ ಪಾದೇಕಲ್; ಪುಲಪೇಡಿ ಮತ್ತು ಇತರ ಕತೆಗಳು;

೧೯೮೨; ಪುಟ ೨, ೩) ಲಲಿತೆಯ ಮಾವ ಹೇಳುವ ಮಾತುಗಳಲ್ಲಿ ಪುಲಪೇಡಿ ಹೆಣ್ಣು ಗರ್ಭಿಣಿಯಾಗಿದ್ದ ಸಂದರ್ಭದ ಚಿತ್ರಣವಿದೆ. ಮದೋನ್ಮತ್ತ ಆನೆಯಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಮರದ ಮೇಲಿದ್ದ ನಂಬೂದರಿಯ ಸಹಾಯ ಕೇಳಿದಾಗ ಅವನು ಲಲಿತಳನ್ನು ತಿರಸ್ಕಾರದಿಂದ ನೋಡಿದ, ಆದರೆ ತನ್ನನ್ನು ರಕ್ಷಿಸಲೆಂದು ಪ್ರಾಣವನ್ನೇ ಪಣವಾಗಿಟ್ಟ ಕಣ್ಣನ ಬಗೆಗೆ ಅವಳಿಗೆ ಅನುಕಂಪ, ಪ್ರೀತಿ ಉಂಟಾಗುತ್ತದೆ. ಕೊನೆಗೆ ಗಂಡು ಮಗು ಜನಿಸಿದರೂ, ತನ್ನನ್ನು ಪ್ರೀತಿಸಿದ ಕಣ್ಣನನ್ನೇ ಅವಳು ಒಲಿಯುತ್ತಾಳೆ. ಕೇರಳದಲ್ಲಿ ಪ್ರಚಾರದಲ್ಲಿರುವ 'ಪುಲಪೇಡಿ' ಆಚರಣೆಯು ಹೆಣ್ಣಿನ ಶೋಷಣೆಯ ಕರಾಳ ಮುಖವನ್ನು ಚಿತ್ರಿಸುತ್ತದೆ.

ಒಟ್ಟಾರೆಯಾಗಿ ಹವ್ಯಕ ಲೇಖಕಿಯರು ಬರೆದ ಕತೆಗಳನ್ನು ಗಮನಿಸಿದಾಗ ಅವರು ಸ್ತ್ರೀಯರನ್ನು ಕೇವಲ ಒಂದು ಬಲಿಪಶುವನ್ನಾಗಿ ಕಾಣದೆ, ಅವಳಲ್ಲಿ ಕರ್ತೃತ್ವ ಶಕ್ತಿಯನ್ನು ಗುರುತಿಸುವ ಮೂಲಕ ಅವಳನ್ನು ಜೀವಂತವಾಗಿ ಕಂಡಿದ್ದಾರೆ. ಅವಳ ಬದುಕಿನ ಸಂಕೀರ್ಣತೆಯನ್ನು ಮೂರ್ತಗೊಳಿಸುವಲ್ಲಿ ಆಸಕ್ತಿ ತೋರಲಾಗಿದೆ. ಕನ್ನಡದ ಬಹು ಸಂಸ್ಕೃತಿಯ ವಿವರಗಳನ್ನು ತಿಳಿಯುವಲ್ಲಿ ಸ್ತ್ರೀಯರ ಕಥೆಗಳೇನೂ ಹಿಂದೆ ಉಳಿದಿಲ್ಲ. ಇವರ ಕಥೆಗಳಲ್ಲಿ ಸ್ತ್ರೀ ದೃಷ್ಟಿಕೋನ, ಸ್ತ್ರೀ ಸಂವೇದನೆ ಪ್ರಗತಿಪರ ಚಿಂತನೆ ಮುಖ್ಯವಾಗಿದೆ. ಇವರ ಕಥೆಗಳಲ್ಲಿ ಬರುವ ಸ್ತ್ರೀ ಪಾತ್ರಗಳು ವ್ಯವಸ್ಥೆಯ ಕ್ರೂರತನಕ್ಕೆ ಬೇಸತ್ತು ಅರ್ಥಪೂರ್ಣವಾದ ಆಶಾವಾದದೊಡನೆ, ಬಂಡಾಯದ ಪ್ರವೃತ್ತಿಯೊಡನೆ ನಿಲುಗಡೆಗೆ ಬರುತ್ತದೆ. ಮಧ್ಯಮವರ್ಗದ ಸಂಪ್ರದಾಯಸ್ಥ ಕುಟುಂಬದಲ್ಲಿ ಹೆಣ್ಣು ಎದುರಿಸುವ ಸಮಸ್ಯೆಗಳನ್ನು ಚಿತ್ರಿಸುತ್ತಾ, ಅದರಿಂದ ಒಂದು ತಿಳಿವಳಿಕೆಯನ್ನು ಇವರ ಕಥೆಗಳು ಮೂಡಿಸುತ್ತವೆ . ಪರಂಪರಾಗತ ಸ್ತ್ರೀ ಪುರುಷ ಅಸಮಾನತೆಯಿಂದ ಸ್ತ್ರೀಯರಿಗೆ ಎದುರಾಗುವ ಸಮಸ್ಯೆಗಳು ಮತ್ತು ಅವರು ಪ್ರಜ್ಞಾಪೂರ್ವಕವಾಗಿಯೇ ಪರಂಪರೆಯನ್ನು ಧಿಕ್ಕರಿಸಿ ಕೈಕೊಳ್ಳುವ ನಿಲುವನ್ನು ಹವ್ಯಕ ಕತೆಗಾರ್ತಿಯರು ಆಧುನಿಕ ಬದುಕಿನ ನೆಲೆಯಲ್ಲಿ ಚಿತ್ರಿಸುತ್ತಾರೆ. ಹೆಣ್ಣಿನ ಶೀಲ ಮತ್ತು ಪಾತಿವ್ರತ್ಯ ಹೇಗೆ ಹೆಣ್ಣಿನ ಬದುಕಿನ ಗತಿಯನ್ನು ನಿರ್ಧರಿಸುತ್ತದೆ ಎಂಬುದನ್ನು ತಮ್ಮ ಕತೆಗಳಲ್ಲಿ ನಿರೂಪಿಸಿದ್ದಾರೆ. ಹಾಗೆಯೇ ಒಂದು ಸಮಸ್ಯೆ ಬದಲಾದ ಸಾಮಾಜಿಕ ಪರಿಸ್ಥಿತಿಯಲ್ಲಿ ಪಡೆದುಕೊಳ್ಳುವ ತಿರುವುಗಳನ್ನು ದಾಖಲಿಸಿದ್ದಾರೆ. ತಮ್ಮ ಕಾಲದ ವರ್ತಮಾನದ ಸಮಸ್ಯೆಗೆ ಹವ್ಯಕ ಲೇಖಕಿಯರು ಕ್ರಿಯಾಶೀಲವಾಗಿ ಪ್ರತಿಕ್ರಿಯಿಸಿದ ರೀತಿಯನ್ನು ಇಲ್ಲಿನ ಕಥೆಗಳಲ್ಲಿ ಗುರುತಿಸಲು ಸಾಧ್ಯ.

# ಅಧ್ಯಾಯ – ೧೧

# ಹವ್ಯಕ ಬರಹಗಾರರ ಸಣ್ಣಕಥೆಗಳಲ್ಲಿ ಕಂಡುಬರುವ ಸಾಂಪ್ರದಾಯಿಕ ಅಂಶಗಳು ಇತ್ಯಾದಿ.

## ೧೧.೧ ಆಚರಣೆಗಳು

ಮಾನವನ ಬದುಕಿನಲ್ಲಿ ಧಾರ್ಮಿಕ ಆಚರಣೆಗೆ ಮಹತ್ತ್ವದ ಪಾತ್ರವಿದೆ. ಉತ್ತಮ ಸಂಸ್ಕಾರದಿಂದ ವ್ಯಕ್ತಿಯ ಬದುಕು ಸುಖ ಶಾಂತಿ ನೆಮ್ಮದಿಯನ್ನು ಹೊಂದುವುದು ಎಂಬ ಆಶಯ ಇಲ್ಲಿದೆ. ಪ್ರತಿಯೊಂದು ಸಂಸ್ಕಾರಕ್ಕೂ ನಿರ್ದಿಷ್ಟವಾದ ಅರ್ಥ, ಉದ್ದೇಶ, ಆಚರಣಾ ವಿಧಾನವಿದೆ. ಸಂಘಜೀವಿಯಾದ ಮನುಷ್ಯ ಒಂದೆಡೆ ಸೇರುವುದಕ್ಕಾಗಿ ವಿಶೇಷ ಪರ್ವ ದಿನಗಳನ್ನು ರೂಢಿಗೆ ತಂದಂತಿದೆ. ಈ ಬಗೆಯ ಪರ್ವ ದಿನಗಳನ್ನು ಹಬ್ಬಹರಿದಿನಗಳೆಂದು ಗುರುತಿಸುತ್ತೇವೆ. ಸಾಮಾಜಿಕ ಸಂಘಟನೆ, ಆತ್ಮೀಯರೊಂದಿಗೆ ಒಡನಾಡ, ಬಂಧುಗಳ ಭೇಟಿ ಈ ಹಬ್ಬ ಹರಿದಿನಗಳಲ್ಲಿ ಸಾಧ್ಯವಾಗಿದೆ. ಸಮಾಜದ ಎಲ್ಲಾ ಸಮುದಾಯಗಳಲ್ಲಿಯೂ ಈ ಬಗೆಯ ಪರ್ವ ದಿನಗಳ ಆಚರಣೆಯಿದೆ. ಹವ್ಯಕರಲ್ಲಿ ಸಂಧ್ಯಾವಂದನೆ, ಅಗ್ನಿ ಉಪಾಸನೆ, ಸೂರ್ಯ, ಗಣಪತಿ, ಅಂಬಿಕಾ, ಶಿವ, ವಿಷ್ಣು ಎಂದು ಪಂಚಾಯತನ ಪೂಜೆಯೊಂದಿಗೆ ಸುಬ್ರಹ್ಮಣ್ಯ ಪೂಜೆ, ಷೋಡಶ ಸಂಸ್ಕಾರಗಳು, ನವಗ್ರಹಾದಿ ಶಾಂತಿ ಹೋಮಗಳು ಆಚರಣೆಯಲ್ಲಿದೆ. ಹವ್ಯಕರ ಪರಂಪರೆಯಲ್ಲಿ ಚಾಂದ್ರಮಾನ ಯುಗಾದಿ, ಶ್ರೀರಾಮ ನವಮಿ, ಶ್ರೀಶಂಕರ ಜಯಂತಿ, ಗೌರಿ ಪೂರ್ಣಿಮಾ, ನೂಲಹುಣ್ಣಿಮೆ, ಶ್ರೀಕೃಷ್ಣಾಷ್ಟಮಿ, ಗಣೇಶ ಚೌತಿ, ನವರಾತ್ರಿ, ದೀಪಾವಳಿ, ಮಕರಸಂಕ್ರಾಂತಿ, ಶಿವರಾತ್ರಿ ಮುಂತಾದ ಪರ್ವ ದಿನಗಳ ಆಚರಣೆಯಿದೆ. ಹವ್ಯಕ ಬರಹಗಾರರು ಈ ಬಗೆಯ ಆಚರಣೆಗಳು, ಸಂಸ್ಕಾರಗಳು, ನಿತ್ಯದ ದಿನಚರಿಗಳನ್ನು ತಮ್ಮ ಕತೆಗಳಲ್ಲಿ ದಾಖಲಿಸಿದ್ದಾರೆ.

ಸಂಧ್ಯಾವಂದನವು ಹವ್ಯಕ ಬ್ರಾಹ್ಮಣರು ಆಚರಿಸುವ ನಿತ್ಯಕರ್ಮಗಳಲ್ಲಿ ಒಂದು. ಇದರ ಭಾಗವಾಗಿ ಬರುವ ಗಾಯತ್ರೀ ಜಪವನ್ನು ತಪ್ಪದೆ ಅನುಷ್ಠಾನ ಮಾಡುತ್ತಾರೆ. ಗಾಯತ್ರೀ ಜಪದಿಂದ ಸ್ವಧರ್ಮ ಸ್ವಕರ್ಮದ ಪೋಷಣೆಯಾಗಿ ವ್ಯಕ್ತಿಯಲ್ಲಿ ಸಾತ್ವಿಕ ಗುಣ ಬೆಳೆಯುತ್ತದೆ. ಧೀಶಕ್ತಿ ಬೆಳೆದು ಅವನು ತೇಜೋವಂತನಾಗುತ್ತಾನೆ ಎಂಬ ನಂಬಿಕೆಯಿದೆ.

ಕೊಡಗಿನ ಗೌರಮ್ಮನವರ 'ಪಾಪನ ಮದುವೆ' ಕತೆಯಲ್ಲಿ ಸಂಧ್ಯಾವಂದನೆಯ ಉಲ್ಲೇಖವಿದೆ. "ಮತ್ತೆ ಕೈಕಾಲು ತೊಳೆದು ಜೋಯಿಸರು ಜಪಕ್ಕೆ ಕೂತರು – ಪಾಪನೂ ಸಂಧ್ಯಾವಂದನೆಯ ನೆಪ ತೀರಿಸಿದ". (ಕಾಳೇಗೌಡ ನಾಗವಾರ (ಸಂ.); ಜೀವನ ಪ್ರೀತಿ; ೨೦೦೨; ಪುಟ ೧೬೯). ಹಿರಿಯ ತಲೆಮಾರಿನಲ್ಲಿ ಇರುವ ಶ್ರದ್ಧೆ ಕಿರಿಯ ತಲೆಮಾರಿನಲ್ಲಿ ಇಲ್ಲದಿರುವುದನ್ನು ಇಲ್ಲಿ ಗಮನಿಸಬಹುದು. ಮಹಾಬಲಮೂರ್ತಿ ಕೊಡ್ಲೆಕೆರೆಯವರ 'ಯಕ್ಷಸೃಷ್ಟಿ' ಮತ್ತು ಮೊ.ರಾ. ಶೇಷಗಿರಿಯವರ 'ನಡೆದದ್ದು ನಡೆಯಲಾರದ್ದು' ಕತೆಗಳಲ್ಲಿ ಹವ್ಯಕರು ಹೇಳುವ ಗಾಯತ್ರೀ ಮಂತ್ರದ ವಿವರಣೆಯಿದೆ.

"ಧೀಯೋಯೋನಃ ಪ್ರಚೋದಯಾತ್.......

ಓ ದೇವನೇ ಬುದ್ಧಿ ಪ್ರಚೋದಿಸು. ಅಜ್ಜ ನೂರೆಂಟು ಗಾಯತ್ರೀ ಮಂತ್ರ ಹೇಳಿದ ಹೊರತೂ ನನಗೆ ಮುಂಜಿಯಾದ ಹೊಸತರಲ್ಲಿ ಏಳಲು ಬಿಡುತ್ತಿರಲಿಲ್ಲ. (ಮಹಾಬಲಮೂರ್ತಿ ಕೊಡ್ಲೆಕೆರೆ; ಯಕ್ಷಸೃಷ್ಟಿ; ೧೯೯೪; ಪುಟ ೮೫) ನಿರೂಪಕನ ಮಾತಿನಲ್ಲಿ ಗಾಯತ್ರೀ ಮಂತ್ರದ ಉಲ್ಲೇಖವಿದೆ. "ಉಪನಯನ ಸಂದರ್ಭದಲ್ಲಿ ತಂದೆ ವಟುವಿಗೆ ಗಾಯತ್ರೀ ಮಂತ್ರವನ್ನು ಉಪದೇಶಿಸುವುದು ಸಂಪ್ರದಾಯ. ಮೊ.ರಾ. ಶೇಷಗಿರಿಯವರ 'ನಡೆದದ್ದು ನಡೆಯಲಾರದ್ದು' ಕತೆಯಲ್ಲಿ : ಉಪನಯನ ಮಾಡಿದಾಗ ಅಪ್ಪ ಕಿವಿಯಲ್ಲಿ ಉಸುರಿದ ಗಾಯತ್ರೀ ಮಂತ್ರವನ್ನು ನೆನಪಿಗೆ ತರಲು ಯತ್ನಿಸಿದ". (ಮಾ.ರಾ. ಶೇಷಗಿರಿ; ನಡೆದದ್ದು ನಡೆಯಲಾರದ್ದು; ೧೯೬೮; ಪುಟ ೨೬). ಸುಬ್ರಾಯ ಚೊಕ್ಕಾಡಿಯವರ 'ಬಲಿ' ಕತೆಯಲ್ಲಿ ಜಪ ಮಾಡುವ ವಿವರಣೆಯಿದೆ. "ನಾಗಣ್ಣಾ, ಆನು ರಜಾ ಜಪ ಮಾಡಿ ಬತ್ತೆ" (ಸುಬ್ರಾಯ ಚೊಕ್ಕಾಡಿ; ಬೇರುಗಳು; ೧೯೭೪; ಪುಟ ೪). ಎಂಬಲ್ಲಿ ಈ ಬಗ್ಗೆ ಮಾಹಿತಿಯಿದೆ.

ಎಮ್. ಸುಬ್ರಾಯನ್‌ರವರು ಬರೆದ 'ಸುಶೀಲನ ಪೂಜೆ !" ಕತೆಯಲ್ಲಿ ಸುಶೀಲನ ತಂದೆಯಾದ ಸೋಮಶೇಖರರಾಯರ 'ಮಾತಿನಲ್ಲಿ ಪಂಚಗವ್ಯ'[೧] ಉಲ್ಲೇಖವಿದೆ. ವ್ಯಕ್ತಿಯ ಶುದ್ಧೀಕರಣ ಪ್ರಕ್ರಿಯೆಯಲ್ಲಿ ಪಂಚಗವ್ಯಕ್ಕೆ ಮಹತ್ತ್ವದ ಸ್ಥಾನವಿದೆ. "ಇಂದು ಅಡುಗೆಯಾಗಬೇಕಾದರೆ ಉಣ್ಣಬೇಕಾದರೆ ಎಲ್ಲರೂ ಮಿಂದು ಪಂಚಗವ್ಯ

೧. **ಪಂಚಗವ್ಯವೆಂದರೆ ಗೋವಿನಿಂದ ಉತ್ಪನ್ನವಾದ ಹಾಲು, ಮೊಸರು, ತುಪ್ಪ, ಗೋಮೂತ್ರ, ಗೋಮಯಗಳ ಸಮ್ಮಿಶ್ರಣ.**

ಸೇವನೆಯಾಗಬೇಕು ಎಂದು ಅಪ್ಪಣೆಯನ್ನು ಮಾಡಿದರು". (ಎಮ್. ಸುಬ್ರಾಯನ್; ಕುಟ್ಟಿದೊಣ್ಣೆ; ೧೯೫೨; ಪುಟ ೩೬). ಶ್ರೀಧರ ಬಳಗಾರ ಅವರ 'ಮುಖಾಂತರ' ಕತೆಯಲ್ಲಿ ಉಪಾಧ್ಯಾಯರು ತೀರಿಹೋದ ಸಂದರ್ಭದಲ್ಲಿ "ಸೂತಕದ ಮೈಲಿಗೆ ಕಳೆಯಲು ಗಣಪಯ್ಯ ತಣ್ಣೀರು ಸ್ನಾನ ಮಾಡಿ, ಒದ್ದೆ ಪಂಚೆಯುಟ್ಟು, ಪಂಚಗವ್ಯ ಕುಡಿದು ಜನಿವಾರ ಬದಲಿಸಿ" (ಶ್ರೀಧರ ಬಳಗಾರ; ಮುಖಾಂತರ; ೧೯೯೮; ಪುಟ ೧೦) ಎಂಬ ಮಾತುಗಳಲ್ಲಿ ಹವ್ಯಕರು ಸೂತಕದ ಮೈಲಿಗೆ ಕಳೆಯಲು ಮಾಡುವ ಕ್ರಿಯೆಗಳ ವಿವರಗಳಿವೆ. ಕುಟುಂಬದಲ್ಲಿ ಯಾರಾದರೂ ಮರಣ ಹೊಂದಿದಾಗ ಬರುವ ಅಶೌಚಕ್ಕೆ ಸೂತಕವೆಂದು ಹೆಸರು.

ದೇವರ ಪೂಜೆ ಹವ್ಯಕರ ದೈನಂದಿನ ಕ್ರಿಯೆಗಳಲ್ಲಿ ಒಂದು ದೇವರನ್ನು ಪೂಜಿಸುವ ಚಿತ್ರಣ ಭಾರತೀಸುತರ 'ಹಲ್ಲು ಕಳಚಿದ ಹಾವು' ಕತೆಯಲ್ಲಿ ಕಂಡುಬರುತ್ತದೆ : "ಚಳಿಯಿರಲಿ, ಮಳೆಯಿರಲಿ, ಅವರು ಗುಡಿಯ ಪಕ್ಕದಲ್ಲಿ ಹರಿಯುವ ತೊರೆಯ ಶೀತಲ ಸಲಿಲದಲ್ಲಿ ಸ್ನಾನ ಮಾಡುವರು. ಒಲೆಯುರಿಸಿ ನೈವೇದ್ಯವನ್ನು ಬೇಯಲಿಡುವರು. ಅನಂತರ ಈಶ್ವರ ಪೂಜೆಗೆ ಕೂಡುವರು. ಅವರು ರುದ್ರಸೂಕ್ತವನ್ನು ಪಠಿಸುತ್ತಾ ಲಿಂಗಕ್ಕೆ ಅಭಿಷೇಕ ಮಾಡುವರು. ಶಿವನ ಅಷ್ಟೋತ್ತರ ನಾಮಗಳನ್ನು ಹೇಳುತ್ತಾ ಪುಷ್ಪಾರ್ಚನೆಯನ್ನು ನಡೆಸುವರು. ಅಷ್ಟರಲ್ಲಿ ಒಲೆಯ ಮೇಲಿನ ನೈವೇದ್ಯ ಬೆಂದಿರುವುದು. ಅವರು ಭಗವಂತನಿಗೆ ನೈವೇದ್ಯವನ್ನಿರಿಸಿ, ಮಂತ್ರ ಪುಷ್ಪಗಳನ್ನು ಸಮರ್ಪಿಸುವರು". (ಭಾರತೀಸುತ; ಕರೆಗೆ ಓಗೊಟ್ಟ ಕಾರ್ಡೀಲೀಯಾ; ೧೯೬೬; ಪುಟ ೩೫). "ಅವರು ಸ್ಥಾಣುವಿನ ಪಾದಗಳಲ್ಲಿ ಮನಸ್ಸನ್ನು ನೆಲೆಗೊಳಿಸಿ ಶಿವ ಅಷ್ಟೋತ್ತರ ಸ್ತೋತ್ರವನ್ನು ಪಠಿಸಿದರು. ಅವರು ಅಚಮನ ಮಾಡಿ ಧ್ಯಾನವನ್ನೆಸಗಿದರು. ದಿಗ್ಬಂಧನ ಗೈದು ಪಂಚಾಕ್ಷರೀ ಮಂತ್ರವನ್ನು ಜಪಿಸಲಾರಂಭಿಸಿದರು" (ಭಾರತೀಸುತ; ಕರೆಗೆ ಓಗೊಟ್ಟ ಕಾರ್ಡೀಲೀಯಾ; ೧೯೬೬; ಪುಟ ೪೯). ಸದಾಶಿವಯ್ಯನವರು ಬೆಟ್ಟಪ್ಪನನ್ನು ಪೂಜಿಸುವ ವಿವರದಲ್ಲಿ ಹವ್ಯಕರ ಪೂಜಾವಿಧಾನದ ಚಿತ್ರಣವಿದೆ.

ದೈನಂದಿನ ಪೂಜೆಯಲ್ಲದೆ ವಿಶೇಷ ಪೂಜೆಗಳನ್ನು ನಡೆಸುವ ಕ್ರಮವಿದೆ. ಇವುಗಳಲ್ಲಿ ಸತ್ಯನಾರಾಯಣ ಪೂಜೆ, ದುರ್ಗಾಪೂಜೆ ಮೊದಲಾದವನ್ನು

ಹೆಸರಿಸಬಹುದು. ಸತ್ಯನಾರಾಯಣ ಪೂಜೆಯನ್ನು ನಡೆಸುವ ಸಂದರ್ಭದಲ್ಲಿ ಬರುವ ಸಹಸ್ರ ನಾಮಾರ್ಚನೆಯ ಉಲ್ಲೇಖ ಮಡಿಯಾಲ ನಾರಾಯಣ ಭಟ್ ಅವರು ಬರೆದ 'ಸಂಪಿಗೆ ಹೂ ಬೇಕೇ?' ಕತೆಯಲ್ಲಿದೆ.

"ಓಂ ಲೋಕಾಧ್ಯಕ್ಷಾಯ ನಮಃ

ಓಂ ಸುರಧ್ಯಕ್ಷಾಯ ನಮಃ

ಓಂ ಧರ್ಮಾಧ್ಯಕ್ಷಾಯ ನಮಃ

ಓಂ ಕೃತಾಕೃತಾಯ ನಮಃ

ಓಂ ಚತುರಾತ್ಮನೇ ನಮಃ" (ಮಡಿಯಾಲ ನಾರಾಯಣ ಭಟ್; ಪೂರ್ಣಿಮಾ; ೧೯೭೮; ಪುಟ ೧೫೩).

ನವರಾತ್ರಿ ಉತ್ಸವದಂದು ಶಕ್ತಿಯ ಪೂಜೆಯನ್ನು ಆಶ್ವಯುಜ ಶುದ್ಧ ೧ ರಿಂದ ೯ದಿವಸಗಳವರೆಗೆ ನಡೆಸುತ್ತಾರೆ. ನವರಾತ್ರಿಯ ಹಬ್ಬ ಭಾರತದಾದ್ಯಂತ ಆಚರಣೆಯಲ್ಲಿದೆ. ಕನ್ನಡನಾಡಿನಲ್ಲಿಯೂ ಈ ಹಬ್ಬಕ್ಕೆ ವಿಶೇಷ ಮಹತ್ತ್ವವಿದೆ. ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಹೀಗೆ ಈ ಎಲ್ಲಾ ದೃಷ್ಟಿಯಿಂದಲೂ ಕನ್ನಡಿಗರಿಗೆ ಹಿರಿಯ ಹಬ್ಬವಿದು. ಒಂದೆಡೆ ಇದು ನಾಡಹಬ್ಬವಾಗಿ ಆಚರಣೆಯಲ್ಲಿದೆ. ಹೀಗೆ ಸಮಯದಲ್ಲಿ ಸಾವಿರಾರು ಮನೆಗಳಲ್ಲಿ ನವರಾತ್ರಿಯ ಪೂಜೆ ಧಾರ್ಮಿಕ ನೆಲೆಯಲ್ಲಿ ನಡೆಯುತ್ತದೆ. "ನನ್ನಪ್ಪನ ಮನೆಯಲ್ಲಿ ನವರಾತ್ರಿ ಭಾರಿ ಗದ್ದಲ; ಒಂಬತ್ತು ದಿನ ಮಹಾಪೂಜೆ. ಎಂಥಾ ಮಂಡಲ! ಎಷ್ಟು ಬಣ್ಣ! ಎಷ್ಟಾರತಿ! ಎಂಥ ಮಂತ್ರ ಘೋಷ! ದಶಮಿಯ ದಿನ ಸಮಾರಾಧನೆಗೆ ಎಷ್ಟು ಬಗೆ ಪರಮಾನ್ನ! ಎಷ್ಟು ಬಗೆ ಕಜ್ಜಾಯ!" (ಸೇಡಿಯಾಪು ಕೃಷ್ಣ ಭಟ್ಟ; ಪಳಮೆಗಳು; ೧೯೫೫; ಪುಟ ೫೫) ದೇವಜ್ಜಿ ನಿರೂಪಕನಿಗೆ ಹೇಳುವ ಮಾತುಗಳಲ್ಲಿ ನವರಾತ್ರಿ ಆಚರಣೆಯ ಉಲ್ಲೇಖ ಬರುತ್ತದೆ.

ಭಾರತೀಯ ಸಂಸ್ಕೃತಿಯಲ್ಲಿ ಅತಿಥಿಗೆ ವಿಶಿಷ್ಟ ಸ್ಥಾನವಿದೆ. 'ಅತಿಥಿ ದೇವೋಭವ' ಅಂದರೆ ಅತಿಥಿಯನ್ನು ದೇವರೆಂದೇ ಭಾವಿಸಬೇಕು ಎಂಬುದು ಋಷಿವಾಣಿ. ಮನೆಗೆ ಬಂದ ಅತಿಥಿಗಳನ್ನು ಸ್ವಾಗತಿಸಿ ಅವರ ಹಸಿವು-ಬಾಯಾರಿಕೆಯನ್ನು ತಣಿಸಬೇಕು. ಸಾಮಾನ್ಯವಾಗಿ ಮನೆಗೆ ಬರುವ ಬಂಧುಗಳು ನೆಂಟರನ್ನು 'ಅತಿಥಿಗಳು' ಎಂದು ಹೇಳುವರು. ನಿಜವಾದ ಅತಿಥಿ ಎಂದರೆ ನಮಗೆ ನಿರೀಕ್ಷೆಯಿಲ್ಲದೆ ಬರುವ ವ್ಯಕ್ತಿ.

ಅವರನ್ನು ಗೌರವಿಸಿ ನಮಸ್ಕರಿಸಬೇಕು. ಕೊನೆಯ ಪಕ್ಷ ಎಲೆಅಡಿಕೆಯನ್ನಾದರೂ ಕೊಟ್ಟು ಕಳಿಸಬೇಕು ಎಂಬ ಪದ್ಧತಿಯಿದೆ. ಆದ್ದರಿಂದ ಇಂದೂ ಹಳ್ಳಿಗಳಲ್ಲಿ ಮನೆಗೆ ಬಂದವರ ಕಾಲ್ತೊಳೆಯಲು ನೀರಿತ್ತು, ಬಾಯಾರಿಕೆಯಿತ್ತು, ಭೋಜನವಿತ್ತು ಉಪಚರಿಸುವ ವಾಡಿಕೆಯಿದೆ. ಹೀಗೆ ಮನೆಗೆ ಬಂದವರನ್ನು ಚೆನ್ನಾಗಿ ನೋಡಿಕೊಳ್ಳುವುದೇ ಅತಿಥಿಸತ್ಕಾರ. ಹವ್ಯಕರ ಅತಿಥಿ ಸತ್ಕಾರ ಪ್ರಿಯತೆಯು ಪ್ರಸಿದ್ಧವಾಗಿದೆ. ಇದು ಪಟ್ಟಣಗಳಲ್ಲಿ ಕಡಿಮೆಯಾಗಿದ್ದರೂ ಇಂದಿಗೂ ಹಳ್ಳಿಗಳಲ್ಲಿ ಇದೆ. ಅತಿಥಿಗಳು ಮನೆಗೆ ಬಂದಾಗ ಗೃಹಿಣಿಯು ತಂಬಿಗೆ ನೀರನ್ನು ತಂದು ಅತಿಥಿಯ ಮುಂದೆ ಇಟ್ಟು ನಮಸ್ಕಾರ ಮಾಡುವ ಪದ್ಧತಿ. ಈಗಲೂ ಪ್ರಚಲಿತವಾಗಿದೆ. ಸವಿತಾ ಎಸ್. ಭಟ್, ಅಡ್ವಾಯಿ ಅವರು ಬರೆದ 'ಬೆಳ್ಳಿ' ಕತೆಯಲ್ಲಿ ಅತಿಥಿ ಸತ್ಕಾರದ ಚಿತ್ರಣವಿದೆ. "ಬಿಸಿನೀರು, ಬೆಲ್ಲ ಮಣ್ಣ ಚಿಟ್ಟೆಯಲ್ಲಿ ಇಟ್ಟು, ಅಲ್ಲಿಯೇ ನಿಂತಳು" (ಸವಿತಾ ಎಸ್. ಭಟ್, ಅಡ್ವಾಯಿ; ಪುಟ್ಟತ್ತೆ; ೧೯೯೭; ಪುಟ ೧೯).

ಸಾಮಾನ್ಯವಾಗಿ ಹವ್ಯಕರಲ್ಲಿ ಮಕ್ಕಳು ಹುಟ್ಟಿದಾಗ ಹಾಲು ಪಾಯಸ ಮಾಡುವ ಪದ್ಧತಿ ಆಚರಣೆಯಲ್ಲಿದೆ. ಬಹಳ ಹಿಂದೆ ದನವು ಕರು ಹಾಕಿ ಹನ್ನೊಂದನೆಯ ದಿನದಂದು ಹಾಲು ಕರೆಯಲು ಪ್ರಾರಂಭಿಸಿ, ಹಾಲು ಪಾಯಸ ಮಾಡಿ ದೇವರಿಗೆ ನೈವೇದ್ಯ ಮಾಡುವ ಪದ್ಧತಿಯಿತ್ತು. ಸವಿತಾ ಎಸ್. ಭಟ್. ಅಡ್ವಾಯಿ ಅವರು ಬರೆದ 'ಬೆಳ್ಳಿ' ಕತೆಯಲ್ಲಿ ದನ ಕರುಹಾಕಿದಾಗ ಮನೆಯೊಡತಿ ಹಾಲುಪಾಯಸ ಮಾಡಿ ಸಂಭ್ರಮಿಸಿದ ಉಲ್ಲೇಖವಿದೆ : "ಕರು ಹಾಕಿದಾಗ ಪಾರೊತಿ ಹಾಲು ಪಾಯಸ ಮಾಡಿ ಮೊಮ್ಮಗಳ ಹುಟ್ಟಿದ ಸಂಭ್ರಮ ಮಾಡಿದ್ದಳು" (ಸವಿತಾ ಎಸ್. ಭಟ್. ಅಡ್ವಾಯಿ; ಪುಟ್ಟತ್ತೆ; ೧೯೯೭; ಪುಟ ೧೭).

ಕಡೆಂಗೋಡ್ಲು ಶಂಕರ ಭಟ್ಟರ 'ಅದ್ದಿಟ್ಟು' ಕತೆಯಲ್ಲಿ ಪುರೋಹಿತ ಮುಖ್ಯ ಪ್ರಾಣಾಚಾರ್ಯರ ಪತ್ನಿ ಪಾರ್ತಮ್ಮ ಹೇಳುವ ಮಾತುಗಳಲ್ಲಿ ಹವ್ಯಕರಲ್ಲಿ ಆಚರಣೆಯಲ್ಲಿರುವ ಬಾಯಿನ ಸಂಪ್ರದಾಯದ ಉಲ್ಲೇಖವಿದೆ : "ಅಕ್ಕಿ, ಕಾಯಿ, ಧಾನ್ಯ, ಬಾಯಿನ ಎಂದು ಏನಾದರೂ ಸಿಕ್ಕದಿರುವುದುಂಟೇ?" (ಪಾದೇಕಲ್ಲು ವಿಷ್ಣುಭಟ್ಟ ಮತ್ತು ಇತರರು(ಸಂ.); ಕಡೆಂಗೋಡ್ಲು ಶಂಕರ ಭಟ್ಟ ಸಮಗ್ರ ಕಥಾ ಸಂಪುಟ; ೨೦೦೪; ಪುಟ ೩೪).

ಹೆಣ್ಣು ಮಕ್ಕಳು ವಯಸ್ಕರಾದಾಗ ಋತುಮತಿಯರಾಗುತ್ತಾರೆ. ಇದಕ್ಕೆ ಹವ್ಯಕರಲ್ಲಿ 'ಮೈನೆರೆಯುವುದು' ಎಂಬ ಪದ ಬಳಕೆಯಲ್ಲಿದೆ. ಇಂತಹ ಸಂದರ್ಭದ ಒಂದು ಚಿತ್ರಣ ಹೀಗಿದೆ : "ನನ್ನ ಅಪ್ಪನೂ ದೊಡ್ಡಪ್ಪನೂ ಅಡಿಕೆಯ ಸಿಂಗಾರದ ಹೂವನ್ನು ತೆಗೆದುಕೊಂಡು ಪಟೇಲಜ್ಜನವರಲ್ಲಿಗೆ ಹೊರಟರಂತೆ" (ಸವಿತಾ ಎಸ್. ಭಟ್. ಅಡ್ವಾಯಿ; ಪುಟ್ಟತ್ತೆ; ೧೯೯೭; ಪುಟ ೬೯). ಎಂಬ ನಿರೂಪಕರ ಮಾತಿನಲ್ಲಿ ಹುಡುಗಿ ಮೈನೆರೆದಾಗ ಮಾಡುವ ಆಚರಣೆಯ ವಿವರವಿದೆ.

ನಿಧನ ಹೊಂದಿದ ನಂತರ ನಡೆಸುವ ವಿಧಿ ವಿಧಾನಗಳಿಗೆ 'ಅಪರ ಸಂಸ್ಕಾರ' ಎಂದು ಹೆಸರು. ಇಂತಹ ಅಪರ ಸಂಸ್ಕಾರದ ವಿವರಗಳು ಹವ್ಯಕರ ಅನೇಕ ಕತೆಗಳಲ್ಲಿ ಕಂಡು ಬರುತ್ತವೆ. "ಶವದ ತಲೆದೆಸೆಯಲ್ಲಿ ಕಾಯಿಕಡಿಗಳಲ್ಲಿ ದೀಪ ಉರಿಯುತ್ತಿತ್ತು" (ಗಂಗಾ ಪಾದೇಕಲ್; ವಾಸ್ತವ; ೧೯೯೬; ಪುಟ ೧೪೦) ಎಂಬ ಮಾತಿನಲ್ಲಿ ಶವವನ್ನು ಮಲಗಿಸಿದ ಸಂದರ್ಭದ ವಿವರಗಳಿವೆ.

ಶ್ರೀಧರ ಬಳಗಾರ ಅವರ 'ಮುಖಾಂತರ' ಕತೆಯಲ್ಲಿ ಉಪಾಧ್ಯಾಯರ ಉತ್ತರಕ್ರಿಯೆ ನಡೆಸುವಾಗ ಗೋಕರ್ಣದ ಶಾಸ್ತ್ರಿಗಳು ಗರುಡಪುರಾಣ ಓದಿ ವಿವರಿಸುವ ಪ್ರಸಂಗ ಕಂಡುಬರುತ್ತದೆ. " ನಂತರ ವಿಷ್ಣುವು 'ಎಲೈ ಗರುಡನೇ; ದುಃಖ ಪೂರ್ಣವಾದ ಯಮಲೋಕದ ಮಾರ್ಗವನ್ನು, ಅದನ್ನು ಕ್ರಮಿಸುವಾಗ ಪಾಪಿಗಳು ಪಡುವ ಕಷ್ಟಗಳನ್ನು ವಿವರಿಸುವೆ, ಕೇಳು' ಎನ್ನುತ್ತಾನೆ.

ಯಮಮಾರ್ಗೇ ಮಹಾಘೋರೇ ತಾಂ ನದೀಂ ಶತಯೋಜನಾಂ ।

ತುರ್ತು ಕಾಮೋ ದದಾಮ್ಯೇತಾಂ ತುಭ್ಯಂ ವೈತರಣೀಂ ನಮಃ ।

ಶಾಸ್ತ್ರಿಗಳು ಎರಡನೆಯ ಅಧ್ಯಾಯವನ್ನು ಶ್ಲೋಕದೊಂದಿಗೆ ಮುಂದುವರಿಸಿ ನೂರು ಯೋಜನೆಗಳಷ್ಟು ವಿಸ್ತೀರ್ಣವಾಗಿದೆ ಆ ವೈತರಣಿ ! ಅದರಲ್ಲಿ ಪಾಪಿಯಾದವನು ಮುಳುಗಿ ಏಳಬೇಕು. ಆ ನದಿಯ ದಡವು ಮಣ್ಣಿನದಲ್ಲ; ಮೂಳೆಗಳ ರಾಶಿಯದು !....... ಎಂದು ಹಾವಾಭಾವ ಪೂರ್ಣವಾಗಿ ವಿವರಿಸುತ್ತಿದ್ದರು" (ಶ್ರೀಧರ ಬಳಗಾರ; ಮುಖಾಂತರ; ೧೯೯೮; ಪುಟ ೨೨, ೨೩). ಈ ರೀತಿ ಗರುಡ ಪುರಾಣದ ವಾಚನವು ವ್ಯಕ್ತಿಯ ಸಾವಿನ ಅನಂತರ....... ನಡೆಯುವ ಉತ್ತರಕ್ರಿಯೆಯ ಸಂದರ್ಭದಲ್ಲಿ ಕಂಡುಬರುತ್ತದೆ.

## ೧೧.೨ ನಂಬಿಕೆಗಳು

ಹಲವು ರೀತಿಯ ನಂಬಿಕೆಗಳು ಬದುಕಿನ ಭಾಗವಾಗಿ ಪರಂಪರೆಯಿಂದ ಬರುತ್ತವೆ. ವಿಶಾಲವಾದ ಅರ್ಥದಲ್ಲಿ ನಂಬಿಕೆ ಮತ್ತು ಜ್ಞಾನದ ನಡುವೆ ಹತ್ತಿರವಾದ ಸಂಬಂಧವಿದೆ ಎನ್ನಬಹುದು. ನಂಬಿಕೆಗಳನ್ನು ಊಹನಾತ್ಮಕ, ವಿಚಾರಹೀನ, ಅವಾಸ್ತವ ಎಂದು ಅವುಗಳನ್ನು ಬದಿಗೆ ತಳ್ಳುವಂತಿಲ್ಲ, ಏಕೆಂದರೆ ನಂಬಿಕೆಗಳು ಹೇಗೆ ಹುಟ್ಟುತ್ತವೆ ಎಂದು ಎಲ್ಲ ಸಂದರ್ಭಗಳಲ್ಲಿ ನಿರ್ದಿಷ್ಟವಾಗಿ ಹೇಳುವುದು ಕಷ್ಟವಾದರೂ ಅವುಗಳ ಹುಟ್ಟಿಗೂ ಹೆಚ್ಚಿನ ಸಂದರ್ಭಗಳಲ್ಲಿ ಒಂದಿಲ್ಲೊಂದು ಕಾರಣಗಳಿರುತ್ತವೆ. ಭಯ, ಭಕ್ತಿ, ಭಾವುಕತೆ, ಕೃತಜ್ಞತೆ, ಮಂಗಳದೃಷ್ಟಿ, ಆರೋಗ್ಯದೃಷ್ಟಿ, ಆಕಸ್ಮಿಕ ಘಟನೆಗಳು, ಸೃಷ್ಟಿಯ ರಹಸ್ಯಗಳು, ಕನಸುಗಳು, ಅನುಕೂಲ ಸಿದ್ಧಾಂತಗಳು ಹೀಗೆ ಹಲವು ಅಂಶಗಳು ನಂಬಿಕೆಗಳ ಉಗಮಕ್ಕೆ ಕಾರಣಗಳಾಗಬಹುದು. ನಂಬಿಕೆಗಳ ಹುಟ್ಟಿಗೆ ಕಾರಣವಾಗುವ ವಿವಿಧ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಇವು ಮಾನಸಿಕ ಹಿನ್ನೆಲೆಯಿಂದ ಹುಟ್ಟಿಕೊಂಡಿವೆ ಎಂಬುದು ಸ್ಪಷ್ಟವಾಗುತ್ತದೆ.

ನಂಬಿಕೆಗಳು ಮನುಷ್ಯನ ಮನಸ್ಸಿನ ಪರಿಸ್ಥಿತಿಗೆ ಸಂಬಂಧಿಸಿದ್ದು. ಅಲೌಕಿಕ ಶಕ್ತಿಗಳನ್ನು ಎದುರಿಸಬೇಕಾಗಿ ಬಂದಾಗ ಮಾನವನ ಬದುಕಿನಲ್ಲಿ ಉಂಟಾದ ಅಸ್ಥಿರತೆಯ ಭಾವನೆ ಮತ್ತು ಅಂಜಿಕೆಗಳು ಧಾರ್ಮಿಕ ಸ್ವರೂಪವನ್ನು ಪಡೆದು ಅತಿಮಾನುಷ ನಂಬಿಕೆಗಳಿಗೆ ಮೂಲವಾಗಿದೆ. ಅಸ್ಥಿರವಾದ ಅವನ ಮನಸ್ಸಿಗೆ ತಾತ್ಕಾಲಿಕವಾಗಿಯಾದರೂ ಸಮಾಧಾನ ಕೊಡುವಲ್ಲಿ ಧಾರ್ಮಿಕ ನಂಬಿಕೆಗಳು ಸಹಕಾರಿಯಾಗಿವೆ. ಅದರ ಫಲವಾಗಿ ದೇವರು ದೆವ್ವಗಳೆಂಬ ಅತಿಮಾನುಷ ಕಲ್ಪನೆಗಳು ಅವನ ಮನಸ್ಸಿನಲ್ಲಿ ಹುಟ್ಟಿಕೊಂಡವು. ಜೊತೆಗೆ ಅವುಗಳ ಸ್ವರೂಪ ಕಾರ್ಯಗಳಿಗೆ ಸಂಬಂಧಿಸಿದ ನಂಬಿಕೆಗಳು ಕಾಣಿಸಿಕೊಂಡವು.

ನಂಬಿಕೆಗಳು ಸಾಮಾಜಿಕವಾಗಿ ಒಪ್ಪಿತವಾದ ಒಂದು ಸಾಂಪ್ರದಾಯಿಕ ಪರಿಕಲ್ಪನೆ. ಬದುಕಿನ ಎಲ್ಲಾ ಮುಖಗಳಿಗೆ ಸಂಬಂಧಿಸಿ ನಂಬಿಕೆಗಳಿರುವ ಕಾರಣ ಅವು ಆ ಜನತೆಯ ಸಂಸ್ಕೃತಿಯನ್ನೂ ವ್ಯಕ್ತಪಡಿಸುತ್ತವೆ. ಹವ್ಯಕ ಕತೆಗಾರರು ತಮ್ಮ ಸಮುದಾಯದಲ್ಲಿ ಕಂಡುಬರುವ ಅನೇಕ ನಂಬಿಕೆಗಳನ್ನು ತಮ್ಮ ಕತೆಗಳಲ್ಲಿ ಉಲ್ಲೇಖಿಸಿದ್ದಾರೆ.

ಕರಾವಳಿ ಪರಿಸರದಲ್ಲಿ ಮಧೂರು ಪುಣ್ಯ ಕ್ಷೇತ್ರಗಳಲ್ಲಿ ಒಂದು. ಇಲ್ಲಿಯ ಅಧಿದೈವ ಮಹಾಗಣಪತಿ. ಇಲ್ಲಿನ ಗಣಪತಿ ತಮ್ಮ ಇಷ್ಟಾರ್ಥಗಳನ್ನು ನೆರವೇರಿಸುವನೆಂಬ ನಂಬಿಕೆಯಿದೆ. ಹೀಗಾಗಿ ಭಕ್ತರು ಇಲ್ಲಿಗೆ ಪ್ರತಿದಿನ ಭೇಟಿಕೊಡುವರು. "ಮದವೂರು ಮಹಾಗಣಪತೀ..... ನಿನಗೆ ಜೋಡು ಉದಯಾಸ್ತಮಾನ ಪೂಜೆ ಮಾಡಿಸುತ್ತೇನೆ ತಂದೇ...." (ಸವಿತಾ ಎಸ್. ಭಟ್. ಅಡ್ವಾಯಿ; ಪುಟ್ಟತ್ತೆ; ೧೯೯೭; ಪುಟ ೧೭). ಪುಟ್ಟತ್ತೆಯ ಆರೋಗ್ಯ ಸರಿಹೋಗಲೆಂದು ನಿರೂಪಕರು ಮಧೂರು ಗಣಪತಿ ದೇವರಿಗೆ ಹರಿಕೆ ಹೇಳುವ ಚಿತ್ರಣವಿದೆ. ಮುಳಿಯ ಕೃಷ್ಣ ಭಟ್ಟರು ಬರೆದ 'ಪ್ರವಾಹದಲ್ಲಿ ಪ್ರತಿಬಿಂಬ' ಕತೆಯಲ್ಲಿ ಪುರೋಹಿರು ಮನೆ ಯಜಮಾನನಿಗೆ ಹೇಳುವ ಮಾತುಗಳಲ್ಲಿ ಮಳೆಬಾರದಂತೆ ಗಣಪತಿ ದೇವರಿಗೆ ಹರಿಕೆ ಹೇಳುವ ಉಲ್ಲೇಖವಿದೆ : "ದೇವರು ದೊಡ್ಡವ. ಮಳೆ ಬರಬಾರದು. ಗಣಪತಿಗೆ ಪೂಜೆಯ ಹರಕೆ ಹೇಳಿಕೊಳ್ಳುವ" (ಮುಳಿಯ ಕೃಷ್ಣ ಭಟ್ಟ; ಪ್ರವಾಹದಲ್ಲಿ ಪ್ರತಿಬಿಂಬ; ೨೧೯೫೪; ಪುಟ ೫೦) ಮೇಲಿನ ಎರಡು ಸಂದರ್ಭಗಳಲ್ಲಿ ಕಷ್ಟ ಪರಿಹಾರಕ್ಕಾಗಿ ದೇವರಿಗೆ ಹರಕೆ ಹೊರುವ ಸಂಪ್ರದಾಯ ಹವ್ಯಕರಲ್ಲಿರುವುದನ್ನು ಗುರುತಿಸಬಹುದು.

ಗಾಯತ್ರೀ ಮಂತ್ರದ ಮಹತ್ತ್ವನ್ನು ಕುರಿತು ಜಯಾ ಯಾಜಿ ಶಿರಾಲಿಯವರ 'ಮಂತ್ರೋಪದೇಶ' ಕತೆಯಲ್ಲಿ ಉಲ್ಲೇಖವಿದೆ. "ಮಂಗ್ಯಾ ನಾವು ಯಾರು ಗೊತ್ತೇನೊ, ಬ್ರಾಹ್ಮಣರು ಕಣೋ, ಈ ಜನಿವಾರ ಇದ್ರೆ ಸಾಕು, ದೈವ ಭೂತ ಬರೋಲ್ಲ. ಗಾಯತ್ರಿ ಮಂತ್ರ ಜಪಿಸಿಬಿಟ್ಟರೆ ದೈವ–ಭೂತ ಕಾಲ್ಕಿತ್ತು ಓಡಿಹೋಗುತ್ತೆ ಅಥ್ವಾ ಅಲ್ಲೆ ಪಡ್ಚ ಮಂತ್ರದ ಪ್ರಭಾವ ಅಂದ್ರೆ ಏನಂತ ನಿಂಗೆಂತ ಗೊತ್ತು, ನಿಂಗಿನ್ನೂ ಮುಂಜಿನೆ ಆಗಿಲ್ಲೆ...." (ಜಯಾ ಯಾಜಿ ಶಿರಾಲಿ; ಶಂಕ್ರಿ; ೨೦೦೦; ಪುಟ ೭೦) ಹಾಗೂ "ಕೂಸೆ ಮುಂದಿನ ರಜೇಲಿ ಬಪ್ಪಾಗ ಅವ್ನಿಗೊಂದು ಮುಂಜಿ ಮಾಡೋ ತಯಾರಿಲೇ ಬಾ, ಗಾಯತ್ರಿ ಮಂತ್ರೋಪದೇಶ ಮಾಡಿಸಿದ್ರೆ ಅವ್ನಿಗೆ ಧೈರ್ಯ ಬರ್ರು" (ಜಯಾ ಯಾಜಿ ಶಿರಾಲಿ; ಶಂಕ್ರಿ; ೨೦೦೦; ಪುಟ ೭೨) ಎಂಬಲ್ಲಿ ಹುಡುಗರಿಗೆ ಗಾಯತ್ರಿ ಮಂತ್ರದ ಬೋಧನೆಯ ಮಹತ್ತ್ವ ವ್ಯಕ್ತವಾಗಿದೆ.

ಕಾಗೆ ಅಪಶಕುನದ ಪಕ್ಷಿ ಎಂಬ ನಂಬಿಕೆ ಹವ್ಯಕರಲ್ಲಿ ಬೆಳೆದು ಬಂದಿದೆ. ಜಿ.ಎಸ್. ಉಬರಡ್ಕರವರು ಬರೆದ 'ಒಂದು ಬಡಪಾಯಿ ಕಾಗೆಯ ಕತೆ' ಎಂಬ ಕತೆಯಲ್ಲಿ ಅದರ

ಉಲ್ಲೇಖವಿದೆ. "ಥತ್ ಹಾಳು ಅಪಶಕುನ! ಆ ಕೋಣೆಗೆ ಪಂಚಗವ್ಯ ಪ್ರೋಕ್ಷಣೆ ಮಾಡಬೇಕು" (ಜಿ.ಎಸ್. ಉಬರಡ್ಕ; ಚಿಕ್ಕದೊಂದು ಗಿಳಿಯ ಸಾಕಿ; ೧೯೮೨; ಪುಟ ೬೨). ಕಾಗೆ ಮನೆಯೊಳಗೆ ಬಂದ ಕಾರಣ ಮನೆಯನ್ನು ಶುದ್ಧಗೊಳಿಸುವ ಸಂಪ್ರದಾಯ ಹವ್ಯಕರಲ್ಲಿದೆ.

ಆತ್ಮಹತ್ಯೆಯ ನಿರಾಕರಣೆ ಹವ್ಯಕರ ನಂಬಿಕೆಗಳಲ್ಲಿದೆ. "ಯಾರು ಆತ್ಮಹತ್ಯೆ ಮಾಡಿಕೊಳ್ಳುತ್ತರೋ ಆತ ಬ್ರಾಹ್ಮಣ ವಟುವಾಗಿದ್ದರೆ ಬ್ರಹ್ಮರಾಕ್ಷಸನಾಗಿ ಊರ ಹೊರಗಿನ ಆಲದ ಮರದಲ್ಲಿ ಹದಿಮೂರು ಜನ್ಮಗಳ ಕಾಲ ಹಸಿವೆಯನ್ನು ಸಹಿಸಿಕೊಂಡು ಬದುಕಬೇಕಾಗುತ್ತದೆ. ಆತ್ಮದ ವಿನಾಶದ ಬಗ್ಗೆ ಚಿಂತಿಸುವವನು ಕೂಡಾ ನರಕದ ದಾರಿ ಹಿಡಿಯಬೇಕಾಗುತ್ತದೆ" (ಅಶೋಕ ಹೆಗಡೆ; ಒಂದು ತಗಡಿನ ಚೂರು; ೧೯೯೬; ಪುಟ ೩೧). ಎಂಬ ನಿರೂಪಕನ ಮಾತಿನಲ್ಲಿ 'ಆತ್ಮಹತ್ಯೆ ಮಹಾಪಾಪ' ಎಂಬ ನಂಬಿಕೆಯ ವಿಚಾರ ಕಂಡುಬರುತ್ತದೆ.

ಶ್ರೀಕೃಷ್ಣ ಚೊಕ್ಕಾಡಿಯುವರು ಬರೆದ 'ಶ್ರಾದ್ಧ' ಕತೆಯಲ್ಲಿ ಹವ್ಯಕರು ಶವಸಂಸ್ಕಾರವನ್ನು ಮಾಡುವ ವಿಧಾನ ಹಾಗೂ ಶ್ರಾದ್ಧ ಮಾಡುವ ಕ್ರಮದ ವಿವರಣೆಗಳಿವೆ. "ಭಟ್ಟರು ಚಿಕ್ಕಪ್ಪನಿಗೆ ಹೇಳಿ ಅದಾಗಲೇ ಪಾಲಾಶದ ಗೆಲ್ಲನ್ನು ತರಿಸಿ ಹಲವು ತುಂಡುಗಳನ್ನು ಮಾಡಿಸಿಟ್ಟಿದ್ದರು. ದರ್ಭೆಯ ಹುಲ್ಲನ್ನು ನೆಲದ ಮೇಲೆ ಹರವಿ ಅದರ ಮೇಲೆ ಆ ತುಂಡುಗಳನ್ನು ಮಾನವಾಕಾರದಲ್ಲಿ ಜೋಡಿಸಿಟ್ಟು ಹೆಣದ ಎದುರಗೆ ಇಡುವಂತೆ ಅದರ ಎದುರಿಗೆ ತೆಂಗಿನಕಾಯಿಯ ಹೋಳುಗಳಲ್ಲಿ ದೀಪ ಹಚ್ಚಿಟ್ಟರು. ಶೋಕವನ್ನು ಆಚರಿಸಿ (ನಾನೇನು ಅಳಲಿಲ್ಲ; ಬದಲಿಗೆ ನನಗೆ ನಗೆಯೇ ಬರುತ್ತಿತ್ತು) ಅದನ್ನೇ ಅಣ್ಣನ ಹೆಣವೆಂದು ಕೊಂಡುಹೋಗಿ ಕಾಷ್ಟದ ಮೇಲಿಟ್ಟು ಸುಟ್ಟಿದ್ದಾಯಿತು". (ಶ್ರೀಕೃಷ್ಣ ಚೊಕ್ಕಾಡಿ; ನಿರೀಕ್ಷೆ; ೧೯೭೮; ಪುಟ ೮೪). ಮೇಲಿನ ಮಾತುಗಳಲ್ಲಿ ಹವ್ಯಕರು ಶವಸಂಸ್ಕಾರ ನಡೆಸುವ ವಿಧಾನದ ವಿವರಗಳಿವೆ. ನಿರೂಪಕನ ಅಣ್ಣ ಮನೆಬಿಟ್ಟು ಹೋಗಿ ಹನ್ನೆರಡು ವರ್ಷಗಳ ಕಾಲ ಬಾರದಿದ್ದಾಗ ಅವನು ಸತ್ತಿರುವನೋ ಬದುಕಿರುವನೋ ಎಂಬ ಕುರಿತು ನಡೆಸುವ ಕ್ರಿಯೆಯಲ್ಲಿ ನಂಬಿಕೆಗೆ ಸಂಬಂಧಿಸಿದ ವಿವರಗಳಿವೆ : "ಮೊದಲಿಗೆ ನಮ್ಮ ಮನೆಯ ಹಿಂದಿನ ಗುಡ್ಡದಾಚೆಗಿನ ಕಾಡಿಗೆ ಹೋಗಿ 'ಕೂ' ಎಂದು ಮೂರು ಬಾರಿ ಕೂಗು ಹಾಕಿ ಬರಲು ಭಟ್ಟರು ಹೇಳಿದ್ದರು. ಅಂದು ಹೋದವನು

ಬದುಕಿದ್ದಾನೋ? ಸತ್ತಿದ್ದಾನೋ ಎಂದು ತಿಳಿದುಕೊಳ್ಳಲಿಕ್ಕಂತೆ. ಅವರು ಹೇಳಿದ ಹಾಗೆ ಹೋಗಿ ಮೂರು ಬಾರಿ ಕೂಗು ಹಾಕಿದೆ. ಅದಕ್ಕೆ ಉತ್ತರ ಬಂದರೆ ಅವನು ಬದುಕಿರುವನೆಂದೂ, ಮತ್ತೆ ಹನ್ನೆರಡು ವರ್ಷಗಳ ಕಾಲ ಅವನು ಬರುತ್ತಾನೋ ಎಂದು ಕಾಯಬೇಕಾಗುತ್ತದೆಂದೂ, ಉತ್ತರ ಬಾರದಿದ್ದರೆ ಸತ್ತಿರುವನೆಂದೂ ತಿಳಿದು ಉತ್ತರಕ್ರಿಯೆ ನಡೆಯಿಸುವುದೆಂದೂ ಭಟ್ಟರು ಹೇಳಿದ್ದರು" (ಶ್ರೀಕೃಷ್ಣ ಚೊಕ್ಕಾಡಿ; ನಿರೀಕ್ಷೆ; ೧೯೭೬; ಪುಟ ೮೩, ೮೪). ವಿಶೇಷ ಸಂದರ್ಭದಲ್ಲಿ ಶ್ರಾದ್ಧ ಮಾಡುವ ವಿಧಾನದ ಚಿತ್ರಣ ಇಲ್ಲಿದೆ.

'ಆ ದೊಡ್ಡ ಕಟ್ಟಿನ ತೆಂಕಕೊಡಿ ಮಾಡಿ ಹರಡಿ ತಿಲೋದಕ ಬಿಡು' ಎಂದರು. ಮಂತ್ರ ಹೇಳತೊಡಗಿದರು. ಎಡದ ಕಾಲು ಅಡಿಗೆ ಹಾಕಿ ಕುಳಿತು ಒಂದೊಂದೇ ಪಿಂಡ ಕೈಗೆ ತೆಕ್ಕೊಂಡು ಮಂತ್ರ ಹೇಳಿದ ಹಾಗೆ ದರ್ಭೆಯ ಮೇಲಿಡಲು ಹೇಳಿ ಮಂತ್ರ ಮುಂದುವರಿಸಿದರು. 'ಜ್ಯೇಷ್ಠ ಭ್ರಾತೃಭ್ಯಃ ವಿಶ್ವಾಮಿತ್ರ ಗೋತ್ರೇಭ್ಯಹ ಸುಬ್ರಹ್ಮಣ್ಯ ಶರ್ಮಭ್ಯಹ ಅಯಂ ಪಿಂಡ ಸ್ವಧಾನಮಹ ಪಿತೃಭ್ಯಃ" (ಶ್ರೀಕೃಷ್ಣ ಚೊಕ್ಕಾಡಿ; ನಿರೀಕ್ಷೆ; ೧೯೭೬; ಪುಟ ೮೦) ಎಂಬ ವಿವರಣೆಗಳು ಹವ್ಯಕರ ಅಪರ ಕರ್ಮದ ಬಗೆಗೆ ಸಾಕಷ್ಟು ಮಾಹಿತಿ ನೀಡುತ್ತವೆ.

ಅಪರಷೋಡಶ ಸಂಸ್ಕಾರಗಳು ಲೌಕಿಕ ಬದುಕಿನ ಆಚೆಯ ಪರಮಾರ್ಥದ ಮೆಟ್ಟಿಲುಗಳು ಎಂಬ ನಂಬಿಕೆ ಹವ್ಯಕ ಸಮಾಜದಲ್ಲಿದೆ. ಆದುದರಿಂದ ಇಂತಹ ನಂಬಿಕೆಗಳ ಬಗೆಗೆ ಹವ್ಯಕ ಕತೆಗಾರರು ತಮ್ಮ ಕತೆಗಳಲ್ಲಿ ಸಾಂದರ್ಭಿಕವಾಗಿ ಉಲ್ಲೇಖಿಸಿದ್ದಾರೆ.

### ೧೧.೩ ಆಹಾರ ಪದ್ಧತಿ

ಮನುಷ್ಯನಿಗೆ ಬದುಕಲು ಗಾಳಿ ಮತ್ತು ನೀರಿನಂತೆ ಆಹಾರವೂ ಅಗತ್ಯ. ನಮ್ಮ ಹಿಂದಿನ ಹವ್ಯಕರ ಅಡುಗೆ, ತಿಂಡಿಗಳನ್ನು ಗಮನಿಸಿದಾಗ ಅಲ್ಲಿ ಸರಳತೆ, ಮಿತವ್ಯಯಗಳು ಮಾತ್ರವಲ್ಲದೆ ಅವು ದೇಹಾರೋಗ್ಯಕ್ಕೆ ಹಿತವೆಸಿಸುವಂತಿದ್ದವು. ಹವ್ಯಕ ಸಂಸ್ಕೃತಿಯ ಪ್ರಮುಖ ಅಂಶವೆಂದರೆ ಇವರ ಆಹಾರ ಪದ್ಧತಿ. ತಮ್ಮ ಪರಿಸರದಲ್ಲಿ ಸಿಗುವ ಸಸ್ಯ ಪ್ರಪಂಚವನ್ನೇ ಆಧರಿಸಿ ಋತುಮಾನಗಳಿಗನುಸಾರವಾಗಿ ಇವರ ಆಹಾರ ಪದ್ಧತಿ ರೂಪುಗೊಂಡಿದೆ. ಪ್ರಾಚೀನಕಾಲದಿಂದಲೂ ನಿಸರ್ಗದ ನಡುವೆ ಕೃಷಿಮಾಡಿ

ಬದುಕುತ್ತಿರುವ ಇವರು ಸುತ್ತಲಿನ ಕಾಡಿನಲ್ಲಿ ಸಿಗುವ ಸೊಪ್ಪು, ಗೆಡ್ಡೆಗೆಣಸು, ಚಕ್ಕೆ – ಬೇರು ಮುಂತಾದವುಗಳನ್ನು ತಮ್ಮ ಆಹಾರ ತಯಾರಿಯಲ್ಲಿ ಬಳಸಿಕೊಳ್ಳುತ್ತಾರೆ. ಹವ್ಯಕರ ತಿಂಡಿ ತಿನಸುಗಳಲ್ಲಿಯೂ ಆಡಂಬರಕ್ಕೆ ಆಸ್ಪದವಿಲ್ಲದೆ ಸರಳತೆಯೇ ಎದ್ದು ಕಾಣುತ್ತದೆ. ವಿಶೇಷ ಸಂದರ್ಭಗಳಲ್ಲಿ, ಹಬ್ಬ ಹರಿದಿನಗಳಲ್ಲಿ ವಿಶೇಷ ತಿನಿಸುಗಳನ್ನು ತಯಾರಿಸುತ್ತಾರೆ.

ಹವ್ಯಕರು ಬರೆದ ಕತೆಗಳಲ್ಲಿ ಹವ್ಯಕರು ಅನುಸರಿಸುವ ಆಹಾರ ಪದ್ಧತಿಯ ವಿವರಗಳಿವೆ. ದೀಪಾವಳಿ ಹಬ್ಬದ ಸಂದರ್ಭದಲ್ಲಿ ಹವ್ಯಕರ ಮನೆಗಳಲ್ಲಿ ತಯಾರಿಸುವ ತಿಂಡಿಯ ವಿವರಣೆ ಸುಬ್ರಾಯ ಚೊಕ್ಕಾಡಿಯವರು ಬರೆದ 'ಬಲಿ' ಕತೆಯಲ್ಲಿ ಕಂಡುಬರುತ್ತದೆ: "ಮನೆಲಿ ಕೊಟ್ಟಿಗೆ (ಉದ್ದಿನ ಕಡುಬು)ಯುದೇ, ರಸಾಯನವುದೇ ಹೇಳಿ ಕಾಣ್ತು" (ಸುಬ್ರಾಯ ಚೊಕ್ಕಾಡಿ; ಬೇರುಗಳು; ೧೯೭೪; ಪುಟ ೫). ಕಡೆಂಗೋಡ್ಲು ಶಂಕರ ಭಟ್ಟರು ಬರೆದ 'ಅದ್ದಿಟ್ಟು' ಕತೆಯಲ್ಲಿ ಬ್ರಾಹ್ಮಣ ಸಮುದಾಯದಲ್ಲಿ ವಿಶೇಷವಾಗಿ ಕಂಡುಬರುವ 'ಅದ್ದಿಟ್ಟು', ಕಜ್ಜಾಯದ ವಿವರಗಳಿವೆ: "ಶ್ರಾದ್ಧಾದಿ ಪುಣ್ಯ ದಿನಗಳಲ್ಲಿ ಅನೇಕಾನೇಕ ಖಾದ್ಯವಸ್ತುಗಳು ತಯಾರಾಗುತ್ತವಲ್ಲ? ಅವುಗಳಲ್ಲಿ ಸುಕ್ಕಿನುಂಡೆ ಎಂಬುದು ಭಕ್ಷ್ಯರಾಜನೆನಿಸಿಕೊಂಡಿದೆ. ನಮ್ಮೂರಲ್ಲಿ ಅದರೊಳಗಿನ ಹೂರಣದಲ್ಲಿ ಬೇಯಿಸಿದ ಕಡಲೆಹಿಟ್ಟು, ಬೆಲ್ಲ, ಎಳ್ಳು, ತೆಂಗಿನ ತಿರುಳು ಮೊದಲಾದ ಸರಸವಸ್ತುಗಳಿರುತ್ತವೆ. ಹೊರಗಿನ ಆವರಣವು ಅಥವಾ ಕಣಕವು ಅಕ್ಕಿಯ ಹಿಟ್ಟಿನಿಂದಲೇ ಆಗುತ್ತದೆ. ಹೊರಗಿನ 'ಕಣಕ'ಕ್ಕೆ ತಯಾರಿಸಿದ ಹಿಟ್ಟಿನಿಂದ ತಯಾರಾಗುವುದು ಈ ಅದ್ದಿಟ್ಟು. ಎಲ್ಲ ಭಕ್ಷ್ಯಗಳನ್ನು ತಯಾರಿಸಿದ ಅನಂತರ ಕೊನೆಯಲ್ಲಿ ಇದರ ತಯಾರಿಯಾಗುವುದರಿಂದ ಈ ಹಿಟ್ಟಿನ, ಬೇರೆ ಭಕ್ಷ್ಯಗಳ ಮೂಲ ಪದಾರ್ಥಗಳು ಸೇರುವುದೂ ಉಂಟು" (ಪಾದೇಕಲ್ಲು ವಿಷ್ಣುಭಟ್ಟ ಮತ್ತು ಇತರರು (ಸಂ.) ಕಡೆಂಗೋಡ್ಲು ಶಂಕರ ಭಟ್ಟ ಸಮಗ್ರ ಕಥಾ ಸಂಪುಟ; ೨೦೦೪; ಪುಟ ೩೦).

ಸವಿತಾ ಎಸ್. ಭಟ್ ಅಡ್ವಾಯಿ ಅವರ 'ದೊಡ್ಡಮ್ಮ' ಮತ್ತು 'ಪುಟ್ಟತ್ತೆ' ಕತೆಗಳಲ್ಲಿ ಗ್ರಾಮೀಣ ಪ್ರದೇಶದ ಹವ್ಯಕರು ಬಳಸುವ ಆಹಾರದ ವಿವರಗಳಿವೆ : "ಅವಳು (ದೊಡ್ಡಮ್ಮ) ಮಾಡಿಕೊಡುತ್ತಿದ್ದ ಹಲಸಿನ ಹಣ್ಣಿನ ಕೊಟ್ಟಿಗೆ, ಗೆಣಸಾಲೆ, ಅತಿರಸ, ತಂಬಿಟ್ಟುಂಡೆ, ಒಲೆ ಮುಂದೆ ಕುಳಿತು ಸುಟ್ಟುಕೊಡುತ್ತಿದ್ದ ಅಕ್ಕಿರೊಟ್ಟಿ, ಅದಕ್ಕೆ ಕೂಡಲು ಬಸಳೆ ಬೆಂದಿ, ಊಟಕ್ಕೆ ಗಟ್ಟಿ ಮೊಸರು, ಮಿಡಿ ಉಪ್ಪಿನಕಾಯಿ, ಇಡಿಕಾಯಿ ಉಪ್ಪಿನಕಾಯಿ

ನೆನೆಸಿದರೆ ಇಂದೂ ಬಾಯಲ್ಲಿ ನೀರೂರುತ್ತದೆ" (ಸವಿತಾ ಎಸ್. ಭಟ್. ಅಡ್ವಾಯಿ; ಪುಟ್ಟತ್ತೆ; ೧೯೯೭; ಪುಟ ೪೫) ಮೇಲಿನ ಮಾತುಗಳಲ್ಲಿ ದೊಡ್ಡಮ್ಮ ಕಥಾನಿರೂಪಕಿಗೆ ಮಾಡಿಕೊಡುತ್ತಿದ್ದ ತಿಂಡಿಗಳ ವರ್ಣನೆ ಕಂಡುಬರುತ್ತದೆ. "ಮಳೆಗಾಲವಿಡೀ ಉಪ್ಪಿನಲ್ಲಿ ಹಾಕಿಟ್ಟ ಹಲಸಿನ ಸೊಳೆಯ ಬೋಳು ಬೆಂದಿಯೋ, ನೀರು ಮಾವಿನಕಾಯಿ ಪುರುಂಚಿ (ಹಿಚುಕಿ) ಗೊಜ್ಜಿ ಮಾಡಿಯೋ ಉಂಡು ದಿನ ಹರಣ ಮಾಡುವುದಿದೆ" (ಸವಿತಾ ಎಸ್. ಭಟ್, ಅಡ್ವಾಯಿ; ಪುಟ್ಟತ್ತೆ; ೧೯೯೭; ಪುಟ ೬೯) ಎಂಬ ನಿರೂಪಕನ ಮಾತಿನಲ್ಲಿ ಗ್ರಾಮೀಣ ಪ್ರದೇಶದಲ್ಲಿ ಬದುಕುವ ಹವ್ಯಕರ ಆಹಾರ ಪದ್ಧತಿಯ ಚಿತ್ರಣವಿದೆ.

ಜಯಾ ಯಾಜಿ ಶಿರಾಲಿಯವರು ಬರೆದ 'ಎತ್ತಿರೇ ಮುತ್ತಿನಾರತೀಯ' ಹಾಗೂ 'ಪ್ರತೀಕಾರ' ಕತೆಗಳಲ್ಲಿ ಉತ್ತರಕನ್ನಡ ಹವ್ಯಕ ಸಮುದಾಯದವರ ತಿಂಡಿ ತಿಸಿಸುಗಳ ಚಿತ್ರಣ ಕಂಡುಬರುತ್ತದೆ. "ತಮ್ಮನಿಗೆ ಕಾಯ್‌ಹೋಳಿಗೆ, ಅತ್ರಾಸು, ಪಾಯಸ ಮಾಡಿ ಬಡಿಸಿದಳು" (ಜಯಾ ಯಾಜಿ ಶಿರಾಲಿ; ಶಂಕ್ರಿ; ೨೦೦೦; ಪುಟ ೩೪). "ಬಾ ಊಟ, ಮಾಡ್ಲಕ್ಕು. ಮೆಂತೆಕಾಳಿನ ತಂಬ್ಳಿ, ಮಾವಿನಗೊಜ್ಜು ಮಾಡಿತ್ತು ಸರಸು" (ಜಯಾ ಯಾಜಿ ಶಿರಾಲಿ; ಶಂಕ್ರಿ; ೨೦೦೦; ಪುಟ ೫೮) ಸಮಾಳ ಅತ್ತೆಯ ಅಕ್ಕ ಭಾಗ್ಯತ್ತೆ ಹೇಳುವ ಮಾತಿನಲ್ಲಿ ಆಹಾರದ ವಿವರಗಳಿವೆ. ಹವ್ಯಕರ ಊಟದಲ್ಲಂತೂ ಒಂದು ವಿಶೇಷ ಇದೆ. 'ಊಟಕ್ಕೊಂದು ತಂಬುಳಿ ಬಾಳಿಗೊಂದು ಕಂಬಳಿ' ಎಂದು ಹೇಳುತ್ತಾ ಹೆಚ್ಚಿನ ದಿನಗಳಲ್ಲಿ ತಂಬುಳಿ ಇಲ್ಲದ ಊಟವೇ ಹವ್ಯಕರಲ್ಲಿ ಇಲ್ಲ, ನೆಲ್ಲಿಹಿಂಡಿ, ನೆಲ್ಲಿಸಟ್ಟು, ಸೌತೆಬೀಜ, ಸಾಂಬ್ರಾಣಿ ಎಲೆ, ತಿಮರೆ/ಉರಗೆ (ಒಂದೆಲಗ), ಮೆಂತೆ, ಗರಗ (ಬ್ರಾಹ್ಮೀ), ಕರೆಕೊಡಿ (ಅನೇಕ ಜಾತಿಯ ಸಸ್ಯಗಳ ಚಿಗುರು) ಇತ್ಯಾದಿಗಳೇ ತಂಬುಳಿಯ ಸಾಧನಗಳು. ಇವು ಒಂದು ರೀತಿಯ ಔಷಧವೇ ಆಗಿದ್ದು ಆರೋಗ್ಯವರ್ಧಕಗಳಂತೆ ಕೆಲಸ ಮಾಡುತ್ತವೆ. ರುಚಿಕರವಾಗಿಯೂ ಇರುತ್ತದೆ.

ಕಾಯಿಹುಳಿ (ಮೇಲಾರ, ಮಜ್ಜಿಗೆಹುಳಿ)ಯು ಹವ್ಯಕರ ಊಟದ ಪ್ರಧಾನ ಅಂಗವಾಗಿದೆ. ದೂರದ ಊರುಗಳಲ್ಲಿ ಬೆಳೆದ ತರಕಾರಿಗಳಿಗೆ ಮೋಹ ಪಡದೆ ತಮ್ಮಲ್ಲೇ ಬೆಳೆಯುವ ಬಾಳೆಕಾಯಿ, ಕುಂಬಳಕಾಯಿ, ಸೌತೆಕಾಯಿ,ತೊಂಡೆ,ಬೆಂಡೆ, ಬದನೆಕಾಯಿ ಹಲಸಿನಕಾಯಿ ಮೊದಲಾದುವನ್ನೇ ಉಪಯೋಗಿಸಿ ಮಜ್ಜಿಗೆಹುಳಿ ಮಾಡುವುದು ಹಿಂದಿನಿಂಲೂ ಬೆಳೆದು ಬಂದ ಪದ್ಧತಿ. ಶ್ರೀಧರ ಬಳಗಾರ ಅವರು ಬರೆದ 'ಸಂಯೋಗ'

ಕತೆಯಲ್ಲಿ ಸುಬ್ರಾಯನ ಮನೆಯಲ್ಲಿರುವ ಮುರ್ಕುಂಡಿಗೆ ಪ್ರಿಯವಾದ ಆಹಾರವನ್ನು ವಿವರಿಸುವ ಸಂದರ್ಭದಲ್ಲಿ ಹವ್ಯಕರ ಮಜ್ಜಿಗೆ ಹುಳಿಯ ಚಿತ್ರಣ ಕಂಡುಬರುತ್ತದೆ. "ಭಟ್ಟರ ಮನೆಯ ಸಪ್ಪೆಯಾಗಿರುವ ಹುಳಿ ಮಜ್ಜಿಯ ಬಜ್ಜಿಯನ್ನೋ ತೆಂಗಿನಕಾಯಿಯ ತುರಿಯ ಗೊಜ್ಜನ್ನೋ ಉಣ್ಣುವ ತಾನು ಸಾತ್ವಿಕನೆಂದು ನಂಬಿದಾನೆ" (ಶ್ರೀಧರ ಬಳಗಾರ; ಅಧೋಮುಖ; ೧೯೯೫; ಪುಟ ೧೫). ಆಹಾರವು ಸಂಸ್ಕೃತಿಯ ಸಂಕೇತ. ಹವ್ಯಕರ ಆಹಾರ ಪದ್ಧತಿಯಲ್ಲಿ ಸಾತ್ವಿಕತೆಯನ್ನು ಉದ್ದೀಪನಗೊಳಿಸುವ ಅಂಶ ವಿಶೇಷವಾಗಿದೆ.

### ೧೧.೪ ಔಷಧ

ಮನಸ್ಸು ರೋಗವನ್ನು ಸೃಷ್ಟಿಸಬಲ್ಲದು ಹಾಗೂ ಗುಣಪಡಿಸಲೂಬಲ್ಲದು. ತಾಳ್ಮೆ, ಪ್ರೀತಿ, ಕರುಣೆ ಇತ್ಯಾದಿ ಗುಣಗಳು ದೇಹದಲ್ಲಿ ಉತ್ಸಾಹದಾಯಕ ಆರೋಗ್ಯಕರ ಚಟುವಟಿಕೆಗಳಿಗೆ ಕಾರಣವಾಗುತ್ತವೆ. ಹಾಗೆಯೇ ಭಯ, ಚಿಂತೆ, ದ್ವೇಷ, ಅಸೂಯೆ, ಸೋಲಿನ ಮನೋಭಾವ ಹಾಗೂ ಸ್ವಾರ್ಥವು ಅಂಗಾಂಗಗಳಿಗೆ ಕೆಡುಕನ್ನುಂಟು ಮಾಡಿ ಕಾಯಿಲೆಗೆ ಕಾರಣವಾಗಿತ್ತದೆ. ದೇಹದ ಸಹಜ ಧರ್ಮವು ಏರುಪೇರಾದಾಗ ಅದನ್ನು ಸಮತೋಲನದಲ್ಲಿರಿಸಲು ಕಾರಣವಾಗುವ ಅಂಶವೇ ಔಷಧಿ. ಹವ್ಯಕರು ಹಳ್ಳಿಗಳಲ್ಲಿ ಪ್ರಚಲಿತವಿದ್ದ ಮನೆಯಲ್ಲಿಯೇ ಸಿದ್ಧಪಡಿಸುವ ಔಷಧಿಗಳನ್ನು ತಮ್ಮ ಕತೆಗಳಲ್ಲಿ ಉಲ್ಲೇಖಿಸಿದ್ದಾರೆ. ಸವಿತಾ ಎಸ್. ಭಟ್ ಅಡ್ವಾಯಿಯವರ 'ಪುಟ್ಟತ್ತೆ' ಕತೆಯಲ್ಲಿ ಪುಟ್ಟತ್ತೆಗೆ ಹೊಟ್ಟೆನೋವಾದಾಗ ನಿರೂಪಕನ ಹೆಂಡತಿ ಮಾಡುವ ಉಪಚಾರದಲ್ಲಿ ಹಳ್ಳಿಯ ಔಷಧಿಯ ಕ್ರಮಗಳ ಚಿತ್ರಣವಿದೆ. "ಇಂಗು ಕರಡಿಸಿ, ಮಜ್ಜಿಗೆ ಕೊಟ್ಟೆ, ಕರಿಮೆಣಸು ಹುರಿದು ತಂಬುಳಿ ಮಾಡಿಕೊಟ್ಟೆ" (ಸವಿತಾ ಎಸ್. ಭಟ್ ಅಡ್ವಾಯಿ; ಪುಟ್ಟತ್ತೆ; ೧೯೯೭; ಪುಟ ೯೫). "ಊರಲ್ಲಾಗಿದ್ದರೆ ಅಮ್ಮ ಆಕಳ ಹಾಲಿಗೆ ಜೀರಿಗೆ ಅರೆದು ಹಾಕಿ ಸಕ್ಕರೆ ಸೇರಿಸಿ 'ಉಷ್ಣಧಾರೆ' ಮಾಡಿಕೊಡುತ್ತಿದ್ದಳು" (ಜಯಪ್ರಕಾಶ ಮಾವಿನಕುಳಿ; ಕಾಲ; ೧೯೯೦; ಪುಟ ೯೭) ಎಂಬ ನಿರೂಪಕನ ಮಾತಿನಲ್ಲಿ ಶರೀರಿಕ್ಕೆ ಉಷ್ಣವಾದಾಗ ಶರೀರವನ್ನು ತಂಪು ಮಾಡುವ ಕ್ರಮದ ವಿವರಣೆಯಿದೆ.

## ೧೧.೫ ಆಭರಣ

ಸೌದರ್ಯವರ್ಧಕ, ಸೌದರ್ಯ ರಕ್ಷಕ, ಧಾರ್ಮಿಕ, ಸಾಮಾಜಿಕ, ಆರ್ಥಿಕ, ಅಂತಸ್ತು, ಸಿರಿತನದ ಪ್ರದರ್ಶನ ಇವೇ ಮೊದಲಾದ ಕಾರಣಗಳಿಗಾಗಿ ಆಭರಣಗಳನ್ನು ಉಪಯೋಗಿಸುವ ಪ್ರವೃತ್ತಿ ಹವ್ಯಕರಲ್ಲಿ ಕಂಡುಬರುತ್ತದೆ. ಕಡೆಂಗೋಡ್ಲು ಶಂಕರ ಭಟ್ಟರ 'ಅದ್ದಿಟ್ಟು' ಹಾಗೂ ಜಯಾ ಯಾಜಿ ಶಿರಾಲಿಯವರ 'ಎತ್ತಿರೇ ಮುತ್ತಿನಾರತೀಯ' ಕತೆಗಳಲ್ಲಿ ಹವ್ಯಕ ಮಹಿಳೆಯರು ಧರಿಸುವ ಹಳೆಯ ಕಾಲದ ಆಭರಣಗಳ ಉಲ್ಲೇಖವಿದೆ. "ಪಾರ್ವತಿಯಮ್ಮನೋ ! ಆಕೆ ಪಾಪ ! ಪುರಾಣ ವಸ್ತು. ತನ್ನ ಹೆಸರಿನಷ್ಟೇ ಪರಿಶುದ್ಧ ! ಗಂಡನ ಛಾಯೆ. ಹೊಸದಿನದ ಹೊಸ ಸೋಗನ್ನು ಅರಿತವಳಲ್ಲ. ಮೋರೆಯ ಉದ್ದಗಲಕ್ಕೂ ತುಂಬ ಕುಂಕುಮದ ಬೊಟ್ಟು. ಕಿವಿತುಂಬ ಆಭರಣ. ಕೈತುಂಬಾ ಗಾಜಿನ ಬಳೆಗಳು. ಇವುಗಳ ಮಧ್ಯಕ್ಕೆ ಒಂದೆರಡು ಊರ ಸೊನೆಗಾರನೆ ತಯಾರಿಸಿದ, ಒಳಗೆ ಟೊಳ್ಳಾಗಿದ್ದರೂ ಅರಗಿನಿಂದ ಹೊಟ್ಟೆ ತುಂಬಿದ ಎರಡೆರಡು ಗಟ್ಟಿನ ಬಳೆಗಳು-ಇಷ್ಟೆ ಆಕೆಯ ಆಭರಣಗಳು" (ಪಾದೇಕಲ್ಲು ವಿಷ್ಣುಭಟ್ಟ ಮತ್ತು ಇತರರು (ಸಂ.), ಕಡೆಂಗೋಡ್ಲು ಶಂಕರ ಭಟ್ಟ; ಸಮಗ್ರ ಕಥಾ ಸಂಪುಟ; ೨೦೦೪; ಪುಟ ೨೬) ಮುಖ್ಯ ಪ್ರಾಣಾಚಾರ್ಯರ ಪತ್ನಿ ಪಾರ್ವತಿ ಅಮ್ಮನು ಧರಿಸಿದ ಆಭರಣಗಳ ವಿವರಗಳಲ್ಲಿ ಹವ್ಯಕ ಮಹಿಳೆಯರ ವೇಷಭೂಷಣದ ರೀತಿ ವ್ಯಕ್ತವಾಗುತ್ತದೆ. "ಮರದ ಹಳೆಯ 'ಪತಾರಿ'ಯಲ್ಲಿ ಎಂದೋ ಕಟ್ಟಿಟ್ಟ ಜರಿಯಂಚಿನ ಸೀರೆಯನ್ನು ತೆಗೆದು ಮುಟ್ಟಿ ಮುಟ್ಟಿ ಸಂತೋಷ ಪಟ್ಟಳು. ವಾಲೆ, ಬೋರಿಗುಂಡಿನ ಸರ, ಮುಗುಳು ಸರಪಣಿ, ವಠಾಣಿ ಕಾಳಿನ ಮುಂಬಳೆ, ಸವತೆ ಬೀಜದ ಹಿಂಬಳೆ ಕೈಗೆ ಹಾಕಿಕೊಂಡು ಸುಖಿಸಿದಳು" (ಜಯಾ ಯಾಜಿ ಶಿರಾಲಿ; ಶಂಕ್ರಿ; ೨೦೦೦; ಪುಟ ೨೮). ನಿರೂಪಕಿ ತನ್ನ ತವರು ಮನೆಯಲ್ಲಿ ನಡೆಯುವ ವಿವಾಹ ಸಮಾರಂಭಕ್ಕೆ ಆಭರಣಗಳನ್ನು ಧರಿಸಲು ಸಿದ್ಧಗೊಳ್ಳುವ ಸಂದರ್ಭದಲ್ಲಿ ಉತ್ತರಕನ್ನಡದ ಹವ್ಯಕ ಮಹಿಳೆಯರು ಧರಿಸುವ ಆಭರಣಗಳ ಚಿತ್ರಣವನ್ನು ಕತೆಗಾರರು ವಿವರಿಸಿದ್ದಾರೆ.

ಒಟ್ಟಿನಲ್ಲಿ ಹವ್ಯಕ ಸಮುದಾಯದ ವಿಭಿನ್ನ ಆಚಾರ ವಿಚಾರಗಳನ್ನು ಅವರ ಸಂಸ್ಕಾರ ವಿಶೇಷತೆಗಳನ್ನು, ಧಾರ್ಮಿಕ ಆಚರಣೆಗಳನ್ನು ಹವ್ಯಕ ಕತೆಗಾರರು ತಮ್ಮ ಕತೆಗಳಲ್ಲಿ ದಾಖಲಿಸಿದ್ದಾರೆ. ಅಂತೆಯೇ ಹವ್ಯಕರ ಆಹಾರ ಪದ್ಧತಿ, ಉಡುಗೆ ತೊಡುಗೆ,

ಔಷಧಿ ಬಳಕೆ ಮೊದಲಾದ ಅಂಶಗಳು ಈ ಸಮುದಾಯದ ಜೀವನ ಪದ್ಧತಿಯ ಮೇಲೆ ವಿಶೇಷ ಬೆಳಕು ಬೀರುತ್ತವೆ. ಕನ್ನಡದ ಇತರ ಕತೆಗಾರರಲ್ಲಿ ಸಿಗದ ಕೆಲವು ಅಂಶಗಳು, ಹವ್ಯಕ ಬರಹಗಾರರ ಕತೆಗಳಲ್ಲಿ ಸಿಗಬಲ್ಲದು. ಇದು ಅವರ ಬರಹಗಳಿಗೆ ವಿಶೇಷ ಮೆರುಗನ್ನು ನೀಡಿದೆ. ಒಂದು ಇಡೀ ಸಮುದಾಯದ ಜೀವನ ಪದ್ಧತಿಯನ್ನು ಪರಿಚಯಿಸುವ ಕತೆಗಳು ಹವ್ಯಕ ಸಂಸ್ಕೃತಿಯನ್ನು ಓದುಗರಿಗೆ ಆಪ್ತವಾಗಿಸುತ್ತವೆ.

# ಅಧ್ಯಾಯ – ೧೨

## ಹವ್ಯಕ ಬರಹಗಾರರ ಕಥೆಗಳ ಭಾಷೆ ಮತ್ತು ಶೈಲಿ

ಇಂಗ್ಲಿಷ್‌ನ Style ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ಶೈಲಿ' ಪದವನ್ನು ಬಳಸಲಾಗುತ್ತದೆ. ಬರಹಗಾರನ ಬರವಣಿಗೆಯ ರೀತಿ ಅಥವಾ ವಿಧಾನವೇ ಶೈಲಿ. ಶಬ್ದಾರ್ಥ ಸಹಿತ ಮನದಲ್ಲಿ ರೂಪುಗೊಂಡ ಭಾವನೆಯು ಅಭಿವ್ಯಕ್ತಗೊಳ್ಳುವ ರೀತಿಯೇ 'ಶೈಲಿ'. ಪ್ರತಿಯೊಬ್ಬ ಲೇಖಕನಿಗೂ ಅವನದೇ ಆದ ಬರವಣಿಗೆಯ ಶೈಲಿಯಿದೆ. ಆದ್ದರಿಂದ ಅದು ವ್ಯಕ್ತಿನಿಷ್ಠವಾದುದು. ಅದು ಬರವಣಿಗೆಯ ಪ್ರಕಾರಕ್ಕೆ ಅನುಗುಣವಾಗಿ ರೂಪವನ್ನು ಪಡೆಯುತ್ತದೆ. ಒಳಕಣ್ಣಿಗೆ ಗೋಚರಿಸಿದ ಅಂಶವೊಂದು ಮೂರ್ತರೂಪವನ್ನು ಪಡೆಯುವಲ್ಲಿ ಬರವಣಿಗೆಯ ವಿಧಾನ ಮುಖ್ಯವಾಗುತ್ತದೆ. ಇದನ್ನೆ ಶೈಲಿ ಎಂದು ಗುರುತಿಸಿದೆ.

ಭಾಷೆ ಮತ್ತು ಶೈಲಿ ಬರವಣಿಗೆಯಲ್ಲಿ ಪರಸ್ಪರ ಪೂರಕವಾದ ಅಂಶಗಳು. ವಸ್ತುವಿನ ಸಮರ್ಪಕವಾದ ನಿರೂಪಣೆಗೆ ಸೂಕ್ತ ಭಾಷೆಯ ಅಗತ್ಯವಿರುವಂತೆಯೇ ಕತೆಯ ಕಲಾಪರಿಣಾಮದ ಸೊಗಸಿಗೆ ಸೂಕ್ತವಾದ ಶೈಲಿಯ ಅಗತ್ಯವಿದೆ. ವಸ್ತುವಿನ ಅಭಿವ್ಯಕ್ತಿಯ ಸಂದರ್ಭದಲ್ಲಿ ಲೇಖಕ ಅದರ ರಚನೆಗೆ ಯೋಗ್ಯವಾದ ಭಾಷೆ, ಶೈಲಿಯ ಬಗೆಗೆ ನಿರ್ಧರಿಸಬೇಕಾಗುತ್ತದೆ. ಲೇಖಕನ ಅಭಿವ್ಯಕ್ತಿ ಪರಿಣಾಮಕಾರಿಯಾಗಿ ಮೂಡಿಬರಲು ಸರಿಯಾದ ಭಾಷೆ–ಶೈಲಿಯ ಬಳಕೆಯ ಅಗತ್ಯವಿದೆ. ಭಾಷೆ–ಶೈಲಿಗಳು ಲೇಖನ ವ್ಯಕ್ತಿತ್ವವನ್ನು ಪ್ರತಿಬಿಂಬಿಸುತ್ತವೆ. ಅಲ್ಲದೆ ಇದು ಅಭಿರುಚಿ, ಅನುಭವ, ಪಾಂಡಿತ್ಯ, ಸಂಸ್ಕಾರಗಳಿಗೆ ಹೊಂದಿಕೊಂಡು ವೈಯಕ್ತಿಕವೂ ಆಗಿದೆ. ಬರಹಗಾರ ತನ್ನತನವನ್ನು ತನ್ನ ಬರಹದಲ್ಲಿ ತೋರಬೇಕಾದರೆ ತನ್ನದೇ ಆದ ಶೈಲಿಯೊಂದನ್ನು ರೂಢಿಸಿಕೊಳ್ಳುವುದು ಅವಶ್ಯ.

ಪದಗಳ ಆಯ್ಕೆ, ವಾಕ್ಯಗಳ ಜೋಡಣೆ ಇತ್ಯಾದಿಗಳಲ್ಲಿ ಲೇಖಕ ಬಹಳಷ್ಟು ಜಾಗ್ರತೆ ವಹಿಸಬೇಕು. ಹೇಳಬೇಕೆನಿಸಿದ ಭಾವ, ಧ್ವನಿಯ ಏರಿಳಿತಗಳು ಸರಿಯಾಗಿ ರೂಪುಗೊಳ್ಳದಿದ್ದರೆ ಒಂದು ರೀತಿಯ ಕೃತಕತೆಗೆ, ಅಸಹಜತೆಗೆ ಎಡೆಯಾಗುವುದರೊಂದಿಗೆ ಕಥೆ ಓದುಗನಲ್ಲಿ ಅಸಹನೆಯನ್ನು ಉಂಟುಮಾಡಬಹುದು.

ಈ ದೃಷ್ಟಿಯಿಂದ ಕಥೆಗಾರರಿಗೆ ತನ್ನ ಆಯ್ಕೆಯ ವಸ್ತುವಿನ ಕುರಿತು ಖಚಿತವಾದ ಅರಿವು, ಅನುಭವ ಇರುವುದು ಒಳ್ಳೆಯದು. ವಸ್ತುವಿನ ಕಾಲ, ದೇಶ, ಸಂದರ್ಭ, ಸನ್ನಿವೇಶ, ಪಾತ್ರ ಮೊದಲಾದವುಗಳಿಗೆ ಹೊಂದಿಕೊಂಡು ಕಥೆಯಲ್ಲಿ ಭಾಷೆ ಶೈಲಿಗಳ ಸೂಕ್ತವಾದ ಬಳಕೆಯಿರಬೇಕು. ಕತೆಗಾರರಿಗೆ ಭಾಷೆಯೊಂದು ಇರುವಂತೆಯೇ ತಾನು ಸೃಷ್ಟಿಸುವ ವಿಭಿನ್ನ ಕಥಾಪಾತ್ರಗಳಿಗೆ ಭಿನ್ನಭಿನ್ನವಾದ ಭಾಷೆಯಿರಬಹುದು. ಕತೆಗಾರನ ಬೌದ್ಧಿಕ ಮಟ್ಟ, ಸಾಂಸ್ಕೃತಿಕ ಸ್ಥಿತಿ, ಜೀವಾನಾನುಭವಗಳಿಂದ ರೂಪುಗೊಂಡ ಭಾಷೆಯಂತೆಯೇ ತಾನು ಚಿತ್ರಿಸುವ ಪಾತ್ರಗಳಿಗೆ ಅವುಗಳ ಹಿನ್ನೆಲೆಗೆ ಅನುಗುಣವಾಗಿ ಭಾಷೆಯು ರೂಪುಗೊಂಡಿರಬೇಕು. ವ್ಯಕ್ತಿಯ ಭಾಷೆಯ ಮೂಲಕ ಆತನ ಸ್ವಭಾವ, ಗುಣ, ಸಂಸ್ಕೃತಿಗಳು ವ್ಯಕ್ತವಾಗುತ್ತವೆ.

ಕತೆಯ ಸೌಂದರ್ಯಕ್ಕೆ, ಭಾವ ನಿರೂಪಣೆಗೆ ಮುಖ್ಯವಾದದ್ದು ಭಾಷೆ. ಭಾವಗಳ ಅಭಿವ್ಯಕ್ತಿಗೆ ದಿನ ಬಳಕೆಯ ಗಾದೆಗಳು, ನುಡಿಮುತ್ತುಗಳು, ಪ್ರಸಿದ್ಧ ವಾಕ್ಯಗಳು ಸಹಕಾರಿಯಾಗಬಲ್ಲವು. ಸಾಮಾಜಿಕ, ಐತಿಹಾಸಿಕ, ಪೌರಾಣಿಕ ಮುಂತಾದ ಹಿನ್ನೆಲೆಯಿರುವ ಕತೆಗಳಲ್ಲಿ ಔಚಿತ್ಯವರಿತು ಭಾಷೆಯನ್ನು ಬಳಸಬೇಕಾಗುತ್ತದೆ. ಇದರಂತೆಯೇ ಕತೆಯಲ್ಲಿ ಚಿತ್ರಿತವಾಗುವ ಪಾತ್ರಗಳ ವ್ಯಕ್ತಿತ್ವ, ಸಂಸ್ಕೃತಿನುಸಾರವಾಗಿ, ಅವುಗಳ ಭಾಷೆಯಲ್ಲಿಯೂ ವೈವಿಧ್ಯವನ್ನು ತೋರಬೇಕಾಗುತ್ತದೆ. ಕತೆಯಲ್ಲಿ ಬರಬಹುದಾದ ಸಂಭಾಷಣೆಗಳಲ್ಲಂತೂ ಕತೆಗಾರ ಬಹಳ ಜಾಗ್ರತೆ ವಹಿಸಬೇಕಾಗುತ್ತದೆ. ಇಲ್ಲದಿದ್ದರೆ ಕತೆಯ ಪಾತ್ರಗಳು ಜೀವಂತಿಕೆಯಿಲ್ಲದೆ ಬರಿಯ 'ವೇಷದಗೊಂಬೆ'ಗಳಂತೆ ಕೃತಕವೆನಿಸಬಹುದು. ಒಟ್ಟಿನಲ್ಲಿ ವಿಪುಲವಾದ ಪದಸಂಪತ್ತಿಯೂ, ಅಪಾರವಾದ ಜೀವಾನಾನುಭವವೂ, ಗಾಢವಾದ ಔಚಿತ್ಯಪ್ರಜ್ಞೆಯೂ ಇರುವ ಕತೆಗಾರರ ಭಾಷೆ–ಶೈಲಿ ಯಾವುದೇ ಅಡತಡೆಯಿಲ್ಲದೆ ನಿಶ್ಚಿತವಾದ ಕಲಾಪರಿಣಾಮವನ್ನು ಓದುಗನಲ್ಲಿ ಉಂಟುಮಾಡಬಲ್ಲದು.

೧೯೦೧ ರಿಂದ ೨೦೦೦ ನಡುವಣ ಕಾಲದಲ್ಲಿ ಹವ್ಯಕ ಕತೆಗಾರರು ಬರೆದ ಸಣ್ಣಕತೆಗಳಲ್ಲಿ ಬಳಕೆಯಾದ ಭಾಷೆ ಮತ್ತು ಶೈಲಿಯ ವೈಶಿಷ್ಟ್ಯವನ್ನು ಉದಾಹರಣೆ ಸಹಿತ ಈ ಅಧ್ಯಾಯದಲ್ಲಿ ಪರಿಶೀಲಿಸಿದೆ. ಹವ್ಯಕ ಕತೆಗಾರರು ಬಳಸಿದ ವೈವಿಧ್ಯಮಯ ಭಾಷೆಯ ಬಳಕೆ ವಿಸ್ಮಯವನ್ನು ಮೂಡಿಸುತ್ತದೆ.

ಹವ್ಯಕ ಕತೆಗಾರರ ಕತೆಗಳಲ್ಲಿ ಶಿಷ್ಟ ಅಥವಾ ಗ್ರಂಥಸ್ಥ ಭಾಷೆಯೇ ಸಾಮಾನ್ಯವಾಗಿ ಬಳಕೆಯಾಗಿದೆ. ಇವುಗಳೊಂದಿಗೆ ಕತೆಗಾರನ ಸಂಸ್ಕೃತಿ, ಬದುಕಿದ ಪ್ರದೇಶ, ಆಡುವ ಭಾಷೆಯ ಪ್ರಭಾವಗಳು ಆತನ ಕೃತಿಯಲ್ಲಿ ಕಾಣಿಸಿಕೊಂಡಿದೆ. ದಕ್ಷಿಣ ಕನ್ನಡ ಕತೆಗಾರರ ಕತೆಗಳಲ್ಲಿ ಇಲ್ಲಿನ ಹವ್ಯಕರ ಆಡುಬಾಷೆಯ ಸೊಗಸು ಕಂಡುಬರುತ್ತದೆ. ಅಲ್ಲದೆ ಪ್ರಾದೇಶಿಕ ಭಾಷೆಯಾದ ತುಳುವಿನ ಪ್ರಭಾವವನ್ನು ಗುರುತಿಸಲು ಸಾಧ್ಯ. ಸವಿತಾ ಎಸ್. ಭಟ್, ಅಡ್ವಾಯಿಯವರ 'ಪುಟ್ಟತ್ತೆ', ಮನೋರಮಾ ಎಂ. ಭಟ್ ಅವರ 'ಪೀಪಿ ಅಜ್ಜಿ', 'ಹೆಣ್ಣು – ಮನಸ್ಸು', ಗಂಗಾ ಪಾದೇಕಲ್‌ರವರ 'ಭಗ್ನ', 'ಪಿಂಡ', ಜಿ.ಎಸ್. ಉಬರಡ್ಕರವರ 'ನೆಂಟಸ್ತಿಕೆ' ಕತೆಗಳಲ್ಲಿ ದಕ್ಷಿಣ ಕನ್ನಡ ಹವ್ಯಕ ಸಮುದಾಯದ ಭಾಷೆಯ ಬಳಕೆಯನ್ನು ಗುರುತಿಸಬಹುದು. ಅಂತಹ ಕೆಲವು ಮಾದರಿಗಳು ಈ ಕೆಳಗಿನಂತಿವೆ :"ಸಾಕು ಕುಂಞೆ...... ನೀನೂ ವೇಣಿಯೂ ಬೇಗ ಉಂಡು ಕುಂಞಪ್ಪನಿಗೂ ಬಡಿಸಿ" (ಸವಿತಾ ಎಸ್. ಭಟ್; ಅಡ್ವಾಯಿ, ಪುಟ್ಟತ್ತೆ ೧೯೯೨, ಪುಟ ೧೦೧). "ಬಾ ಮಗಾ........... ಸ್ವಲ್ಪ ಕಾಶೀತೀರ್ಥ ನನ್ನ ಬಾಯಿಗೆ ಎರೆದುಬಿಡು ರಾಮ...... ರಾಮಾ......." (ಅದೇ : ಪುಟ ೧೦೧).

ಮನೋರಮಾ ಎಂ. ಭಟ್‌ರವರು ಬರೆದ ಕತೆಗಳಲ್ಲಿ ಹವ್ಯಕ ಭಾಷೆಯ ಸೊಡಗನ್ನು ಕಾಣಬಹುದು. "ಓ....... ನೀನಾ...... ಎನಗೆ ಗೊಂತೇ ಆತಿಲ್ಲೆ.......... ಗೊಂತಪ್ಪದರೂ ಹೇಂಗೆ........ ನೀನು ಅಂದು ಪುಟ್ಟ ಕೂಸಾಗಿತ್ತಿದ್ದೆ......ಈಗ ನೋಡಿದರೆ......... (ಮನೋರಮಾ ಎಂ. ಭಟ್; ಸ್ವಯಂವರ; ೧೯೯೪; ಪುಟ ೯).

"ಏಳ್ಬೇಡಿ ಅತ್ತೆ ಕಾರು ಗೋಳಿಮರದ ಹತ್ತಿರ ಬಂತಷ್ಟೆ – ಇನ್ನು ಪದವು ದಾಂಟೆಕ್ಕು – ಗುಡ್ಡೆ ಇಳಿಯೆಕ್ಕು – ಮತ್ತೂ ಒಂದು ರಜ ನೆಡೆಯಕ್ಕನ್ನೆ........ (ಅದೇ;ಪುಟ ೪೩).

ಗಂಗಾ ಪಾದೇಕಲ್ ಅವರ 'ಭಗ್ನ' ಕತೆಯ ಸಂಭಾಷಣಾ ಭಾಗದಲ್ಲಿ ದಕ್ಷಿಣ ಕನ್ನಡ ಹವ್ಯಕ ಸಮುದಾಯದ ಭಾಷೆಯ ಬಳಕೆ ಕಂಡುಬರುತ್ತದೆ. "ಕುಸುಮಾ, ಡೆಲ್ಲೀಲಿ ಹಾಂಗೆ ಮಾಡಿದ್ದು ಸರಿಯೋ, ತಪ್ಪೋ ಹೇಳಲು ಎಂಗೊ ಅಲ್ಲಿ ಇಲ್ಲೆ. ಆದರೆ ಇಲ್ಲಿ ಹಾಂಗೆ ಮಾಡಿದರೆ ಖಂಡಿತ ಆಗ ದೇವರ ಪೂಜೆ ಇಷ್ಟ ಮನೆ ಅದು ನೆನಪಿರಲಿ" (ಗಂಗಾ ಪಾದೇಕಲ್; ಹೆಜ್ಜೆ ಮೂಡದ ಹಾದಿಯಲ್ಲಿ; ೧೯೮೮, ಪುಟ ೬).

ಜಯಾ ಯಾಜಿ ಶಿರಾಲಿಯವರ 'ಎತ್ತಿರೇ ಮುತ್ತಿನಾರತೀಯಾ', ಗೋಪಾಲಕೃಷ್ಣ ಹೆಗಡೆ, ಕೇರಿಮನೆಯವರ 'ಬಿಡುಗಡೆ', ವಿ.ತಿ. ಶೀಗೇಹಳ್ಳಿಯವರ 'ಹರಿದ ಸೆರಗು', 'ರಾಮಂ ಲಕ್ಷ್ಮಣ ಪೂರ್ವಜಂ', ಜಿ.ಎಸ್. ಹೆಗಡೆಯವರ 'ವಾಸ್ತವ', 'ಹಿತ್ತಲ ಗಿಡ ಮದ್ದಲ್ಲ', ಭರತನ ಹಳ್ಳಿ, ನಾ.ಸು. ರವರ 'ತಿರುವು', ಕುಮಾರ ಜೋಶಿಯವರ 'ಗುಮ್ಮ', ಮಹಾಬಲಮೂರ್ತಿ ಕೊಡ್ಲೆಕೆರೆಯವರ 'ಆರೋಹಣ' 'ಮತ್ತೊಂದು ಮೌನ', 'ಕಾಗೆ ಬರಲಿಲ್ಲ', ರಾಜು ಹೆಗಡೆಯವರ 'ಅಪ್ಪಚ್ಚಿ' ಕತೆಗಳಲ್ಲಿ ಉತ್ತರ ಕನ್ನಡ ಹವ್ಯಕ ಸಮುದಾಯದ ಭಾಷೆಯ ಬಳಕೆ ಕಂಡು ಬರುತ್ತದೆ. ಉದಾಹರಣೆಗೆ : "ಎಲ್ಲಾ ನೀನೇ ಕಲಿಸಿದ್ದು ಮೊದ್ಲಿಂದ, ಹೋಗ್ಲಿಬಿಡು ಭಾವಂಗೆ ನಂಗಳ ಮೇಲಿನ ಸಿಟ್ಟು ಆರಿದ್ದಿಲ್ಯೆ. ಅವ್ನ ಮದ್ವೆಗೆ ಬರ್ದಿದ್ರೂ, ನೀನಂತೂ ಬಾ. ಅಲ್ಲ ಮರಾಯ್ತಿ, ನೀ ಇದೆಂತ ಹಾಕ್ದೆ ಚೀಲದಲ್ಲಿ ಮದ್ವೆ ಮನೆ ಗಲಾಟೆ, ಜನ ಬರ್ತಾ ಇದ್ದ ಮನೆಗೆ ಸಿಂಧೂನ ಕಡೆ ಬಳಗ ಆಗ್ಲೇ ಠೀಕಾಣಿ ಹೂಡಿದ್ದು...... ಈ ತಿಂಡಿ ಎಲ್ಲಿ ತಾಗ್ತು ಅಲ್ಲಿ...." (ಜಯಾ ಯಾಜಿ ಶಿರಾಲಿ; ಶಂಕ್ರಿ; ೨೦೦೦ ಪುಟ ೨೪). ಭರತನಹಳ್ಳಿ 'ನಾ.ಸು'. ರವರ 'ತಿರುವು' ಕತೆಯಲ್ಲಿ ಉತ್ತರ ಕನ್ನಡ ಹವ್ಯಕ ಸಮುದಾಯದ ಭಾಷೆಯನ್ನು ಸಂಭಾಷಣಾ ರೂಪದಲ್ಲಿ ಬಳಸಿದ್ದಾರೆ. "ಈ ಊರು ನೋಡು ಭಾವ ! ಹತ್ತಿಪ್ಪತ್ತು ವರ್ಷದಿಂದ್ಲೂ ಆನ್ ನೋಡ್ತಾ ಇದ್ದಿ. ಹ್ಯಾಂಗಿದ್ದೋ ಹಾಂಗ್ಯೇ ಇದ್ದು. ಈ ಓಣಿನಂತೂ ಆನ್ ಎಷ್ಟ ಸರ್ತಿ ತುಳಿದ್ನೋ ! ಆದ್ರೂ ಇಲ್ಲಿ ಹನೀ ಹನಿ ಬದ್ಲಾವಣೆ ಆಗಿದ್ನ ಕಂಡಿದ್ದಿಲ್ಲೆ...... ನಾವೀಗ ಎಷ್ಟು ದೂರ ಹೋಗೋವು ಗೊತ್ತಿದ್ದೋ ? ಈ ಓಣಿ ದಾಟಿ ಅಲ್ಲಿ ಮುಂದೆ ಕಾಣ್ತುಲೋ ! ಆ ಗದ್ದೆ ಬಯಲ ದಾಟಿ ಅದರ ಮುಂದ್ಕಾಣೋ ತ್ವಾಟದ ಅಚ್ಯೆಂದಿಂಬಾ ಹತ್ತಿ, ಆಚೆ ಮರಕ್ಲ ಕೊಡ್ಲ ಇಳದ್ರೆ ಅಲ್ಲೇ ತಿರ್ವನಲ್ಲಿದ್ದು ಸುಬ್ಬುಯ್ಯನವ್ರ ಮನೆ. ನಂಗ್ಳು ಮುಟ್ಪೊತ್ತಿಗೆ ಹದಾ ಲಗ್ನದ್ಹೊತ್ತಾಗ್ತಾರ್ಬಲ್ಲ......(ಭರತನಹಳ್ಳಿ ನಾ.ಸು; ಬಯಲು – ಬತ್ತಲೆ; ೧೯೭೪; ಪುಟ ೨೯).

ಮಹಾಬಲಮೂರ್ತಿ ಕೊಡ್ಲೆಕೆರೆಯವರ 'ಮತ್ತೊಂದು ಮೌನ' ಕತೆಯಲ್ಲಿ ಗಣಪಜ್ಜನು ಕಥಾನಿರೂಪಕ ಮಂಜನ ತಂದೆಯಾದ ಶಂಕರನಲ್ಲಿ ಮಾತನಾಡುವ ಸಂದರ್ಭದಲ್ಲಿ ಉತ್ತರ ಕನ್ನಡ ಹವ್ಯಕ ಸಮುದಾಯದ ಭಾಷೆ ಬಳಕೆಯಿದೆ. ಉದಾಹರಣೆಗೆ : "ನಾನಂತೂ ಮಾಬ್ಲೇಶ್ವರನ ದಯದಿಂದ ಇಷ್ಟುದಿನ ಕಳೆದೆ. ಇನ್ನು ನನ್ನ ದಿನಾ ಮುಗಿತಾ ಬಂತು ಅಂತ ಅನಸ್ತಾ ಇದ್ದು. ಆ ನನ್ನ ಮನೇಲಿ ನಾನು

ದಿನಾನೂ ದೀಪಾ ಹಚ್ಕಂಡು ಒಳಿಯಕಾಗಿತ್ತು. ಆದ್ರೆ ಆ ಭಾಗ್ಯ ನಾ ಪಡಕಂಡು ಬಂಜ್ನಿಲ್ಲೆ. ಕೋರ್ಟು, ವ್ಯಾಜ್ಯ ಅಂತ ನನ್ನ ಜೀವಮಾನವಿಡೀ ಆ ಮನೆ ದೂರಾನೇ ಆಗೋತು. ಈಗ್ಲಾದ್ರೂ ಅದು ಕೋರ್ಟು ಆರ್ಡರ್ನಲ್ಲಿ ನಂದೇಯ ಅಂತಾದ್ರೆ – ಎಲ್ಲೋ ಓಡೋಯ್ಕಂಡು ಬದಕ್ತಾ ಇಪ್ಪು ಆ ದತ್ತು. ಅಕಸ್ಮಾತ್ ಊರಿನ ನೆನಪಾಯ್ಕಂಡು ಬಂದಾ ಅಂತಾದ್ರೆ ಅವಂಗೆ ಕೊಡು. ಅವ್ನಾದ್ರೂ ದೀಪಾ ಹಚ್ಕೊಂಡು, ಆ ಮನೆ ಕೋಳ್ಕಂಬಕ್ಕೆ ದೊಡ್ಡಬ್ಬದ ದಿನಾ ಕದ್ರು ಕಟ್ಕೊಂಡು ಸುಖವಾಗಿ ಉಳೀಲಿ. ಎಲ್ಲದ್ನೊ ಹೇಗಿದ್ನೊ, ಮದ್ವೆ ಆಜ್ನೊ, ಮಕ್ಕಳು ಆಜ್ವೊ, ಇಲ್ವೋ........ ಅಂವಾ ನಾ ಸಾಯೋದ್ರೊಳಗಾದ್ರೂ ಬಂದು ನನ್ನ ಹೆಣಕೆ ಬೆಂಕಿ ಕೊಟ್ಟಿದ್ರೆ ನನಗೆ ಸತ್ತಮೇಲಾದ್ರೂ ಒಂದು ಸದ್ಗತಿ ಅನ್ನುದು ಸಿಗ್ತಿತ್ತೋ.......... ಇಲ್ಲೆ ಅಂದ್ರೆ ಪಿಶಾಚಿಯಾಗೇ ಸತ್ತಮೇಲೂ ಉಳಿತ್ನೊ....... ಹೇಂಗೋ ಎನೋ........." (ಮಹಾಬಲಮೂರ್ತಿ ಕೊಡ್ಲೆಕೆರೆ; ಮತ್ತೊಂದು ಮೌನ; ೧೯೯೨; ಪುಟ ೫).

ಹೀಗೆ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಯ ಕತೆಗಾರರು ತಮ್ಮ ಕತೆಗಳಲ್ಲಿ ಸಮುದಾಯದ ಭಾಷೆಯ ಸೊಗಡನ್ನು ಚಿತ್ರಿಸುವ ಮೂಲಕ ಹವ್ಯಕ ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲಿದ್ದಾರೆ. ಮಾತ್ರವಲ್ಲದೆ ಹವ್ಯಕ ಭಾಷೆಯ ಸೊಗಸನ್ನು ಸಮಾಜಕ್ಕೆ ಪರಿಚಯಿಸುವ ಪ್ರಯತ್ನವನ್ನೂ ಮಾಡಿದ್ದಾರೆ.

ತುಳು ದ್ರಾವಿಡ ಭಾಷಾ ಕುಟುಂಬಕ್ಕೆ ಸೇರಿದ ಒಂದು ಸ್ವತಂತ್ರ ಭಾಷೆ. ಇದು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು, ಉಡುಪಿ, ಕಾರ್ಕಳ. ಪುತ್ತೂರು, ಬೆಳ್ತಂಗಡಿ, ಬಂಟ್ವಾಳ, ಸುಳ್ಯ ತಾಲೂಕುಗಳಲ್ಲಿ ವಿಶೇಷವಾಗಿ ಪ್ರಚಲಿತವಾಗಿದೆ. ಈ ಪ್ರದೇಶದಲ್ಲಿ ವಾಸಿಸುವ ಹವ್ಯಕರು ತಮ್ಮ ಕತೆಗಳಲ್ಲಿ ಪ್ರಾದೇಶಿಕ ಭಾಷೆಯಾದ ತುಳುವನ್ನು ಬಳಸಿದ್ದಾರೆ. ಶ್ರೀಕೃಷ್ಣ ಚೊಕ್ಕಾಡಿಯವರ 'ನಿರೀಕ್ಷೆ', ಜಿ.ಎಸ್. ಉಬರಡ್ಕರವರ 'ಒಂದು ಬಡಕಾಗೆಯ ಕತೆ' ಹಾಗೂ ಗಂಗಾಪಾದೇಕಲ್‌ರವರ 'ಹೀಗೊಂದು ಲೋಕವುಂಟು' ಕತೆಗಳಲ್ಲಿ ತುಳುಭಾಷೆಯ ಪದಗಳ ಬಳಕೆ ಕಂಡುಬರುತ್ತದೆ. ಚೊಕ್ಕಾಡಿಯವರ 'ನಿರೀಕ್ಷೆ' ಕತೆಯಲ್ಲಿ ಅಂಗಾರೆ ಮತ್ತು ಊರ ಗೌಡರ ಮಗ ಸಂಭಾಷಣೆ ನಡೆಸುವ ಸಂದರ್ಭದಲ್ಲಿ ತುಳು ಪದಗಳ ಬಳಕೆಯಾಗಿದೆ. ಉದಾ: "ದಾನೆ ಎಟ್ಯಳೆ, ಎಂಕ್‌ಳೆಗ್‌ಲಾ ಮಾನ ಮುರ್ಯಾದೆ ಪಂಡ್‌ದಿದ್ಯಾ? ಎಡ್ಡೆಟ್ ಒಂಜಿ ಮದಿಮೆ ಆತ್ ಸುಖೋಟು

ಇಪ್ಯಾರಾವಂದ" ಎಂದಿದ್ದಳು. (ಏನು ಗೌಡರೇ? ನಮಗೂ ಮಾನ ಮರ್ಯಾದೆ ಎಂದಿಲ್ಲವೇ? ಒಳ್ಳೆಯದರಲ್ಲಿ ಒಂದು ಮದುವೆಯಾಗಿ ಸುಖದಲ್ಲಿರಬಾರದೇ?). ಮದುವೆಯಾಗಲಿಕ್ಕಾದರೂ ನಿನ್ನಂತಹ ಹೆಣ್ಣು ಸಿಗಬೇಕಲ್ಲಾ ಎಂದು ಸಪ್ಪೆಯಾಗಿ ಹಲ್ಲು ಕಿರಿದಿದ್ದ ಗೌಡರ ಮಗನಿಗೆ 'ಅಪ್ಪಗ ಎನ್ನನೇ ಚುಳ್ಳೇಲು ಮಳ್ತೊಣಿ ದಟ್ಟಿಗೆಗ್ ಬತ್ತ್‌ದಿಪ್ಪೋಳಿ ದಾನೆ' (ಹಾಗಾದರೆ ನನ್ನನ್ನೇ ಮದುವೆಯಾಗಿ ಗುಡಿಸಲಿಗೇ ಬಂದಿರಬಹುದು ಏನು?)" (ಶ್ರೀಕೃಷ್ಣ ಚೊಕ್ಕಾಡಿ; ನಿರೀಕ್ಷೆ; ೧೯೭೯; ಪುಟ ೪). ಗಂಗಾ ಪಾದೇಕಲ್‌ರವರ 'ಹೀಗೊಂದು ಲೋಕವುಂಟು' ಕತೆಯಲ್ಲಿ ಕಥಾನಾಯಕ ಮಾಧವನ ತೋಟದಲ್ಲಿ ಕರೆಂಟ್ ತಂತಿಯ ಮೇಲೆ ಮರಬಿದ್ದ ಸಂದರ್ಭದಲ್ಲಿ ಕೆಲಸದಾಳು ಮಾಧವನೊಂದಿಗೆ ಸಂಭಾಷಣೆ ನಡೆಸುವಾಗ ಲೇಖಕಿ ತುಳುಭಾಷೆಯನ್ನು ಬಳಸಿದ್ದಾರೆ. "ಅವನು ಬಂದವನೇ ಅವಸರದಲ್ಲಿ ಹೇಳಿದ 'ಧನಿಕುಲೆ, ಆ ಪರತ್ ಕುಕ್ಕುದ ಮರ ಪೊಳಿದ್, ವಯರ್‌ದ ಮಿತ್ತ್ ಬೂರ್‌ದೆಂಡ್' ಮಾಧವ ದಿಗ್ಭ್ರಾಂತನಾದ. ಹೌದೇ? ಆದ್ದರಿಂದಲೇ ನಿನ್ನೆ ರಾತ್ರಿ ಹೋದ ಕರೆಂಟು ಇನ್ನೂ ಬಂದಿಲ್ಲವೆ? 'ಅಂದೋ? ಅತ್ ಪೊಕ್ಕಡೆನೋ?' ಅವನು ಕೇಳಿದಾಗ ಹೇಳಿದ ಚೆನ್ನ 'ಸತ್ಯಗ್‌ಲಾ ಪೊಕ್ಕಡೆದಾಯೆ ಪಣ್ಪುನೆ? ಇನಿ ಬೊಲ್ಪುಗ್ ಎನ್ನ ಬುಡದಿ ಬೊಜಿಕ್ಕೆರೆಗೆ ಪೋತಿತ್ತಾಳ್. ಅಪಗ ಅಳೇಗ್ ತೋಜ್‌ಂಡ್. ಆಳ್ ಎನಡ ಪಂಡಿ ಬುಕ್ಕೊ ಯಾನ್‌ಲ ಪೋದು ತೂಯೆ. ಇತ್ತೆ ಅಲ್ಪಡ್ದ್ ಬತ್ತಿನೆ ಯಾನ್'. 'ಓ ದೇವೆರೇ' ಉದ್ಗಾರ ಎತ್ತಿದ ಮಾಧವ, ಜತೆಗೇ, ಕೇಳಿದ 'ದಾದ ಆತ್‌ಂಡ್?' 'ಶ್ಯನ್ ದಾಯೆ ಪಣ್ಪನೆ' ಚೆನ್ನ ಮುಖ ಬಾಡಿಸಿ ವಿವರಿಸಿದ. 'ಒಂಜಿ ಕಂಬ ಪೊಲಿದ್, ಇಡೀ ತಿರ್ಗ್ ಬೂರ್‌ದ್‌ಂಡು. ಆತ್ ಮಲ್ಲ ಮರನ್ ಕಡ್ತ್‌ದ್ ದೆತ್ತ್‌ದ್ ಬುಕ್ಕೊನೇ ಬೇತೆ ಕಂಬ ಪಾಡೋಡಾತೆ. ಅತ್ ಬೇಲೆಗ್ ಆಜಿ ಜನ ರಡ್ಡ್‌ದಿನ ಆಂಡಲಾ ಮಲ್ಪುವೆರ್" (ಗಂಗಾ ಪಾದೇಕಲ್; ವಾಸ್ತವ; ೧೯೯೬; ಪುಟ ೧೧೭, ೧೧೮).

"ಬಲ್ಲಿರೇನಯ್ಯ ಬಾರೆದ ಕಂಡೆ ! (ಬಾಳೆಯ ಗದ್ದೆ !) ಕೇಳಿದರೇನಯ್ಯ ಕೇನೆದ ಕಂಡೆ ! (ಕೇನೆಯ ಗದ್ದೆ)" (ಜಿ.ಎಸ್. ಉಬರಡ್ಕ; ಚಿಕ್ಕದೊಂದು ಗಿಳಿಯ ಸಾಕಿ; ೧೯೮೨; ಪುಟ ೬೩). ತಿಮ್ಮನು ಕಾಗೆಯನ್ನು ಹಿಡಿದ ಸಂದರ್ಭದಲ್ಲಿ ಅತ್ಯುತ್ಸಾಹದಿಂದ ಹೇಳುವ ಮಾತುಗಳಲ್ಲಿ ಲೇಖಕರು ತುಳು ಭಾಷೆಯ ಕುಚೋದ್ಯ ಪದಗಳನ್ನು ಬಳಸಿದ್ದಾರೆ. ಮೇಲಿನ ಕತೆಗಳಲ್ಲಿ ಲೇಖಕರು ಕೆಳವರ್ಗದ ಜನರು ಮಾತನಾಡುವ ಸಂದರ್ಭದಲ್ಲಿ ತುಳುಭಾಷೆಯನ್ನು ಬಳಸಿದ್ದಾರೆ.

ಸುಬ್ರಾಯ ಚೊಕ್ಕಾಡಿಯವರ 'ಬಲಿ' ಹಾಗೂ ಜಿ.ಎಸ್. ಉಬರಡ್ಕ ರವರ 'ನೆಂಟಸ್ತಿಕೆ' ಕತೆಗಳಲ್ಲಿ ಸುಳ್ಯ ಪರಿಸರದ ಗೌಡ ಜನಾಂಗವರು ಬಳಸುವ ಅರೆಗನ್ನಡ (ಅರೆಕನ್ನಡ) ಭಾಷೆಯ ಬಳಕೆ ಕಂಡುಬರುತ್ತದೆ. "ಅಯ್ಯ, ಕತೆ ಕಿತಾಪತಿ ಆಗುಟ್ಟು. ನಿಮ್ಮ ಹಸುವಿನ ಆ ಸ್ಯಾವಿನ ಹುಲಿ ಹಿಡ್ದುಟ್ಟಯ್ಯಾ. ನನ್ನ ಪುಳ್ಳಿಕೂಸಿಗೆ ಜ್ವರ ಬಂದದೇ ಅಂತ ನಾಗರಾಜಯ್ಯನಕ್ಕಲೆ ಬಸ್ಮ ತಾಕೇಂತ ಬೊಳ್ಪಿಗೆ ಹೋಕನಾ...... ಎಂತ ಹೇಳುದಯ್ಯಾ – ದಾರೀಲಿ ಆ ಹಲಸಿನ ಮರ ಇಲ್ಲೇ? – ಅಲ್ಲೇ ಮೇಗಡೆ ಕಂಡದೆ ಹಸುವಿನ ಹೆಣ...... ಇಷ್ಟು ಹಕ್ಕಲೇ ಬಂದ್ ಹಿಡ್ದದ್ ಅಂದರೆ ಇನ್‌ಹೇಂಗಯ್ಯಾ ಬದ್ಕುದು ಇದ್ರ ಉಪದ್ರದಲ್ಲಿ........ ಅದ್ರ ಹೆಣ ಹೊರಿಕೆ...... ನಾ ಈಗ ಸಂಕೇಸಕ್ಕೆ ಹೊಂಟಂವ – ಗಣಪತಿ ಅಣ್ಣನವರಲ್ಲಿ ನಾಳೆ ಬೋಂಟೆ ಮಾಡುವಾಂಗೆ ಹೇಳಿಕೆ....."(ಸುಬ್ರಾಯ ಚೊಕ್ಕಾಡಿ; ಬೇರುಗಳು; ೧೯೭೪; ಪುಟ ೧೧) ಉಗ್ರಾಣಿ ಚೊಲ್ಲಗೌಡ ಕೃಷ್ಣ ಭಟ್ಟರಿಗೆ ಶಾರದೆಯನ್ನು ಹುಲಿ ಹಿಡಿದ ಪ್ರಸಂಗವನ್ನು ಹೇಳುವ ಸಂದರ್ಭದಲ್ಲಿ ಅರೆಗನ್ನಡ (ಗೌಡ ಕನ್ನಡ) ಭಾಷೆಯ ಬಳಕೆ ಕಂಡುಬರುತ್ತದೆ. ಜಿ.ಎಸ್. ಉಬರಡ್ಕರವರ 'ನೆಂಟಸ್ತಿಕೆ' ಕತೆಯಲ್ಲಿ ಒಕ್ಕಲುಗಿತ್ತಿಯವರೊಂದಿಗೆ ರತ್ನಣ್ಣ ನಡೆಸುವ ಸಂಭಾಷಣೆಯಲ್ಲಿ ಗೌಡ ಕನ್ನಡ ಭಾಷೆಯ ಬಳಕೆಯಿದೆ. "ಅದೇ – ದಾರ್ಲಿ ಬಾಕನ (ಬರುವಾಗ) ನಮ್ಮ ಸಣ್ಣಪ್ಪ ಹೇಳ್ದ – ಸೇಸಪ್ಪಯ್ಯನ ಮನೆಗೆ ಅವರ ಸೋದ್ರಳಿಯ ಬಂದಳೋಂತ (ಬಂದಿದ್ದಾರೆ ಅಂತ) ನಿಜ ಆತು ಈಗ. ಹೌದ ಅಯ್ಯ, ನಮ್ಮ ಯಸೋದಕ್ಕನ ಒಮ್ಮೆ ಕರ್ರೊಂಡ್ ಹೋವ (ಹೋಗುವ) ಪಯಿಂಟ್ (Paint) ಗಟ್ಟಿ ಮಾಡ್ಯಪ್ಪ, ನವುಗೆಲ್ಲ (ನಮಗೆಲ್ಲ) ಒಂದು ಗಮ್ಮತ್ತಿನ ಪಾಯಸ ಉಣೋಕೂಂತ (ಊಟ ಮಾಡಬೇಕು ಅಂತ) ಆಗುಟ್ಟು (ಆಗಿದೆ)" (ಜಿ.ಎಸ್. ಉಬರಡ್ಕ; ಚಿಕ್ಕದೊಂದು ಗಿಣಿಯ ಸಾಕಿ; ೧೯೫೨; ಪುಟ ೫೨).

ಸುಬ್ರಾಯ ಚೊಕ್ಕಾಡಿ ಮತ್ತು ಜಿ.ಎಸ್. ಉಬರಡ್ಕರವರು ಸುಳ್ಯ ಪರಿಸರದವರಾದ ಕಾರಣ ಗೌಡಕನ್ನಡ ಭಾಷೆಯನ್ನು ತಿಳಿದವರಾಗಿದ್ದು, ಸ್ವಾಭಾವಿಕವಾಗಿ ತಮ್ಮ ಕತೆಗಳಲ್ಲಿ ಆ ಭಾಷೆಯನ್ನು ಬಳಸಿಕೊಂಡಿದ್ದಾರೆ.

ಜಿ.ಟಿ. ನಾರಾಯಣರಾವ್ ಬರೆದ 'ಸುಬ್ಬಪ್ಪನ ದಯೆ' ಕತೆಯಲ್ಲಿ ಕೊಯಂಬುತ್ತೂರಿನ ವಾಲಗದವರು ಸುಬ್ರಮಣ್ಯದಿಂದ ಜಾತ್ರೆ ಮುಗಿಸಿ ಊರಿಗೆ ತೆರಳುವ

ಸಂದರ್ಭದಲ್ಲಿ ಮಡಿಕೇರಿಯ ಸುಬ್ಬನು ಅವರನ್ನು ಹಿಂಬಾಲಿಸಿದಾಗ, ವಾಲಗದವರು ಅವನನ್ನು ಪ್ರಶ್ನಿಸಿದರು :

"ಎಂಗೆ ಪೋಗಬೇಕು' ಎಂದು ಅರ್ಧ ಅರವ, ಅರ್ಧ ಕನ್ನಡ ಭಾಷೆ ಆಡಿದನು. ಸುಬ್ಬನಿಗೆ ಅರ್ಥವಾಗಲಿಲ್ಲ. 'ಎಲ್ಲಿಕೆ ಹೋಕಬೇಕು' ಎಂದು ಇನ್ನೊಬ್ಬನು ವಿವರಿಸಿ ಕೇಳಿದನು.

'ಗೊತ್ತಿಲ್ಲ' ಎಂದನು ಸುಬ್ಬ.

'ಎಂಗಳ ಒಡನೆ ವರೆಯಾ? ವಾಲಗದವನ ಪ್ರಶ್ನೆ.

'ನಮ್ಮ ಚತೇಲಿ ಪರ್ತೀಯ? ಕನ್ನಡ ಜ್ಞಾನಿ ಕೇಳಿದನು.

'ಹೌದು' ಎಂದನು ಸಂತೋಷದಿಂದ ಸುಬ್ಬ.

'ಅರೆ, ನಾವು ಕೊಯಂಬತ್ತೂರಿಕೆ ಹೋಕುವುದು ಅಲ್ಲಿಗೆ ಪರ್ತೀಯಾ?'.

ಕೊಯಂತ್ತೂರೆಂದರೆ ಏನೆಂದೇ ಸುಬ್ಬನಿಗೆ ಗೊತ್ತಿಲ್ಲ. 'ಹ್ಞೂ' ಎಂದನು.

'ನಿನಗೆ ತಂದೆ ತಾಯಿ ಯಾರೂ ಇಲ್ಲವಾ?'

ಇದಕ್ಕೇನು ಉತ್ತರ ಹೇಳಬೇಕೆಂದು ತಿಳಿಯಲಿಲ್ಲ. ಬಾಯಿಂದ ಮಾತ್ರ 'ಇಲ್ಲ' ಎಂದು ಹೇಳಿ ಹೋಯಿತು.

'ನಮ್ಮ ಜೊತೇಲಿ ಬಂತು ಏನು ಮಡ್ತೀಯಾ?'

'ನೀವ್ಹೇಳಿದ್ದು ಮಾಡ್ತೇನೆ'

'ಮುಂದೆ ಹೋಗು ಹೆದರಬೇಡ' ಎಂದು ತಳ್ಳಿತು ಮನಸ್ಸು.

'ವರಟು ! ವೇಲೆ ಶೆಯ್ಯರುತಕು ಒರು ಪಯ್ಯನಾಚಿ? ಎಂದು ವಾಲಗದವನು ಈ ಸಂಭಾಷಣೆಯನ್ನು ಮುಗಿಸಿದನು." (ಜಿ.ಟಿ. ನಾರಾಯಣರಾವ್; ಕೊಡಗಿನ ಸುಮಗಳು; ೧೯೯೩; ಪುಟ ೧೫, ೧೬). ಮೇಲಿನ ಸಂಭಾಷಣೆಯಲ್ಲಿ ತಮಿಳರು ಮಾತನಾಡುವ ಕನ್ನಡ ಭಾಷೆಯ ಚಿತ್ರಣವನ್ನು ಗುರುತಿಸಬಹುದು.

ಟಿ. ಎಂ. ಸುಬ್ಬರಾಯ ಬರೆದ 'ನಾಟಕ' ಕತೆಯಲ್ಲಿ ಮ್ಯಾಗ್ದಲೀನಾಳ ತಂದೆಯೊಂದಿಗೆ ಹೆಡ್‌ಸಿಸ್ಟರ್ ನಡೆಸುವ ಸಂಭಾಷಣೆಯಲ್ಲಿ ಕ್ರಿಶ್ಚಿಯನ್ ಕೊಂಕಣಿ ಭಾಷೆಯನ್ನು ಬಳಸಿಕೊಳ್ಳಲಾಗಿದೆ. "ತುಮಿ ಕೊಣ್ಣಿ ಬೀಮ್ನ ನಕಾಚಿ, ಮಿ.ಡಿ'ಸೋಜ.

ಅಮ್ಗೆಲಿ ಲೀನಾ ಕೋಣಾಕು ಬಿತ್ತಲ್‌ನಯೀ. ಸೈತಾನ್ ಮುಖಾರಿ ರಬ್ಲಾರಿ ಬಿತ್ತಲ್ನ್‌ಯೀ" (ಟಿ.ಎಂ. ಸುಬ್ಬರಾಯ; ಕೆರೆ; ೧೯೯೭; ಪುಟ ೩೧).

ಬಿ.ಎನ್. ನಾಗರಾಜ ಭಟ್‌ರವರ 'ಹುಣ್ಣಿಮೆಯ ರಜನಿ' ಕತೆಯಲ್ಲಿ ಕುಂದಾಪುರ ಕಡೆಯಿಂದ ಬಯಲಾಟದವರು ಹೆಂಡ, ಬಿರಿಯಾನಿ ಮಾರುವ ಅಂಗಡಿಯಲ್ಲಿ ಕುಳಿತು ಸಂಭಾಷಣೆ ನಡೆಸುವ ಸಂದರ್ಭದಲ್ಲಿ ಕತೆಗಾರರು ಕುಂದಾಪುರ ಕನ್ನಡವನ್ನು ಬಳಸಿದ್ದಾರೆ.

"ಎತ್ ಕಾಣ್ತ್ಯ? ನಮ್ಮ ಮೈಮ್ಯಾಗೆ ಸುರಿತ್ತ್ಯಲ್ಲ ಹೆಂಡನ ! ನಿನ್ನ ಕಣ್ಣೀಗ್ ಕಿಚ್ಚು ಹಿಡ್ಡ್ ಹೋಪ್ಗೆ? ಸರೀ ಕುಡಿಯಾಕೆ ಆತಿಲ್ಯಾನ ?

– ಒಬ್ಬ ಮತ್ತೊಬ್ಬನನ್ನು ಗದರಿಸಿದ.

'ಎಂತಗಂಡೆ, ನಂಗೆ ಬೈಯ್ಯಕೆ ಬತ್ಯಾ? ನಿನ್ನ ಚಮ್ಡುಸುಲ್ದು ಬಿಸಿಲಾಗೊಣ್ಯಕಿದ್ದಿ ಕಾಣೀಗ ?

– ಅವನನ್ನು ದಬಾಯಿಸಿದ.

– "ನಿನ್ನಬ್ಬೀ ಹೊಟ್ಟೆ ಉರ್ದು ಹೋಪ್ಕೆ; ನಾಕ್ ಬಚ್ಚೂ ಕಿದ್ದಿ ಕಾಣ; ಹೊತ್ತಾರಿಂದ ಬೈತಂಕ ಕುಡೀತ್ಲೆ ಇಪ್ದ ?" (ಬಿ.ಎನ್. ನಾಗರಾಜ ಭಟ್; ಹುಣ್ಣಿಮೆಯ ರಜನಿ; ೧೯೭೬; ಪುಟ ೧೦೭, ೧೦೮).

ಹವ್ಯಕರಾಡುವ ಭಾಷೆಯು ಕನ್ನಡದ ಒಂದು ಪ್ರಮುಖ ಸಾಮಾಜಿಕ ಉಪಭಾಷೆ. ಸಾಮಾನ್ಯವಾಗಿ ಶಿಷ್ಟ ಕನ್ನಡದಲ್ಲಿ ಪ್ರಸ್ತುತ ಬಳಕೆಯಲ್ಲಿಲ್ಲದ ಅದೆಷ್ಟೋ ಪದಗಳು ಹವ್ಯಕ ಆಡುನುಡಿಯಲ್ಲಿ ಇಂದೂ ಬಳಕೆಯಲ್ಲಿವೆ. ಹವ್ಯಕ ಕತೆಗಾರರು ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಹವ್ಯಕ ಸಮುದಾಯದವರು ಬಳಸುವ ಅನೇಕ ಪದಗಳನ್ನು ನಮ್ಮ ಕತೆಗಳಲ್ಲಿ ದಾಖಲಿಸಿದ್ದಾರೆ. 'ಅಬ್ಬೆ', 'ಕೇಳುತ್ತು, 'ಮೆಚ್ಚು', 'ನಂಬ್ರ', 'ಚಾಣಿತ್ತಲೆ', 'ಚೆಂಡೆಮುಳ್ಳು', 'ಪಡಿಪ್ಪರೆ', 'ರೋಟು', 'ಕುಪ್ಪಿ', 'ಮೊಳಪ್ಪು', 'ಅರ್ಗೆಂಟು', 'ಕಿರಿಯಬ್ಬೆ', 'ಕುಂಞಿಕತ್ತಿ', 'ಮಂಕಾಡಿಸು', 'ಕೆಪ್ಪಟೆ', 'ಪೀಪಿ', 'ಬೈಸಾರಿ', 'ಓಳಿ', 'ತೋಕು', 'ಹಿಳೆ', 'ಹನಿಹುಂಡು', 'ಪಮ್ಮಳ', 'ಚಾಮಿ', 'ತೊಳಸು' ಮುಂತಾದ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಪರಿಸರದಲ್ಲಿ ಹವ್ಯಕರು ಬಳಸುವ ಪದಗಳನ್ನು ಹವ್ಯಕರು ತಮ್ಮ ಕತೆಗಳಲ್ಲಿ

ಬಳಸಿದ್ದಾರೆ. ಅದೇ ರೀತಿ 'ಬೇಣ', 'ಆಸರಿಗೆ', 'ಗಪ್ಪೆಹೊಡೆ', 'ದೇಹ ಕಿಟಿಕಿಟಿ', 'ಲಗಾಟಿಹೊಡಿ', 'ಕಂಬಳಿ ಕುಡುಗು', 'ಆಮಸಾಣಿ', 'ಭಾನ್ಗಡಿ', 'ಹಂಪ್‌ಕಂಜೂಶಿ' ಮೊದಲಾದ ಉತ್ತರ ಕನ್ನಡದ ಹವ್ಯಕ ಸಮುದಾಯದಲ್ಲಿ ಬಳಸುವ ಪದಗಳನ್ನು ಇಲ್ಲಿನ ಕತೆಗಳಲ್ಲಿ ಗುರುತಿಸಲು ಸಾಧ್ಯ.

ಒಟ್ಟಿನಲ್ಲಿ ಹವ್ಯಕರು ಬರೆದ ಕಥೆಗಳಲ್ಲಿ ಬಳಸಿದ ಭಾಷೆಯು ಆಧುನಿಕ ಶಿಷ್ಟ ಕನ್ನಡವಾಗಿದ್ದು ಅಲ್ಲಲ್ಲಿ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಹವ್ಯಕ ಸಮುದಾಯದ ಆಡು ಮಾತಿನ ಭಾಷೆಯನ್ನು ಬಳಸಿ ವಸ್ತು, ಪಾತ್ರ ಆಶಯಗಳನ್ನು ಸಮರ್ಥವಾಗಿ ಅಭಿವ್ಯಕ್ತಿಸಲು ಪ್ರಯತ್ನಿಸಿದ್ದಾರೆ. ಅಲ್ಲದೆ ಕತೆಯು ಪ್ರಾದೇಶಿಕ ಹಿನ್ನೆಲೆಯಲ್ಲಿ ನಡೆಯುವುದರಿಂದ ಪಾತ್ರಗಳಿಗೆ ಜೀವ ತುಂಬಲು ಅದೇ ಭಾಷೆಯನ್ನು ಇಲ್ಲಿ ಬಳಸಿದ್ದಾರೆ. ಕತೆಗಳ ಪಾತ್ರಗಳನ್ನು ನಿರೂಪಿಸುವ ಸಂದರ್ಭದಲ್ಲಿ ಕತೆಗಾರರು ಬಳಸುವ ತುಳು, ತಮಿಳು, ಕುಂದಾಪುರ ಕನ್ನಡ ಭಾಷೆಗಳು ಕತೆಗಾರರ ಭಾಷಾಜ್ಞಾನವನ್ನು ತೋರಿಸಿಕೊಡುತ್ತವೆ.

ಎಮ್. ಸುಬ್ರಾಯನ್ ಬರೆದ 'ಕುಟ್ಟಿದೊಣ್ಣೆ' ಕತೆಯಲ್ಲಿ ಸಾಂಪ್ರದಾಯಿಕ ಶೈಲಿಯನ್ನು ಗುರುತಿಸಬಹುದು. "ಇಳಿ ವಯಸ್ಸಲ್ಲ; ಯೌವನದ ಹರೆಯ. ಆದರೂ ದಾರಿದ್ರ್ಯ ಪಿಶಾಚಿಯ ಪೀಡೆಗೆ ತುತ್ತಾದ ಆ ಕಮನೀಯ ದೇಹವು ಕಾಂತಿ ವಿಹೀನವಾಗಿದೆ. ಭಾಸುರದುಕೂಲದಿಂದ ಸಿಂಗರಿಸತಕ್ಕ ದೇಹವು ಮಲಿನ ಮೃತ್ತಿಕಾದುಕೂಲವನ್ನು ವಹಿಸಿದೆ. ಕಂಚುಕವು ಛಿದ್ರಪೂರ್ಣವಾಗಿದೆ. ಕಣ್ಣುಕುಗ್ಗಿದೆ. ಕದಪು ಬಿಟ್ಟಿದೆ . ಭೂಷಣವು ಕೇಶಪಾಶವು ನಮ್ರತೆಯನ್ನು ಬಿಟ್ಟಿದೆ. ಹಸಿವು, ಬಾಯಾರಿಕೆಗಳ ಪೆಚ್ಚನ್ನು ದಿನದಿನವೂ ತಿಂದು ಒಡಲು ವೇದನಾಪೂರ್ಣವಾಗಿದೆ". (ಎಮ್. ಸುಬ್ರಾಯನ್; ಕುಟ್ಟಿದೊಣ್ಣೆ; ೧೯೫೨; ಪುಟ ೬).

"ಅವನ ಉಬ್ಬಿದ ಹೊಟ್ಟೆಯನ್ನು ಕಂಡು ಬೋಳಾದ ರುಂಡಭಾಗದಲ್ಲಿ ಫಳಫಳನೆ ಹೊಳೆಯುವ ಸುಕ್ಕಿನುಂಡೆಯಂತಹ ಕಣ್ಣುಗಳನ್ನು ಕಂಡು, ನಾಯ ಕುತ್ತಿಗೆಯ ಪಟ್ಟಾರೆಯಂತೆಯೇ ಇರುವ ಬಲಗೈಯ ಬೆಳ್ಳಿಯ ಬಳೆಗಳನ್ನು ಕಂಡು, ಎಡಗೈಯ ಒನಕೆ ಸುತ್ತಿನಂತಹ ಕಂಬಳಿಯ ನೂಲಿನ ಕಂಕಣವನ್ನು ಕಂಡು ಪ್ರೇತಗಳೆಂದೇನು? ಸಣ್ಣ ಸಣ್ಣ ಮಕ್ಕಳೂ ಕೂಡ ಹೆದರಿ ಹೋಗುವುದಿದೆ". (ರಾ.ಮೊ. ವಿಶ್ವಾಮಿತ್ರ; ಹಳ್ಳಿಯ ಹಳಬರು;

೧೯೫೭; ಪುಟ ೨) ಎಂಬುದಾಗಿ ರಾ.ಮೊ. ವಿಶ್ವಾಮಿತ್ರರು ಮಂತ್ರವಾದಿಯ ವರ್ಣನೆಯನ್ನು ಮಾಡುವಲ್ಲಿ ಹಳ್ಳಿಯಲ್ಲಿ ಕಂಡುಬರುವ ಸಾಮಾನ್ಯ ವಸ್ತುವಿನೊಂದಿಗೆ ಹೋಲಿಸಿದ್ದಾರೆ.

ಸೇಡಿಯಾಪು ಕೃಷ್ಣಭಟ್ಟರು ತಮ್ಮ ಕತೆಗಳ ಶೈಲಿಯ ಕುರಿತು 'ಮುನ್ನುಡಿ'ಯಲ್ಲಿ ಹೀಗೆ ಹೇಳಿಕೊಂಡಿದ್ದಾರೆ :

"'ಸಣ್ಣಕತೆ'ಗೊಂದು 'ತಂತ್ರ'ವೆನಿಸಿಕೊಳ್ಳುವ ಲಕ್ಷಣ(ಟೆಕ್ನಿಕ್)ವುಂಟೆಂದು ವಿಮರ್ಶಕರು ಬರೆದುದನ್ನು ಕಂಡಿದ್ದೇನೆ. ಆ ತಂತ್ರದ ಅರಿವು ನನಗಿಲ್ಲ; ಆದುದರಿಂದ ಇದು ತಂತ್ರಬದ್ಧವಾಗಿಲ್ಲದಿದ್ದರೆ ನನಗೇನೂ ವ್ಯಸನವಿಲ್ಲ. ನಾನು ಸಣ್ಣವನಾಗಿದ್ದಾಗ "ಲಕ್ಷಣಬದ್ಧತೆಯಿಂದ ನಮ್ಮ ರಚನಾ ಪ್ರಪಂಚ ಹಾಳಾಗಿ ಹೋಯಿತು; 'ಉದಧಿ ಪುರಾಧಿಪ ಸುತ ಮಂತ್ರಿ ದೂತಗಮನಾಜಿ' ಗಳಿಂದ ನಮ್ಮ ಪ್ರತಿಭಾಶರಧಿ ಬತ್ತಿತು" ಎಂದು ವಿಮರ್ಶಕರೆಲ್ಲ ಬೊಬ್ಬಿಡುತ್ತಿದ್ದುದನ್ನು ಕೇಳಿದ್ದೇನೆ; ನಾನೂ ತಲೆದೂಗಿ ಕುಳಿತಲ್ಲಿಂದಲೇ 'ಮಮ' ಎಂದಿದ್ದೇನೆ. ಹಾಗಾದರೆ ಇಂದಿನ ತಂತ್ರಗಳಿಂದ ನಮ್ಮ ಸಣ್ಣ ಕತೆ ಕುಂಠಿತವಾಗಲಾರದೆ? ಸಣ್ಣಕತೆ ಎಂದರೆ ದೊಡ್ಡದಲ್ಲದ ಕತೆ; ಎಂದಷ್ಟೇ ಸರಳವಾದ ಅರ್ಥವನ್ನಿಟ್ಟುಕೊಂಡರೆ ಹಿತವೆಂದು ನನಗೆ ತೋರುತ್ತದೆ. ಅವುಗಳನ್ನು ಲಾಕ್ಷಣಿಕರು (ಅಥವಾ ತಾಂತ್ರಿಕರು) ನಾನಾ ವಿಧವಾಗಿ ವರ್ಗೀಕರಿಸಲಿ; ಆದರೆ 'ಸಾಮಾನ್ಯ ವಾಚಕ'ವು 'ಸಣ್ಣಕತೆ'ಯೆಂದೇ ಇರಲಿ. ಇಷ್ಟು ಲಲಿತವಾದ ಹೆಸರಿಗೆ ಅಷ್ಟೊಂದು ನಿರ್ಬಂಧವೇಕೆ? ಅಥವಾ ಯಾವುದೇ ಒಂದು ದೇಶದವರು ತಮ್ಮ ಸಣ್ಣಕತೆಗಳಿಗೆ ಹಾಕಿಕೊಂಡ ನಿರ್ಬಂಧಗಳನ್ನು ನಾವೂ ಹಾಕಿಕೊಳ್ಳಬೇಕೆಂದಿಲ್ಲ. ಚೀನಿ ಹುಡುಗಿ ತನ್ನ ಅಡಿಗಳನ್ನು ಒತ್ತಿಕಟ್ಟಿ ಸುಂದರಿಯೆನ್ನಿಸಿಕೊಂಡರೆ, ನಮ್ಮ ಹುಡುಗಿಯ ತಳಿರಡಿಯನ್ನು ನಾವು ನೋಯಿಸಬೇಕಾಗಿಲ್ಲ. ಈ ನನ್ನ ಬಗೆ ಲಾಕ್ಷಣಿಕರಿಗೆ ಒಪ್ಪದಿದ್ದರೆ, ಇವುಗಳನ್ನು ಯಾರೂ 'ಸಣ್ಣಕತೆ'ಗಳೆಂದು ಕರೆಯುವುದು ಬೇಡ; ಬರಿಯ ಕತೆಗಳೆಂದೇ ಕರೆಯಲಿ; ನನಗೆ ತೃಪ್ತಿ"(ಸೇಡಿಯಾಪು ಕೃಷ್ಣಭಟ್ಟ; ಪಳಮೆಗಳು, ಮೊದಲನೆಯ ಮುದ್ರಣವಾದ ಮುನ್ನುಡಿ; ೧೯೫೫; ಪುಟ ೧, ೨). ಸೇಡಿಯಾಪು ಅವರ ವಾದದಲ್ಲಿ ತನ್ನ ಕಥನದ ಅಥವಾ ಕಥಿಸುವಿಕೆಯಲ್ಲಿ ಅವರು ವಹಿಸುವ ಸ್ವಾತಂತ್ರ್ಯದ ಸಮರ್ಥನೆ ಕಂಡುಬರುತ್ತದೆ.

ಸೇಡಿಯಾಪು ಅವರ ವರ್ಣನಾ ಸಾಮರ್ಥ್ಯಕ್ಕೆ ಚಿತ್ರಕ ಶಕ್ತಿಗೆ ದಾಸಯ್ಯ ಸೆಟ್ಟಿ ಕಟ್ಟಿಸಿದ ಮನೆಯ ಸೊಬಗನ್ನು ಗಮನಿಸಬಹುದು:

"ಹಳ್ಳಿಯ ಹಳಬರ ಸಲಹೆಯಂತೆ ಪಡುವತೆಂಕ ಕಟ್ಟಿನ ಗಹ್ವರ ಸಂನಿವೇಶದಲ್ಲಿ ಹೊಸಮನೆಯೊಂದನ್ನು ಕಟ್ಟಿಸಿದನು. ತಕ್ಕೆಗೆ ಸಿಕ್ಕದ ಚಾವಡಿಗಂಬ, ಹಾಕಿದ ಕನ್ನಗತ್ತರಿಯೇ ಮುರಿಯುವ ಗೋಡೆ, ಎಂತಹ ಗರ್ವಿಷ್ಠನಾದರೂ ಬಗ್ಗಿ ಹೋಗಬೇಕಾದ ತಗ್ಗಿನ ಬಾಗಿಲು. ಹೊಡೆದರೆ ಠಣ್ ಎಂದು ಕಬ್ಬಿಣದಂತೆ ಹೇಳುವ ಬಾಗಿಲಪಡಿ, 'ಅಗೋಳಿ ಮಂಜಣ'ನಿಗೂ ಸದರವಲ್ಲದ ೧೪ ಬಾಗಿಲ ಕಡಗಟ್ಟು, ಕಲ್ಲಹಾಸಿನಂತಹ ಮುಚ್ಚಿಗೆ–ಇಂತೊಪ್ಪುವ ಭದ್ರವಾದ ಮನೆಗೆ ಕೋಳಿ ನಾಯಿಗಳ ಕೋಲಾಹಲವೆಷ್ಟಾಗಿರಬಹುದೆಂಬುದನ್ನು ಊಹಿಸುವುದೇ ಲೇಸು" (ಸೇಡಿಯಾಪು ಕೃಷ್ಣಭಟ್ಟ; ಪಳಮೆಗಳು; ೧೯೫೫; ಪುಟ ೧, ೨). 'ಚೆಣ್ಣೆಮನೆ' ಕಥೆಯಲ್ಲಿ ನವದಂಪತಿಗಳಾದ ಚಂದಯ್ಯ – ನೀಲಮ್ಮರ ಬಗ್ಗೆ ಬರುವ ವರ್ಣನೆ ಹೀಗಿದೆ : " ಎಂಥಾ ಎರಕದ ಗಂಡ ಹೆಂಡಿರು ! ಎಂಥಾ ರೂಪ, ಎಂತಾ ಸಲುಗೆ ! ಚಿನ್ನದ ಬಳೆಯ ಬೋವಿಗಳು ಅವರ ದಂಡಿಗೆಯನ್ನು ನಮ್ಮ ಬೀಡಿನ ಅಂಗಳದಲ್ಲಿ ಹೆಗಲಿಂದ ಕೆಳಗಿಳಿಸಿದೊಡನೆ ಪಾರಿವಾಳಗಳಂತೆ ಅವರು ಹೊರಗೆ ಬಂದು ಚಾವಡಿಯೇರುವ ಸಡಗರವೇನು ? ಇಳಿಹೊತ್ತಿನಲ್ಲಿ ನಮ್ಮ ಬೀಡಿನ ಇದಿರ 'ಬಾಕಿಮಾರ'ಲ್ಲಿ ಜವ್ವನಿಗರು ಚೆಂಡುಕುಟ್ಟುತ್ತಿರುವಾಗ ಆ ಗಂಡಹೆಂಡಿರು ಬಂದು, ಗದ್ದೆಯ ಅಂಚಿನಲ್ಲಿ ಗಂಡುಹೆಣ್ಣಾನೆಗಳಂತೆ ನಿಂದು ನೋಡುವ ಅಂದವೇನು? ನಮ್ಮ ಬೀಡಿನ ಪಡುವಣ ಕೆರೆಯಲ್ಲಿ ಕೈಕೈ ಹಿಡಿದು ಜಳಕವಾಡುವ ಸೊಬಗೇನು ! ಮಾತಿನ ಬೆಡಗೇನು ! ಇದೆಲ್ಲ ನಮ್ಮ ಹಿರಿಯರಿಂದ ತಿಳಿದು ಬಂದ ಮಾತು ಸ್ವಾಮಿ". (ಸೇಡಿಯಾಪು ಕೃಷ್ಣಭಟ್ಟ; ಪಳಮೆಗಳು; ೧೯೫೫; ಪುಟ ೨೦, ೨೧) ಎಂಬಲ್ಲಿನ ಚಿತ್ರಕ ಶಕ್ತಿ ಸೊಗಸಾಗಿದೆ.

'ನಾಗರಬೆತ್ತ' ಕತೆಯಲ್ಲಿ ಸೇಡಿಯಾಪು ಕೃಷ್ಣಭಟ್ಟರು ಕತೆ ಹೇಳುವ ಕಾಲಕ್ಕೂ, ಕತೆ ನಡೆದ ಕಾಲಕ್ಕೂ ಅಂತರವನ್ನು ಕಲ್ಪಿಸಿರುವ ಕಥಾತಂತ್ರವನ್ನು ಬಳಸಿದ್ದಾರೆ. ಕತೆಯ ಪಾತ್ರಗಳೆಲ್ಲ ನಮ್ಮ ಮಧ್ಯದಿಂದಲೆ ಎದ್ದು ಬಂದು ಸಂಭಾಷಣೆಗೆ ಸಿದ್ಧವಾಗುತ್ತದೆ. ಕಥಾನಿರೂಪಣೆಯನ್ನು ಸನ್ನಿವೇಶಕ್ಕೆ ತಕ್ಕಂತೆ ಎಳೆಯ ಕೃಷ್ಣ ಹಾಗೂ ಹಳೆಯಜ್ಜಿ ದೇವಜ್ಜಿ ಇವರ ಮೂಲಕ ಮೂಡಿಸಿದ ಕಥನತಂತ್ರ ಅತ್ಯಂತ ಸೊಗಸಾಗಿದೆ.

"ಸೇಡಿಯಾಪು ಕೃಷ್ಣಭಟ್ಟರ ಕತೆಗಳ ಸ್ವರೂಪ 'ವೊಡ್ಡಾರಾಧನ'ದ ಕತೆಗಳ ಸ್ವರೂಪಕ್ಕೆ ಕಸಿಮಾಡಿಸಿದಂತಿದೆ. ಅವರ ಭಾಷೆಯಂತೂ ಹೊಸನೀರು ಕೂಡಿಸಿದ ಹಳೆಯ ಉಕ್ಕಾಗಿದೆ. ಅವರ ಗದ್ಯಶೈಲಿಯ ಸುಖವನ್ನು 'ಚೆನ್ನೆಮಣೆ', 'ನಾಗರಬೆತ್ತ'ದಂಥ ಕತೆಗಳನ್ನು ಓದಿಯೇ ಅನುಭವಿಸಬೇಕು". (ಕೆ.ಡಿ. ಕುರ್ತಕೋಟಿ; ಯುಗಧರ್ಮ ಮತ್ತು ಸಾಹಿತ್ಯದರ್ಶನ; ೧೯೫೨; ಪುಟ ೨೧೯) ಎಂಬುದಾಗಿ ಹಿರಿಯ ವಿಮರ್ಶಕ ಕುರ್ತಕೋಟಿ ಅಭಿಪ್ರಾಯಪಟ್ಟಿದ್ದಾರೆ.

ಕಡೆಂಗೋಡ್ಲು ಶಂಕರಭಟ್ಟರ ಕತೆಗಳನ್ನು ಓದುವಾಗ ನಮಗೆ ಕಂಡುಬರುವ ಅಂಶವೆಂದರೆ ಅವರು ಕಥನಕಲೆಯ ಬಗ್ಗೆಯಾಗಲಿ, ನಿರೂಪಣೆಯ ಬಗ್ಗೆಯಾಗಲಿ, ನಿರೂಪಣೆ ತಂತ್ರದ ಕುರಿತಾಗಲಿ ವಿಶೇಷವಾಗಿ ತಲೆಕೆಡಿಸಿಕೊಂಡಿಲ್ಲ ಎಂಬುದು. ಅಚ್ಚುಕಟ್ಟಾದ ಕಥಾವಿನ್ಯಾಸ ಅವರ ಕತೆಗಳಲ್ಲಿಲ್ಲ. "ತಂತ್ರ, ಲಕ್ಷಣಗಳ ಕಡೆಗೆ ಶಂಕರಭಟ್ಟರು ತಮ್ಮ ಯಾವ ಕತೆಗಳಲ್ಲಿಯೂ ಲಕ್ಷ್ಯ ಕೊಟ್ಟವರೇ ಅಲ್ಲ. ಅವರ ಕತೆಗಳು ತೆರೆದಿಟ್ಟ ಪುಸ್ತಕದ ಹಾಳೆಗಳಂತೆ; ಬಟ್ಟಂಬಯಲು" (ಎ.ವಿ. ನಾವಡ, (ಸಂ.); ವಾಙ್ಮಯ ತಪಸ್ವಿ; ೧೯೭೭; ಪುಟ ೨೭೧) ಎಂದು ರಾಮಚಂದ್ರ ಉಚ್ಚಿಲರು ಹೇಳಿರುವ ಮಾತುಗಳನ್ನು ಈ ಸಂದರ್ಭದಲ್ಲಿ ನೆನೆಯಬಹುದು.

ಕಡೆಂಗೋಡ್ಲು ಶಂಕರಭಟ್ಟರ 'ಅದ್ದಿಟ್ಟು' ಕಥೆಯಲ್ಲಿ 'ಕಥೆಯಲ್ಲಿ ಕಥೆ' ಹೇಳುವ ತಂತ್ರವನ್ನು ಬಳಸಿಕೊಳ್ಳಲಾಗಿದೆ. ಕಥೆಯನ್ನು ಆರಂಭಿಸುವವನು ಕಥೆಗಾರನೇ ಆದರೆ ಪ್ರಾಥಮಿಕ ಹಿನ್ನೆಲೆಯನ್ನು ಒದಗಿಸಿದ ಮೇಲೆ ಕತೆಗಾರ ಹಿಂದೆ ಸರಿದು ಒಂದು ಪಾತ್ರದ ಮೂಲಕ ಕಥೆ ಹೇಳಿಸುತ್ತಾನೆ. "ನಮ್ಮ ಹುಡುಗಿಯೆಂದು ಹೊಗಳಿಕೊಳ್ಳುವುದಲ್ಲ, ನಾವು ಹತ್ತು ಮಾತಾಡಿದರೆ ಅವಳು ಒಂದು ಮಾತಾಡುವವಳಲ್ಲ. ಈಗಿನ ಹುಡುಗಿಯರಂತೆ ಕೊಂಕು ಕೋರೆಗಳನ್ನು ತಿಳಿಯದವಳು; 'ಮುಟ್ಟಲು ಬಂದರೆ ಕಚ್ಚಲು ಬರುತ್ತದೆ' ಎಂಬ ಏಡಿಯ ವಿಷಯವಾಗಿ ಒಗಟು ಹೇಳುತ್ತಾರಲ್ಲ ! ಹಾಗೆ ಈಗಿನ ಹುಡುಗಿಯರ ಮಾತು ಒಂದಾದರೆ ಹತ್ತು ಉತ್ತರ. ನನ್ನ ಶಾರದೆ – ನನ್ನ ಹಿರಿಯ ಮಗಳು – ನನ್ನ ಯಜಮಾನರ ಪ್ರೀತಿಯ ಬೊಂಬೆ. ಆಕೆಗೆ ಈಗಿನ ಸೋಗೇನೂ ತಿಳಿಯದಮ್ಮ. ಇದೇ ಅವಳ ತಪ್ಪಾಯಿತು ನೋಡು" ಪಾದೇಕಲ್ಲು ವಿಷ್ಣುಭಟ್ಟ ಮತ್ತು ಇತರರು (ಸಂ.)( ಪಾದೇಕಲ್ಲು ವಿಷ್ಣುಭಟ್ಟ ಮತ್ತು ಇತರರು (ಸಂ.)ಕಡೆಂಗೋಡ್ಲು ಶಂಕರಭಟ್ಟ; ಸಮಗ್ರ

ಕಥಾ ಸಂಪುಟ; ೨೦೦೪; ಪುಟ ೩೫) ಎಂಬ ವಾಕ್ಯಗಳು ಶಂಕರ ಭಟ್ಟರ ಕಥೆಯ ನಿರೂಪಣೆಯ ಧಾಟಿ ಮತ್ತು ಭಾಷೆಯ ಬಿಗಿಯನ್ನು ತೋರಿಸಿಕೊಡುತ್ತವೆ. ಶಂಕರಭಟ್ಟರ 'ದೊಡ್ಡಣ್ಣ' ಕತೆಯಲ್ಲಿ ಬದುಕನ್ನು ಎಳೆಯ ಹುಡುಗನೊಬ್ಬನ ದೃಷ್ಟಿಯಿಂದ ನೋಡುವ ಪ್ರಯತ್ನವಿದೆ. "ಸಣ್ಣ ಕಥೆಯ ಯುಗದ ಪ್ರಾರಂಭದಲ್ಲಿ ಮಕ್ಕಳ ಮನಸ್ಸಿನ ರೀತಿಗಳನ್ನು ವಸ್ತುವನ್ನಾಗಿ ಆರಿಸಿಕೊಂಡವರು ಕಡಿಮೆ. ಶಂಕರಭಟ್ಟರ 'ದೊಡ್ಡಣ್ಣ' ಜೀವನವನ್ನು ಮಗುವಿನ ದೃಷ್ಟಿಯಿಂದ ನೋಡುವ ಒಂದು ಪ್ರಯತ್ನ". (ಕಡೆಂಗೋಡ್ಲು ಶಂಕರಭಟ್ಟ; ಸಮಗ್ರ ಕಥಾ ಸಂಪುಟ; ೨೦೦೪; ಪುಟ ೨) ಎಂಬುದಾಗಿ ಪ್ರೊ. ಎಲ್. ಎಸ್. ಶೇಷಗಿರಿರಾವ್ ಅಭಿಪ್ರಾಯಪಟ್ಟಿದ್ದಾರೆ.

"When the lamp is shattered
The light in the dust lies dead –
When the loud is scattered
The rainbow's glory is shed" (ಜಿ. ಶಂಕರಭಟ್ಟ; ಕನ್ನಡಿಯಲ್ಲಿ ಕರೆನಾಡು; ೧೯೫೪; ಪುಟ ೨೫). ಮಲೆಯವರಾದ ಚೆನ್ನಣ್ಣ – ಚೆನ್ನಿ ಪರಸ್ಪರ ಬೆಳೆಸಿದ ಅಕ್ಕರೆಯು, ಮಕರ ಸಂಕ್ರಾಂತಿಯ ಬೇಟೆಯ ಸಂದರ್ಭದಲ್ಲಿ ಚೆನ್ನನ ದುರಂತದಲ್ಲಿ ಕರಗಿಹೋಗುವುದನ್ನು ಹೇಳುವ ಜಿ. ಶಂಕರಭಟ್ಟರು ಬರೆದ 'ಎರಡು ಬೇಟೆ' ಕಥೆಯಲ್ಲಿ ಜನಪದೀಯ ವಸ್ತು ವಿನ್ಯಾಸ ಹೊಂದಿದ್ದಾಗಲೂ ಇಂಗ್ಲಿಷ್ ಸಾಹಿತ್ಯದ ಸಾಲುಗಳನ್ನು ಅಲ್ಲಲ್ಲಿ ಅನುರಣನಾತ್ಮಕ ಅರ್ಥ ವಿನ್ಯಾಸಕ್ಕಾಗಿ ಪೋಣಿಸಿಕೊಂಡಿರುವುದು ಕಂಡುಬರುವುದು.

"ಬದುಕೆಂಬುದು ಕುದುರೆ ಮುಖದ ತುದಿಯಲ್ಲಿ ಹುಟ್ಟಿ ಉಳ್ಳಾಲದಲ್ಲಿ ಕಡಲನ್ನು ಕೂಡುವ ನೇತ್ರಾವತಿಯ ಹಾಗೆ : ಯಾವಾಗಲೋ ಒಂದು ಕಡೆಯಲ್ಲಿ ಆಕಸ್ಮಿಕವಾಗಿ ಜನಿಸಿ, ಎಲ್ಲೆಲ್ಲೋ ಓರೆಕೋರೆಯಾಗಿ ಹರಿದು, ಇಷ್ಟು ಭೂಮಿಯನ್ನು ಹಸನು ಮಾಡಿ, ಇಷ್ಟು ಭೂಮಿಯನ್ನು ಕೊಚ್ಚಿಕೊಂಡು, ಇಳಿಯುತ್ತ ಇಳಿಯುತ್ತ ಕೊನೆಗೆ ಅನಂತವಾದ ಕಡಲಿನಲ್ಲಿ ಮಿಲನವಾಗುವುದು. ಹೇಗೋ ಹುಟ್ಟು, ಎಂಥದೋ ಬಾಳು, ಎಲ್ಲಿಯೋ ಸಾವು. ನದಿಯೋ.........? ಒಮ್ಮೊಮ್ಮೆ – ಹಸಿರಾದ, ಚೆಲುವಾದ ದಡಗಳ ನಡುವೆ ತಿಳಿಯಾಗಿ ಕುಣಿ ಕುಣಿದು ಕಲ್ಲಿಂದ ಕಲ್ಲಿಗೆ ನರ್ತಕಿಯ ಹೆಜ್ಜೆಯಂತೆ ಜಿಗಿದು, ಆಕೆಯ

ಮುಗುಳ್ನಗೆಯಂತೆ ನೊರೆನೊರೆಯಾಗಿ ನಲಿಯುತ್ತ ಹೋಗುವುದು – ಜೀವ ನಿರ್ಝರ ! ಒಮ್ಮೊಮ್ಮೆ – ಮಳೆಗಾಲದ 'ಬೊಳ್ಳ'ದ ಅಬ್ಬರಕ್ಕೆ ಅವೇಶಗೊಂಡು ದಡಮೀರಿ ಸೊಕ್ಕಿ ಹರಿದು, ಸಿಕ್ಕಿದ ಪೈರು ಪಚ್ಚೆಗಳನ್ನು ಹತ್ತಿಕ್ಕಿ ಕತ್ತರಿಸಿ ತನ್ನ ಡೊಳ್ಳಿನಲ್ಲಿ ತುಂಬಿಸಿಕೊಂಡು ಹೋಗುವುದು – ಬದುಕಿನ ಹೊನಲು ! ಒಮ್ಮೊಮ್ಮೆ ಬೇಸಗೆಯಲ್ಲಿ ನೀರು ಬತ್ತಿ, ಒಣಗಿ, ಸತ್ತೂ ಸಾಯದೆ ಬೀದಿಯಲ್ಲಿ ಬಿದ್ದ ರೋಗಿಯ ಬತ್ತಲೆ ಮೈಯ ಕೊಳೆತ ಹುಣ್ಣುಗಳಂತೆ ಮರಳು ಕಲ್ಲುಗಳನ್ನು ಬಿಸಿಲಿಗೊಡ್ಡಿ ಬಡವಾಗಿ, ಬಡಕಲಾಗಿ ತೆವಳುತ್ತ ಹರಿಯುವುದು– ಬಾಳಹೊಳೆ !" (ಜಿ. ಶಂಕರಭಟ್ಟ; ಕನ್ನಡಿಯಲ್ಲಿ ಕರೆನಾಡು; ೧೯೫೪; ಪುಟ ೧೦, ೧೧). ಮೇಲಿನ ಮಾತುಗಳಲ್ಲಿ ಶಂಕರಭಟ್ಟರು ಮಾನವ ಬದುಕಿನ ವಿಶ್ಲೇಷಣೆಯನ್ನು ಮಾಡಿದ್ದಾರೆ.

ದೇವಾಂಗನಾ ಶಾಸ್ತ್ರಿಯವರ ಕಥನ ಕಲೆಯ ವಿಭಿನ್ನ ಮಾದರಿಯನ್ನು ಪರಿಚಯಿಸುವ ಘಟನಾ ಪ್ರಧಾನಕತೆ 'ಬಯಲಾಟ'. ಕರಾವಳಿ ಜಿಲ್ಲೆಯ ಜನಪ್ರಿಯ ಪ್ರಾಚೀನ ರಂಗಕಲೆ ಯಕ್ಷಗಾನ (ಲೇಖಕಿ 'ಬಯಲಾಟ'ವೆಂದು ಕರೆದಿದ್ದಾರೆ.) ತಾವು ಸ್ವತಃ ಕಂಡು ಆನಂದಿಸಿದ ಯಕ್ಷಗಾನದ ರಸವತ್ತಾದ ಅನುಭವವನ್ನು ಕಥೆಯನ್ನಾಗಿಸಿದ್ದಾರೆ. ಹಾಡು – ಕುಣಿತ – ಚೆಂಡೆ – ಮದ್ದಳೆಯ ಕಿವಿಗಡಚಿಕ್ಕುವ ನಾದಕ್ಕೆ ತಕ್ಕಂತೆ ಕುಣಿಯುವ ಪಾತ್ರಗಳ ಬಣ್ಣಬಣ್ಣದ ವೇಷಭೂಷಣಗಳು, ಭಾಗವತರ ಏರುಧ್ವನಿಯ ಹಾಡುಗಾರಿಕೆಗೆ ಕುಣಿದು ಕುಪ್ಪಳಿಸಿ ಗಿರಗಿರನೆ ಸುತ್ತುತ್ತ ನರ್ತಿಸುವ ದೇವ – ರಾಕ್ಷಸ ಪಾತ್ರಗಳ ಅಮೋಘ ಅಭಿನಯ ಕೌಶಲ್ಯ ಇತ್ಯಾದಿ ಯಕ್ಷಗಾನವು ನಿರ್ಮಿಸುವ ಚಿತ್ತಾಕರ್ಷಕ ಭವ್ಯ ಪ್ರಪಂಚದ ಅವಿಸ್ಮರಣೀಯ ಅನುಭವಗಳನ್ನು ಲೇಖಕಿ ಸವಿವರವಾಗಿ ಬಿಚ್ಚಿಡುವಲ್ಲಿ ಅವರ ಕಲೆಯ ಪರಿಜ್ಞಾನ ವ್ಯಕ್ತವಾಗಿದೆ. ಯಕ್ಷಗಾನ ಕುಣಿತದ ವೈವಿಧ್ಯವನ್ನು ಲೇಖಕಿ ವರ್ಣಿಸುವ ರೀತಿ ಹೀಗಿದೆ : "ಅರ್ಧ ವರ್ತುಲಾಕಾರವಾಗಿ ಸರಿದು ನಡೆವ ಮೇಲು ಜಾರಿಕೆಯ ಕುಣಿತ, ಕಾಲಿನ ಹಿಮ್ಮಡಿಚು – ಮುಮ್ಮಡಿಚಿನ ಹಾಗೂ ಹಗುರ ಹಾರಿಕೆಯ ಹಿನ್ನಡೆ – ಮುನ್ನಡೆಯ ಕುಣಿತ, ಸುತ್ತು ಸುಳುವಿನ ಆವೇಶದ ಕುಣಿತ, ಕುಣಿತದ ವಿರಾಮದ ಕೊನೆಯ ಕುಪ್ಪಳಿಕೆ" (ದೇವಾಂಗನಾ ಶಾಸ್ತ್ರಿ; ವೇಣೀ ಸಂಹಾರ; ೨೦೦೫; ಪುಟ ೮೪) ಇತ್ಯಾದಿ ಕುಣಿತಗಳ ಲಯಗಾರಿಕೆಯನ್ನು ಭಾಷೆಯಲ್ಲಿ ಅಭಿನಯಿಸುವ ಶೈಲಿ ಗಮನ ಸೆಳೆಯುತ್ತದೆ.

ಕಥೆ – ಕವನಗಳಿಗೆ ಸಂಖ್ಯಾಸೂಚಿ ಶೀರ್ಷಿಕೆಗಳನ್ನು ಸೂಚಿಸಿರುವುದು ನವೋದಯ ಲೇಖಕರ ಒಂದು ವಿಶಿಷ್ಟ ವಿಧಾನವೆನಿಸುತ್ತದೆ. ಇಡೀ ಕತೆಯ ಆಶಯವನ್ನು ಸಾಂಕೇತಿಕವಾಗಿ ಸೂಚಿಸುವ ಸಂಖ್ಯಾಸೂಚಿ ಶೀರ್ಷಿಕೆಗಳು ತಮ್ಮ ಹೊಸ ಅರ್ಥ ಸಾಧ್ಯತೆಯಿಂದ ಧ್ವನಿಪೂರ್ಣವೆನಿಸುತ್ತದೆ. ಉದಾಹರಣೆಗೆ ಶ್ಯಾಮಲಾದೇವಿ ಬೆಳಗಾಂವಕರ್ ಅವರ ಸಣ್ಣಕತೆ 'ಮೂರುನೂರ ಅರವತ್ತೈದು' ೧೯೫೦–೬೦ ದಶಕದಲ್ಲಿ ಬರೆದ ಕತೆ. ಪ್ರಶ್ನೋತ್ತರ ರೂಪದಲ್ಲಿರುವ ಈ ಸಣ್ಣಕತೆಯು ವೈದ್ಯನೊಬ್ಬನು ವಿವಾಹವನ್ನು ವ್ಯವಹಾರವಾಗಿಸಿಕೊಂಡು, ಹಣ ಗಳಿಕೆಯ ಉದ್ದೇಶದಿಂದ ವಿವಾಹಾರ್ಥವಾಗಿ 'ಮೂರುನೂರಾ ಅರವತ್ತೈದು' ಕನ್ಯಾ ಪರೀಕ್ಷೆ ನಡೆಸಿದ್ದನ್ನು ವ್ಯಂಗವಾಗಿ ಚಿತ್ರಿಸುತ್ತದೆ. ಅದೇ ರೀತಿ ದೇವಾಂಗನಾ ಅವರ 'ನಾಲ್ಕುನೂರು' ಕತೆಯ ಶೀರ್ಷಿಕೆ ಸಾಂಕೇತಿಕತೆಯಿಂದ ಕೂಡಿದ್ದು ಕತೆಯ ಆಶಯವನ್ನು ಧ್ವನಿಸುವಲ್ಲಿ ಪೂರಕವಾಗಿದೆ.

ದೇವಾಂಗನಾ ಶಾಸ್ತ್ರಿಯವರು ಬರೆದ 'ಪುಣ್ಯದಫಲ' ಪತ್ರರೂಪದ ಕಥನ ತಂತ್ರದಲ್ಲಿ ಹೆಣೆಯಲಾದ ಚಿಕ್ಕಕತೆ. ಕಥಾನಾಯಕಿ 'ಸರೂ' ಗೆಳತಿ ಮಹಾಲಕ್ಷ್ಮಿಗೆ ತನ್ನ ಅಂತರಂಗದ ವೇದನೆಯನ್ನು ನಿರೂಪಿಸುವ ಕರುಣ ಕಥೆಯಿದು. ಪ್ರಶ್ನೋತ್ತರ ರೂಪದಲ್ಲಿ ಕತೆ ಬರೆಯುವ ತಂತ್ರ ನವೋದಯ ಕತೆಗಳ ವಿಶಿಷ್ಟ ವಿನ್ಯಾಸ. ಪ್ರಸಿದ್ಧ ಕತೆಗಾರರೆಲ್ಲರೂ ಈ ತಂತ್ರವನ್ನು ಬಳಸಿಕೊಂಡಿದ್ದಾರೆ. ಕೊಡಗಿನ ಗೌರಮ್ಮನವರ 'ಒಂದು ಪುಟ್ಟ ಚಿತ್ರ' ಸರಸ್ವತಿ ಬಾಯಿ ರಾಜವಾಡೆಯವರ 'ಸಹೋದರಿಗೆ ಓಲೆಗಳು', ಶಾಂತದೇವಿ ಮಾಳವಾಡರ 'ತಂಗಿಗೆ ಬರೆದ ಪತ್ರಗಳು', ಸರಸ್ವತಿದೇವಿ ಗೌಡರ ಅವರ 'ಗೆಳತಿಗೆ ಬರೆದ ಓಲೆಗಳು' ಪತ್ರ ಕಥನದ ಮಾದರಿಯ ರಚನೆಗಳು. ಲೇಖಕಿಯರ ಇಂಥ ರಚನೆಗಳಿಗೆ ಸ್ತ್ರೀ ಬದುಕಿನ ಸಂಕೀರ್ಣ ಸಮಸ್ಯೆಗಳೇ ವಸ್ತುವಾಗಿವೆ. ಹೊರ ಪ್ರಪಂಚದ ನಿರ್ದಯ ಮನಸ್ಸಿಗೆ ಮುಟ್ಟಲಾರದ ಸ್ತ್ರೀಬದುಕಿನ ತಾಪ–ತಲ್ಲಣಗಳನ್ನು ಸಮಾನ ಮನಸ್ಸುಗಳು ವಿನಿಮಯ ಮಾಡಿಕೊಳ್ಳುವ ಸಂತೈಸಿಕೊಳ್ಳುವ ವಿಧಾನ ಬಹುಪಾಲು ಪತ್ರಕಥನಗಳ ಸ್ವರೂಪವಾಗಿವೆ. ದೇವಾಂಗನಾ ಅವರ 'ಪುಣ್ಯದಫಲ' ಇದೇ ಮಾದರಿಯ ಕತೆ.

ಕೊಡಗಿನ ಗೌರಮ್ಮನವರ ಕತೆಗಳಲ್ಲಿ ಕಂಡುಬರುವ ಪಾತ್ರಗಳು, ಬೆಳೆಸುವ ಭಾಷೆ ಪ್ರೌಢವಾಗಿರದಿದ್ದರೂ ಕೃತಕವಲ್ಲದ ಭಾಷೆಯನ್ನು ಬಳಸುವುದು ವಿಶೇಷವೆನಿಸುತ್ತದೆ.

ಭಾವನಾ ಪ್ರಪಂಚದ ಲಹರಿಯಲ್ಲಿ ಇವರ ಅನೇಕ ಕತೆಗಳು ವಿಸ್ತಾರಗೊಳ್ಳುತ್ತಾ ಹೋಗುತ್ತವೆ. ಗೌರಮ್ಮನವರ ಕತೆಗಳಲ್ಲಿನ ಪತ್ರ ವಿವರಗಳು ಆಸಕ್ತಿಕರವಾಗಿದೆ. ಇಂದು ತೀವ್ರಗತಿಯಲ್ಲಿ ಬೆಳವಣಿಗೆಯಾಗುತ್ತಿರುವ ಸಂವಹನ ಮಾಧ್ಯಮಗಳು (ಟೆಲಿಫೋನ್, ಮೊಬೈಲ್) ಮಾನವೀಯ ಸಂಬಂಧಗಳ ಪರಿಕಲ್ಪನೆಗೆ ಹೊಸ ಭಾಷ್ಯವನ್ನು ಸೃಷ್ಟಿಸುತ್ತಿವೆ. ಈ ಘಟ್ಟದಲ್ಲಿ ಸಂಬಂಧಗಳ ಬೆಸೆಯುವಿಕೆ ಪೂರಕವಾಗಬಲ್ಲ ಪತ್ರಲೇಖನಗಳು ಅತ್ಯಂತ ಅನಿವಾರ್ಯ. ಗೌರಮ್ಮನವರ ೨೧ ಕಥೆಗಳಲ್ಲಿ ೬ ಕಥೆಗಳು ಪತ್ರ ಮುಖೇನ ವಿಸ್ತೃತಗೊಂಡಿರುವುದು ಗಮನಾರ್ಹ. ಅದು ಪ್ರೇಮಪತ್ರ ಅಥವಾ ಆತ್ಮ ನಿವೇದನೆಯೇ ಇರಲಿ, ಅಥವಾ ಆತ್ಮಹತ್ಯೆಯ ಟಿಪ್ಪಣಿಯೇ ಆಗಿರಲಿ ಎಲ್ಲರೂ ವಸ್ತುಗಳ ಒಕ್ಕಣೆಯಲ್ಲಿ ಚಿತ್ರಿತವಾಗಿದೆ. ವಿದ್ಯಾವಂತ ಯುವಕ ಯುವತಿಯವರಿಂದ ಹಿಡಿದು ವೇಶ್ಯೆ ರಾಜಮ್ಮನವರೆಗೂ ಎಲ್ಲವೂ ಪತ್ರರಚನೆಯನ್ನು ತಮ್ಮ ಭಾವನೆಗಳ ಮಾಧ್ಯಮವನ್ನಾಗಿ, ನಿವೇದನೆಗೆ ವಾಹಕವನ್ನಾಗಿ ಮಾಡಿಕೊಂಡಿದ್ದಾರೆ. ಕೌಟುಂಬಿಕ ಸರಸ– ವಿರಸ, ಶಿಕ್ಷಣದ ಮಹತ್ತ್ವ, ಹೆಣ್ಣು – ಮಕ್ಕಳಿಗೆ ಆಸ್ತಿಹಕ್ಕು, ಹೆಣ್ಣಿಗೆ ಅಗತ್ಯವಿರುವ ಆರ್ಥಿಕ ಸ್ಥಾನಮಾನಗಳು, ಲೈಂಗಿಕ ಶೋಷಣೆ ಇತ್ಯಾದಿಗಳನ್ನು ಪತ್ರ ವಿವರಗಳ ಮೂಲಕವೇ ಕಥೆಯಾಗಿ ಚಿತ್ರಿಸಿದ್ದಾರೆ .

ಕಥಾನಿರೂಪಣದ ಈ ಹೊಸ ಸಾಹಿತ್ಯ ಪ್ರಕಾರವನ್ನು ಪ್ರಸ್ತಾವಿಸುತ್ತಾ ವಿದ್ವಾಂಸರಾದ ಪಂಡಿತ ಮುಳಿಯ ತಿಮ್ಮಪ್ಪಯ್ಯನವರು : "ಇವು ಕಾಗದದ ಪತ್ರಗಳೇ ಆದರೂ ಬರೆದವರ ಜಾಣ್ಮೆಯಿಂದಾಗಿ 'ಸಾಹಿತ್ಯ'ದ ಸಾಲಿನಲ್ಲಿ ಸೇರಿವೆ. ಕನ್ನಡದಲ್ಲಿ ಇದೊಂದು ಹೊಸದಾರಿ. ಬರೆದವರ ವಿಶಿಷ್ಟತೆ, ಪ್ರಾಯ ಮೊದಲಾಗುವನ್ನಣಿಸಿದರೆ ಇವರು ಕನ್ನಡ ಬರಹಗಾರರೊಳಗೆ ಒಂದೆಡೆಯನ್ನು ಪಡೆದುಕೊಳ್ಳುವರೆಂದು ತೋರುತ್ತದೆ." (ವತ್ಸಲಾ ಎನ್.ಮೂರ್ತಿ (ಸಂ.); ಕೊಡಗಿನ ಗೌರಮ್ಮನ ಕಥೆಗಳು; ೧೯೯೦; ಪುಟ ೬).

ಪತ್ರಗಳಂತೆ ಗೌರಮ್ಮ ಬಳಸಿರುವ ಮತ್ತೊಂದು ತಂತ್ರವೆಂದರೆ ಪತ್ರಿಕೆಗಳ ಸುದ್ದಿಗಳು. ಗಂಡು-ಹೆಣ್ಣಿನ ಸಂಬಂಧದಿಂದ ಉದ್ಭವಿಸಿರುವ ಸಮಸ್ಯೆಗಳು ಕೌಟುಂಬಿಕ ನೆಲೆಯಲ್ಲಿ ಸಿದ್ಧವಾದದ್ದಾದರೂ ಅದು ಕೇವಲ ಖಾಸಗಿ ಸಮಸ್ಯೆಯಾಗಿ ಉಳಿಯದೆ, ಗೌರಮ್ಮನವರ ಕಥೆಗಳಲ್ಲಿ ಸಾಮಾಜಿಕ ಆಯಾಮವನ್ನು ಪಡೆಯುತ್ತವೆ. ಬಾಲವಿಧವೆ

ಶಾಂತೆ ಹುಸಿ ಆಶ್ವಾಸನೆ ತೋರಿಸಿದ ಅತ್ತಿಗೆಯ ಅಣ್ಣನ ಚೆಲ್ಲಾಟದಿಂದ ಗರ್ಭಧರಿಸಿ, ಅವನು ಕೈ ಬಿಟ್ಟಾಗ ಕೆರೆಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ, (ಒಂದು ಪುಟ್ಟ ಚಿತ್ರ). ಪಂಡಿತರ ಮಗಳು ಪಾರ್ವತಿ, ತಾನು ಮನೆಗೆಲಸ ಮಾಡುತ್ತಿದ್ದ ಒಡೆಯನಿಂದಲೇ ಅತ್ಯಾಚಾರಕ್ಕೊಳಗಾಗಿ, ಅವನಿಂದಲೇ ಮನೆಯಿಂದ ಹೊರಗೆ ದಬ್ಬಲ್ಪಟ್ಟಾಗ, ಬೇಸರದಿಂದ ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸುತ್ತಾಳೆ. ಈ ದುರಂತದಿಂದ ಅವಳನ್ನು ಪಾರುಮಾಡಿದ ನೆರಳು ಕೊಟ್ಟವರ ಇಚ್ಛೆಯಂತೆ ಶಾಶ್ವತ ರಕ್ಷಣೆಗಾಗಿ ಮುಸಲ್ಮಾನ ಧರ್ಮ ಸ್ವೀಕರಿಸುತ್ತಾಳೆ, (ಅಪರಾಧಿ ಯಾರು?). ಕಾನ್ವೆಂಟಿನಲ್ಲಿ ಓದುತ್ತಿದ್ದ ಬಾಲಕಿ ಪ್ರಭಾಕುಮಾರಿ ತನ್ನ ಪ್ರಣಯಿಯ ಸಾವಿನಿಂದ ಹತಾಶಳಾಗಿ, ಶಾಲೆ ಬಿಟ್ಟು ಯಾರಿಗೂ ಹೇಳದೆ ಹೊರಹೋಗುತ್ತಾಳೆ, (ಕೆಲವು ಕಾಗದಗಳು). ಬಡತಂದೆಯ ಮಗಳಾಗಿ ವರದಕ್ಷಿಣೆ ಕೊಡಲಾಗದ್ದರಿಂದ ತನ್ನ ತಂದೆಯ ವಯಸ್ಸಿನ ಮುದುಕನ ಮೂರನೆಯ ಹೆಂಡತಿಯಾಗಲು ಒಪ್ಪದೆ ಶಾಂತಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ, (ಆಹುತಿ). ಇವೆಲ್ಲಾ ವಾರ್ತಾಪತ್ರಿಕೆಗಳಲ್ಲಿ ಸುದ್ದಿಯ ತುಣುಕುಗಳಾಗಿ ಕಾಣಿಸಿಕೊಳ್ಳುತ್ತವೆ. ಹೆಣ್ಣು ಅನುಭವಿಸುವ ವರದಕ್ಷಿಣೆಯ ಸಮಸ್ಯೆಯಿರಲಿ, ಪ್ರಣಯ ಭಂಗವಿರಲಿ, ಅತ್ಯಾಚಾರವಿರಲಿ, ವಿವಾಹೇತರ ಸಂಬಂಧದ ಪರಿಣಾಮವಿರಲಿ, ಎಲ್ಲಾ ಸಮಸ್ಯೆಗಳಿಗೂ ಸಾಮಾಜಿಕ ಆಯಾಮಗಳಿವೆಯೆಂಬುದನ್ನು ಕತೆಗಾರ್ತಿ ಈ ತಂತ್ರದ ಮೂಲಕ ಸೂಚಿಸುತ್ತಾರೆ.

ಕೊಡಗಿನ ಗೌರಮ್ಮನ ಕಥೆಗಳ ಬಗ್ಗೆ ಬರೆಯುತ್ತಾ ಕವಿ ಬೇಂದ್ರೆ ಅವರು: "ಕತೆಗಳಲ್ಲಿ ಕಟುತ್ವವಿದ್ದರೂ ರೊಚ್ಚಿಲ್ಲ; ಸೋದ್ದೇಶ ಲೇಖನದ ಸೂಚನೆಯಿದ್ದರೂ ಅವಾಸ್ತವ ಅರ್ಭಟೆಯಿಲ್ಲ. ಕಲೆಯ ನೈಜವನ್ನು ಮರೆಮಾಚಿಲ್ಲ. ಎಲ್ಲೆಲ್ಲಿಯೂ ಹೆಣ್ಣಿನ ಹೃದಯದ ಸಾಕ್ಷಿಯನ್ನು ಸಾರುವ ಈ ಕಥಾಗುಚ್ಚವು 'ಶ್ರೀನಿವಾಸ' 'ಆನಂದ'ರ ಕತೆಗಳನ್ನು ಓದಿದ ವಾಚಕರಿಗೆ ಮನೋವಿಶ್ಲೇಷಣಾತ್ಮಕ ಕತೆಗಳ ಮಾದರಿಯಾಗಿ ಹೃದಯಂಗಮವಾಗುವದೆಂದು ನಾನು ನಂಬಿದ್ದೇನೆ" (ಕೊಡಗಿನ ಗೌರಮ್ಮ; ಕಂಬನಿ; ಮುನ್ನುಡಿ; ೧೯೩೯; ಪುಟ ೬) ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ.

ಕಾಫಿಯ ಕಂಪು, ಕಿತ್ತಳೆಯ ಕೆಂಪು, ಬನಸಿರಿಯ ವರ್ಣನೆ, ಕೊಡವರ ಹಬ್ಬ-ಹರಿದಿನ, ಊಟ – ಉಪಚಾರ, ದೇವರು-ಧರ್ಮ, ಕಂದಾಚಾರಗಳು ಭಾರತೀಸುತರ ಕತೆಗಳಲ್ಲಿ ಧಾರಾಳವಾಗಿ ಕಂಡುಬರುತ್ತದೆ. 'ನಮ್ಮ ಉಳುವುಗಳ ಮೇಲೆ', ಕರೆಗೆ ಓಗೊಟ್ಟ

ಕಾರ್ಡೇಲಿಯಾ', 'ಟೊಳ್ಳು ನಂದಿಮರ', 'ದಾರಕಿತ್ತ ಗಾಳಿಪಟ' ಕಥೆಗಳಲ್ಲಿ ಭಾರತೀಸುತರು Flash Back ತಂತ್ರವನ್ನು ಬಳಸಿದ್ದಾರೆ. "ಪ್ರಸಿದ್ಧ ಅಮೇರಿಕನ್ ಕತೆಗಾರ ಬರ್ಟ್ ಹಾರ್ಟಿಯ ಬಗೆಗೆ ಹೇಳಲಾಗುವ ಕೆಲವು ಮಾತು ನಮ್ಮ ಈ ಕಥೆಗಾರರಿಗೂ ಬಹುಮಟ್ಟಿಗೆ ಅನ್ವಯಿಸುವಂತಿದೆ. ಪ್ರಕೃತಿಯ ಉಡಿಯಲ್ಲಿ ತೊಡೆಯಲ್ಲಿ ನಲಿದು ಬೆಳೆದ raw, rugged flamboyant - ಪಾತ್ರಗಳ ಚಿತ್ರಣದಲ್ಲಿ ಭಾರತೀಸುತರು ಸಿದ್ಧಹಸ್ತರು". (ಕೆ. ಸಚ್ಚಿದಾನಂದಯ್ಯ (ಚಿರಂತನ) (ಸಂ.); ಬ್ರಹ್ಮಗಿರಿ; ೧೯೭೭; ಪುಟ ೨೬೭)ಎಂಬುದು ಭಾರತೀಸುತರ ಕಥನಶೈಲಿಯ ಬಗೆಗೆ ಗೌರೀಶ ಕಾಯ್ಕಿಣಿಯವರ ಅಭಿಪ್ರಾಯ.

ಗಂಗಾಪಾದೇಕಲ್‌ರವರ ಕತೆಗಳ ಕುರಿತು ಅನುಪಮಾ ನಿರಂಜನರ ಅಭಿಪ್ರಾಯ ಈ ಕೆಳಗಿನಂತಿದೆ : "ವಸ್ತುವಿನ ಆಯ್ಕೆಯಲ್ಲಿ ವೈವಿಧ್ಯವಿರುವಂತೆ ಎಚ್ಚರ ವಹಿಸುವ ಲೇಖಕಿ ಕತೆಯ ನಿರೂಪಣೆಯಲ್ಲಿ ಬಲು ಚೊಕ್ಕವಾದ ಪುಟ್ಟ ಪುಟ್ಟ ದೃಶ್ಯಗಳನ್ನು ನಿರ್ವಹಿಸುವುದರಲ್ಲೂ ನಿಸ್ಸೀಮರು. ಉದಾ: 'ಕಂಬನಿ ಜಿನುಗುವೆಡೆಯಲ್ಲಿ ನನ್ನ ಮನೆಯವರ ಯೋಗಕ್ಷೇಮ ವಿಚಾರಿಸಿದ ಪಾತಮ್ಮ', ರಾಜಕೀಯ ಡೊಂಬರಾಟದಲ್ಲಿ ಅಮಾಯಕರು ಬಲಿಯಾಗುವ ರೀತಿ, ಅಂತಹ ಎಡೆಗಳಲ್ಲೂ ವಿಜೃಂಭವಿಸುವ ಮಾನವೀಯತೆ, 'ಮಗು ಭಾರವಾಗಿದ್ರೆ ಸ್ವಲ್ಪ ಹೊತ್ತು ಈ ಕಡೆ ಕೊಡು' ಎಂದು ಗಂಡ ಕೇಳಿದಾಗ , 'ಭಾರವಾಗೋಕೆ ಹೆಚ್ಚು ಹೊತ್ತಿಲ್ಲ' ಎಂದು ಹೆಂಡತಿ ನುಡಿಯುವುದು– ಇವೆಲ್ಲವೂ ಲೇಖಕಿ ವಾಕ್ಯಗಳನ್ನು ಮತ್ತು ಸನ್ನಿವೇಶಗಳನ್ನು ಜಾಣತನದಿಂದ ದುಡಿಸಿಕೊಳ್ಳುವ ರೀತಿಯನ್ನು ಬೊಟ್ಟುಮಾಡಿ ತೋರಿಸುತ್ತದೆ." (ಗಂಗಾಪಾದೇಕಲ್; ಹೆಜ್ಜೆ ಮೂಡದ ಹಾದಿಯಲ್ಲಿ, ಕಥೆಗಳನ್ನು ಓದುವ ಮೊದಲು.......; ೧೯೮೮).

ಅಶೋಕ ಹೆಗಡೆಯವರು 'ಶೇಷವೃತ್ತಾಂತ' ಕತೆಯಲ್ಲಿ ಶಿರಸಿ ಪಟ್ಟಣವನ್ನು ಮಾರಿಕಾಂಬೆಯ ಅಂಗಾಂಗಗಳಿಗೆ ಹೋಲಿಸಿದ ರೀತಿ ಸೊಗಸಾಗಿ ಮೂಡಿಬಂದಿದೆ : "ಮುನ್ನೂರು ವರ್ಷದ ಹಪ್ಪು ಹಪ್ಪು ಮುದುಕಿ ಮೂಕಾಂಬೆಯ ಕೃಪಾಕಟಾಕ್ಷದಲ್ಲಿ ನಲುಗುತ್ತಿರುವ ಶಿರಸಿ, ಕಣ್ಣುಗಳ ಜಾಗದಲ್ಲಿ ಬಾಯುಳ್ಳ, ವಿಲಕ್ಷಣ ಪ್ರಾಣಿಯಂತಿರುವ ಶಿರಸಿ, ಭೀಕರ ಕನಸೊಂದು ತುಂಡಾದ ಕ್ಷಣಗಳ ಕಂಗಾಲಿನಂತೆ. ಈ ವಿರೂಪದ ಪ್ರಾಣಿಯ ಕಾಲುಗಳಾಗಿ ಕೋಟೆ ಊರಿನಂತ ಸಮಸ್ತ ಹಳ್ಳಿಗಳು, ಅದರ

ಪಾದಗಳಾಗಿ ಅಡಿಕೆ ತೋಟಗಳು, ಅದರ ಹೊಟ್ಟೆಯಾಗಿ ವಣಿಕ ಮಂಡಳಿ, ಅದರ ಎದೆ ಕಾಲೇಜು, ಮುಂತಾದವುಗಳು ವಿದ್ಯಾಸಂಸ್ಥೆಗಳಾದರೆ, ಕಣ್ಣುಳ್ಳ ಜಾಗದಲ್ಲಿ ಸ್ಥಾಪಿತವಾದ ಬಾಯಿಯಂತಹ ಅಂಗವೇ ಸಹಕಾರಿ ಸೊಸೈಟಿಗಳು, ಮುಂಡದ ಮೇಲಿನ ಪಾರ್ಶ್ವವನ್ನೆಲ್ಲ ಆವರಿಸಿ ವಿಲಕ್ಷಣತೆಯ ಭೀಕರತೆಯನ್ನು ವೃದ್ಧಿಸುವ ಕೂದಲು ಈ ಇಡೀ ಶಿರಸಿ ಊರಿನ ರಾಜಕೀಯ ಸಮಾಜ". (ಅಶೋಕ ಹೆಗಡೆ; ಒಂದು ತಗಡಿನ ಚೂರು; ೧೯೬೬; ಪುಟ ೪೮, ೪೯).

"ಯಕ್ಷಗಾನ ಬಯಲಾಟಗಳಲ್ಲಿ ನಾನು ನೋಡಿದ್ದ ಪಾಂಡವರ ಮಹಾಪ್ರಸ್ಥಾನದ ಪ್ರಸಂಗ ನನಗೆ ನೆನಪಾಯಿತು. ಈ ಪ್ರಸಂಗದಲ್ಲಿ ಮೊದಲು ದ್ರೌಪದಿ, ನಂತರ ಸಹದೇವ, ನಂತರ ನಕುಲ ಒಬ್ಬೊಬ್ಬರಾಗಿಯೆ ನಡೆಯಲಾರದೆ ದಾರಿಯಲ್ಲಿ ಬಿದ್ದು ಸಾಯುತ್ತಾರೆ. ಕೊನೆಗೆ ಉಳಿಯುವವನು ಧರ್ಮರಾಯನೊಬ್ಬನೆ. ಹಾಗೂ ಅವನ ಜೊತೆಯಲ್ಲೊಂದು ನಾಯಿ. ನಮ್ಮ ಸದ್ಯದ ಪ್ರಸ್ಥಾನದಲ್ಲಿ ಧರ್ಮರಾಯನಂತೆ ಉಳಿಯುವವನು ದಾಮುವೆಂಬುದರಲ್ಲಿ ನನಗೆ ಸಂದೇಹವಿರಲಿಲ್ಲ. ಅಸತ್ಯವಂತನಾದ ಕುಂಜರೋಡಿ ದಾಮೋದರನಿಗೂ ಸತ್ಯವಂತನಾದ ಧರ್ಮರಾಯನಿಗೂ ಅಪೂರ್ವವಾದ ಹೋಲಿಕೆಯೊಂದನ್ನು ನಾನು ಕಂಡದ್ದು ಹೀಗೆ ! ಆದರೆ ನಾನು ದಾರಿಯಲ್ಲಿ ಬಿದ್ದು ಸಾಯುವ ಗುಂಪಿನವನೋ ಅಥವಾ ಧರ್ಮರಾಯನನ್ನು ಸ್ವರ್ಗದ ತನಕ ಹಿಂಬಾಲಿಸಿದ ನಾಯಿಯೋ ಎಂಬುದು ನನಗೆ ಸ್ಪಷ್ಟವಾಗಿರಲಿಲ್ಲ." (ತಿರುಮಲೇಶ್ ಕೆ.ವಿ.; ಜಾಗುವಾ ಮತ್ತು ಇತರರು; ೧೯೯೦; ಪುಟ ೨೬, ೨೭). ಕೇಶವ ಮತ್ತು ದಾಮೋದರ ಮನೆಬಿಟ್ಟು ಓಡಿ ಹೋಗುವ ಸಂದರ್ಭದಲ್ಲಿ ಕೇಶವನು ಹೇಳುವ ಮಾತುಗಳನ್ನು ಲೇಖಕರು ಪಾಂಡವರ ಮಹಾಪ್ರಸ್ಥಾನದ ಪ್ರಸಂಗಕ್ಕೆ ಹೋಲಿಸಿದ್ದಾರೆ. ಪೌರಾಣಿಕ ಕಥೆಯ ಭಾಗವನ್ನು ವರ್ತಮಾನದ ಸಂದರ್ಭಕ್ಕೆ ಅಳವಡಿಸುವ ಕಲಾತ್ಮಕ ಗುಣ ಇಲ್ಲಿದೆ.

ಸಂಗೀತದ ಬಗ್ಗೆ ಅಪಾರ ಜ್ಞಾನವುಳ್ಳ ಜಿ.ಟಿ. ನಾರಾಯಣ ರಾವ್ ಅವರು ತಮ್ಮ 'ಸುಬ್ಬಪ್ಪನ ದಯೆ' ಕತೆಯಲ್ಲಿ ಸಂಗೀತದ ರಾಗಗಳಾದ ಮೋಹನ, ಕಲ್ಯಾಣಿ, ತೋಡಿ, ಭೈರವಿ, ಶಂಕರಾಭರಣ, ಶ್ರೀರಾಗ ಮುಂತಾದ ರಾಗಗಳನ್ನು ಪ್ರಸ್ತಾವಿಸಿದ್ದಾರೆ. ಮಾತ್ರವಲ್ಲದೆ ತ್ಯಾಗರಾಜರ ಪಂಚರತ್ನ ಕೀರ್ತನೆಗಳಲ್ಲೊಂದಾದ "ಎಂದರೋ

ಮಹಾನುಭಾವುಲು" (ಜಿ.ಟಿ. ನಾರಾಯಣ ರಾವ್; ಕೊಡಗಿನ ಸುಮಗಳು; ೧೯೯೩; ಪುಟ ೨೦) ಎಂಬ ಕೀರ್ತನೆಯನ್ನೂ ಉಲ್ಲೇಖಿಸಿದ್ದಾರೆ.

ಚಿಂತಾಮಣಿ ಕೊಡ್ಲೆಕೆರೆ ಅವರು ಬರೆದ 'ಒಕಥೆ ಒಕಥೆ ಕೆಳಗೆ ಬಾ' ಎಂಬ ಕತೆಯಲ್ಲಿ ನಿರೂಪಕರ ಹುಟ್ಟಿನ ನಾಮಕರಣದ ಘಟನೆಯನ್ನು ಹಳೆಗನ್ನಡ ಕಥನ ಶೈಲಿಯ ರೂಪದಲ್ಲಿ ಬರೆದಿದ್ದಾರೆ. " ಗಂಡುಮಗು ಹುಟ್ಟಿದಾಗಿನ ಕತೆಯಂ ಪೇಳುವೆನು ರಾಘವ ಉಡುಪರು ಇಡಿಯ ಊರಿಗೆ ಸಿಹಿಯಂ ವಿತರಿಸಿದರು. ನಾಮಕರಣದ ದಿನ ಕಂದನಿಗೆ ಅಕ್ಕಿಯ ಮೇಲೆ ನರಸಿಂಹ ಎಂಬ ಅಭಿದಾನಮಂ ಇರಿಸಲಾಯಿತು. ನಕ್ಷತ್ರನಾಮ ಮೇಣ್ ಮಾಸನಾಮಂಗಳಂ ಕೂಡ ಇರಿಸಲಾಯಿತು. ಮಗುವಿನ ಜಾತಕಮಂ ಪರಿವೀಕ್ಷಿಸಿದ ಕುಲಪುರೋಹಿತರು ನುಡಿದರು : ಭಲಾ, ಇದತ್ಯಪೂರ್ವ ಜಾತಕಂ, ಇವನ್ ಊರಿಗೆ ಪೆಸರಾಗುವನ್, ಊರ ಕೀರ್ತಿಯಂ, ಕುಲದ ಕೀರ್ತಿಯಂ, ಪಿತೃ ಕೀರ್ತಿಯಂ ಬೆಳೆಸುವನ್, ಪ್ರಸ್ತುತಂ ಕೆಲ ದೋಷಮಿರುತಿಹುದು, ಇದಕ್ಕೆ ವರ್ಷಮನಿತರೊಳ್ ಪರಿಹಾರಮಂಗೈಯಲ್ ಬಿದಿಗೆ ಚಂದ್ರಮನೊಲು ಇತ್ಯೋಪ್ಯತಿಶಯಮಾಗಿ ಬೆಳೆವನ್, ಬೆಳಗುವನ್....." (ಚಿಂತಾಮಣಿ ಕೊಡ್ಲೆಕೆರೆ; ಬಭ್ರುವಾಹನ ಎಂಬ ಇರುವೆ; ೧೯೯೯; ಪುಟ ೩೦)

ಮಹಾಬಲಮೂರ್ತಿ ಕೊಡ್ಲೆಕೆರೆಯವರ 'ವೈಶಂಪಾಯನ ತೀರ' ಕತೆಯಲ್ಲಿ ಯಕ್ಷಗಾನ ಬಯಲಾಟದಲ್ಲಿ ಕಂಡುಬರುವ ಅರ್ಥಗಾರಿಕೆ, ವೇಷಭೂಷಣ, ಅಲಂಕಾರ ಮತ್ತು ಕುಣಿತಗಳ ವರ್ಣನೆಯಿದೆ. ಮಾತ್ರವಲ್ಲದೆ ಯಕ್ಷಗಾನ ಪ್ರಸಂಗ ಸಾಹಿತ್ಯದ ಅನೇಕ ಹಾಡುಗಳನ್ನು ಉಲ್ಲೇಖಿಸಿದ್ದಾರೆ :

'ಕೃಷ್ಣ ಸಂಧಾನ' ಯಕ್ಷಗಾನ ಪ್ರಸಂಗದ "ಕೊಲಿಸಲಾರೆನು ಸರ್ವಥಾ ಕೊಳಗುಳದಿ" (ಮಹಾಬಲ ಮೂರ್ತಿ ಕೊಡ್ಲೆಕೆರೆ; ಯಕ್ಷಸೃಷ್ಟಿ; ೧೯೯೪; ಪುಟ ೨೪).

'ಗದಾಯುದ್ಧ' ಪ್ರಸಂಗದ "ಕುರುರಾಯ ಇದನ್ನೆಲ್ಲಾ ಕಂಡು ಸಂತಾಪದಿ.." (ಮಹಾಬಲಮೂರ್ತಿ ಕೊಡ್ಲೆಕೆರೆ; ಯಕ್ಷಸೃಷ್ಟಿ; ೧೯೯೪; ಪುಟ ೨೪). ಅದೇ ಪ್ರಸಂಗದ "ಪ್ರಳಯ ಕಾಲದ ರುದ್ರನಂತೆಯೇ ಬಂದ ಭೀಮನು ಅರಸುತ್ತಿರೆ..... ಸುಯೋಧನನ ಸುಳಿವೇ ಇಲ್ಲ..... ಇಲ್ಲ..... ಇಲ್ಲ...... ಇಲ್ಲೇ ಇಲ್ಲ .." (ಮಹಾಬಲ ಮೂರ್ತಿ ಕೊಡ್ಲೆಕೆರೆ; ಯಕ್ಷಸೃಷ್ಟಿ; ೧೯೯೪; ಪುಟ ೨೬).

ರಾಜು ಹೆಗಡೆಯವರು ಬರೆದ 'ಸರಸಿಜಾಂಬಕಿಯರೆ ಕೇಳಿ' ಕತೆಯಲ್ಲಿ ಪ್ರೀತಿ, ನಿಷ್ಠೆ, ಕಾಮ – ಇವೆಲ್ಲವನ್ನೂ ಯಕ್ಷಗಾನದಲ್ಲಾದರೆ ನೋಡಿ ಆನಂದಿಸುವ ಊರವರು, ತಮ್ಮ ಮನೆಯ ಹೆಣ್ಣು ಮಕ್ಕಳಿಗೆ ಅವನ್ನು ನಿರಾಕರಿಸುತ್ತಾರೆ. ತಮಗೆ ಇಷ್ಟವಿಲ್ಲದ ಗಂಡನೊಡನೆ ಲಗ್ನಬೇಡ ಎಂದು ಹೇಳುವುದೇ ಈ ಕತೆಯ ಲಕ್ಷ್ಮಿಗೆ ಒಂದು ಮಾರಣಾಂತಿಕ ಸಾಹಸವಾಗಿ ಬಿಡುತ್ತದೆ. ಈ ಕತೆಯ ಎಳೆಗೆ ಯಕ್ಷಗಾನದ 'ಭೀಷ್ಮವಿಜಯ'ದ ಚೌಕಟ್ಟನ್ನು ಕತೆಗಾರರು ಅಳವಡಿಸಿದ್ದಾರೆ. "ಈ ಕತೆಗಳಿಗೆ ತಳಹದಿಯಾಗಿರುವುದು ನಮ್ಮ ಪುರಾಣಗಳ 'ಆಧುನಿಕ ಓದು'. ಈ ಓದು ಮುಗ್ಧವಾದುದಲ್ಲ. ಅದರ ಹಿಂದೆ ನಮ್ಮ ಸಮಕಾಲೀನ ರಾಜಕೀಯದ ಒತ್ತಾಸೆಗಳಾದ ರಾಷ್ಟ್ರ ಸಂಸ್ಕೃತಿ, ಜನಾಂಗ ಸಂರಚನೆಯ ತುರ್ತು ಇದೆ. ರಾಜು ಹೆಗಡೆಯ ಕತೆಗಳ ಮಟ್ಟಿಗೆ ಈ ಆಕ್ಷೇಪ ಅತಿ ಅನ್ನಿಸಬಹುದು. ಆದರೆ ಈ ಬಗೆಯ ಬರವಣಿಗೆಯನ್ನು ಇಡಿಯಾಗಿ ಎದುರಿಗೆ ಇಟ್ಟುಕೊಂಡು ನೋಡಿದಾಗ, ಅದು ನಮ್ಮ ಕಾಲದ ಸಂಸ್ಕೃತಿ ರಾಜಕೀಯ ಅಗತ್ಯಗಳಿಗೆ ಪುರಾಣಗಳನ್ನು ಬಳಸಿಕೊಳ್ಳುವ ಪ್ರಯತ್ನ ಎಂದೇ ಅನ್ನಿಸುತ್ತದೆ." (ರಾಜು ಹೆಗಡೆ; ಅಪ್ಪಚ್ಚಿ, ಮುನ್ನುಡಿ; ೧೯೯೮; ಪುಟ ೭) ಎಂಬುದಾಗಿ ಜಿ. ರಾಜಶೇಖರ್ ಅಭಿಪ್ರಾಯಪಟ್ಟಿದ್ದಾರೆ.

'ದೊಡ್ಡವರ ನಡುವೆ' ಕತೆಯನ್ನು ಶ್ರೀಧರ ಬಳಗಾರರು ಬಾಲಕನ ಕಣ್ಣಿನಿಂದ ಇಡೀ ಕತೆಯುನ್ನು ನೋಡುವಂತೆ ಚಿತ್ರಿಸಿದ್ದಾರೆ. "ಶ್ರೀಧರ ಬಳಗಾರರನ್ನು ನಾನು ಕಾವ್ಯದ ಸತ್ವ ಬಿಟ್ಟುಕೊಡದಂತೆ ಬೆಳೆಯಲು ಪ್ರಯತ್ನಿಸುತ್ತಿರುವ ಲೇಖಕನೆಂದು ತಿಳಿದಿದ್ದೇನೆ" (ಶ್ರೀಧರ ಬಳಗಾರ; ಅಧೋಮುಖ, ಮುನ್ನುಡಿ; ೧೯೯೫, ಪುಟ ೨) ಎಂಬುದಾಗಿ ಶ್ರೀಧರ ಬಳಗಾರರ ಶೈಲಿಯ ಕುರಿತು ಯು. ಆರ್. ಅನಂತಮೂರ್ತಿ ಅಭಿಪ್ರಾಯ ಪಟ್ಟಿದ್ದಾರೆ.

ಕಡೆಂಗೋಡ್ಲು ಶಂಕರ ಭಟ್ಟರ 'ನನ್ನ ಪತ್ರ', ಗೌರಮ್ಮನವರ 'ಪಾಪನ ಮದುವೆ' ಹಾಗೂ ಜಿ.ಎಸ್. ಉಬರಡ್ಕರವರ 'ಗೋಲ್ಡನ್ ಈಗಲ್ಸ್' ಕತೆಗಳಲ್ಲಿ ಹಾಸ್ಯ, ವ್ಯಂಗ್ಯ ಮಿಶ್ರಿತ ಬರವಣಿಗೆ ಕಂಡುಬರುತ್ತದೆ.ಶಂಕರ ಭಟ್ಟರ 'ನನ್ನ ಪತ್ರ' ಕತೆಯಲ್ಲಿ ಅತ್ತ ಶುದ್ಧ ಹಳ್ಳಿಯ ಹೆಣ್ಣೂ ಅಲ್ಲ, ಇತ್ತ ಹೊಸ ಪರಿಷ್ಕಾರದ ಶುದ್ಧ ಆಧುನಿಕಳೂ ಅಲ್ಲದ ಹೆಂಡತಿಗೆ ಪತ್ರವನ್ನು ಹೇಗೆ ಬರೆಯಬೇಕೆಂಬ ಸಮಸ್ಯೆಯ ವರ್ಣನೆಯನ್ನು ಲೇಖಕರ

ನಿರೂಪಣೆಯ ಸ್ವಾರಸ್ಯಕ್ಕೆ ಉದಾಹರಣೆಯಾಗಿ ನೀಡಬಹುದು: "ಇಂತಹ ಹುಡುಗಿಗೆ ಕೆಲವೇ ಪದಗಳಲ್ಲಿ ಪ್ರೀತಿ. ಅವುಗಳನ್ನು ಕುರಿತು ಬರೆಯದಿದ್ದರೆ ಮಹಾಪಾಪವಾಗುತ್ತದೆ. ಬರಿಯ ಹೆಸರನ್ನೆತ್ತಿ–ಇಂಥವಳಿಗೆ ಇಂಥವನ ಪತ್ರ – ಎಂದು ಬರೆದರೆ ವಕೀಲರು ಕೊಡುವ ದಾವೆ ನೋಟೀಸಿನ ಧಾಟಿಯಾಯಿತು. "ನನ್ನ ಸಹಧರ್ಮಿಣಿ?" ಎಂದು ಒಕ್ಕಣಿಸಿದರೆ, ವಕೀಲರು ನ್ಯಾಯಾಧೀಶರನ್ನು ಸಂಬೋಧಿಸುವ ಖಾವಂದಿರೇ – ಎನ್ನುವಂತಹ ರೂಢಿಯಾಯಿತು. ಇಂತಹ ನುಡಿಗಳಲ್ಲಿ ಉಪಚಾರ ಹೆಚ್ಚು; ಹಾರ್ದಿಕತೆ ಕಡಿಮೆ. "ಅರ್ಧಾಂಗಿ"! ಎಂದರೂ ಅಷ್ಟಷ್ಟೆ. ಇದು ಸ್ತ್ರೀಯರ ಇಡಿ ಹಕ್ಕಿನ ಕಾಲ; ಅರೆಹಕ್ಕಿನದಲ್ಲ. ವಾಮಾಂಗಿ – ಎಂದರೆ ಅಪಮಾನ. ಹೃದಯೇಶ್ವರಿ ಎಂಬ ಪದ ಪ್ರಯೋಗ ವೆಂಕಟಾಚಾರ್ಯರ ಕಾದಂಬರಿಯ ಕಾಲದ್ದು. ಇಂದಿನ ಬೆಡಗುಗಾರ್ತಿ ಹೇಗೆ ಮೆಚ್ಚುವಳು? ಸ್ವಪ್ನಾಧಿರಾಜ್ಞಿ ಎಂಬ ಗಂಭೀರ ಸಂಸ್ಕೃತವನ್ನು ಪ್ರಯೋಗಿಸಿದರೆ, ಒಂದು ಅಪಾರ್ಥ ಕಲ್ಪನೆಗೆ ಎಡೆಕೊಟ್ಟಂತಾಗುತ್ತದೆ. ಗಂಡ ಯಾವಾಗಲೂ ಸ್ವಪ್ನದಲ್ಲಿ ಅಲೆದಾಡುವ ಪ್ರಾಣಿ ಎಂಬ ಭಾವನೆಯನ್ನು ಯಾವ ಗಂಡ ಯಾವ ಹೆಂಡತಿಯ ಮನಸ್ಸಿನಲ್ಲಿ ಉಂಟು ಮಾಡಬಲ್ಲ? ಮುದ್ದು–ಚಿನ್ನ–ಬಂಗಾರ...(ಕಬ್ಬಿಣ, ಸೀಸ, ಹಿತ್ತಾಳಿ ಮೊದಲಾದ ಲೋಹಗಳ ಹೆಸರನ್ನು ವರ್ಜಿಸಿ) ಎಂದು ಸಂಬೋಧಿಸಿದರೆ, ಪ್ರೇಮವನ್ನು ಗಳಿಸುವ, ಗಳಿಸಿದುದನ್ನು ಉಳಿಸಿಕೊಳ್ಳುವ ಮೊದಲ ಹೆಜ್ಜೆಯನ್ನಿಟ್ಟ ಹಾಗಾಯಿತು." (ಪಾದೇಕಲ್ಲು ವಿಷ್ಣುಭಟ್ಟ ಮತ್ತು ಇತರರು (ಸಂ.) ಕಡೆಂಗೋಡ್ಲು ಶಂಕರ ಭಟ್ಟ ಸಮಗ್ರ ಕಥಾ ಸಂಪುಟ; ೨೦೦೪; ಪುಟ ೨೦೯, ೨೧೦).

ಕೊಡಗಿನ ಗೌರಮ್ಮನವರ ಕತೆಗಳಲ್ಲಿರುವ ತಿಳಿಹಾಸ್ಯಕ್ಕೆ ಕತೆಯ ಸಾಲುಗಳ ಉದಾಹರಣೆ ಇಲ್ಲಿ ಕೊಡಬಹುದು : 'ಪಾಪನ ಮದುವೆ' ಕಥೆ ಹೀಗೆ ಸಾಗುತ್ತದೆ : "ಇನ್ನೇನು ಇದು ತೀರಿತು ಎನ್ನುವಾಗ ಎಲ್ಲಿರುತ್ತಿದ್ದರೋ ಮಹಾರಾಯ ! ನಮ್ಮ ಮಾಸ್ಟರರ ಆಗಮನವಾಗುತ್ತಿತ್ತು. ಅವರು ಬಂದರು ಎಂದರಂತೂ ತೀರಿಹೋಯ್ತು – ನಮ್ಮ ವ್ಯಸನ ಅಷ್ಟಿಷ್ಟು. ಎಂದೂ ಬಾರದ ನಿದ್ರೆ, ಬಾಯಾರಿಕೆ ಎಲ್ಲಾ ಬರಲು ಸುರುವಾಗುತ್ತಿದ್ದವು. ಒಮ್ಮೊಮ್ಮೆ ಹೊಟ್ಟೆನೋವೂ ಬರುತ್ತಿತ್ತು. ಆದರೆ ಮೊದಮೊದಲು ಹೊಟ್ಟೆನೋವಿನಿಂದ ಪಾಠ ತಪ್ಪಿದರೂ ಕೊನೆಗೇನೋ ಮಾಸ್ಟರ್ ಹೊಟ್ಟೆ ನೋವೆಂದ ಕೂಡಲೇ ಬೆತ್ತದಿಂದ ಮಂತ್ರಿಸಿ ವಾಸಿ ಮಾಡಿ ಬಿಡುತ್ತಿದ್ದರು. ನಮಗಂತೂ ಪ್ರತಿದಿನ

ಸಂಜೆಯಾಯಿತೆಂದರೆ 'ಅಯ್ಯೋ ನಮ್ಮಾಸ್ತ್ರು ಇರದೆ ಇದ್ರೆ ಎಷ್ಟೊಂದು ಚೆನ್ನಾಗಿರುತ್ತಿತ್ತು? – ಎನ್ನಿಸುತ್ತಿತ್ತು. ಆದರೆ ಅದೇಕೋ – ನಾವು 'ಅವರು ಸಾಯಲಿ, ಅವರಿಗೆ ಜ್ವರ ಬರಲಿ' ಎಂದೂ ಬಯಸಿದಂತೆಲ್ಲಾ ಅವರು ಆರೋಗ್ಯ ದೃಢಕಾಯರಾಗುತ್ತಿದ್ದರು". (ಕಾಳೇಗೌಡ ನಾಗವಾರ (ಸಂ.); ಜೀವನ ಪ್ರೀತಿ; ೨೦೦೨; ಪುಟ ೧೬೦, ೧೬೧).

ಜಿ.ಎಸ್. ಉಬರಡ್ಕರವರು 'ಗೋಲ್ಡನ್ ಈಗಲ್ಸ್' ಕತೆಯಲ್ಲಿ ಆಧುನಿಕ ಸಮಾಜದ ಚಿತ್ರಣವನ್ನು ನವಿರಾದ ಹಾಸ್ಯ ಹಾಗೂ ವ್ಯಂಗ್ಯ ಮಿಶ್ರಿತ ಧ್ವನಿಯಲ್ಲಿ ಚಿತ್ರಿಸಿದ್ದಾರೆ : "ಗ್ರೌಂಡಿನುದ್ದಕ್ಕೂ ಎತ್ತರದಲ್ಲಿ ಕಟ್ಟಿದ ಗಜಗಾತ್ರದ ಬ್ಯಾನರುಗಳು, ಕ್ಲಬ್ಬಿನ ಸಿಂಬಲ್ಲುಗಳು, ಮಿರಿಮಿರಿ ಮಿರುಗುವ ಬಣ್ಣಬಣ್ಣದ ಬೇಗಡೆಯ ಮಾಲೆಗಳು, ಸಂಜೆ ಮಲ್ಲಿಗೆಯಂತೆ ಲಕಲಕಿಸುವ ಗುಡಾಣ ಗಾತ್ರದ ಉದ್ದ – ಉರುಟಿನ ಬೆಲೂನುಗಳು ಗಾಳಿಗೆ ತೂರಾಡುತ್ತಿದ್ದವು. ವೆರಾಂಡದ ಎದುರು ಚಕ್ರವ್ಯೂಹದಂತೆ ನಿಂತ ಜೀಪು, ಕಾರು, ಬೈಕು, ಸ್ಕೂಟರುಗಳು, ಅಲ್ಲಲ್ಲಿ ಗುಂಪುಗೂಡುತ್ತ, ಚದುರುತ್ತ ಎಂಥದೋ ಮಹಾತ್ಕಾರ್ಯದ ಹಂಚಿಕೆಯಲ್ಲಿ ತೊಡಗಿದವರಂತಿದ್ದ ಬಗೆಬಗೆಯ ಸೂಟುಗಳವರು; ಸೀರೆಗಳಲ್ಲಿ, ಲಾಂಗ್ ಸ್ಕರ್ಟುಗಳಲ್ಲಿ, ಮಿನಿ, ಮಿಡಿ, ಮ್ಯಾಕ್ಸಿ, ಸೀ–ಥ್ರೂಗಳಲ್ಲಿ ಚಿಲಿಪಿಲಿಗುಟ್ಟುತ್ತಿದ್ದ ಪದ್ಮಿನಿ, ಚಿತ್ರಿಣಿ, ಶಂಖಿನಿ ಹಸ್ತಿನಿಯರು; ಕಂಡ ಕಣ್ಣುಗಳಿಗೆ ಡಿಕ್ಕಿ ಹೊಡೆಯುತ್ತ ವೆರಾಂಡದುದ್ದಕ್ಕೂ ಸುಳಿದಾಡುತ್ತಿದ್ದ ತರತರದ ಬ್ಲೌಸ್–ಡೀಪು ನೆಕ್ಕುಗಳ ಕಾಮಾಕ್ಷಿಯರು, ಮೀನಾಕ್ಷಿಯರು, ಜಲಜಾಕ್ಷಿಯರು. ಯಾವುದೋ ಮಾಯಾ ನಗರಿಯಲ್ಲಿ ಇಳಿದಂತಾದ ನಾನು ಗೋಪು ಜೊತೆ, ಟಿಫಿನ್‌ಹಾಲ್ ನುಗ್ಗಿದೆ. ಟಿಫಿನ್‌ಹಾಲ್‌ನುದ್ದಕ್ಕೂ ಸ್ಪೂನು – ಪ್ಲೇಟುಗಳನ್ನು ಕಟಕಟಿಸುತ್ತ ಸ್ವೀಟು – ಖಾರ ತಿನ್ನುವ ಸದ್ದು; ಕಾಫಿ, ಟೀ ಸೊರ್ರೆಂದು ಹೀರುವ ಸದ್ದು; ಮಾತಿನ, ನಗುವಿನ, ಕೇಕೆಯ ಸದ್ದು." (ಜಿ.ಎಸ್. ಉಬರಡ್ಕ; ಚಿಕ್ಕದೊಂದು ಗಿಳಿಯ ಸಾಕಿ; ೧೯೮೨; ಪುಟ ೩೮, ೩೯).

ದೇವಾಂಗನಾ ಶಾಸ್ತ್ರಿಯವರು ತಾವು ಹುಟ್ಟಿ ಬೆಳೆದ ಗೋಕರ್ಣದ ಸಮುದ್ರ ತೀರದ ಸೊಗಸನ್ನೂ ಅಲ್ಲಿಯ ಪರಿಸರದ ವಾಸ್ತವ ವರ್ಣನೆಯನ್ನು 'ಪುಣ್ಯದಫಲ' ಕಥೆಯಲ್ಲಿ ಮೂಡಿಸಿದ್ದಾರೆ. ಗ್ರಹಣಕಾಲದಲ್ಲಿ ಸಮುದ್ರ ತೀರದಲ್ಲಿ ಸೇರುವ ಅಸಂಖ್ಯ ಭಕ್ತಾಧಿಗಳು ನಡೆಸುವ ಮಳಲ ಲಿಂಗಪೂಜೆಯನ್ನು, ಹುಣ್ಣಿಮೆಯ ರಾತ್ರಿಯ ಸಮುದ್ರದ ಅಬ್ಬರವನ್ನು ಚಿತ್ರಿಸಿದ್ದಾರೆ. ವರ್ಣನಾತ್ಮಕ ಶೈಲಿಗೆ ಮಾದರಿ : "ಚಂದ್ರನನ್ನು ನುಂಗಿ

ತುಷ್ಟಿಗೊಳ್ಳದ ರಾಹು-ಕೇತುಗಳು, ನನ್ನವರ ಮತ್ತಿನಲ್ಲಿ ಸಂತುಷ್ಟಗೊಂಡು ತೆರಳಬೇಕೆ? ಮತ್ತೆ ಮೂಡಿ ಬಂದ ಮುಗಿಲ ರಾಜನನ್ನು ತಿರುಗಿಕೊಡುವ ಭಾಷೆಯನ್ನು ಹೊತ್ತು ಹಡಪಿಸಿರಬೇಕು ಅವರುಗಳು. ಅಥವಾ ಕುಮುದಿನಿಯ ಕರಕರೆಗೆ ಸಾಗರದ ಉಬ್ಬಸಕ್ಕೆ ತಳಮಳಗೊಂಡು, ರಾತ್ರೀರಾಣಿಯ ರಾಜನನ್ನು ಮತ್ತೆ ಇತ್ತರೋ! ಸೆಳೆದುಕೊಂಡೊಯ್ದ ನನ್ನವರ ಪ್ರಾಣ ಮಾತ್ರ ಬರಲೇಕಿಲ್ಲ." (ದೇವಾಂಗನಾ ಶಾಸ್ತ್ರಿ; ವೇಣೀಸಂಹಾರ; ೨೦೦೫; ಪುಟ ೪೩, ೪೪).

ಭಾರತೀಸುತರು ಕೊಡಗಿನ ಅರಣ್ಯ ಮಲೆಗಳ ನಡುವಿನ ವಿಶಿಷ್ಟ ಜನರ ಬದುಕು ಬಾಳುವೆಗಳನ್ನು ಕಥೆಗಳಲ್ಲಿ ಚಿತ್ರಿಸಿದ್ದಾರೆ. 'ಚಿಂಬ ಹಿಡಿದ ಮೀನು', 'ಜೇನುಕಹಿ!', 'ಕೊಳುಂಬನ ಉರಾಟೆ', 'ತಿಮ್ಮುಡುವಿನ ಹುಲಿಬೇಟೆ' ಮೊದಲಾದ ಕತೆಗಳಲ್ಲಿ ಕೊಡಗಿನ ಹಾಗೂ ಅಲ್ಲಿಯ ಗಡಿಪ್ರದೇಶವಾದ ವೈನಾಡಿನ ಕಾಡು ಪ್ರದೇಶದಲ್ಲಿ ಬದುಕುತ್ತಿರುವ ಪಣಿಯರು, ಜೇನುಕುರುಬರು, ಕೊಡವರು ಮೊದಲಾದವರ ಜೀವನ ಸಮಸ್ಯೆಗಳು, ಪ್ರೇಮ-ಕಾಮಗಳನ್ನು ಚಿತ್ರಿಸಿದ್ದಾರೆ. "ಕಥೆಗಾರರು ಹೇಳಬೇಕೆಂದಿರುವುದನ್ನು ಸ್ಫುಟವಾಗಿ ಮನಂಬುಗುವಂತೆ ಹೇಳಬಲ್ಲ ಶಕ್ತರು, ಕಥೆಯಲ್ಲಿನ ಸ್ವಾರಸ್ಯಕರ ಅಂಶವನ್ನು ಒತ್ತಿ ಹೇಳಿ ಕಥೆಗೆ ಬಣ್ಣ ಮೂಡಿಸುವಲ್ಲಿ ಚತುರರು. ಬದುಕಿಗೆ ಹತ್ತಿರವಾದ ಪ್ರಾದೇಶಿಕ ಆಡುನುಡಿಯ ವಿಶಿಷ್ಟ ಪದಗಳನ್ನು ಸುಲಲಿತವಾಗಿ ಬಳಸಿಕೊಂಡು ಸಂಭಾಷಣಾ ಮಾಧುರ್ಯವನ್ನು ಹೆಚ್ಚಳಗೊಳಿಸುವ ಕುಶಲರು".(ಕೆ.ಸಚ್ಚಿದಾನಂದಯ್ಯ (ಚಿರಂತನ) (ಸಂ.); ಬ್ರಹ್ಮಗಿರಿ; ೧೯೭೭; ಪುಟ ೨೫೬) ಎಂಬುದಾಗಿ ಶ್ರೀಧರಮೂರ್ತಿಯವರು ಅಭಿಪ್ರಾಯಪಟ್ಟಿದ್ದಾರೆ.

ಜಿ.ಟಿ. ನಾರಾಯಣರಾವ್ ಬರೆದ 'ಹುಲಿಯಪ್ರೇಮ' ಕತೆಯಲ್ಲಿ ಕಾಡಿನ ವರ್ಣನೆಯ ಚಿತ್ರಣವಿದೆ : "ಎಪ್ರಿಲ್ ತಿಂಗಳಿನ ಸುಡುವ ಬಿಸಿಲು, ಮರಗಳ ಮರೆಯಿಂದ ಸೂರ್ಯಕಿರಣಗಳು ಬಂದು ನಮ್ಮನ್ನು ಕುಕ್ಕುತ್ತಿದ್ದವು. ಈ ಕಿರಣಾನುಭವ ತರಣಿದರ್ಶನಕ್ಕಿಂತ ಹಿತಕರವಾಗಿತ್ತು. ಇಡೀ ಕಾಡು ನಿಶ್ಶಬ್ದ. ನಮ್ಮ ನಡಿಗೆಯ ಶಬ್ದ, ತರಗೆಲೆಗಳ ಚುರುಗುಟ್ಟುವಿಕೆ ಅಲ್ಲದೆ ಬೇರೇನೂ ಇಲ್ಲ. ಇಲ್ಲವೆನ್ನುವಂತೆಯೂ ಇಲ್ಲ. ಅಪರೂಪಕ್ಕೆ ಒಂದು ಮರಕುಟ್ಟಿಗನ ಹಕ್ಕಿ ಕುಂಬು ಮರವನ್ನು ಕುಟ್ಟುವ ಸದ್ದೋ, ಒಂದು ಜೀರುಂಡೆ ಚೀರುವ ಸದ್ದೋ ಕೇಳಿಸುತ್ತಿತ್ತು. ವಿಶಿಷ್ಟ ಗಾಂಭೀರ್ಯ ಅಲ್ಲೆಲ್ಲ ಹಬ್ಬಿ ವ್ಯಾಪಿಸಿತ್ತು". (ಜಿ.ಟಿ. ನಾರಾಯಣರಾವ್; ಕೊಡಗಿನ ಸುಮಗಳು; ೧೯೯೩; ಪುಟ ೭೭).

ಮಡಿಕೇರಿಯ ವರ್ಣನೆಯನ್ನು ಜಿ.ಟಿ. ನಾರಾಯಣರಾವ್‌ರವರ 'ಕೈಕೊಡದ ಹಿಲ್‌ಮ್ಯಾನ್' ಕತೆಯಲ್ಲಿ ಗುರುತಿಸಬಹುದು : "ನನ್ನೂರು ಮಡಿಕೇರಿ. ಸ್ವಿಟ್ಸರ್ಲೆಂಡ್‌ನ್ನು ಯುರೋಪಿನ ಮಡಿಕೇರಿ ಎಂಬುದಾಗಿ ಹಿರಿಯರೊಬ್ಬರು ಬಣ್ಣಿಸಿದ್ದನ್ನು ಕೇಳಿ ಹೆಮ್ಮೆ ತಳೆದಿದ್ದೇನೆ. ನನ್ನೂರಿಡೀ ಬೃಹತ್ತಾದ ಶೀತಕಾರಿ (ರೆಫ್ರಿಜರೇಟರ್). ಬೆಟ್ಟಗಳ ನಡುವಿನ ಬೋಗುಣಿ ಈ ಪಟ್ಟಣ. ಎಲ್ಲೆಲ್ಲಿಯೂ ಕಾಡೋ ಕಾಡು. ಹಸುರೇ ಹಸುರು. ವಿರಳ ಜನಸಂಖ್ಯೆ. ಸಾರಿಗೆ ಸಂಪರ್ಕ ಸರ್ವ ವ್ಯಾಪಿಯೂ ಅಲ್ಲ, ಸರ್ವಗ್ರಾಹಿಯೂ ಇಲ್ಲ". (ಜಿ.ಟಿ. ನಾರಾಯಣರಾವ್; ಕೊಡಗಿನ ಸುಮಗಳು; ೧೯೯೩; ಪುಟ ೯೪).

ಮಸ್ಸಂಜೆಯ ಬಣ್ಣನೆಯ ಚಿತ್ರಣ ಶ್ರೀಧರ ಬಳಗಾರ ಅವರ 'ಆಕ್ರಮಣ' ಕತೆಯಲ್ಲಿ ಮೂಡಿ ಬಂದ ಬಗೆ ಇಂತಿದೆ : "ಪದೇ ಪದೇ ಅವನಿಗೆ ನೆನಪಾಗುವ ಪ್ರೀತಿಯ ಮುಸ್ಸಂಜೆಯ ಸಜೀವ ಪ್ರಪಂಚ ಅಂಗಳದ ಪರಿಸರದಲ್ಲಿ ಅದಾಗ ತಾನೇ ಹಸಿರಾದ ಮಂಜು ಕವಿದ ಬೆಟ್ಟದಂಚಿನಲ್ಲಿ ನಿಧಾನವಾಗಿ ಮೇಲೇರುತ್ತಿರುವ ಪೂರ್ಣ ಬೆಳೆಯದ ದುಂಡನೆಯ ಚಂದ್ರನ ತಿಳಿಯಾದ ಹರಡಿದ ಅಸ್ಪಷ್ಟ ಬೆಳಕಾಗಿ, ಮೇ ತಿಂಗಳ ಚಿಗುರೆಲೆಗಳನ್ನು ಮೃದುವಾಗಿ ಸವರಿ ಬೀಸುವ ತಣ್ಣನೆಯ ಲವಲವಿಕೆಯ ಗಾಳಿಯಾಗಿ, ಸ್ವಲ್ಪ ಸಮಯಕ್ಕೆ ಮುಂಚೆ ದೂರ ಕ್ಷಿತಿಜದಾಚೆ ಮರೆಯಾಗಿ ಹಾರಿಹೋದ ಬೆಳ್ಳಕ್ಕಿಗಳ ಸಾಲು ಬಿಟ್ಟ ಆಕ್ರಂದನವಾಗಿ, ಗದ್ದೆಯ ಜೀಗುಡುವ ಮೂಲೆಯಲ್ಲಿ ದಟ್ಟೈಸುತ್ತಿರುವ ಕತ್ತಲಲ್ಲಿ ಈಜುತ್ತ ಪ್ರಜ್ವಲಿಸುವ ಮಿಂಚುಹುಳುಗಳ ಲೀಲೆಯಾಗಿ, ಅಡಿಕೆ ಅಟ್ಟದ ಕಂಬವೊಂದರ ಬಿರುಕಿನಲ್ಲಿ ಅಡಗಿಕೂತು ತನ್ನ ಒಣ ಸ್ವರದಲ್ಲಿ ಮಳೆಕರೆಯುವ ಕಪ್ಪೆಯ ಧ್ವನಿಯಾಗಿ, ಅಡುಗೆ ಮನೆಯಲ್ಲಿ ಅಮ್ಮ ಬೇಯಿಸುತ್ತಿರುವ ಅನ್ನದ ಪರಿಮಳವಾಗಿ ಅರಳತೊಡಗಿತ್ತು". (ಶ್ರೀಧರ ಬಳಗಾರ; ಅಧೋಮುಖ; ೧೯೯೫; ಪುಟ ೬೮).

ಹವ್ಯಕ ಕತೆಗಾರರಾದ ರಾ.ಮೊ. ವಿಶ್ವಾಮಿತ್ರರ 'ತಿರುಗಾಡಿ ಸಾಂತಣ್ಣ', ನಾರಾಯಣ ಕಂಗಿಲರ 'ಲೀನ', ಕೆ.ವಿ. ತಿರುಮಲೇಶರ 'ನೊಣಗಳು', ಕುಮಾರ ಜೋಶಿಯವರ 'ರಂಗಕ್ಕೊಂದಿಷ್ಟು ಹತ್ತಿರ', ಸುಬ್ರಾಯ ಭಟ್ ಬಕ್ಕಳರವರ 'ಇರುವುದೊಂದೇ ನೆಲ', ಕತೆಗಳನ್ನು ನಿರೂಪಿಸುವ ಸಂದರ್ಭದಲ್ಲಿ ಕವನದ ಸಾಲುಗಳನ್ನು ರಚಿಸಿದ್ದಾರೆ. ರಾ.ಮೊ. ವಿಶ್ವಾಮಿತ್ರರ 'ತಿರುಗಾಡಿ ಸಾಂತಣ್ಣ' ಕತೆಯಲ್ಲಿ

ಸಾಂತಣ್ಣ ತನ್ನ ಮಿತ್ರರೊಂದಿಗೆ ಗಂಗಸರ (ಗೇರುಹಣ್ಣಿನ ಸಾರಾಯಿ) ಕುಡಿದುಕೊಂಡು, ಹಾಡಿ ನಲಿಯುವ ಸಂದರ್ಭದಲ್ಲಿ ಹೊಸಕಾವ್ಯವನ್ನು ಸೃಷ್ಟಿಸಿ ಹಾಡುತ್ತಾನೆ :

"ಬಂಟ್ರಲಿ ಬಂಟನು ಸಾಂತಣ್ಣ
ಊರಿನ ಗಂಡೀ ಸಾಂತಣ್ಣ
ಹೈ ಹೈ ಭಲೆ ಸಾಂತಣ್ಣ ॥೧॥
ಊರಿನ ಭೀಮನು ಇವನೇ
ಜಗದಲಿ ಜಟ್ಟಿಯು ಇವನೇ
ಅಂತೋಣಿ ಸೋಜನು ಇರಬೇಕು
ಸಾಂತಣ್ಣನಿಗಾತನು ಕೊಡಬೇಕು॥೨॥" (ರಾ.ಮೊ. ವಿಶ್ವಾಮಿತ್ರರ; ಹಳ್ಳಿಯ ಹಳಬರು; ೧೯೫೭; ಪುಟ ೬೮).

'ಒಯಸಿಸ್' ಸಂಕಲನದಲ್ಲಿ ನಾರಾಯಣ ಕಂಗಿಲರು ಚಿಕ್ಕ ಘಟನೆಯೊಂದನ್ನು ಕಾವ್ಯದ ವೇಗ ಹಾಗೂ ಸಂಯಮದಿಂದ ಚಿತ್ರಿಸಿದ್ದಾರೆ. 'ಲೀನ' ಕತೆಯಲ್ಲಿ ಬರುವ ಈ ಕೆಳಗಿನ ಸಾಲುಗಳು ಅದಕ್ಕೆ ಸಾಕ್ಷಿಯಾಗಿವೆ :

"ಪಕ್ಕದಲ್ಲಿ ಕುಳಿತ ಮೂರ್ತಿ ಆಕೆಯ ಕೈಯನ್ನು ತೆಗೆದುಕೊಂಡು ಒತ್ತಿದ. ಆಕೆ ಕೈಯನ್ನು ಎತ್ತಿ ತುಟಿಗೊತ್ತಿದಳು. ಬೆಳಕು ಕಡಿಮೆಯಾದ್ದರಿಂದ ಅರೆಕತ್ತಲೆ ಅರೆಬೆಳಕಿನಲ್ಲಿ ಅವರಿಬ್ಬರನ್ನು ಬೇರ್ಪಡಿಸಿ ಕಾಣುವುದು ಕಷ್ಟವಾಗುತ್ತಿತ್ತು ಅಥವಾ ಹೀಗೂ ಹೇಳಬಹುದು. ಬೆಳಕಿನೊಂದಿಗೆ ಅವರ ನಡುವಿನ ಅಂತರವೂ ಕ್ಷೀಣಿಸುತ್ತಿತ್ತು. ಮೆಲ್ಲನೆ,

ಸುತ್ತಿ ಬಳಸಿ ಬಿಗಿಯುವ
ಮಾದಕ ಮತ್ಸ್ಯ ಗಂಧದ
ಅಪ್ಪಿ ಬೆಸೆಯುವ
ಕತ್ತಲ ತೋಳ್ತೆಕ್ಕೆಯಲ್ಲಿ
ಲೀನ
ಅಲ್ಲಿ ಇಷ್ಟಿಷ್ಟೇ
ಲೀನ". ( ನಾರಾಯಣ ಕಂಗಿಲ; ಒಯಸಿಸ್; ೧೯೮೪; ಪುಟ ೩೫, ೩೬).

ಕುಮಾರ ಜೋಶಿಯವರು ಬರೆದ 'ರಂಗಕ್ಕೊಂದಿಷ್ಟು ಹತ್ತಿರ' ಕತೆಯಲ್ಲಿ ನಿರೂಪಕರು ತನ್ನ ಗೆಳತಿಯಾದ ಶಾಲ್ಮಲಾಳಿಗೆ ಬರೆದು ಕಳಿಸಿದ ಕವಿತೆಗಳ ಸಾಲುಗಳು :

"ಪುಸ್ತಕಕೊಂದು ಬಯಿಂಡ್

ಅಥವಾ ಬೂಟಿಗೊಂದು ಲೇಸಿರುವ ಹಾಗೆ

ನಂಟು ಕೇವಲ ಅನುಕೂಲಕ್ಕಾಗಲ್ಲ

ಭೂಮಿಗೊಬ್ಬ ಸೂರ್ಯನಂತೆ

ಅಥವಾ ಸಮುದ್ರಕ್ಕೊಂದು ದಂಡೆಯಂತೆ

ನನಗೆ ನೀನು ಅನಿವಾರ್ಯ.....". (ಕುಮಾರ ಜೋಶಿ; ಸಿಸ್ಟರ್ ಮಿರಾಂಡಾಳ ಕಪ್ಪು ರವಿವಾರ; ೧೯೯೧; ಪುಟ ೫೦). ಹೀಗೆ ಸ್ವತಃ ಕವಿಗಳಾದ ಕುಮಾರ ಜೋಶಿಯವರು ತಮ್ಮ ಕತೆಗಳಲ್ಲಿ ಕವನದ ಸಾಲುಗಳನ್ನು ಬಳಸಿದ್ದಾರೆ.

**ಗಾದೆ ಮಾತು**

ಗಾದೆಗಳು ಮನುಷ್ಯನ ಜೀವನಕ್ಕೆ ಕನ್ನಡಿ ಹಿಡಿದಂತೆ. ಸಾಮಾನ್ಯವಾಗಿ ಗಾದೆಗಳು ಸಂಕ್ಷಿಪ್ತವಾಗಿಯೂ, ಅರ್ಥಗರ್ಭಿತವಾಗಿಯೂ ಇರುತ್ತವೆ. ಗಾದೆಗಳು ಮೇಲೆ ತೋರಿಬರುವ ಅರ್ಥಕ್ಕಿಂತ ಭಿನ್ನವಾದ ಅರ್ಥವನ್ನು ವ್ಯಕ್ತಪಡಿಸುತ್ತವೆ. ಲೋಕಸ್ವಭಾವ, ಲೋಕನೀತಿ, ಪ್ರಪಂಚಜ್ಞಾನ, ಮೂಢನಂಬಿಕೆ, ಆಹಾರ ಮತ್ತು ಆರೋಗ್ಯದ ಬಗ್ಗೆ ಜನರ ಅಭಿಪ್ರಾಯ, ಸಮಾಜದ ಪದ್ಧತಿ ಹಾಗೂ ಸಂಪ್ರದಾಯಗಳು, ಕುಟುಂಬ ಜೀವನ, ವ್ಯಕ್ತಿ ಹಾಗೂ ಸಮಾಜದ ಶೀಲ–ಅಶ್ಲೀಲ, ವಿಧಿ–ನಿಷೇಧಗಳು – ಹೀಗೆ ಗಾದೆಗಳ ಸ್ವರೂಪ ವಿಶ್ವರೂಪವಾದುದು. ಯಾವುದೇ ಜನಾಂಗದ ಸಂಸ್ಕೃತಿ ಹಾಗೂ ಜನಜೀವನದ ಅರಿವಿಗೆ ಗಾದೆಗಳ ಅಧ್ಯಯನವು ಸಹಕಾರಿ. ಹವ್ಯಕರು ತಮ್ಮ ಕತೆಗಳಲ್ಲಿ ಸನ್ನಿವೇಶ, ಸಂದರ್ಭಗಳಿಗನುಸಾರವಾಗಿ ಗಾದೆ ಮಾತುಗಳನ್ನು ಬಳಸಿರುವುದು ಕಂಡುಬರುತ್ತದೆ. ಉದಾಹರಣೆಗೆ:

"ಅಂಡೆಬಾಯಿ ಕಟ್ಟಬಹುದಂತೆ ದೊಂಡೆಬಾಯಿ ಕಟ್ಟಲು ಸಾಧ್ಯವಿಲ್ಲ" (ಕೈತಂಜೆ ಗೋವಿಂದ ಭಟ್; ಕಾಳಿಗೆ ಕಾಣಿಕೆ; ಪುಟ ೩೦).

"ಕೇರೆ ತಿನ್ನುವ ಊರಿಗೆ ಹೋದರೆ ನಡುವಿನ ತುಂಡಿಗೆ ಕೈ ನೀಡಬೇಕು" (ಪಾದೇಕಲ್ಲು ವಿಷ್ಣುಭಟ್ಟ ಮತ್ತು ಇತರರು (ಸಂ.) ಕಡೆಂಗೋಡ್ಲು ಶಂಕರ ಭಟ್ಟ ಸಮಗ್ರ ಕಥಾ ಸಂಪುಟ; ೨೦೦೪; ಪುಟ ೩೫).

"ಬಾಣಲೆಯಿಂದ ಬೆಂಕಿಗೆ ಬಿದ್ದ ಮೀನಿನ ಪಾಡಾಯಿತು" (ಭಾರತೀಸುತ; ಚಿಂಬ ಹಿಡಿದ ಮೀನು; ೧೯೯೧; ಪುಟ ೭೭).

"ಹಾಲ್ಗಡಲಿನ ಬಸಿರಿಂದ ಕಾಲಕೂಟ ಉದಿಸಿದಂತೆ" (ಭಾರತೀಸುತ; ಕರೆಗೆ ಓಗೊಟ್ಟ ಕಾರ್ಡೀಲಿಯಾ !; ೧೯೬೬; ಪುಟ ೧೬೬).

"ಶೆಟ್ಟಿ ಶೃಂಗಾರ ಮಾಡುವಷ್ಟರಲ್ಲಿ ಪಟ್ಟ ಸೂರೆಹೋಯ್ತು" (ಕಾಳೇಗೌಡ ನಾಗವಾರ (ಸಂ.); ಜೀವನ ಪ್ರೀತಿ; ೨೦೦೨; ಪುಟ ೧೮೩).

"ಇಲಿ ಹೋದರೂ ಹುಲಿ ಹೋಯಿತೆನ್ನುವ ಜಾಯಮಾನ" (ಜಯಾ ಯಾಜಿ ಶಿರಾಲಿ; ಶಂಕ್ರಿ; ೨೦೦೦; ಪುಟ ೪೪).

"ಸೂಜಿಲಿ ಹೋಗೋದಕ್ಕೆ ಕೊಡಲಿ ತೆಗೆದುಕೊಂಡರು ಅಂತ" (ಜಯಪ್ರಕಾಶ್ ಮಾವಿನಕುಳಿ; ಕಾಲ; ೧೯೯೦; ಪುಟ ೧೯).

"ಹಣ ಇದ್ದವನ ಕೈ ಹಿಡಿದರೂ ಋಣ ಇದ್ದಷ್ಟೇ ಸಿಕ್ಕೀತು" (ಮನೋರಮಾ ಎಂ. ಭಟ್; ಸ್ವಯಂವರ; ೧೯೯೪; ಪುಟ ೪೫).

"ಹೊಸ ಮಾವಿನಕಾಯಿಗಿಂತ ಹಳೆ ನೆಲ್ಲಿಕಾಯಿ ಮಿಗಿಲು" (ಕೆ.ವಿ. ತಿರುಮಲೇಶ; ನಾಯಕ ಮತ್ತು ಇತರರು; ೧೯೮೨; ಪುಟ ೪೧).

"ದೂರದ ಕುಕ್ಕುಡ್‌ದ್ ಮುಟ್ಟದ ಅಂಬಟೇನೇ ಎಡ್ಡೆ" (ತುಳುಗಾದೆ–"ದೂರದ ಮಾವಿಗಿಂತ ಹತ್ತಿರದ ಅಂಬಟೆಯೇ ಒಳ್ಳೆಯದು") (ಗಂಗಾ ಪಾದೇಕಲ್; ವಾಸ್ತವ; ೧೯೯೬; ಪುಟ ೪೧).

"ಮೀನಿನ ಹೆಜ್ಜೆಯನ್ನಾದರೂ ನೋಡಬಹುದು, ಹೆಣ್ಣಿನ ಮನಸ್ಸನ್ನು ತಿಳಿಯಲಾಗದು" (ಗಂಗಾ ಪಾದೇಕಲ್; ವಾಸ್ತವ; ೧೯೯೬; ಪುಟ ೯೭).

"ಮರಣಕಾಲಕ್ಕೆ ಮದ್ದಿಲ್ಲ, ಕೆಡುವ ಕಾಲಕ್ಕೆ ಬುದ್ಧಿ ಇಲ್ಲ" (ಕಂಜರ್ಪಣೆ ತಿಮ್ಮಪ್ಪಯ್ಯ; ಗುರುವಿನ ಶೋಕ ಮತ್ತು ಇತರ ಕತೆಗಳು; ೧೯೮೨; ಪುಟ ೫೦).

"ಕೈ ಬಂಜೆಯಾದ್ರೆ ಭೂಮಿ ಬಂಜೆ"(ಭರತನಹಳ್ಳಿ ನಾ.ಸು.; ಬಯಲು ಬತ್ತಲೆ; ೧೯೭೬;ಪುಟ ೫೦).

"ಮೂರು ಕೊಟ್ಟರೆ ಮಾವನ ಪಕ್ಷ; ಆರು ಕೊಟ್ಟರೆ ಅತ್ತೆ ಪಕ್ಷ" (ವಿ.ತಿ. ಶೀಗೆಹಳ್ಳಿ; ಸುತ್ತಲಿನ ಸತ್ಯ; ೧೯೯೦; ಪುಟ ೩೩).

ಹೀಗೆ ಕತೆಗಾರರು ಆಯಾ ಸನ್ನಿವೇಶಗಳಿಗೆ ತಕ್ಕಂತೆ ಗಾದೆಗಳನ್ನು ತಮ್ಮ ಕತೆಗಳಲ್ಲಿ ಬಳಸಿದ್ದಾರೆ. ಹವ್ಯಕರ ಮನೆ ಮಾತಿನಲ್ಲಿ ಇವೆಲ್ಲ ಇಂದಿಗೂ ಬಳಕೆಯಲ್ಲಿವೆ. ಈ ಎಲ್ಲಾ ಗಾದೆಗಳಲ್ಲಿ ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ ಅಂಶಗಳು ಕಂಡುಬರುತ್ತವೆ.

**ಒಗಟುಗಳು**

'ಒಗಟು' ಜನಪದ ಸಾಹಿತ್ಯದ ಮುಖ್ಯ ಪ್ರಕಾರ. ಇವು ಬುದ್ಧಿಗೆ ಕಸರತ್ತು ನೀಡುತ್ತವೆ. ಇವು ಸಾಮಾನ್ಯವಾಗಿ ಉತ್ತರ ಊಹಿಸುವ, ರಹಸ್ಯಾರ್ಥವಿರುವ ಪ್ರಶ್ನಾರ್ಥಕ ಹೇಳಿಕೆಗಳು. ಒಗಟುಗಳಲ್ಲಿ ಹಾಸ್ಯ, ಬುದ್ಧಿವಂತಿಗೆ, ಬೋಧನೆ, ವಿಡಂಬನೆ, ವಿಚಾರ ಎಲ್ಲವೂ ಇವೆ. ಒಗಟುಗಳು ರಂಜನೆಯ ಸಾಧನವಾಗಿರುವಂತೆ ಚಿಂತನೆಯ ಫಲವೂ ಆಗಿವೆ. ಒಗಟುಗಳು ಅಬಾಲವೃದ್ಧರಾದಿಯಾಗಿ ಎಲ್ಲರಿಗೂ ರಂಜನೆ ನೀಡುತ್ತವೆ. ಉದಾಹರಣೆಗೆ : "ಮುಟ್ಟಲು ಬಂದರೆ ಕಚ್ಚಲು ಬರುತ್ತದೆ" – ಏಡಿ (ಪಾದೇಕಲ್ಲು ವಿಷ್ಣುಭಟ್ಟ ಮತ್ತು ಇತರರು (ಸಂ.) ಕಡೆಂಗೋಡ್ಲು ಶಂಕರ ಭಟ್ಟ ಸಮಗ್ರ ಕಥಾ ಸಂಪುಟ; ೨೦೦೪; ಪುಟ ೩೫). "ಅಂಕುಡೊಂಕಿನ ಬಾವಿ, ಶಂಖಚಕ್ರದ ಬಾವಿ, ಹಣಿಕೆ ನೋಡಿದರೆ ತುಸು ನೀರಿಲ್ಲ" (ಕಿವಿ), "ಬಾಗಿಲಿಗೆ ಬರುತ್ತದೆ ಬಸಿರಾಗುತ್ತದೆ" (ರೊಟ್ಟಿ) (ಚಿಂತಾಮಣಿ ಕೊಡ್ಲೆಕೆರೆ; ಬಭ್ರುವಾಹನ ಎಂಬ ಇರುವೆ; ೧೯೯೯; ಪುಟ ೬೭).
ಹವ್ಯಕರು ಬರೆದ ಕತೆಗಳಲ್ಲಿ ಈ ಬಗೆಯ ಒಗಟುಗಳು ಸಾಕಷ್ಟು ಸಿಗುತ್ತವೆ.

ತಂತ್ರಕ್ಕೆ ಅನುಗುಣವಾಗಿ ಭಾಷೆಯನ್ನು ಹದವರಿತು, ಸಮಯೋಚಿತವಾಗಿ ಬಳಸಿರುವುದು ಹವ್ಯಕರ ವೈಶಿಷ್ಟ್ಯ. ನಿರೂಪಣೆಯಲ್ಲಿ ಗ್ರಂಥಸ್ಥ ಭಾಷೆ ಸಾಮಾನ್ಯವಾಗಿ ಬಳಕೆಯಾಗಿದೆ. ಆದರೆ ಪಾತ್ರಗಳ ನಡುವಣ ಸಂಭಾಷಣೆಯ ಸಂದರ್ಭದಲ್ಲಿ ಪ್ರಾದೇಶಿಕ

ಭಾಷೆಯ ಬಳಕೆಯಾಗಿದೆ. ಈ ಬಗೆಯ ಭಾಷಾ ಬಳಕೆ ಅವರ ಶೈಲಿಯ ವೈಶಿಷ್ಟ್ಯವೂ ಹೌದು; ಇದು ಅವರ ಕೃತಿಗಳಿಗೆ ಬಹುವಿಧ ಆಯಾಮವನ್ನು ನೀಡಿದೆ. ಹವ್ಯಕರ ಮನೆಭಾಷೆಯ ಪದಗಳ ಬಳಕೆ, ತುಳುನಾಡಿನ ನಿಸರ್ಗ ಮತ್ತು ತುಳುಭಾಷೆಯ ಬಳಕೆ, ಕೊಡಗಿನ ಪ್ರಾದೇಶಿಕ ವರ್ಣನೆ, ಕೊಡವ ಭಾಷೆಯ ಪದಗಳ ಬಳಕೆ, ನಿರೂಪಣೆಯಲ್ಲಿ ಗಾದೆ, ಒಗಟು, ಹಾಸ್ಯ, ವ್ಯಂಗ್ಯದ ಧಾಟಿಯನ್ನು ಬಳಸಿರುವುದು, ಇಲ್ಲಿನ ಪ್ರಾದೇಶಿಕ ಕಲೆ ಮತ್ತು ಸಂಸ್ಕೃತಿ ಸಂಬಂಧಿಯಾದ ವಿವರಗಳು ಹವ್ಯಕ ಕತೆಗಾರರ ಬರವಣಿಗೆಗೆ ಅನನ್ಯತೆಯನ್ನು ನೀಡಿವೆ.

# ಅಧ್ಯಾಯ – ೧೩

# ಉಪಸಂಹಾರ

## ೧೩.೧ ಅಧ್ಯಯನದ ಫಲಿತಗಳು

ಆಧುನಿಕ ಕನ್ನಡ ಸಾಹಿತ್ಯವು ಒಂದು ನೂರು ವರ್ಷಗಳ ಅವಧಿಯಲ್ಲಿ ಕ್ಷಿಪ್ರಗತಿಯಲ್ಲಿ ಸ್ಥಿತ್ಯಂತರಗಳನ್ನು ಪಡೆಯುವುದಕ್ಕೆ ಜನಜೀವನದಲ್ಲಿ ಉಂಟಾದ ತೀವ್ರತರ ಬದಲಾವಣೆಗಳೇ ಮುಖ್ಯ ಕಾರಣವಾಗಿವೆ. ಒಂದು ಸಮಾಜದ ನಿರ್ದಿಷ್ಟ ಪರಿಸರದಲ್ಲಿ ಬದುಕುವ ಲೇಖಕ ಈ ಎಲ್ಲ ಸಾಮಾಜಿಕ ಆಗು–ಹೋಗುಗಳಿಂದ ಪ್ರಭಾವಿತನಾಗುವುದು ಸಹಜ. ಈ ಹಿನ್ನೆಲೆಯಲ್ಲಿ ಆಧುನಿಕ ಸಾಹಿತ್ಯದ ನಾಲ್ಕೂ ಘಟ್ಟಗಳಲ್ಲಿ ಹವ್ಯಕ ಲೇಖಕರು ಕತೆಯ ಮೂಲಕ ವ್ಯಕ್ತಪಡಿಸಿದ ಆಶಯ ಮತ್ತು ಧೋರಣೆಗಳನ್ನು ಅಧ್ಯಯನ ಮಾಡಲಾಗಿದೆ. ಆಧುನಿಕ ಕನ್ನಡ ಸಾಹಿತ್ಯದ ಈ ನಾಲ್ಕೂ ಘಟ್ಟಗಳಲ್ಲಿ ಹವ್ಯಕ ಬರಹಗಾರರು ತಮ್ಮ ಕೃತಿಗಳಲ್ಲಿ ನಿರೂಪಿಸಿದ ವಿವಿಧ ಅಂಶಗಳನ್ನು ಶೋಧಿಸುವ ಪ್ರಯತ್ನ ಮಾಡಲಾಗಿದೆ. ಈ ದೃಷ್ಟಿಯಿಂದ 'ಹವ್ಯಕರ ಕನ್ನಡ ಸಣ್ಣಕತೆಗಳು– ಸಾಂಸ್ಕೃತಿಕ ಅಧ್ಯಯನ' ಎಂಬ ಶೀರ್ಷಿಕೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಬಹಳಷ್ಟು ವಿಸ್ತಾರವನ್ನೊಳಗೊಂಡ ಈ ಅಧ್ಯಯನಕ್ಕೆ ಈ ಹಿಂದೆ ನಡೆದ ಅಧ್ಯಯನದ ಹಿನ್ನೆಲೆಯು ಕೊಂಡಿಯಾಗಿದೆ. ಹಿಂದಿನ ಕಾಲದಿಂದಲೂ ಹವ್ಯಕ ಸಮುದಾಯದವರು ವೈದಿಕ ವೃತ್ತಿಯ ಜೊತೆಗೆ ಜೀವನ ನಿರ್ವಹಣೆಗೆ ಕೃಷಿಯನ್ನು ಅವಲಂಬಿಸಿದ್ದರು. ವಿದ್ಯೆಯನ್ನು ಪಡೆದಿದ್ದ ಈ ಸಮುದಾಯದವರ ಸಾಹಿತ್ಯ ಕೊಡುಗೆ ಗಮನಾರ್ಹ. ನಾಟಕ, ಕಥೆ, ಕಾದಂಬರಿ, ವಿಮರ್ಶೆ, ಪ್ರಬಂಧ, ಮಹಾಕಾವ್ಯ– ಹೀಗೆ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿ ಸಾಹಿತ್ಯ ಸೃಷ್ಟಿ ಮಾಡಿದ ಇವರ ಧೋರಣೆ ಏಕಮುಖಿಯಲ್ಲ; ಬಹುಮುಖಿಯಾದುದು ಎಂಬುದನ್ನು ಗುರುತಿಸುವ ಪ್ರಯತ್ನ ಇಲ್ಲಿ ನಡೆದಿದೆ.

ಹವ್ಯಕರ ಮೂಲದ ಕುರಿತು ಮಾಡಲಾಗಿರುವ ಚಿಂತನದಿಂದ ಹವ್ಯ, ಕವ್ಯಾದಿಗಳನ್ನು ಮಾಡುವವರೇ ಹವ್ಯಕರು ಎಂಬುದನ್ನು ಗುರುತಿಸಲಾಗಿದೆ. 'ಅಹಿಚ್ಛತ್ರ'

ಕ್ಷೇತ್ರದ ಕುರಿತು ವಿದ್ವಾಂಸರ ಅಭಿಪ್ರಾಯಗಳನ್ನು ಗಮನಿಸಿದಾಗ ಮಯೂರವರ್ಮನು ಬ್ರಾಹ್ಮಣರನ್ನು ಉತ್ತರದ ಅಹಿಚ್ಛತ್ರದಿಂದ ಕರೆತಂದನೆಂಬುದು ಸ್ಪಷ್ಟವಾಗುತ್ತದೆ. ಅಹಿಚ್ಛತ್ರ ಅಥವಾ ಅಹಿಕ್ಷೇತ್ರ ಎಂಬುದೇ ಹವ್ಯಕರ ಮೂಲಸ್ಥಾನ ಎಂಬ ಅಭಿಪ್ರಾಯ ಬ್ರಾಹ್ಮಣ ಸಮುದಾಯದಲ್ಲಿ ಉಳಿದುಕೊಂಡಿದೆ. ಹವ್ಯಕ ಸಮುದಾಯದವರು ಅವರು ನೆಲೆ ನಿಂತ ಪ್ರದೇಶದ ಹಿನ್ನೆಲೆಯಲ್ಲಿ ಗುರುತಿಸಲ್ಪಟ್ಟಿದ್ದಾರೆ. ಈ ಹಿನ್ನೆಲೆಯಲ್ಲಿ ಉತ್ತರ ಕನ್ನಡ ಜಿಲ್ಲೆಯ ಹೈಗುಂದ ಪ್ರದೇಶದಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣ ವರ್ಗಕ್ಕೆ ಹೈಗ, ಹೈವ, ಹವ್ಯಕರು ಎಂಬ ಹೆಸರು ಬಂದಿದೆಯೆಂಬುದನ್ನು ಗುರುತಿಸಲಾಗಿದೆ.

ಹವ್ಯಕ ಬರಹಗಾರರು ರಚಿಸಿದ ಸೃಜನಶೀಲ ಸಾಹಿತ್ಯ ಕೃತಿಗಳು ವೈವಿಧ್ಯತೆಯಿಂದ ಕೂಡಿವೆ. ಹವ್ಯಕರು ವೇದ, ಶಾಸ್ತ್ರ, ಧರ್ಮ, ವೈದಿಕ, ಧಾರ್ಮಿಕ ವಿಚಾರಗಳಿಗೆ ಸಂಬಂಧಿಸಿದಂತೆ ಮೊದಲು ಸಂಸ್ಕೃತ ಅನಂತರ ಕನ್ನಡ ಭಾಷೆಯಲ್ಲಿ ಗ್ರಂಥಗಳನ್ನು ರಚಿಸಿದರು. ಹವ್ಯಕರು ರಚಿಸಿದ ಸಾಹಿತ್ಯವನ್ನು ಮೂರು ಕಾಲಘಟ್ಟದಲ್ಲಿ ಗುರುತಿಸಬಹುದು.

೧. ಪ್ರಾಚೀನ ಕಾಲದ ಸಾಹಿತ್ಯ – ಪ್ರಾರಂಭದಿಂದ ಕ್ರಿ.ಶ. ೧೫೦೦ರ ತನಕ

೨. ಮಧ್ಯಕಾಲಿನ ಸಾಹಿತ್ಯ – ಕ್ರಿ.ಶ. ೧೫೦೦ರಿಂದ ಕ್ರಿ.ಶ ೧೯೦೦ರ ತನಕ

೩. ಆಧುನಿಕ ಕಾಲದ ಸಾಹಿತ್ಯ – ಕ್ರಿ.ಶ. ೧೯೦೦ ರಿಂದ ಈಚಿನ ಕಾಲ

ಆಧುನಿಕ ಯುಗದಲ್ಲಿ (ಕ್ರಿ.ಶ.೧೯೦೦ ರಿಂದ ಈಚಿನ ಕಾಲ) ಕಾವ್ಯ, ನಾಟಕ, ಕಾದಂಬರಿ, ಸಣ್ಣಕತೆ, ವಿಮರ್ಶೆ, ಸಂಶೋಧನೆ, ಯಕ್ಷಗಾನ ಪ್ರಸಂಗ ಸಾಹಿತ್ಯ, ಪತ್ರಿಕೋದ್ಯಮ, ಮಕ್ಕಳ ಸಾಹಿತ್ಯ, ಅನುವಾದ ಸಾಹಿತ್ಯ ಮುಂತಾದ ಪ್ರಕಾರಗಳಲ್ಲಿ ಹವ್ಯಕ ಬರಹಗಾರರು ಕನ್ನಡದಲ್ಲಿಯೇ ಹೇರಳವಾಗಿ ಸಾಹಿತ್ಯ ರಚನೆ ಮಾಡುತ್ತಾ ಬಂದಿದ್ದಾರೆ. ಕಾವ್ಯ, ಸಣ್ಣಕತೆ, ಕಾದಂಬರಿ, ಸಂಶೋಧನೆ, ಯಕ್ಷಗಾನ ಪ್ರಸಂಗ ಸಾಹಿತ್ಯ ಪ್ರಕಾರಗಳಲ್ಲಿ ಹವ್ಯಕರ ಕೊಡುಗೆಗಳನ್ನು ವಿದ್ವಾಂಸರು ಕನ್ನಡದ ಸಾಹಿತ್ಯ ಚರಿತ್ರೆಯ ಸಂದರ್ಭದಲ್ಲಿ ಗುರುತಿಸಿದ್ದಾರೆ. ಹವ್ಯಕ ಸಮುದಾಯದವರು ಮನೆಯೊಳಗೆ ಬಳಸುವ ಭಾಷೆಯಾದ 'ಹವಿಗನ್ನಡ'ದಲ್ಲಿ ಕವಿತೆಗಳು, ಕಾದಂಬರಿಗಳು, ಯಕ್ಷಗಾನ ಪ್ರಸಂಗಗಳು ರಚನೆಗೊಂಡು ಸಹೃದಯ ಲೋಕದಲ್ಲಿ ಜನಪ್ರೀತಿಯನ್ನು ಪಡೆದುಕೊಂಡಿದೆ. ಹಿರಿಯ ಕವಿಗಳಾದ ಬಾಳಿಲ ಕೆ. ಪರಮೇಶ್ವರ ಭಟ್ಟರು ಮೂಲದ ವ್ಯಾಸಭಾರತವನ್ನು ಆಧರಿಸಿ,

ಹವಿಗನ್ನಡದಲ್ಲಿ ಬರೆದ 'ಧರ್ಮವಿಜಯ' (೨೦೦೫) ವೆಂಬ ಹವ್ಯಕ ಭಾರತ, ಕನ್ನಡ ಕಾವ್ಯಲೋಕಕ್ಕೊಂದು ವಿಶಿಷ್ಟ ಕೊಡುಗೆ. ಹವ್ಯಕ ಕನ್ನಡದ ಮೊದಲ ಮಹಾಕಾವ್ಯ .

ಈವರೆಗಿನ ಚರ್ಚೆಯ ಸಾರವನ್ನು ಗ್ರಹಿಸುವುದಿದ್ದರೆ, ಹವ್ಯಕರು ಬರೆದ ಸಣ್ಣಕತೆಗಳ ಬೆಳೆ ಹುಲುಸಾಗಿಯೇ ಇದೆ. ಆದರೆ ಅಖಿಲ ಕರ್ನಾಟಕ ಮಟ್ಟದಲ್ಲಾಗುವ ಸಾಹಿತ್ಯ ಚರ್ಚೆಗಳಲ್ಲಿ ಸೇಡಿಯಾಪು, ಕಡೆಂಗೋಡ್ಲು, ಕೊಡಗಿನ ಗೌರಮ್ಮನವರ ಕತೆಗಳು ಮಾತ್ರ ಚರ್ಚಿತವಾಗಿವೆಯೇ ಹೊರತು ಎಮ್. ಸುಬ್ರಾಯನ್, ಜಿ.ಶಂಕರಭಟ್ಟ, ಯರ್ಮುಂಜ ರಾಮಚಂದ್ರ, ದೇವಾಂಗನಾ ಶಾಸ್ತ್ರಿಯವರಂತಹ ಗಟ್ಟಿ ಕತೆಗಾರರು ಗಂಭೀರ ಚರ್ಚೆಗೆ ಒಳಪಡದೇ ಹೋಗಿದ್ದಾರೆ.

ಕನ್ನಡದ ಈ ಪ್ರಮುಖ ಕತೆಗಾರರನ್ನು ಕುರಿತು ಇದುವರೆಗೆ ಬಂದ ಒಳನೋಟಗಳನ್ನು ಒಗ್ಗೂಡಿಸಿ, ಅವರ ಸೃಜನೆಯ ಚಹರೆಗಳ ಚರ್ಚೆಯನ್ನು ಇನ್ನೂ ಮುಂದಕ್ಕೊಯ್ಯುವ ಬಗೆಗೆ ಪ್ರಬಂಧದಲ್ಲಿ ಪ್ರಾಮಾಣಿಕ ಪ್ರಯತ್ನವಿದೆ.

ಹವ್ಯಕ ಕತೆಗಾರರು ಸಾಹಿತ್ಯ ಚಳುವಳಿಯಲ್ಲಿ ಬಹು ತೀವ್ರವಾಗಿ ತೊಡಗಿದವರಲ್ಲ. ಆದರೆ ಸಾಹಿತ್ಯ ಚಳುವಳಿಗಳ ಎಲ್ಲ ಧೋರಣೆಗಳೂ ಇಲ್ಲಿಯ ಕತೆಗಳಿಗೆ ಭಟ್ಟಿ ಇಳಿದು ಬಂದಿವೆ ಎಂಬುದರಲ್ಲಿ ಸಂಶಯವಿಲ್ಲ. ಕನ್ನಡ ಕತೆಗಳ ಆದಿಮರೂಪದಿಂದ ತೊಡಗಿ, ಬಂಡಾಯ ಧೋರಣೆಯ ಕುಮಾರ ಜೋಶಿಯವರೆಗೆ ವಿಸ್ತಾರ ವಿನ್ಯಾಸವಿದೆ. ಆದರೂ ತಮ್ಮ ಅನನ್ಯತೆಯನ್ನು ಇನ್ನಿಲ್ಲದ ರೀತಿಯಲ್ಲಿ ಸೇಡಿಯಾಪು ಕೃಷ್ಣ ಭಟ್ಟ, ಕಡೆಂಗೋಡ್ಲು ಶಂಕರಭಟ್ಟ, ಯರ್ಮುಂಜ ರಾಮಚಂದ್ರ, ಕೆ.ವಿ. ತಿರುಮೇಲೇಶ, ಸುಬ್ರಾಯ ಚೊಕ್ಕಾಡಿಯವರು ರೂಢಿಸಿಕೊಂಡರು, ಜನಪ್ರಿಯ ಕತೆಗಳಿಗೆ ಅನಿವಾರ್ಯ ದ್ರವ್ಯವಾದ ಅಕರ್ಷಕ ಸಂವಹನೆಯನ್ನು ಉಳಿಸಿಕೊಂಡು ಜಿ.ಶಂಕರ ಭಟ್, ಭಾರತೀಸುತ, ಮಹಾಬಲಮೂರ್ತಿ ಕೊಡ್ಲೆಕೆರೆ ಮುಂತಾದವರು ಸಮರ್ಥ ಕತೆಗಳನ್ನು ಕೊಟ್ಟರು.

ನವೋದಯ ಕಾಲದಲ್ಲಿ ಸಣ್ಣಕತೆಗಳನ್ನು ಬರೆಯುತ್ತಿದ್ದ ಕಡೆಂಗೋಡ್ಲು, ಸೇಡಿಯಾಪು, ಎಮ್.ಸುಬ್ರಾಯನ್, ಪ.ಸು.ಭಟ್ಟ ಮುಂತಾದ ಹವ್ಯಕರು ತಮ್ಮ ಕತೆಗಳ ಮೂಲಕ ತಮ್ಮ ಕಾಲದ ಸಾಮಾಜಿಕ ಜೀವನದ ಒಳಿತು-ಕೆಡುಕುಗಳಿಗೆ ಸ್ಪಂದಿಸಿದ ವಿಚಾರವನ್ನು ಗುರುತಿಸಲಾಗಿದೆ. ಬಡತನ, ಗ್ರಾಮೀಣ ಜೀವನದ ಚಿತ್ರಗಳು, ಕೆಳಸ್ತರದ

ಬದುಕು ಇವನ್ನೆಲ್ಲ ಈ ಮಾಧ್ಯಮದಲ್ಲಿ ಪಡೆಯಲು ಕತೆಗಾರರು ಯತ್ನಿಸಿದ್ದಾರೆ. ನವೋದಯ ಕಾಲದಲ್ಲಿ ಪ್ರಚಲಿತದಲ್ಲಿದ್ದ ರಾಷ್ಟ್ರೀಯ ಚಳುವಳಿ, ಗಾಂಧೀಜಿಯವರ ವಿಚಾರಧಾರೆ, ಅಸ್ಪೃಶ್ಯತಾ ನಿವಾರಣೆ, ಜಾತಿ ಪದ್ಧತಿಯ ವಿರುದ್ಧ ಹೋರಾಟ ಇತ್ಯಾದಿ ಅಂಶಗಳು ಹವ್ಯಕರ ಕತೆಗಳಲ್ಲಿ ಕಂಡು ಬರುವುದನ್ನು ಗುರುತಿಸಲಾಗಿದೆ.

ಪ್ರಗತಿಶೀಲ ಕಾಲಘಟ್ಟದಲ್ಲಿ ಹವ್ಯಕರು ಸಾಮಾಜಿಕ ಶೋಷಣೆ, ಸ್ತ್ರೀ ಶೋಷಣೆಯ ಕುರಿತು ಕತೆಗಳನ್ನು ಬರೆದರು. ಪ್ರಗತಿಶೀಲ ಹವ್ಯಕ ಕತೆಗಾರರು ಶೋಷಣೆಯ ವಿರುದ್ಧ ಪ್ರತಿಭಟನೆಯನ್ನು ವ್ಯಕ್ತಪಡಿಸಿದ ನಿಲುವನ್ನು ಗುರುತಿಸಬಹುದಾಗಿದೆ. ಹೆಣ್ಣು ಸದಾ ಶೋಷಿತಳು ಎಂಬ ಅಂಶವನ್ನು ಕತೆಗಾರರು ಗುರುತಿಸಿದ್ದಾರೆ. ಹೆಣ್ಣು ವೇಶ್ಯೆಯಾಗಲು ಸಮಾಜದ ಅಮಾನವೀಯ ನಡವಳಿಕೆಯೇ ಕಾರಣ. ವೇಶ್ಯೆಯ ಸಮಸ್ಯೆಯು ಸರಳ ಕಾರಣವೊಂದರಿಂದ ಹುಟ್ಟಿಕೊಂಡದ್ದಲ್ಲ. ಅದು ಸಮಾಜ ನಿರ್ಮಿಸಿದ ಒಂದು ಸಂಕೀರ್ಣ ವ್ಯವಸ್ಥೆ ಎನ್ನುವುದರ ಕಡೆಗೆ ಹವ್ಯಕ ಬರಹಗಾರರು ಬೆಳಕು ಚೆಲ್ಲಿದ ಅಂಶವನ್ನು ಗುರುತಿಸಲಾಗಿದೆ. ಮಾನವ ಬದುಕು ಅರ್ಥಪೂರ್ಣವಾಗುವುದಕ್ಕೆ ಮಾನವೀಯ ನಿಲುವುಗಳು ಅಗತ್ಯ ಎಂಬುದರ ಕಡೆಗೆ ಹವ್ಯಕ ಕತೆಗಾರರ ತುಡಿತವಿರುವುದನ್ನು ಗುರುತಿಸಲು ಸಾಧ್ಯವಾಗಿದೆ.

ಹವ್ಯಕ ಬರಹಗಾರರ ಕತೆಗಳಲ್ಲಿ ವಸಾಹತುಶಾಹಿ ಆಡಳಿತದ ವಿರುದ್ಧ ನಡೆದ ಹೋರಾಟದ ವಿವಿಧ ಮುಖಗಳು ದಾಖಲಾಗಿವೆ. ರಾಷ್ಟ್ರೀಯ ಚಳುವಳಿಯ ಹೆಜ್ಜೆ ಗುರುತುಗಳನ್ನು ಗುರುತಿಸುವ ಸಂದರ್ಭದಲ್ಲಿ ಹವ್ಯಕ ಬರಹಗಾರರ ಕತೆಗಳನ್ನು ಗಮನಿಸುವುದು ಅನಿವಾರ್ಯ. ಇಲ್ಲಿನ ಕಥೆಗಳು ಸ್ವಾತಂತ್ರ್ಯ ಹೋರಾಟದ ಒಳಸೂಕ್ಷ್ಮಗಳನ್ನು ಸಮರ್ಥವಾಗಿ ದಾಖಲಿಸಿದ ಅಂಶವನ್ನು ಗುರುತಿಸಲಾಗಿದೆ.

ಹವ್ಯಕ ನವ್ಯ ಕತೆಗಾರರು ಬರೆದ ಕತೆಗಳಲ್ಲಿ ಕಾಮ, ಮನುಷ್ಯನ ಒಳಮನಸ್ಸಿನ ತಾಕಲಾಟ, ಸಂಕೀರ್ಣತೆಗಳು, ಏಕಾಂಗಿತನದ ಚಿತ್ರಣವನ್ನು ಕಾಣಬಹುದು. ಹೆಚ್ಚಿನ ಕತೆಗಾರಿಗೆ ಮನುಷ್ಯನ ಅಂತರಂಗದ ಬದುಕಿನಲ್ಲೇ ಆಸಕ್ತಿ ಹೆಚ್ಚಾಗಿರುವುದರಿಂದ ಅವರು ಬದುಕನ್ನು ಒಳಗಿನಿಂದ ನೋಡುತ್ತಾರೆ. ಇವರ ಕಥಾನಾಯಕರು ಅಂತರ್ಮುಖಿಗಳಾಗಿದ್ದುಕೊಂಡು, ಪರಿಸರದ ಒತ್ತಾಯದಿಂದ ಹೇರಿದ ಬದುಕಿನ ರೀತಿಯ ನಡುವೆ ಬಾಳಿದ ಅಂಶವನ್ನು ಗುರುತಿಸಲಾಗಿದೆ.

ಹವ್ಯಕ ಬರಹಗಾರರು ಬರೆದ ಕತೆಗಳಲ್ಲಿ ಬಂಡಾಯ ಧೋರಣೆಯನ್ನು ಗುರುತಿಸಲು ಸಾಧ್ಯ. ಹವ್ಯಕ ಕತೆಗಾರರು ವ್ಯವಸ್ಥೆಯ ವಿರುದ್ಧ ಏಳುವ ಬಂಡಾಯದ ಸ್ವರೂಪದಲ್ಲಿ ಕೆಲವೊಮ್ಮೆ ಆಕ್ರೋಶ ಕಂಡುಬರುತ್ತದೆ. ಮತ್ತೆ ಕೆಲವೊಮ್ಮೆ ಅದರ ಬದಲಿಗೆ ಸಾತ್ವಿಕ ವಿಡಂಬನೆಯಿದೆ. ಆಧುನಿಕ ಜಗತ್ತಿಗೆ ಅಪ್ರಸ್ತುತವಾಗುತ್ತಿರುವ ಬ್ರಾಹ್ಮಣ್ಯದ ವಿರುದ್ಧ ಬ್ರಾಹ್ಮಣರೇ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿರುವುದು ಗಮನಿಸಬೇಕಾದ ಅಂಶ. ಸಾವಿರಾರು ವರ್ಷಗಳಿಂದ ನಡೆದುಕೊಂಡು ಬಂದ ಒಂದು ವ್ಯವಸ್ಥೆಯ ಒಳಗೆ ಪ್ರತಿಭಟನೆಯ ಕೆಚ್ಚು ರೂಪುಗೊಳ್ಳುತ್ತಿರುವ ಅಂಶವನ್ನು ಇಲ್ಲಿನ ಕತೆಗಳಲ್ಲಿ ಗಮನಿಸಲಾಗಿದೆ. ಜಿ.ಶಂಕರ ಭಟ್ಟರ ಕತೆಗಳಲ್ಲಿ ಪ್ರಗತಿಶೀಲರ ಆವೇಶದಿಂದ ಹೊರತಾದ ವಿಶಿಷ್ಟ ಬಂಡಾಯ ಅರುವತ್ತರ ದಶಕದಲ್ಲೇ ಸಂಭವಿಸಿರುವುದನ್ನು ಸಾಧಾರವಾಗಿ ಪ್ರಬಂಧದಲ್ಲಿ ಗುರುತಿಸಿದೆ.

ಹವ್ಯಕ ಲೇಖಕಿಯರು ಬರೆದ ಕತೆಗಳನ್ನು ಗಮನಿಸಿದಾಗ ಅವರು ಸ್ತ್ರೀಯರನ್ನು ಕೇವಲ ಒಂದು ಬಲಿಪಶುವನ್ನಾಗಿ ಕಾಣದೆ, ಅವಳಲ್ಲಿ ಕರ್ತೃತ್ವ ಶಕ್ತಿಯನ್ನು ಗುರುತಿಸುವ ಮೂಲಕ ಅವಳನ್ನು ಮಾನವೀಯ ನೆಲೆಯಿಂದ ಕಂಡಿದ್ದಾರೆ. ಅವಳ ಬದುಕಿನ ಸಂಕೀರ್ಣತೆಯನ್ನು ಮೂರ್ತಗೊಳಿಸುವಲ್ಲಿ ಆಸಕ್ತಿ ತೋರಲಾಗಿದೆ. ಕನ್ನಡದ ಬಹು ಸಂಸ್ಕೃತಿಯ ವಿವರಗಳನ್ನು ತಿಳಿಯುವಲ್ಲಿ ಸ್ತ್ರೀಯರ ಕಥೆಗಳೇನೂ ಹಿಂದೆ ಉಳಿದಿಲ್ಲ. ಇವರ ಕಥೆಗಳಲ್ಲಿ ಸ್ತ್ರೀ ದೃಷ್ಟಿಕೋನ, ಸ್ತ್ರೀ ಸಂವೇದನೆ ಪ್ರಗತಿಪರ ಚಿಂತನೆ ಮುಖ್ಯವಾಗಿದೆ. ಇವರ ಕಥೆಗಳಲ್ಲಿ ಬರುವ ಸ್ತ್ರೀ ಪಾತ್ರಗಳು ವ್ಯವಸ್ಥೆಯ ಕ್ರೂರತನಕ್ಕೆ ಬೇಸತ್ತು ಅರ್ಥಪೂರ್ಣವಾದ ಆಶಾವಾದದೊಡನೆ, ಬಂಡಾಯದ ಪ್ರವೃತ್ತಿಯೊಡನೆ ನಿಲುಗಡೆಗೆ ಬರುತ್ತವೆ. ಪರಂಪರಾಗತ ಸ್ತ್ರೀಪುರುಷ ಅಸಮಾನತೆಯಿಂದ ಸ್ತ್ರೀಯರಿಗೆ ಎದುರಾಗುವ ಸಮಸ್ಯೆಗಳು ಮತ್ತು ಅವರು ಪ್ರಜ್ಞಾಪೂರ್ವಕವಾಗಿಯೇ ಪರಂಪರೆಯನ್ನು ಧಿಕ್ಕರಿಸಿ ಕೈಗೊಳ್ಳುವ ನಿಲುವನ್ನು ಹವ್ಯಕ ಕತೆಗಾರ್ತಿಯರು ಆಧುನಿಕ ಬದುಕಿನ ನೆಲೆಯಲ್ಲಿ ಚಿತ್ರಿಸುತ್ತಾರೆ. ತಮ್ಮ ಕಾಲದ ವರ್ತಮಾನದ ಸಮಸ್ಯೆಗೆ ಹವ್ಯಕ ಲೇಖಕಿಯರು ಕ್ರಿಯಾಶೀಲವಾಗಿ ಪ್ರತಿಕ್ರಿಯಿಸಿದ ರೀತಿಯನ್ನು ಇಲ್ಲಿನ ಕಥೆಗಳಲ್ಲಿ ಗುರುತಿಸಲು ಸಾಧ್ಯ.

ಹವ್ಯಕ ಸಮುದಾಯದ ವಿಭಿನ್ನ ಆಚಾರ ವಿಚಾರಗಳನ್ನು ಅವರ ಸಂಸ್ಕಾರ ವಿಶೇಷತೆಗಳನ್ನು, ಧಾರ್ಮಿಕ ಆಚರಣೆಗಳನ್ನು ಹವ್ಯಕರು ಕತೆಗಳಲ್ಲಿ ದಾಖಲಿಸಿದ

ಅಂಶವನ್ನು ಕಾಣಬಹುದು. ಹವ್ಯಕರ ಆಹಾರಪದ್ಧತಿ, ಉಡುಗೆತೊಡುಗೆ, ಔಷಧದ ಬಳಕೆ ಮೊದಲಾದ ಅಂಶಗಳಿಂದ ಈ ಸಮುದಾಯದ ಜೀವನ ಪದ್ಧತಿಯನ್ನು ಗುರುತಿಸಬಹುದು. ಕನ್ನಡದ ಇತರ ಕತೆಗಾರರಲ್ಲಿ ಸಿಗದ ಹಲವು ಅಂಶಗಳು, ಹವ್ಯಕ ಬರಹಗಾರರ ಕತೆಗಳಲ್ಲಿ ಸಿಗಬಲ್ಲದು. ಇದು ಅವರ ಬರಹಗಳಿಗೆ ವಿಶೇಷ ಮೆರುಗನ್ನು ನೀಡಿದೆ. ಒಂದು ಇಡೀ ಸಮುದಾಯದ ಜೀವನ ಪದ್ಧತಿಯನ್ನು ಪರಿಚಯಿಸುವ ಇಲ್ಲಿನ ಕತೆಗಳು ಹವ್ಯಕ ಸಂಸ್ಕೃತಿಯನ್ನು ಓದುಗರಿಗೆ ಆಪ್ತವಾಗಿಸುತ್ತವೆ.

ತಂತ್ರಕ್ಕೆ ಅನುಗುಣವಾಗಿ ಭಾಷೆಯನ್ನು ಹದವರಿತು, ಸಮಯೋಚಿತವಾಗಿ ಬಳಸಿರುವುದು ಹವ್ಯಕರ ವೈಶಿಷ್ಟ್ಯ. ಪಾತ್ರಗಳ ನಡುವಣ ಸಂಭಾಷಣೆಯ ಸಂದರ್ಭದಲ್ಲಿ ದಕ್ಷಿಣ ಕನ್ನಡ ಹವ್ಯಕ ಸಮುದಾಯ ಮತ್ತು ಉತ್ತರ ಕನ್ನಡ ಹವ್ಯಕ ಸಮುದಾಯದವರು ಬಳಸುವ ಭಾಷೆಯ ಬಳಕೆಯಾಗಿದೆ. ಈ ಬಗೆಯ ಭಾಷಾ ಬಳಕೆ ಅವರ ಶೈಲಿಯ ವೈಶಿಷ್ಟ್ಯವೂ ಹೌದು. ಇದು ಅವರ ಕೃತಿಗಳಿಗೆ ಬಹುವಿಧ ಆಯಾಮವನ್ನು ನೀಡಿದೆ. ಕತೆಗಳಲ್ಲಿ ಹವ್ಯಕರ ಮನೆಭಾಷೆಯ ಪದಗಳನ್ನು ಗುರುತಿಸಬಹುದು.

ಹವ್ಯಕ ಬರಹಗಾರರು ಕೇವಲ ಹವ್ಯಕ ಸಮುದಾಯದ ಬದುಕನ್ನು ಮಾತ್ರ ಚಿತ್ರಿಸಿಲ್ಲ. ಇತರ ಸಮುದಾಯದವರ ಬದುಕನ್ನೂ ಅಸ್ಥೆಯಿಂದ ಚಿತ್ರಿಸಿದ್ದಾರೆ. ಅವರ ನೋವು, ಸಂಕಟಗಳನ್ನು ಸಹಾನುಭೂತಿಯಿಂದ ಪರಿಶೀಲಿಸಿದ್ದಾರೆ.

### ೧೩.೨ ಮುಂದಿನ ಅಧ್ಯಯನದ ಸಾಧ್ಯತೆಗಳು

೧. ಪ್ರಸ್ತುತ ಅಧ್ಯಯನವು 'ಹವ್ಯಕರು ಬರೆದ ಸಣ್ಣಕತೆಗಳ ಅಧ್ಯಯನ'ಕ್ಕೆ ಮಾತ್ರ ಸೀಮಿತವಾಗಿದೆ. ಹವ್ಯಕರು ಕಾದಂಬರಿ, ನಾಟಕ, ಕಾವ್ಯ ಮುಂತಾದ ಇನ್ನಿತರ ಸಾಹಿತ್ಯ ಪ್ರಕಾರಗಳಲ್ಲಿ ಪ್ರತಿಯೊಂದರಲ್ಲಿಯೂ ನೂರಕ್ಕೂ ಮಿಕ್ಕಿ ಕೃತಿಗಳನ್ನು ರಚಿಸಿದ್ದಾರೆ. ಈ ಕೃತಿಗಳನ್ನು ಕುರಿತು ವಿಭಿನ್ನ ದೃಷ್ಟಿಕೋನದಿಂದ ಅಧ್ಯಯನ ಮಾಡಲು ಅವಕಾಶವಿದೆ. ಇದರಿಂದಾಗಿ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಹವ್ಯಕರು ನೀಡಿದ ಕೊಡುಗೆಯನ್ನು ಗುರುತಿಸಲು ಸಾಧ್ಯ.

೨. ಬಾಳಿಲ ಕೆ.ಪರಮೇಶ್ವರ ಭಟ್ಟರು ಹವಿಗನ್ನಡದಲ್ಲಿ ಬರೆದ 'ಧರ್ಮವಿಜಯ' (೨೦೦೫)ವೆಂಬ ಹವ್ಯಕ ಉಪಭಾಷೆಯಲ್ಲಿ ಬಂದ ಮಹಾಭಾರತ ಕನ್ನಡ

ಕಾವ್ಯಲೋಕಕ್ಕೊಂದು ವಿಶಿಷ್ಟ ಕೊಡುಗೆ. ಇದರೊಂದಿಗೆ ಹವ್ಯಕ ಭಾಷೆಯಲ್ಲಿ ಬಂದ ಕಥೆ, ಕಾದಂಬರಿ, ಕಾವ್ಯ, ಮುಂತಾದ ಕೃತಿಗಳನ್ನು ಒಟ್ಟಾಗಿ ಅಧ್ಯಯನ ಮಾಡಲು ಅವಕಾಶವಿದೆ. ಉಪಭಾಷಾ ಅಧ್ಯಯನಕ್ಕೆ ಇದರಿಂದ ಹೆಚ್ಚು ಅನುಕೂಲವಾಗಬಲ್ಲವು. ಹಾಗೆಯೇ ಹವ್ಯಕರ ಪ್ರಾದೇಶಿಕ ಸಂಸ್ಕೃತಿಯ ವೈಶಿಷ್ಟ್ಯವನ್ನು ಗಮನಿಸಲು ಸಾಧ್ಯ.

೩. ವಿಮರ್ಶೆ, ಸಂಶೋಧನೆ, ಅನುವಾದ ಸಾಹಿತ್ಯ ಮುಂತಾದ ಸೃಜನೇತರ ಸಾಹಿತ್ಯದ ಕ್ಷೇತ್ರದಲ್ಲಿ ಹವ್ಯಕರ ಕೊಡುಗೆ ವಿಶಿಷ್ಟವಾದುದು. ಇದನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡಲು ಅವಕಾಶವಿದೆ.

೪. ಡಾ. ಪಾದೇಕಲ್ಲು ವಿಷ್ಣುಭಟ್ಟರು ಬರೆದ 'ಭಾಗವತದ ಯಕ್ಷಗಾನ ಪ್ರಸಂಗಗಳು' ಎಂಬ ಸಂಪ್ರಬಂಧದಲ್ಲಿ ಹವ್ಯಕರು ಬರೆದ ಯಕ್ಷಗಾನ ಪ್ರಸಂಗಗಳನ್ನು ಅಧ್ಯಯನಕ್ಕೆ ಬಿಡಿ ಬಿಡಿಯಾಗಿ ಬಳಸಲಾಗಿದೆ. ನಾರಾಯಣ ಶಾನಭಾಗರು ಸಂಪಾದಿಸಿದ ' ಹವ್ಯಕ ಯಕ್ಷಗಾನ ಕವಿ ಕಾವ್ಯಸೂಚಿ'ಯ ಪ್ರಕಾರ ಹವ್ಯಕರು ಸಾವಿರಕ್ಕೂ ಮಿಕ್ಕಿ ಯಕ್ಷಗಾನ ಪ್ರಸಂಗಗಳನ್ನು ಬರೆದಿದ್ದಾರೆ. ಹವ್ಯಕರು ಬರೆದ ಯಕ್ಷಗಾನ ಪ್ರಸಂಗ ಸಾಹಿತ್ಯವನ್ನು ಆಧರಿಸಿ ಪ್ರತ್ಯೇಕ ಅಧ್ಯಯನ ನಡೆಸಲು ಅವಕಾಶವಿದೆ.

ಕಳೆದ ಒಂದು ಶತಮಾನದಲ್ಲಿ ಹವ್ಯಕ ಸಮುದಾಯದವರು ಸಾಹಿತ್ಯಕ್ಕೆ ನೀಡಿದ ಕೊಡುಗೆ ಮಹತ್ತ್ವದ್ದಾಗಿದೆ. ಆದರೆ ಈ ನಿಟ್ಟಿನಲ್ಲಿ ನಿರ್ದಿಷ್ಟ ಅಧ್ಯಯನಗಳು ನಡೆದಿರುವುದು ಕಡಿಮೆ. ಹವ್ಯಕರು ಸೃಷ್ಟಿಸಿದ ಸಾಹಿತ್ಯ ಮತ್ತು ಹವ್ಯಕ ಭಾಷೆಯಲ್ಲಿ ಬಂದ ಸಾಹಿತ್ಯವನ್ನು ನಿರ್ಲಕ್ಷಿಸಿದ್ದೇ ಹೆಚ್ಚು. ಇನ್ನಾದರೂ ಸಂಶೋಧಕರು ಈ ಕಡೆಗೆ ದೃಷ್ಟಿ ಹರಿಸಿದರೆ ಹವ್ಯಕ ಬರಹಗಾರರ ಅನನ್ಯತೆಯನ್ನು ಗುರುತಿಸಲು ಸಾಧ್ಯ.

# ಅನುಬಂಧ

೧. ಅಧ್ಯಯನಕ್ಕೆ ಒಳಪಡಿಸಿದ ಕಥಾಸಂಕಲನಗಳು

೨. ಅಧ್ಯಯನಕ್ಕೆ ಒಳಪಡಿಸದ (೨೦೦೦ದ ಅನಂತರ ಪ್ರಕಟಗೊಂಡ ಕಥಾಸಂಕಲಗಳು)

೩. ಪರಾಮರ್ಶನ ಗ್ರಂಥಸೂಚಿ

# ಅನುಬಂಧ

## ೧. ಅಧ್ಯಯನಕ್ಕೆ ಒಳಪಡಿಸಿದ ಕಥಾಸಂಕಲನಗಳು

| | | | | |
|---|---|---|---|---|
| ೧ | ಅಶೋಕ ಹೆಗಡೆ | ೧೯೯೬ | *ಒಂದು ತಗಡಿನ ಚೂರು* | 'ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ |
| ೨ | ಉಬರಡ್ಕ ಜಿ.ಎಸ್ | ೧೯೯೭ | *ಚಿಕ್ಕದೊಂದು ಗಿಳಿಯ ಸಾಕಿ* | ಸುಮನಸಾ ವಿಚಾರ ವೇದಿಕೆ, ಚೊಕ್ಕಾಡಿ |
| ೩ | ಕಾಳೇಗೌಡ ನಾಗವಾರ ಡಾ.(ಸಂ.) | ೨೦೦೨ | *ಜೀವನ ಪ್ರೀತಿ* (ಕೊಡಗಿನ ಗೌರಮ್ಮ ಬರೆದ ಎಲ್ಲಾ ಕಥೆಗಳು) | ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜ ಪೇಟೆ, ಬೆಂಗಳೂರು |
| ೪ | ಕುಮಾರ ಜೋಷಿ | ೧೯೯೦ | *ಸಿಸ್ಟರ್ ಮಿರಾಂಡಾಳ ಕಪ್ಪು ರವಿವಾರ* | ಗೀತಾ ಬುಕ್ ಹೌಸ್, ಮೈಸೂರು |
| ೫ | ಕೃಷ್ಣ ಭಟ್ ಬಡೆಕ್ಕಿಲ | ೧೯೯೧ | *ಕನ್ನಡಿ ಹೇಳಿದ ಕತೆ* | 'ಮಹಾತಾಯಿ ಪ್ರಕಾಶನ ಜನ್ನಾಪುರ, ಭದ್ರಾವತಿ |
| ೬ | ಕೃಷ್ಣ ಭಟ್ ಸೇಡಿಯಾಪು | ೧೯೫೫ | *ಪಳಮೆಗಳು* | ದಿ ಇಂಡಿಯನ್ ಇಂಡಸ್ಟ್ರಿಯಲ್ಸ್ ಎಂಡ್ ಏಜನ್ಸೀಸ್ ಕಾರ್ನಾಡು ಸದಾಶಿವ ರಾವ್ ರಸ್ತೆ, ಮಂಗಳೂರು. |
| ೭ | ಗಂಗಾ ಪಾದೇಕಲ್ | ೧೯೮೨ | ಪುಲಪೇಡಿ ಮತ್ತು ಇತರ ಕತೆಗಳು | ಕನ್ನಡ ಸಂಘ, ಸಂತ ಫಿಲೋಮಿನಾ ಕಾಲೇಜು, ಪುತ್ತೂರು |
| ೮ | ಗಂಗಾ ಪಾದೇಕಲ್ | ೧೯೮೮ | *ಹೆಜ್ಜೆ ಮೂಡದ ಹಾದಿಯಲ್ಲಿ* | ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ. |
| ೯ | ಗಂಗಾ ಪಾದೇಕಲ್ | ೧೯೯೯ | *ಹೊಸ ಹೆಜ್ಜೆ* | ಕನ್ನಡ ಸಂಘ, ವಿವೇಕಾನಂದ ಕಾಲೇಜು, ಪುತ್ತೂರು |
| ೧೦ | ಗಂಗಾ ಪಾದೇಕಲ್ | ೧೯೯೯ | *ವಾಸ್ತವ* | ಮಹಿಳಾ ಸಾಹಿತ್ಯಿಕಾ, ಹುಬ್ಬಳ್ಳಿ |

| | | | | |
|---|---|---|---|---|
| ೧೧ | ಗೋವಿಂದ ಭಟ್ ಕೈಂತಜೆ | | *ಕಾಳಿಗೆ ಕಾಣಿಕೆ* | ವಿವೇಕ ಸಾಹಿತ್ಯ ಮಾಲೆ, ಮಂಗಳೂರು |
| ೧೨ | ಗೋಪಾಲಕೃಷ್ಣ ಹೆಗಡೆ ಕೇರೀಮನೆ | ೧೯೬೪ | *ನವ್ಯಕತೆಗಳು* | ವಿದ್ಯಾರಣ್ಯ ಗ್ರಂಥ ಪ್ರಕಾಶನ, ಶಿರಸಿ. |
| ೧೩ | ಗೋಪಾಲಕೃಷ್ಣ ಕುಂಟಿನಿ | ೧೯೯೫ | *ವೃತ್ತಾಂತ ಶ್ರವಣವು* | ಲಿಪಿ ಪ್ರಕಾಶನ, ಬೆಂಗಳೂರು. |
| ೧೪ | ಜಯಾ ಯಾಜಿ ಶಿರಾಲಿ | ೨೦೦೦ | *ಶಂಕ್ರಿ* | *ಸೀತಾಕೃಷ್ಣ* ಪ್ರಕಾಶನ, ಚಿಕ್ಕ ಮಗಳೂರು. |
| ೧೫ | ಚಿಂತಾಮಣಿ ಕೊಡ್ಲೆಕೆರೆ | ೧೯೯೯ | *ಬಬ್ರುವಾಹನ ಎಂಬ ಇರುವೆ* | ಶ್ರೀ ರಾಘವೇಂದ್ರ ಪ್ರಕಾಶನ, ಅಂಕೋಲ, ಉ.ಕ. |
| ೧೬ | ಜಯಪ್ರಕಾಶ ಮಾವಿನಕುಳಿ | ೧೯೯೪ | *ಮುಖಗಳು* | ಸ್ಫಟಿಕ ಪ್ರಕಾಶನ, ಗುರುನಿಕೇತನ ಕೋಡಂಗಲ್ಲು. ಮೂಡುಬಿದಿರೆ. |
| ೧೭ | ಜಯಪ್ರಕಾಶ ಮಾವಿನಕುಳಿ | ೧೯೯೦ | *ಕಾಲ* | ಬೆಳ್ಳಿಹಬ್ಬ ಸಮಿತಿ, ಶ್ರೀಮಹಾವೀರ ಕಾಲೇಜು, ಮೂಡುಬಿದಿರೆ. |
| ೧೮ | ತಿರುಮಲೇಶ್ ಕೆ.ವಿ | ೧೯೯೦ | *ಜಾಗುವಾ ಮತ್ತು ಇತರ ಕಥೆಗಳು* | *ಕಲ್ಯಾಣಿ ಪ್ರಕಾಶನ, ಬನಶಂಕರಿ, ಬೆಂಗಳೂರು.* |
| ೧೯ | ತಿರುಮಲೇಶ್ ಕೆ.ವಿ. | ೧೯೮೨ | *ನಾಯಕ ಮತ್ತು ಇತರರು* | ಅಕ್ಷರ ಪ್ರಕಾಶನ, ಸಾಗರ |
| ೨೦ | ತಿಮ್ಮಪ್ಪಯ್ಯ ಕಂಜರ್ಪಣೆ | ೧೯೮೨ | *ಗುರುವನ ಶೋಕ ಮತ್ತು ಇತರ ಕತೆಗಳು* | *ಪದ್ಮಪ್ರಕಾಶನ, ಕಾನ್‌ಬೈಲ್, ಸುಂಟಿಕೊಪ್ಪ* |
| ೨೧ | ದೇವಾಂಗನಾ ಶಾಸ್ತ್ರಿ ಗೋಕರ್ಣ | ೨೦೦೫ | *ವೇಣೀಸಂಹಾರ* | ಅವನಿ ರಸಿಕರರಂಗ ಪ್ರಕಾಶನ, ನಾರಾಯಣಪುರ. |
| ೨೨ | ನಾರಾಯಣಭಟ್ ಮಡಿಯಾಲ | ೧೯೭೮ | *ಪೂರ್ಣಿಮಾ* | ಲೋಕಸೇವಾ ಪ್ರಕಾಶನ, ಸತ್ಯಸಾಯಿ ವಿಹಾರ ಅಳಿಕೆ, ದ.ಕ. |
| ೨೩ | ನಾರಾಯಣ ಭಟ್ | ೧೯೬೫ | ಹೃದಯ ಕುಸುಮ | ಲೋಕಸೇವಾ ಪ್ರಕಾಶನ, |

| | | | | |
|---|---|---|---|---|
| | ಮಡಿಯಾಲ | | | ಸತ್ಯಸಾಯಿ ವಿಹಾರ ಅಳಿಕೆ, ದ.ಕ. |
| ೨೪ | ನಾರಾಯಣ ಕಂಗಿಲ | ೧೯೮೪ | *ಒಯಸಿಸ್* | ಕೃತಿಸಂಪದ, ಉಕ್ಕಿನಡ್ಕ. |
| ೨೫ | ನಾರಾಯಣ ಭಟ್ ಬಿ.ಎನ್. | ೧೯೭೯ | *ಹುಣ್ಣಿಮೆಯ ರಜನಿ* | ಚಾಮುಂಡಿ ಎಂಟರ್ ಪ್ರೈಸಸ್, ವಿದ್ಯಾರಣ್ಯಪುರ, ಮೈಸೂರು. |
| ೨೬ | ನಾರಾಯಣ ರಾವ್ ಜಿ.ಟಿ. | ೧೯೯೩ | *ಕೊಡಗಿನ ಕುಸುಮಗಳು* | ಅತ್ರಿ ಬುಕ್ ಸೆಂಟರ್, ಮಂಗಳೂರು. |
| ೨೭ | ನಾರಾಯಣ ಮಾಳಕೋಡ | ೧೯೪೯ | *ನನ್ನ ಹೆಂಡತಿ* | ಅಂತರಂಗ ಕಾರ್ಯಾಲಯ, ಉಡುಪಿ |
| ೨೮ | ನಾರಾಯಣ ಮಾಳಕೋಡ | ೧೯೬೮ | *ಸುರಗಿ ಹೂವಿನ ದಂಡೆ* | ಸಾಹಿತ್ಯ ಮಂದಾರ ಕನ್ನಡ ಮಾಸಿಕ ಪ್ರಕಟಣೆ, ಉಡುಪಿ |
| ೨೯ | *ಪಾದೆಕಲ್ಲು ವಿಷ್ಣುಭಟ್ಟ ಡಾ। (ಸಂ.)* | *೨೦೦೪* | *ಶಂಕರಭಟ್ಟ ಸಮಗ್ರ ಕಥಾ ಸಂಪುಟ* | *ಕಡೆಂಗೋಡ್ಲು ಶಂಕರಭಟ್ಟ ಜನ್ಮ ಶತಮಾನೋತ್ಸವ ಸಮಿತಿ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ.* |
| ೩೦ | ಭಟ್ಟ, ಪ.ಸು | ೧೯೪೮ | *ಹಕ್ಕಿನ ಹೋರಾಟ* | ಶರಾವತಿ ಪ್ರಕಟನೆ ಮಂದಿರ, ಶಿರಸಿ. |
| ೩೧ | ಭರತನಹಳ್ಳಿ ನಾ.ಸು. | ೧೯೭೯ | *ಬಯಲು ಬತ್ತಲೆ* | ಅಷ್ಟದಳ ಪ್ರಕಾಶನ, ಯಲ್ಲಾಪುರ |
| ೩೨ | ಭಾರತೀಸುತ | ೧೯೬೬ | *ಕರೆಗೆ ಓಗೊಟ್ಟ ಕಾರ್ಡೀಲಿಯಾ!* | ತ.ವೆಂ.ಸ್ಮಾರಕ ಗ್ರಂಥಮಾಲೆ, ಕೃಷ್ಣಮೂರ್ತಿ ಪುರಂ, ಮೈಸೂರು. |
| ೩೩ | ಭಾರತೀಸುತ | ೧೯೬೧ | *ಚಿಂಬ ಹಿಡಿದ ಮೀನು* | ಕೃಷ್ಣಮೂರ್ತಿ ಪುರಂ, ಮೈಸೂರು. |
| ೩೪ | ಮನೋರಮಾ ಎಂ.ಭಟ್ | ೧೯೯೪ | *ಸ್ವಯಂವರ* | ಕನ್ನಡ ಪ್ರಪಂಚ ಪ್ರಕಾಶನ, ಪುತ್ತೂರು |
| ೩೫ | ಮಹಾಬಲಮೂರ್ತಿ ಕೊಡ್ಲೆಕೆರೆ | ೧೯೯೪ | *ಯಕ್ಷಸೃಷ್ಟಿ* | ಮೈತ್ರಿ ಪ್ರಕಾಶನ, ಗವಿಪುರಂ, ಬೆಂಗಳೂರು. |

| | | | | |
|---|---|---|---|---|
| ೩೬ | ಮಹಾಬಲಮೂರ್ತಿ ಕೊಡ್ಲೆಕೆರೆ | ೧೯೯೨ | ಮತ್ತೊಂದು ಮೌನ | ಲಿಪಿ ಪ್ರಕಾಶನ, ಬೆಂಗಳೂರು. |
| ೩೭ | ಮಹಾಬಲೇಶ್ವರ ಭಟ್ಟ ಪಡಾರು | ೧೯೮೪ | ಮಾರಿಬಲೆ ಬೀಸಿತ್ತು | ಕನ್ನಡ ಸಂಘ, ಸಂತ ಫಿಲೋಮಿನಾ ಕಾಲೇಜು, ಪುತ್ತೂರು ದ.ಕ. |
| ೩೮ | ಮಾಲತಿ ಎ.ಪಿ. | ೧೯೯೮ | ವಸಂತದ ಹೂಗಳು | ಕನ್ನಡ ಪ್ರಪಂಚ ಪ್ರಕಾಶನ, ಪುತ್ತೂರು ದ.ಕ. |
| ೩೯ | ಮುಳಿಯ ಕೃಷ್ಣಭಟ್ಟ | ೧೯೫೪ | ಪ್ರವಾಹದಲ್ಲಿ ಪ್ರತಿಬಿಂಬ | ಜನಪ್ರಿಯ ಸಾಹಿತ್ಯ, ಪುತ್ತೂರು |
| ೪೦ | ರಮೇಶ್ ಟಿ.ಎಂ | ೧೯೯೪ | ಇಂಡಾ | ಬಕುಲ ಪ್ರಕಾಶನ, ಬಕ್ಕಳ, ಶಿರಸಿ.ಉ.ಕ. |
| ೪೧ | ರಾಜು ಹೆಗಡೆ | ೧೯೯೮ | ಅಪ್ಪಚ್ಚಿ | ಶ್ರೀ ರಾಘವೇಂದ್ರ ಪ್ರಕಾಶನ, ಅಂಕೋಲಾ. |
| ೪೨ | ರಾಮಚಂದ್ರ ಯರ್ಮುಂಜ | ೨೦೦೨ | ಸಮಗ್ರ ಕಥೆ-ಕಾವ್ಯ | ಪ್ರಿಸಮ್ ಬುಕ್ಸ್ ಪ್ರೈ.ಲಿ.ಬನಶಂಕರಿ, ಬೆಂಗಳೂರು |
| ೪೩ | ರಾಮಕೃಷ್ಣ ಶಾಸ್ತ್ರಿ ಪ. | ೧೯೮೨ | ಬದುಕು | ಲಲಿತ ಪ್ರಕಾಶನ, ಪರ್ಲಡ್ಕ,ಪುತ್ತೂರು |
| ೪೪ | ರಾಜೇಶ್ವರಿ ಜಯಕೃಷ್ಣ | ೨೦೦೦ | ಬಾನಿಗೊಂದು ಎಲ್ಲೆ | ನೂಪುರ ಪ್ರಕಾಶನ, ಯಶವಂತಪುರ, ಬೆಂಗಳೂರು. |
| ೪೫ | ಲೀಲಾ ಮಣ್ಣಾಲ | ೧೯೮೭ | ಹೊಣೆ ಮತ್ತು ಇತರ ಕಥೆಗಳು | ಕನ್ನಡ ಸಂಘ, ಸಂತ ಫಿಲೋಮಿನಾ ಕಾಲೇಜು, ಪುತ್ತೂರು, ದ.ಕ. |
| ೪೬ | ಲೀಲಾ ಮಣ್ಣಾಲ | ೧೯೯೮ | ತೆರೆ | ನಿಸರ್ಗ ಪ್ರಕಾಶನ, ಸಿದ್ಧಾರ್ಥನಗರ, ಮೈಸೂರು |
| ೪೭ | ವಿಶ್ವಾಮಿತ್ರ. ರಾ. ಮೊ | ೧೯೫೭ | ಹಳ್ಳಿಯ ಹಳಬರು | ವಿವೇಕ ಸಾಹಿತ್ಯಮಾಲೆ, ಮಂಗಳೂರು. |
| ೪೮ | ವೆಂಕಟೇಶ ದೀಕ್ಷಿತ ಬನವಾಸಿ | ೧೯೯೮ | ಕಾವಡಿ | ಬಕುಲ ಸಾಹಿತ್ಯ ಪ್ರಕಾಶನ, ಶಿರಸಿ. |

| | | | | |
|---|---|---|---|---|
| ೪೯ | ಶಂಕರ ಭಟ್.ಜಿ. | ೧೯೫೪ | ಕನ್ನಡಿಯಲ್ಲಿ ಕರೆನಾಡು | ಮಿತ್ರರವೃಂದ ಪ್ರಕಾಶನ, ಕಾಸರಗೋಡು |
| ೫೦ | ಶಂಕರ ಭಟ್.ಜಿ. | ೧೯೮೭ | ಸಂಚಯ | ಸಹೋದ್ಯೋಗಿ ಬಳಗ, ಪೆರ್ಲ |
| ೫೧ | ಶೀಗೇಹಳ್ಳಿ ವಿ.ತಿ. | ೧೯೪೯ | ಹರಿದ ಸೆರಗು | ಶರಾವತಿ ಪ್ರಕಟಣ ಮಂದಿರ, ಶಿರಸಿ |
| ೫೨ | ಶೀಗೇಹಳ್ಳಿ ವಿ.ತಿ. | ೧೯೯೦ | ಸುತ್ತಲಿನ ಸತ್ಯ | ಸಿ.ಪಿ.ಬರ್ಘೂರ, ಶಿರಸಿ, ಉ.ಕ. |
| ೫೩ | ಶೇಷಗಿರಿ ಮಾ.ರಾ | ೧೯೬೮ | ನಡೆದದ್ದು ನಡೆಯಲಾರದ್ದು | ಜಲಂಧರ ಪ್ರಕಟನಾಲಯ, ಸಾಗರ. |
| ೫೪ | ಶ್ರೀಕೃಷ್ಣ ಚೊಕ್ಕಾಡಿ | ೧೯೭೯ | ನಿರೀಕ್ಷೆ | ಸುಮನಸಾ ವಿಚಾರ ವೇದಿಕೆ, ಚೊಕ್ಕಾಡಿ, ದ.ಕ. |
| ೫೫ | ಶ್ರೀಧರ ಬಳಗಾರ | ೧೯೯೫ | ಅಧೋಮುಖ | ಬಕುಲ ಪ್ರಕಾಶನ, ಬಕ್ಕಳ, ಶಿರಸಿ. |
| ೫೬ | ಶ್ರೀಧರ ಬಳಗಾರ | ೧೯೯೮ | ಮುಖಾಂತರ | ಶ್ರೀ ರಾಘವೇಂದ್ರ ಪ್ರಕಾಶನ, ಅಂಕೋಲಾ. |
| ೫೭ | ಸರಸ್ವತಿ ಶಂಕರ್ | ೧೯೮೬ | ತೆನೆಗಳು | ಸರಸ್ವತಿ ಶಂಕರ್, ಜೆ.ಪಿ.ನಗರ, ಬೆಂಗಳೂರು |
| ೫೮ | ಸವಿತಾ ಎಸ್.ಭಟ್. ಅಡ್ವಾಯಿ | ೧೯೯೭ | ಪುಟ್ಟತ್ತೆ | ಮಂಗಳ ಪ್ರಕಾಶನ, ಕೊಡಿಯಾಲ್‌ಬೈಲ್, ಮಂಗಳೂರು |
| ೫೯ | ಸೀತಾರಾಮ ಎಚ್.ಜಿ | ೧೯೭೦ | ಕನಸು ಮನಸು | ಕೆಳದಿ ಪ್ರಕಾಶನ, ಸಾಗರ, ಶಿವಮೊಗ್ಗ. |
| ೬೦ | ಸುಬ್ರಾಯನ್ ಎಮ್. | ೧೯೫೨ | ಕುಟ್ಟಿದೊಣ್ಣೆ | ವಿವೇಕ ಸಾಹಿತ್ಯ ಮಾಲೆ, ಮಂಗಳೂರು. |
| ೬೧ | ಸುಬ್ರಾಯ ಚೊಕ್ಕಾಡಿ | ೧೯೭೪ | ಬೇರುಗಳು | ಅಕ್ಷರ ಪ್ರಕಾಶನ, ಸಾಗರ. |
| ೬೨ | ಸುಬ್ರಾಯ ಜಿ.ಬಕ್ಕಳ | ೧೯೯೭ | ಕುಬ್ಜಾ | ಶಶಾಂಕ ಪ್ರಕಾಶನ, ಗಿರಿನಗರ, ಬೆಂಗಳೂರು. |
| ೬೩ | ಸುಬ್ಬರಾಯ ಟಿ.ಎಂ | ೧೯೯೭ | ಕೆರೆ | ಬಕುಲ ಪ್ರಕಾಶನ, ಶಿರಸಿ. |

| | | | |
|---|---|---|---|
| ೬೪ | ಸುಬ್ರಾಯ ಬಿದ್ರೆಮನೆ | ೧೯೯೬ ಬೇಲಿ | ನವಚೇತನ ಪ್ರಕಾಶನ, ಯಲ್ಲಾಪುರ. |
| ೬೫ | ಹೆಗಡೆ. ಜಿ.ಎಸ್ | ೧೯೮೯ ವಾಸ್ತವ | ಸಾಹಿತ್ಯಚೇತನ ಪ್ರಕಾಶನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |

## ೨. ಅಧ್ಯಯನಕ್ಕೆ ಒಳಪಡಿಸದ (೨೦೦೦ದ ಅನಂತರ ಪ್ರಕಟಗೊಂಡ) ಕಥಾಸಂಕಲನಗಳು

| | | | |
|---|---|---|---|
| ೧ | ಅಲಕ ತೀರ್ಥಹಳ್ಳಿ | *ಈ ಕತೆಗಳ ಸಹವಾಸವೆ ಸಾಕು* | ೨೦೦೬ |
| ೨ | ಅಶೋಕ ಹೆಗಡೆ | ಒಳ್ಳೆಯವನು | ೨೦೦೪ |
| ೩ | ಅಶೋಕ ಹೆಗಡೆ | ವಾಸನೆ ಶಬ್ದ ಬಣ್ಣ | ೨೦೦೮ |
| ೪ | ಆಶಾ ಹೆಗಡೆ | ಈ ನೆಲದ ಕಥೆ | ೨೦೦೫ |
| ೫ | ಕಾವೇರಮ್ಮ ಬಿ.ಆರ್. | ಏಳು ಬೀಳುಗಳ ಪಯಣ | ೨೦೦೭ |
| ೬ | ಗಂಗಾ ಪಾದೇಕಲ್ | ಕ್ಷಮಯಾ ಧರಿತ್ರಿ | ೨೦೦೨ |
| ೭ | ಗಂಗಾ ಪಾದೇಕಲ್ | ಮನ್ನಣೆಯ ದಾಹ | ೨೦೦೫ |
| ೮ | ಗಂಗಾ ಪಾದೇಕಲ್ | ಸಂಕ್ರಮಣ | ೨೦೦೬ |
| ೯ | ಗಂಗಾ ಪಾದೇಕಲ್ | ಈ ಪ್ರಜಾರಾಜ್ಯದೊಳಗೆ | ೨೦೦೬ |
| ೧೦ | ಗೋಪಾಲಕೃಷ್ಣ ಪ. | ನೋ ಚೇಂಜ್ ಕಥೆಗಳು | ೨೦೦೨ |
| ೧೧ | ಗೋಪಾಲಕೃಷ್ಣ ಭಟ್ ಎಡನೀರು | ಮರಳುಗಾಡಿನ ಕೋಗಿಲೆ | ೨೦೦೪ |
| ೧೨ | ಗೋಪಾಲಕೃಷ್ಣ ಕುಂಟನಿ | ಆಮೇಲೆ ಇವನು | ೨೦೦೮ |
| ೧೩ | ಜಗದೀಶ ಟಿ.ಎಂ. | ಗ್ರಾಸ | ೨೦೦೬ |
| ೧೪ | ಜಯದೇವ ಪ್ರಸಾದ (ಸಂ.) | ದಿ। ಗಣಪತಿ ಮೊಳೆಯಾರ ಸಂಸ್ಮರಣೆ | ೨೦೦೮ |
| ೧೫ | ನಾಗೇಂದ್ರ ಯಲ್ಲಾಪುರ | ಮರಳಿ ಕಾಡಿಗೆ | ೨೦೦೧ |
| ೧೬ | ಪ್ರಭಾಕರ ತಾಮ್ರಗೌರಿ | ಬದಲಾದ ಸಿಕ್ಕುಗಳು | ೨೦೦೨ |

| | | | |
|---|---|---|---|
| ೧೭ | ಪ್ರಭಾಕರ ತಾಮ್ರಗೌರಿ | ಬಾಳ ಸಂಜೆಯ ನೆರಳು | ೨೦೦೩ |
| ೧೮ | ಬಾಲಸುಬ್ರಹ್ಮಣ್ಯ ಕಂಜರ್ಪಣೆ | ಅದೃಷ್ಟದ ಹುಡುಗಿ | ೨೦೦೩ |
| ೧೯ | ಭಾಗೀರಥಿ ಹೆಗಡೆ | ಗಿಳಿ ಪದ್ಮ | ೨೦೦೬ |
| ೨೦ | ಮನೋರಮಾ ಎಂ.ಭಟ್ | ಶಬ್ದಗಳಾದ ಧ್ವನಿಗಳು | ೨೦೦೭ |
| ೨೧ | ಮಣಿಮಾಲಿನಿ. ವಿ.ಕೆ | ಬಾಜಿರ ಕಂಬದ ಒಳಸುತ್ತು | ೨೦೦೭ |
| ೨೨ | ಮಹಾಬಲಮೂರ್ತಿ ಕೊಡ್ಲೆಕೆರೆ | ಅವನ ಜಗತ್ತಿನ ಹಗಲು | ೨೦೦೧ |
| ೨೩ | ಮಹಾಬಲಮೂರ್ತಿ ಕೊಡ್ಲೆಕೆರೆ | ನೆರಳು | ೨೦೦೨ |
| ೨೪ | ಮಾಲತಿ ಎ.ಪಿ. | ಸಂಜೆ ಬಿಸಿಲು | ೨೦೦೪ |
| ೨೫ | ಯೋಗೀಶ ಜಿ. | ಇಕ್ಕೆಲದವರಿಂದ ಕೇಳಿ | ೨೦೦೫ |
| ೨೬ | ರಾಮಕೃಷ್ಣ ಶಾಸ್ತ್ರಿ | ಚಿತ್ತ ಚೋರ | ೨೦೦೨ |
| ೨೭ | ರಾಮಭಟ್ಟ ಉಪ್ಪಂಗಳ ಡಾ। | ಪಯಣ | ೨೦೦೭ |
| ೨೮ | ರಾಧಾಕೃಷ್ಣ ಬಂಡಗದ್ದೆ | ದಾರಿಯಾವುದಯ್ಯ | ೨೦೦೩ |
| ೨೯ | ಲಕ್ಷ್ಮಿ. ಈ. ಪ್ರಸಾದ್ | ಮನೆಯಂಗಳದಿ ಹೂ | ೨೦೦೬ |
| ೩೦ | ಲೀಲಾ ಮಣ್ಣಾಲ | ಮುಸ್ಸಂಜೆಯ ಹಕ್ಕಿಗಳು | |
| ೩೧ | ವಿಜಯಾ ಸುಬ್ರಹ್ಮಣ್ಯ (ಸಂ.) | ಹತ್ತೆಸಳು (ಕೊಡಗಿನ ಗೌರಮ್ಮ) | ೨೦೦೬ |
| ೩೨ | ವಿಜಯಾ ಸುಬ್ರಹ್ಮಣ್ಯ | ಹೊಂಗಿರಣ ಮತ್ತು ಇತರ ಕಥೆಗಳು | ೨೦೦೧ |
| ೩೩ | ವಿಜಯ ಶ್ರೀಧರ | ನವನೀತ | ೨೦೦೨ |

| | | | |
|---|---|---|---|
| ೩೪ | ವಿನಾಯಕ ಭಟ್ಟ | ಸ್ವಾಹ | ೨೦೦೪ |
| ೩೫ | ಶ್ರೀಕಂಠ ಪುತ್ತೂರು | ಈ ಕಥೆಗೆ ಏನೆಂದು ಹೆಸರಿಡಲಿ | ೨೦೦೬ |
| ೩೬ | ಶ್ರೀಕಂಠ ಪುತ್ತೂರು | ಹುಟ್ಟು ಸಾವಿನ ಸತ್ಯ | ೧೦೦೯ |
| ೩೭ | ಶೈಲಜಾ ಕುಮಾರಿ ಕೆ. | ಮುದ್ದುಗಿಣೆಯ ಸಾಕಿ | ೨೦೦೭ |
| ೩೮ | ಸವಿತಾ ಧಾರೇಶ್ವರ | ಬೇರು | ೨೦೦೬ |
| ೩೯ | ಹೆಗಡೆ. ಎಂ.ಜಿ | ಬರಗಾಲದಲ್ಲಿ ಮಿಂದವಳು | ೨೦೦೫ |

೩. **ಪರಾಮರ್ಶನ ಗ್ರಂಥಸೂಚಿ**

<u>**ಅಧ್ಯಯನ ಮತ್ತು ವಿಮರ್ಶೆ**</u>

೧. ಅನಂತರಾಮು ಕೆ.ಡಾ.; ೧೯೯೭; **ದಕ್ಷಿಣದ ಸಿರಿನಾಡು**; ಅನಂತಪ್ರಕಾಶನ,ದೇವಾಂಬಾ ಅಗ್ರಹಾರ, ಮೈಸೂರು.

೨. ಅಮೃತ ಸೋಮೇಶ್ವರ; ೧೯೭೮; **ಅವಿಲು** ; ಕನ್ನಡ ಸಂಘ, ವಿವೇಕಾನಂದ ಕಾಲೇಜು, ಪುತ್ತೂರು.

೩. ಅಮೃತ ಸೋಮೇಶ್ವರ ; ೨೦೦೯ ; **ಅರಿವಿನ ಹರಿಕಾರರು** ; ಕರ್ನಾಟಕ ಸಂಘ, ಪುತ್ತೂರು.

೪. ಅರವಿಂದ ಮಾಲಗತ್ತಿ ಡಾ। ; ೧೯೯೬; **ದಲಿತ ಸಾಹಿತ್ಯ ನೆಲೆ-ಹಿನ್ನೆಲೆ**; ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೫. ಅರವಿಂದ ಚೊಕ್ಕಾಡಿ (ಸಂ.); ೨೦೦೬; **ಮುಕ್ತಹಂಸ** (ಸುಬ್ರಾಯ ಚೊಕ್ಕಾಡಿ: ಬದುಕು-ಬರಹ); ಕನ್ನಡ ಸಂಘ, ಕಾಂತಾವರ.

೬. ಅಶೋಕ ಟಿ.ಪಿ.; ೧೯೯೧; **ಸಾಹಿತ್ಯ ಸಂದರ್ಭ**; ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

೭. ಆಮೂರ ಜಿ.ಎಸ್; ೨೦೦೩; **ಕನ್ನಡ ಕಥನ ಸಾಹಿತ್ಯ: ಸಣ್ಣಕತೆ**; ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು.

೮. ಆರ್ಯಾಂಬ ಪಟ್ಟಾಭಿ (ಸಂ.); ೨೦೦೪; **ಮಹಿಳಾ ಸಾಹಿತ್ಯ ಸಮೀಕ್ಷೆ**; ಸಂವಹನ, ಶಿವರಾಂಪೇಟೆ, ಮೈಸೂರು.

೯. ಉದ್ಯಾವರ ಮಾಧವ ಆಚಾರ್ಯ; ೨೦೦೧; **ಸಾಹಿತ್ಯ ಸ್ಪಂದನ**; ಕರ್ನಾಟಕ ಸಂಘ, ಪುತ್ತೂರು.

೧೦. ಕೀರ್ತಿನಾಥ ಕುರ್ತಕೋಟಿ ; ೧೯೮೩; **ಯುಗಧರ್ಮ ಹಾಗೂ ಸಾಹಿತ್ಯದರ್ಶನ** ; ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೧೧. ಕೃಷ್ಣ ಭಟ್ಟ ಹೆರಂಜೆ, ಮುರಳೀಧರ ಉಪಾಧ್ಯ ಹಿರಿಯಡಕ (ಸಂ.); ೧೯೯೫; **ಗೋವಿಂದ ಪೈ ಸಂಶೋಧನ ಸಂಪುಟ**; ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಮಹಾತ್ಮಾಗಾಂಧಿ ಮೆಮೋರಿಯಲ್ ಕಾಲೇಜು, ಉಡುಪಿ.

೧೨. ಕೇಶವ ಭಟ್ಟ ಟಿ. ಪ್ರೊ.; ೧೯೮೬; **ಹವ್ಯಕರ ಶೋಭಾನೆಗಳು**; ಚಿರ ಸಾಹಿತ್ಯ ಪ್ರಕಾಶನ, ಬನಶಂಕರಿ ಎರಡನೆ ಹಂತ, ಬೆಂಗಳೂರು.

೧೩. ಕೊಡಗಿನ ಗೌರಮ್ಮ ; ೧೯೮೯; **ಕಂಬನಿ**; ಜಿ. ಕಲ್ಲಯ್ಯ ಅಂಡ್ ಸನ್ಸ್, ಅರಳೇಪೇಟೆ, ಬೆಂಗಳೂರು.

೧೪. ಗಾಯತ್ರಿ ನಾವಡ. ಡಾ.; ೧೯೯೯; **ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು**; ಸಿರಿಪ್ರಕಾಶನ.

೧೫. ಗೋವಿಂದ ಪೈ ಎಂ; ೧೯೭೫ ; **ಕನ್ನಡದ ಮೊರೆ** ; ಕಾವ್ಯಾಲಯ, ಮೈಸೂರು.

೧೬. ಗೋಪಾಲಕೃಷ್ಣ ವಾಟೆಡ್ಕ (ಸಂ.); ೧೯೯೮; **ಬಲಸು ಬರಹ ಬುತ್ತಿ**; ಸೃಷ್ಟಿದೃಷ್ಟಿ ಪ್ರಕಾಶನ, ಬೆಂಗಳೂರು.

೧೭. ಗೋವಿಂದರಾಜ ಗಿರಡ್ಡಿ ; ೧೯೭೮ ; **ಸಣ್ಣಕತೆಯ ಹೊಸ ಒಲವುಗಳು** ; ಸಾಹಿತ್ಯ ಭಂಡಾರ, ಹುಬ್ಬಳ್ಳಿ.

೧೮. ಗೋವಿಂದರಾಜ ಗಿರಡ್ಡಿ (ಸಂ.) ; ೧೯೯೯ ; **ಮರೆಯಬಾರದ ಹಳೆಯ ಕತೆಗಳು**; ಪ್ರಿಸಂ ಬುಕ್ಸ್, ಬೆಂಗಳೂರು.

೧೯. ಗೋವಿಂದರಾಜ ಗಿರಡ್ಡಿ; ೨೦೦೧; ಸಮಗ್ರ ವಿಮರ್ಶೆ ಸಂಪುಟ ೨; ಸ್ವಪ್ನ ಬುಕ್ ಹೌಸ್, ಬೆಂಗಳೂರು.

೨೦. ಚಂದ್ರಕಾಂತ್ ವಿ. ಚವ್ಹಾಣ್ ಡಾ.; ೨೦೦೪; **ಆಧುನಿಕ ಕನ್ನಡ ಸಾಹಿತ್ಯದಲ್ಲಿ ಬಂಡಾಯ**; ಸಾರಾ ಎಂಟರ್ ಪ್ರೈಸಸ್, ಸುಭಾಷ್ ನಗರ, ಮೈಸೂರು.

೨೧. ಜನಾರ್ದನ ಭಟ್ ಬಿ.; ೨೦೦೦; **ಪುಸ್ತಕಾಲೋಕ**; ಶ್ರೀಮಾತಾ ಪ್ರಕಾಶನ, ಕುಂಜಿಬೆಟ್ಟು, ಉಡುಪಿ.

೨೨. ಜನಾರ್ದನ ಭಟ್ ಬಿ. (ಸಂ.); ೨೦೦೧; **ದಕ್ಷಿಣ ಕನ್ನಡದ ಶತಮಾನದ ಕಾವ್ಯ ೧೯೦೦–೨೦೦೦**; ಕನ್ನಡ ಸಂಘ, ಕಾಂತಾವರ.

೨೩. ಜನಾರ್ದನ ಭಟ್ ಬಿ. (ಸಂ.); ೨೦೦೩; **ದಕ್ಷಿಣ ಕನ್ನಡದ ಶತಮಾನದ ಕತೆಗಳು**; ಕರ್ನಾಟಕ ಸಂಘ ಪುತ್ತೂರು.

೨೪. ತಾರಾನಾಥ ಎನ್.ಎಸ್; ೧೯೯೨; **ಸಮರಸ** ; ಬಸವನಗುಡಿ, ಬೆಂಗಳೂರು.

೨೫. ತಿಮ್ಮಪ್ಪ ಕಲಸಿ ಎಚ್.ಎಂ.; ೧೯೯೦; **ಹವ್ಯಕರ ಇತಿಹಾಸ**; ಹವ್ಯಕ ಸಂಪದಭಿವೃದ್ಧಿ ಸಮಾಜ (ರಿ.) ಕೇಡಲಸರ, ಸಾಗರ.

೨೬. ನಂದಿನಿ; ೧೯೭೫; **ವಿಧವೆಯರ ಸಮಸ್ಯೆಗಳು**; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೭. ನರಸಿಂಹಮೂರ್ತಿ ಕೆ. (ಸಂ.); ೧೯೫೮; **ಕನ್ನಡದ ಅತ್ಯುತ್ತಮ ಸಣ್ಣಕತೆಗಳು**; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೮. ನಾಗಭೂಷಣ ಸ್ವಾಮಿ ಓ.ಎಲ್.; ೧೯೯೮; **ವಿಮರ್ಶೆಯ ಪರಿಭಾಷೆ** ; ಅಂಕಿತ ಪುಸ್ತಕ ಪ್ರಕಾಶನ, ಬಸವನಗುಡಿ, ಬೆಂಗಳೂರು.

೨೯. ನಾಯಕ ಹಾ.ಮಾ.ಡಾ. (ಸಂ.); ೧೯೭೯; **ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ**; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩೦. ನಾಯಕ, ಜಿ.ಎಚ್.(ಸಂ.) ೨೦೦೦; **ಶತಮಾನದ ಕನ್ನಡ ಸಾಹಿತ್ಯ** ; ಶ್ರೀ ರಾಘವೇಂದ್ರ ಪ್ರಕಾಶನ, ಅಂಕೋಲಾ, ಉ.ಕನ್ನಡ.

೩೧. ನಾಯಕ. ಜಿ.ಎಚ್. (ಸಂ.) ೧೯೮೨; **ಕನ್ನಡ ಸಣ್ಣಕತೆಗಳು**; ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ, ನವದೆಹಲಿ.

೩೨. ನಾರಾಯಣ ಶಾನಭಾಗ (ಸಂ.) ೨೦೦೭; **ಹವ್ಯಕ ಮಹಿಳಾ ಸಾಹಿತ್ಯ ದರ್ಶಿನಿ**; ಹವ್ಯಕ ಅಧ್ಯಯನ ಕೇಂದ್ರ, ಮಲ್ಲೇಶ್ವರಂ, ಬೆಂಗಳೂರು.

೩೩. ನಾರಾಯಣ ಶಾನಭಾಗ (ಸಂ.); ೨೦೦೭; **ಹವ್ಯಕ ರಚಿತ ಕಥೆ, ನಾಟಕ ಮತ್ತು ಮಕ್ಕಳ ಸಾಹಿತ್ಯ ಕೈಪಿಡಿ**; ಹವ್ಯಕ ಅಧ್ಯಯನ ಕೇಂದ್ರ, ಮಲ್ಲೇಶ್ವರಂ, ಬೆಂಗಳೂರು.

೩೪. ನಾರಾಯಣ ಶಾನಭಾಗ (ಸಂ.); ೨೦೦೮; **ಹವ್ಯಕ ಯಕ್ಷಗಾನ ಕವಿ ಕಾವ್ಯಸೂಚಿ**; ಹವ್ಯಕ ಅಧ್ಯಯನ ಕೇಂದ್ರ, ಮಲ್ಲೇಶ್ವರಂ, ಬೆಂಗಳೂರು.

೩೫. ನಾವಡ ಎ.ವಿ.; ೨೦೦೩; **ಕಡೆಂಗೋಡ್ಲು ಶಂಕರ ಭಟ್ಟ ಬದುಕು ಬರಹ**; ಸಿರಿಪ್ರಕಾಶನ, ವಿದ್ಯಾರಣ್ಯ, ಹಂಪಿ.

೩೬. ಪರಮೇಶ್ವರ ಭಟ್ ಬಾಳಿಲ ಕೆ.; ೨೦೦೫; **ಧರ್ಮ ವಿಜಯ-ಹವಿಗನ್ನಡದ ಪ್ರಥಮ ಮಹಾಕಾವ್ಯ**; ಕೆ. ಪರಮೇಶ್ವರ ಭಟ್ ಬಾಳಿಲ, ದ.ಕ.

೩೭. ಪಾಂಡುರಂಗ ಡಿ.ಆರ್.ಡಾ.; ೧೯೯೦; **ದಕ್ಷಿಣ ಕನ್ನಡ ಜಿಲ್ಲೆಯ ಭೈರರು-ಸಾಹಿತ್ಯಕ-ಸಾಂಸ್ಕೃತಿಕ ಅಧ್ಯಯನ**; ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಎಂ.ಜಿ.ಎಂ.ಕಾಲೇಜು, ಉಡುಪಿ.

೩೮. ಬಸವರಾಜ್ ಆರ್. ; ೧೯೯೯; **ಕಿರಿಯರಿಗೆ ಕನ್ನಡ ಸಾಹಿತ್ಯ ಚರಿತೆ**(ಹೊಸಗನ್ನಡ ಕಾದಂಬರಿ ಮತ್ತು ಸಣ್ಣಕಥೆ); ರಾವ್ ಪಬ್ಲಿಷಿಂಗ್ ಹೌಸ್, ಚಿಕ್ಕನಾಯಕನ ಹಳ್ಳಿ.

೩೯. ಭಟ್ ಬಿ.ಎನ್. ಪ್ರೊ.; ೧೯೯೯; **ಸುಜ್ಞಾನ ದೀಪ**; ಪ್ರಾಚಿ ಪ್ರಿಂಟರ್ಸ್ ಪ್ರೈವೇಟ್ ಲಿಮಿಟೆಡ್, ಜಯನಗರ, ಬೆಂಗಳೂರು.

೪೦. ಭಾಸ್ಕರ ಕೆ.; ೧೯೮೩; **ಕನ್ನಡ ಸಣ್ಣಕಥೆಗಳು (೧೯೩೦-೫೦) ಒಂದು ಅಧ್ಯಯನ**; ಮದರಾಸು ವಿಶ್ವವಿದ್ಯಾನಿಲಯಕ್ಕೆ ಎಂ.ಫಿಲ್. ಪದವಿಗಾಗಿ ಒಪ್ಪಿಸಿದ ಮಹಾಪ್ರಬಂಧ (ಅಪ್ರಕಟಿತ).

೪೧. ಭೀಮ ಭಟ್ಟ ನೀರ್ಪಾಜೆ: ೧೯೯೭; **ದಕ್ಷಿಣ ಕನ್ನಡದ ಸಾಹಿತ್ಯೋಪಾಸಕರು**; ಅಭ್ಯುದಯ ಪ್ರಕಾಶನ, ಕನ್ಯಾನ.

೪೨. ಮರಿಯಪ್ಪ ಭಟ್ಟ. ಎಂ.; ೧೯೮೩; **ಹವ್ಯಕ-ಇಂಗ್ಲಿಷ್ ನಿಘಂಟು**; ಗೀತಾ ಬುಕ್ ಹೌಸ್, ಮೈಸೂರು.

೪೩. ಮಾಸ್ತಿ ವೆಂಕಟೇಶ ಅಯ್ಯಂಗಾರ್(ಶ್ರೀನಿವಾಸ) ೧೯೯೨; **ಪೂಜನ**; ಜೀವನ ಕಾರ್ಯಾಲಯ, ಬೆಂಗಳೂರು.

೪೪. ಮಹಾಲಿಂಗ ಭಟ್ ಕೆ.; ೨೦೦೨; **ಕಾಸರಗೋಡು ಜಿಲ್ಲೆಯ ಕನ್ನಡ ಸಾಹಿತ್ಯ**; ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಪಿಎಚ್.ಡಿ ಪದವಿಗಾಗಿ ಒಪ್ಪಿಸಿದ ಮಹಾಪ್ರಬಂಧ (ಅಪ್ರಕಟಿತ).

೪೫. ಮಹಾಲಿಂಗ ಭಟ್. ಬಿ.ಎನ್.; ೨೦೦೫; **ದಕ್ಷಿಣ ಕನ್ನಡ ಜಿಲ್ಲೆಯ ಹವ್ಯಕರ ಸಂಸ್ಕೃತಿ– ಒಂದು ಅಧ್ಯಯನ**; ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಪಿಎಚ್.ಡಿ ಪದವಿಗಾಗಿ ಒಪ್ಪಿಸಿದ ಮಹಾಪ್ರಬಂಧ(ಅಪ್ರಕಟಿತ).

೪೬. ಮಹೀಶವಾಡಿ ಬಿ.ಬಿ. ; ೧೯೭೪; **ಕನ್ನಡ ಕಥಾಸೃಷ್ಟಿ**; ಕರ್ನಾಟಕ ವಿವಿ., ಧಾರವಾಡ.

೪೭. ಮುಳಗುಂದ ಚ.ವಿ.(ಸಂ.); ೧೯೮೬; ಮಾತೋಶ್ರೀ; ಮಾತೋಶ್ರೀ ಪ್ರಕಾಶನ; ಮುದ್ದೇಬಿಹಾಳ.

೪೮. ರಾಘವೇಂದ್ರ ಎಚ್.ಎಸ್; ೧೯೯೦; **ಪ್ರಗತಿಶೀಲತೆ** ; ಕರ್ನಾಟಕ ಸಾಹಿತ್ಯ ಆಕಾಡೆಮಿ, ಬೆಂಗಳೂರು.

೪೯. ರಾಮಚಂದ್ರಪ್ಪ ಬರಗೂರು; ೧೯೯೨; **ಸಂಸ್ಕೃತಿ-ದಲಿತ ಸಾಹಿತ್ಯ**; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೦. ರಾಮಚಂದ್ರಪ್ಪ ಬರಗೂರು (ಸಂ.); ೨೦೦೬; **ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ**; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೧. ರಾಮಚಂದ್ರ ದೇವ ; ೨೦೦೬; **ನಾಟಕಗಳು-ಸಂಪುಟ** ೧; ಬೋಧಿ ಟ್ರಸ್ಟ್, ಕಲ್ಮಡ್ಕ.

೫೨. ವತ್ಸಲ ಎನ್.ಮೂರ್ತಿ(ಸಂ.); ೧೯೯೦; **ಕೊಡಗಿನ ಗೌರಮ್ಮನ ಕಥೆಗಳು**; ಜಿ.ಕಲ್ಲಯ್ಯ ಅಂಡ್ ಸನ್ಸ್ ಅರಳೇಪೇಟೆ, ಬೆಂಗಳೂರು.

೫೩. ವಿಜಯಕುಮಾರ ಎಂ.; ೧೯೯೦; **ಪ್ರೊ.ಎಂ.ಮರಿಯಪ್ಪ ಭಟ್ಟರ ಜೀವನ ಮತ್ತು ಕೃತಿಗಳು ಒಂದು ಅಧ್ಯಯನ**; ಮದರಾಸು ವಿಶ್ವವಿದ್ಯಾನಿಲಯಕ್ಕೆ ಎಂ.ಫಿಲ್. ಪದವಿಗಾಗಿ ಒಪ್ಪಿಸಿದ ಮಹಾಪ್ರಬಂಧ(ಅಪ್ರಕಟಿತ).

೫೪. ವಿಜಯಕುಮಾರ ಮೊಳೆಯಾರ; ೧೯೯೭; **ದೇರಾಜೆ ಸೀತಾರಾಮಯ್ಯ ಜೀವನ–ಸಾಧನೆ;** ಕರ್ನಾಟಕ ಸಂಘ, ಪುತ್ತೂರು.

೫೫. ವಿಷ್ಣುಭಟ್ಟ ಪಾದೇಕಲ್ಲು; ೧೯೯೭; **ಸೇಡಿಯಾಪು;** ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಎಂ.ಜಿ.ಎಂ.ಕಾಲೇಜು, ಉಡುಪಿ.

೫೬. ವಿಷ್ಣುಭಟ್ಟ ಪಾದೇಕಲ್ಲು; **ಪಂಡಿತ ಪರಂಪರೆಯ ಶ್ರೇಷ್ಠ ಪ್ರತಿನಿಧಿ ಸೇಡಿಯಾಪು ಕೃಷ್ಣಭಟ್ಟರು;** ಪ್ರಸಾರಾಂಗ , ಮಂಗಳೂರು ವಿವಿ., ಮಂಗಳಗಂಗೋತ್ರಿ

೫೭.ವೆಂಕಟರಮಣಯ್ಯ ಟಿ.ವಿ.(ಸಂ.); ೧೯೬೩; **ಕನ್ನಡ ಗಾದೆಗಳ ಕೋಶ** ; ಸಮಾಜ ಪುಸ್ತಕಾಲಯ, ಧಾರವಾಡ.

೫೮. ಶಕುಂತಲಾ ಸಿದ್ಧರಾಮ ದುರಗಿ; ೧೯೯೯; **ಆಧುನಿಕ ಕನ್ನಡದಲ್ಲಿ ಮಹಿಳಾ ಸಾಹಿತ್ಯ** (೧೯೦೧–೧೯೭೫); ಉಜ್ವಲ ಪ್ರಕಾಶನ, ವೆಮಕಟೇಶನಗರ, ಗುಲಬರ್ಗಾ.

೫೯. ಶಾಸ್ತ್ರಿ ಪಿ.ವಿ. ಕಿಬ್ಬಳ್ಳಿ; ೧೯೭೨; **ಸಾಹಿತ್ಯದ ಪ್ರಕಾರಗಳು;** ಸಮಾಜ ಪುಸ್ತಕಾಲಯ, ಧಾರವಾಡ.

೬೦. ಶೆಟ್ಟಿ.ಎಸ್.ಡಿ.ಡಾ.; (ಸಂ.); ೨೦೦೬; **ಕನ್ನಡ ಸಾಹಿತ್ಯ ಪರಂಪರೆ ಮತ್ತು ಅಭಿವ್ಯಕ್ತಿ;** ಕನ್ನಡ ಸಂಘ ; ಎಸ್.ಡಿ.ಎಂ. ಕಾಲೇಜು, ಉಜಿರೆ.

೬೧. ಶೇಷಗಿರಿ ರಾವ್ ಎಲ್.ಎಸ್; ೧೯೮೮; **ಹೊಸಗನ್ನಡ ಸಾಹಿತ್ಯ** ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬೨. ಶ್ರೀಕೃಷ್ಣ ಭಟ್ ಅರ್ತಿಕಜೆ ಡಾ.: ೨೦೦೯; **ಪಡಿದನಿ;** ಕಾರ್ತಿಕ್ ಎಂಟರ್ ಪ್ರೈಸಸ್, ವಿಜಯನಗರ, ಬೆಂಗಳೂರು.

೬೩. ಶ್ರೀಧರ ಎಚ್ .ಜಿ ಡಾ. (ಸಂ.): ೨೦೦೩; **ಕಡವ ಶಂಭು ಶರ್ಮ ಕೃತಿ ಸಂಚಯ ೧** ; ಕಡವ ಶಂಭುಶರ್ಮ ಸ್ಮಾರಕ ಪ್ರತಿಷ್ಠಾನ, ಪುತ್ತೂರು.

೬೪. ಶ್ರೀನಿವಾಸ ಹಾವನೂರ ;೧೯೭೪; ಹೊಸಗನ್ನಡದ ಆರುಣೋದಯ; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೬೫. ಶ್ರೀಮತಿ ಎಚ್.ಎಸ್.ಡಾ.(ಸಂ.); ೨೦೦೬; **ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ** ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೬೬. ಶ್ರೀವಳ್ಳಿ ಟಿ.ಎಸ್.ಡಾ.; ೨೦೦೦; **ಸರಸ್ವತಿ ಬಾಯಿ ರಾಜವಾಡೆ;** ಶಿವರಾಮ ಕಾರಂತ ಅಧ್ಯಯನ ಕೇಂದ್ರ, ವಿವೇಕಾನಂದ ಕಾಲೇಜು, ಪುತ್ತೂರು.

೬೭. ಸತ್ಯನಾರಾಯಣ ಮಲ್ಲಿಪಟ್ಟಣ; ೧೯೮೫; **ಕನ್ನಡ ಸಣ್ಣಕಥೆ ಹೆಜ್ಜೆ –ಹಾದಿ;** ವಿದ್ಯಾರಣ್ಯಪುರಂ, ಮೈಸೂರು.

೬೮. ಸತ್ಯಭಾಮಾ. ಪಿ ೨೦೦೪; **ಎ.ಪಿ. ಮಾಲತಿಯವರ ಕಾದಂಬರಿಗಳು – ಒಂದು ಅಧ್ಯಯನ;** ಕಣ್ಣೂರು ವಿಶ್ವವಿದ್ಯಾನಿಲಯಕ್ಕೆ ಎಂ.ಫಿಲ್. ಪದವಿಗಾಗಿ ಒಪ್ಪಿಸಿದ ಮಹಾಪ್ರಬಂಧ (ಅಪ್ರಕಟಿತ).

೬೯. ಸಬೀಹಾ.ಡಾ.; ೧೯೯೨; **ದಕ್ಷಿಣ ಕನ್ನಡ ಜಿಲ್ಲೆಯ ಸಣ್ಣಕತೆಗಳ ಹುಟ್ಟು ಮತ್ತು ಬೆಳವಣಿಗೆ** (೧೮೪೨ ರಿಂದ ೧೯೪೮) ; ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಪಿಎಚ್.ಡಿ ಪದವಿಗಾಗಿ ಒಪ್ಪಿಸಿದ ಮಹಾಪ್ರಬಂಧ (ಅಪ್ರಕಟಿತ).

೨೦. ಸೂರ್ಯನಾರಾಯಣ ಚಡಗ (ಸಂ.); ೧೯೬೭; **ದಕ್ಷಿಣ ಕನ್ನಡದ ಬರಹಗಾರರು;** ಗೀತಾ ಪಬ್ಲಿಕೇಷನ್ಸ್, ಬೆಂಗಳೂರು.

೨೧. ಹರಿಕೃಷ್ಣ ಭರಣ್ಯ ಡಾ. ; ೧೯೯೦; **ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ;** ಪ್ರಭಸ ಬಿಡುಗಡೆ, ಮಧುರೈ.

೨೨. ಹರಿಕೃಷ್ಣ ಭರಣ್ಯ ಡಾ. ; ೨೦೦೬; **ಈ ನೆಲದ ಕಂಪು** (ಹವಿಗನ್ನಡ ಸಾಹಿತ್ಯ ಸಂಸ್ಕೃತಿ ಸಮೀಕ್ಷೆ); ಹವ್ಯಕ ಅಧ್ಯಯನ ಕೇಂದ್ರ, ಮಲ್ಲೇಶ್ವರಂ; ಬೆಂಗಳೂರು.

೨೩. **ಉತ್ತರ ಸಹ್ಯಾದ್ರಿ ಖಂಡ;** ೧೮೩೪; ಶ್ರೀಲಕ್ಷ್ಮೀ ವಿಲಾಸ ಮುದ್ರಾಕ್ಷರ ಶಾಲೆ, ನರಹಳ್ಳಿ.

**ಸಂಪಾದಿತ ಕೃತಿಗಳು (ಅಭಿನಂದನ, ಸ್ಮರಣ ಸಂಚಿಕೆ)**

೧. ಈಶ್ವರ ಭಟ್ಟ ಬೋಳಂತಕೋಡಿ (ಸಂ.); ೧೯೯೨; ಅಭಿಮಾನ; ದಕ್ಷಿಣ ಕನ್ನಡ ಜಿಲ್ಲಾ ಐದನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಪುತ್ತೂರು.

೨. ಈಶ್ವರ ಭಟ್ಟ ಬೋಳಂತಕೋಡಿ (ಸಂ.); ೧೯೯೩; ಸ್ವಾಭಿಮಾನ, ದಕ್ಷಿಣ ಕನ್ನಡ ಜಿಲ್ಲಾ ಐದನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಪುತ್ತೂರು.

೩. ಜಯಪ್ರಕಾಶ ಮಾವಿನಕುಳಿ (ಸಂ.); ೧೯೮೮; ಚೂಡಾಮಣಿ ; ದಕ್ಷಿಣ ಕನ್ನಡ ಜಿಲ್ಲಾ ನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಮೂಡಬಿದಿರೆ.

೪. ನಾಯಕ, ವಿ.ಗ. (ಸಂ.); ೨೦೦೦; ಹಣತೆ; ದಕ್ಷಿಣ ಕನ್ನಡ ಜಿಲ್ಲಾ ಹನ್ನೊಂದನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಬಂಟ್ವಾಳ.

೫. ನಾರಾಯಣ ಭಟ್ ಹುಳೇಗಾರು(ಸಂ.) ೨೦೦೩; ವಜ್ರದರ್ಪಣ (ವಜ್ರ ಮಹೋತ್ಸವ ಸ್ಮರಣ ಸಂಚಿಕೆ); ಶ್ರೀ ಅಖಿಲ ಭರತ ಹವ್ಯಕ ಮಹಾಸಭಾ (ರಿ.) ಮಲ್ಲೇಶ್ವರ, ಬೆಂಗಳೂರು.

೬. ನಾವಡ ಎ.ವಿ (ಸಂ.); ೧೯೭೭; ವಾಙ್ಮಯ ತಪಸ್ವಿ– ಕಡೆಂಗೋಡ್ಲು ಶಂಕರ ಭಟ್ಟ ಸ್ಮಾರಕ ಗ್ರಂಥ; ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು.

೭. ಪರಮೇಶ್ವರ ಭಟ್ಟ ಎಸ್.ವಿ (ಸಂ.); ೧೯೭೧; ದಿಬ್ಬಣ; ದಕ್ಷಿಣ ಕನ್ನಡ ಜಿಲ್ಲಾ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ, ಪುತ್ತೂರು.

೮. ಮೊಗಸಾಲೆ ನಾ.ಡಾ.(ಸಂ.) ; ೧೯೮೮; ರತ್ನಾಕರ; ದಕ್ಷಿಣ ಕನ್ನಡ ಜಿಲ್ಲಾ ನಾಲ್ಕನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಮೂಡಬಿದರೆ.

೯. ಮೊಳೆಯಾರ ವಿ.ಬಿ. (ಸಂ.); ೧೯೮೬; ವಿಶ್ವಹವ್ಯಕ – ಪ್ರಥಮ ವಿಶ್ವ ಹವ್ಯಕ ಸಮ್ಮೇಳನ ಸ್ಮರಣ ಸಂಚಿಕೆ; ಶ್ರೀ ಅಖಿಲ ಭರತ ಹವ್ಯಕ ಮಹಾಸಭಾ (ರಿ.) ಮಲ್ಲೇಶ್ವರ, ಬೆಂಗಳೂರು.

೧೦. ರಾಮಚಂದ್ರ ಎಮ್. (ಸಂ.); ೧೯೯೭; ತುರಾಯಿ; ದಕ್ಷಿಣ ಕನ್ನಡ ಜಿಲ್ಲಾ ಒಂಬತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಕಾರ್ಕಳ.

೧೧. ವಸಂತಕುಮಾರ ಕೋಟೆ (ಸಂ.) ೧೯೮೮; ಹವ್ಯಕ ಭಾರತಿ–ಭಾಗ ೧; ಶ್ರೀ ರಾಮಚಂದ್ರಾಪುರ ಮಠ. ಪೆರಾಜೆ, ನೇರಳಕಟ್ಟೆ.

೧೨.ವೆಂಕಟೇಶ್ವರ ಭಟ್ಟ ಹಿರಣ್ಯ (ಸಂ.); ೧೯೯೯; ಸಹಸ್ರ ಚಂದ್ರ–ಶೇಣಿ ಅಭಿನಂದನ ಗ್ರಂಥ; ಶ್ರೀ ಶೇಣಿ ಗೋಪಾಲಕೃಷ್ಣ ಭಟ್ಟ ಸಹಸ್ರಚಂದ್ರ ದರ್ಶನ ಅಭಿನಂದನ ಸಮಿತಿ, ಸುರತ್ಕಲ್ಲು.

೧೩. ಶ್ರೀಧರ ಎಚ್.ಜಿ.ಡಾ. (ಸಂ.); ೨೦೦೨; ನೆಲ್ಯಾಡಿಯ ನಲ್ನುಡಿ; ಪುತ್ತೂರು ತಾಲೂಕು ಎಂಟನೆಯ ಕನ್ನಡ ಸಾಹಿತ್ಯ ಸಮ್ಮೇಳನ, ನೆಲ್ಯಾಡಿ.

೧೪. ಸಚ್ಚಿದಾನಂದಯ್ಯ ಕೆ. (ಸಂ.) ; ೧೯೭೭; ಬ್ರಹ್ಮಗಿರಿ; ಶ್ರೀ ಕಾವೇರಿ ಪ್ರಕಾಶನ, ಮಡಿಕೇರಿ.

೧೫. ಸೂರ್ಯನಾರಾಯಣ ಬಿ.ಎ.(ಸಂ.); ೨೦೦೫; ಕೆದಂಬಾಡಿಯ ಕೇದಗೆ ಸ್ಮರಣ ಸಂಚಿಕೆ; ಪುತ್ತೂರು ತಾಲೂಕು ಹನ್ನೊಂದನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಕೆದಂಬಾಡಿ, ಪುತ್ತೂರು.

೧೬. ಹರಿನಾರಾಯಣ ಮಾಡಾವು. ಪ್ರೊ. (ಸಂ.); ೨೦೦೨; ನವಮಿ; ಪುತ್ತೂರು ತಾಲೂಕು ಒಂಬತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಪುತ್ತೂರು.

## ಪತ್ರಿಕಾ ಲೇಖನ

೧.ಹವ್ಯಕ (ಮಾಸಿಕ)– ಎಪ್ರಿಲ್, ೨೦೧೧

ಶ್ರೀ ಅಖಿಲ ಭರತ ಹವ್ಯಕ ಮಹಾಸಭಾ (ರಿ.)
ಮಲ್ಲೇಶ್ವರ, ಬೆಂಗಳೂರು.

